# ಮಹಿಳಾ ಸಾಹಿತ್ಯ: ಅಭಿವ್ಯಕ್ತಿ ಕ್ರಮದ ತಾತ್ವಿಕ ಸ್ವರೂಪ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ. ಮಹಾಪ್ರಬಂಧ


ಸಂಶೋಧಕರು

ಉಷಾರಾಣಿ ತೆಗ್ಗಿನಮಠದ

ಮಾರ್ಗದರ್ಶಕರು

ಡಾ. ಆರ್. ವೆಂಕಟೇಶನ್

ಪ್ರವಾಚಕರು





ಭಾಷಾ ನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೮

# ಮಹಿಳಾ ಸಾಹಿತ್ಯ: ಅಭಿವ್ಯಕ್ತಿ ಕ್ರಮದ ತಾತ್ವಿಕ ಸ್ವರೂಪ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ. ಮಹಾಪ್ರಬಂಧ

ಸಂಶೋಧಕರು

**ಉಷಾರಾಣಿ ತೆಗ್ಗಿನಮಠದ**

ಮಾರ್ಗದರ್ಶಕರು

**ಡಾ. ಆರ್. ವೆಂಕಟೇಶನ್**

ಪ್ರವಾಚಕರು






ಭಾಷಾ ನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೮

# ಘೋಷಣಾ ಪತ್ರ

"ಮಹಿಳಾ ಸಾಹಿತ್ಯ: ಅಭಿವ್ಯಕ್ತಿ ಕ್ರಮದ ತಾತ್ವಿಕ ಸ್ವರೂಪ" ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಲು ಡಾ. ಆರ್. ವೆಂಕಟೇಶನ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಈ ಮಹಾಪ್ರಬಂಧವನ್ನು ಅಥವಾ ಈ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ, ಇತರೆ ಯಾವುದೇ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಟಿ.ಎಂ.ಉಷಾರಾಣಿ

ದಿನಾಂಕ: ಉಷಾರಾಣಿ ತೆಗ್ಗಿನಮಠದ

ಸ್ಥಳ: ಸಂಶೋಧಕರು

## ದೃಢೀಕರಣ ಪತ್ರ

ಶ್ರೀಮತಿ ಉಷಾರಾಣಿ ತೆಗ್ಗಿನಮಠದ ಅವರು "ಮಹಿಳಾ ಸಾಹಿತ್ಯ: ಅಭಿವ್ಯಕ್ತಿ ಕ್ರಮದ ತಾತ್ವಿಕ ಸ್ವರೂಪ" ಎಂಬ ಶೀರ್ಷಿಕೆಯ ಪಿಎಚ್.ಡಿ. ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧ ಇಡಿಯಾಗಿ, ಬಿಡಿಯಾಗಿ ಎಲ್ಲಿಯೂ ಈ ಮೊದಲು ಪ್ರಕಟಗೊಂಡಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ:

ಸ್ಥಳ:

**ಡಾ. ಆರ್. ವೆಂಕಟೇಶನ್**
ಮಾರ್ಗದರ್ಶಕರು ಮತ್ತು ಪ್ರವಾಚಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ

# ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ-ವ್ಯಾಪ್ತಿ-ಸ್ವರೂಪ

## ೧.೧ ಪ್ರವೇಶ

ಬರಹದ ಪ್ರಕ್ರಿಯೆಯಲ್ಲಿ ಅಭಿವ್ಯಕ್ತಗೊಳ್ಳುವ ಸಂವೇದನೆಯ ಸ್ವರೂಪವು ಬರಹಗಾರರಿಂದ ಬರಹಗಾರರಿಗೆ ಭಿನ್ನವಾಗಿರುತ್ತದೆ. ಅನುಭವ ಲೋಕದ ಗ್ರಹಿಕೆಗಳು ಆಯಾ ಸಾಮಾಜಿಕ ಪರಿಸರದ ಆವರಣವನ್ನು ಅವಲಂಬಿಸಿರುತ್ತದೆ. ಹಾಗಾಗಿಯೇ ಮಹಿಳೆಯರ ಅನುಭವಗಳು ಪುರುಷ ಲೋಕದ ಅನುಭವಗಳಿಗಿಂತ ಭಿನ್ನರೂಪ ಪಡೆದಿವೆ. ಕೌಟುಂಬಿಕ, ಸಾಮಾಜಿಕ, ಶೈಕ್ಷಣಿಕ, ರಾಜಕೀಯ, ಆರ್ಥಿಕ ಸಂರಚನೆಗಳು ಮಹಿಳೆಯ ಬದುಕನ್ನು ಹೇಗೆ ರೂಪಿಸಿದೆ ಎಂಬುದೂ ಮುಖ್ಯವಾಗಿದೆ. ಈ ಹಿನ್ನೆಲೆಯಲ್ಲಿ ಮಹಿಳಾ ಸಾಹಿತ್ಯವೆಂಬ ಪ್ರತ್ಯೇಕ ಅಧ್ಯಯನವು ರಿಯಾಯಿತಿ, ಅನುಕಂಪಗಳನ್ನು ನಿರಾಕರಿಸಿ, ಮಹಿಳೆಯರ ಬರಹಗಳ ವಿಶಿಷ್ಟತೆಗಳನ್ನು, ಹೊಸ ಸಾಧ್ಯತೆಗಳನ್ನು ಶೋಧಿಸುವ ಪ್ರಯತ್ನವನ್ನು ಮಹಾ ಪ್ರಬಂಧದಲ್ಲಿ ಕೈಗೊಳ್ಳಲಾಗಿದೆ.

ಮಹಿಳೆಯರ ಕೃತಿಗಳಲ್ಲಿರುವ ಅಂತಃಸತ್ವವನ್ನು, ವಿಶಿಷ್ಟ ಅಂಶಗಳನ್ನು ತಾತ್ವಿಕ ಸ್ವರೂಪದಲ್ಲಿ ಶೋಧಿಸುವ ಮುಖ್ಯ ಉದ್ದೇಶವಿಟ್ಟುಕೊಂಡು, ಅಧ್ಯಯನ ಮಾಡಲು 'ಅಭಿವ್ಯಕ್ತಿ ಕ್ರಮ'ವನ್ನು ಕೇಂದ್ರವಾಗಿಟ್ಟುಕೊಂಡಿದೆ. ಮಹಿಳಾ ಬರಹಗಾರರು ತಮ್ಮ ಧ್ಯೇಯ-ಧೋರಣೆಗಳನ್ನು, ಸಾಹಿತ್ಯ ಬರವಣಿಗೆಯ ಮೂಲಕ ವ್ಯಕ್ತಪಡಿಸುವಾಗ ಯಾವ ಯಾವ ವಿಧಾನಗಳನ್ನು ಅನುಸರಿಸುತ್ತಾರೆಂಬುದು ಕುತೂಹಲಕಾರಿ ಸಂಗತಿ. ಕೃತಿಯ ವಸ್ತು-ಆಶಯ, ನಿರೂಪಣಾ ಶೈಲಿ-ತಂತ್ರಗಳನ್ನು ಆಧರಿಸಿದ ಕೆಲವು ಪರಿಕಲ್ಪನಾತ್ಮಕ ನೆಲೆಗಳ ಮೂಲಕ ಅಧ್ಯಯನ ಮಾಡುವ ಗುರಿ ಮಹಾಪ್ರಬಂಧಕ್ಕಿದೆ. ಇದಕ್ಕೆ ಪೂರಕವಾದ ಉದ್ದೇಶಗಳನ್ನು ಕೆಳಗಿನಂತೆ ವಿವರಿಸಲಾಗಿದೆ.

ಸಾಮಾನ್ಯವಾಗಿ ಮಹಿಳೆಯರ ಸಾಹಿತ್ಯವನ್ನು ಅನುಲಕ್ಷಿಸುವಾಗ ಒಂದು ಕ್ರಮವನ್ನು ಅನುಸರಿಸಲಾಗುತ್ತದೆ. ಕೆಲವು ನಿರ್ದಿಷ್ಟ ಧ್ಯೇಯೋದ್ದೇಶಗಳನ್ನು ಹೊಂದಿದ 'ಸಾಹಿತ್ಯ ಪಂಥಗಳ' ಅಡಿಯಲ್ಲಿ ಮಹಿಳೆಯರ ಕೃತಿಗಳನ್ನು ಒತ್ತಾಯ ಪೂರ್ವಕವಾಗಿ ಸೇರಿಸುವ ಪ್ರಯತ್ನಗಳು ಸಾಕಷ್ಟು ನಡೆದಿವೆ. ವಿವಿಧ 'ಸಾಹಿತ್ಯ ಪಂಥ'ಗಳ ಪ್ರಭಾವ ಮಹಿಳಾ ಬರಹಗಾರರ ಮೇಲಾಗಿದ್ದರೂ, ಅದಕ್ಕೇ ಅಂಟಿಕೊಂಡು ಬರೆಯುವ ಜಾಯಮಾನ ಕಂಡುಬರುವುದಿಲ್ಲ. ಬರಹಗಾರರಿಗಿರುವ ಭಿನ್ನ ಆಲೋಚನಾ ಧಾಟಿಗಳನ್ನು ಗ್ರಹಿಸುವುದು ಅಧ್ಯಯನದ ಕಾಳಜಿಯಾಗಿದೆ.

ಮಹಿಳೆಯರ ಸಾಹಿತ್ಯವು, ಕೌಟುಂಬಿಕ ಬದುಕಿನ ಸಂಘರ್ಷ ಸ್ಥಿತಿ ಮತ್ತು ಸಾಮಾಜಿಕ ವಿವಿಧ ಘಟಕಗಳೊಂದಿಗೆ ಹೊಂದಿದ ಸಂಘರ್ಷ ಸ್ಥಿತಿಯಿಂದ ಪ್ರೇರಿತವಾಗಿ ಸೃಷ್ಟಿಯಾಗಿದೆ. ಹೆಚ್ಚಿನ ಕೃತಿಗಳಲ್ಲಿ ಕೇಂದ್ರ ಬಿಂದುವಾಗಿರುವ ಮಹಿಳೆಯು ಅನುಭವಿಸುವ ಸಂಕಷ್ಟಗಳು; ಅಸಹಾಯಕತೆ; ಸಿಡಿದು ನಿಲ್ಲುವ ಛಾತಿ; ಕಂಡುಕೊಳ್ಳುವ ಪರ್ಯಾಯ ಮಾರ್ಗಗಳ ಶೋಧನೆಯನ್ನು ಕೈಗೊಳ್ಳುವ ಉದ್ದೇಶವನ್ನು ಹೊಂದಿದೆ.

ಮಡಿವಂತಿಕೆ, ಸಾಂಪ್ರದಾಯಿಕ ಸಂದರ್ಭಗಳಲ್ಲಿ ರೂಪುಗೊಂಡ ಕೃತಿಗಳಿಗೂ; ವ್ಯಕ್ತಿತ್ವದ ಅಸ್ತಿತ್ವದ ಪ್ರಶ್ನೆ ಗಾಢವಾದಾಗ ವ್ಯಕ್ತಗೊಳ್ಳುವ ಕೃತಿಗಳ ಆಶಯ–ಆಕೃತಿಗಳಲ್ಲಿ ಅಗಾಧ ಬದಲಾವಣೆಗಳು ಉಂಟಾಗುತ್ತವೆ. ಇಂತಹ ಪರಿವರ್ತನೆಗಳನ್ನು ಗುರುತಿಸುವ ಪ್ರಯತ್ನವಿದೆ. ಜತೆಗೆ ಅಂದಿನ ಸಾಂಸ್ಕೃತಿಕ ಪರಿಸರ, ಮಹಿಳೆಯರನ್ನು ಹೇಗೆ ರೂಪಿಸಿದೆ ಎಂಬುದನ್ನು ಗಮನಿಸುವ ಉದ್ದೇಶವಿಟ್ಟುಕೊಂಡಿದೆ.

ಎಪ್ಪತ್ತರ ದಶಕದ ನಂತರ ಮಹಿಳಾ ಸಾಹಿತ್ಯಕ್ಕೆ ಹೊಸದೊಂದ ತಿರುವು ದೊರೆಯಿತು. ವಿಶ್ವಸಂಸ್ಥೆಯು ಕೈಗೊಂಡ ಮಹಿಳಾಪರ ಕಾರ್ಯಯೋಜನೆ ಅದಕ್ಕೆ ತಳಪಾಯವಾಯಿತು. ಮೇಲ್ಜಾತಿ–ವರ್ಗದವರಿಗೆ ಸೀಮಿತವಾಗಿದ್ದ ಬರಹ ಕ್ಷೇತ್ರವು, ಕೆಳ ಜಾತಿ–ವರ್ಗದ ಮಹಿಳೆಯರ ಪ್ರವೇಶದಿಂದಾಗಿ ವಿಸ್ತೃತಗೊಂಡಿರುವುದನ್ನು ಗುರುತಿಸಲಾಗುವುದು. ಪ್ರಾರಂಭದಲ್ಲಿ ಬರಹಕ್ಕೆ ತೊಡಗಿಸಿಕೊಂಡಿರುವ ಬರಹಗಾರರ ಅಭಿವ್ಯಕ್ತಿ ಕ್ರಮವು, ಕಾಲಾ ನಂತರದಲ್ಲಿ ಬರೆಯತೊಡಗಿದ ಬರಹಗಾರರ ಅಭಿವ್ಯಕ್ತಿ ಕ್ರಮವು ಹೊಂದಿರುವ ಅನೇಕ ಪಲ್ಲಟಗಳನ್ನು ಗುರುತಿಸುವ ಹಂಬಲ ಹೊಂದಿದೆ.

ಇದುವರೆಗೂ ಮಹಿಳಾ ಸಾಹಿತ್ಯವನ್ನು, ಸ್ತ್ರೀವಾದಿ ನೆಲೆಯ ಆಶಯ–ಧೋರಣೆಗಳ ತಾತ್ವಿಕ ಹಿನ್ನೆಲೆಯಲ್ಲಿ ಹೆಚ್ಚಿನ ಅಧ್ಯಯನ ಮಾಡಲಾಗಿದೆ. ಇದಕ್ಕೆ ಭಿನ್ನವಾದ 'ಪರಿಕಲ್ಪನಾತ್ಮಕ ಮಾದರಿ'ಗಳನ್ನು ಕೇಂದ್ರವಾಗಿಟ್ಟುಕೊಂಡು, ಹೊಸ ಚರ್ಚೆಯನ್ನು ಬೆಳೆಸುವಲ್ಲಿ ಮಹಾ ಪ್ರಬಂಧದ ಮಹತ್ವ ಅಡಗಿದೆ.

## ೧.೨ ಅಧ್ಯಯನದ ವಿಧಾನ ಮತ್ತು ವ್ಯಾಪ್ತಿ

'ಮಹಿಳಾ ಸಾಹಿತ್ಯ' ಮತ್ತು 'ಅಭಿವ್ಯಕ್ತಿ ಕ್ರಮದ ತಾತ್ವಿಕ ಸ್ವರೂಪ' ಎಂಬ ಎರಡು ಘಟಕಗಳನ್ನು ಮಹಾ ಪ್ರಬಂಧ ವ್ಯಾಖ್ಯಾನಿಸಿಕೊಂಡಿದೆ. ಅಭಿವ್ಯಕ್ತಿ ಕ್ರಮವನ್ನು ಗುರುತಿಸುವಾಗ ಇದುವರೆಗೂ ನಡೆದ ಜಿಜ್ಞಾಸೆಗಳು ಮತ್ತು ಮಹಿಳೆಯರನ್ನು ಅವು ಪ್ರಭಾವಿಸುವ ರೀತಿಯನ್ನು ದಾಖಲಿಸಲಾಗಿದೆ. ಹಾಗೆಯೇ ಮಹಿಳಾ ಬರಹಗಳ ಅಭವ್ಯಕ್ತಿ ಕ್ರಮವನ್ನು ಗುರುತಿಸಲು ಬೇಕಾಗುವ ಇತರೆ ಪರಿಕರಗಳ ಬಗ್ಗೆ ಆಲೋಚಿಸಲಾಗಿದೆ. ಅಭಿವ್ಯಕ್ತಿ ಕ್ರಮವನ್ನು ಬರಹಗಾರರ ಭಾವನೆ; ವ್ಯಕ್ತಿತ್ವದ ನೆಲೆ; ವಸ್ತು–ಆಶಯ–ಧೋರಣೆಗಳ ನೆಲೆ; ಬಳಕೆಯಾದ ಭಾಷೆ–ತಂತ್ರ ಮುಂತಾದ ನಿರೂಪಣಾ ಶೈಲಿಯ ನೆಲೆಗಟ್ಟಿನಲ್ಲಿ ಅರ್ಥೈಸಿಕೊಳ್ಳಲಾಗಿದೆ.

ಮಹಾಪ್ರಬಂಧದ ಸಿದ್ಧಾಂತವನ್ನು ಕಟ್ಟಿಕೊಳ್ಳಲು, ಕೆಲವು ಪರಿಕಲ್ಪನಾತ್ಮಕ 'ಮಾದರಿ'ಗಳನ್ನು ರೂಪಿಸಿಕೊಳ್ಳಲಾಗಿದೆ. ಮಹಿಳೆಯರ ಸಾಹಿತ್ಯ ಕೃತಿಗಳನ್ನು ಆಳವಾಗಿ ಅಧ್ಯಯನ ಮಾಡಿದ ನಂತರ

ಈ ಪರಿಕಲ್ಪನಾತ್ಮಕ ಮಾದರಿಗಳನ್ನು ಗುರುತಿಸಿಕೊಳ್ಳಲಾಗಿದೆ. ಸಂಬಂಧ ಪಟ್ಟ ಅಧ್ಯಾಯದಲ್ಲಿ ಮೊದಲು 'ಮಾದರಿ'ಗಳ ತಾತ್ವಿಕ ಚೌಕಟ್ಟನ್ನು ವ್ಯಾಖ್ಯಾನಿಸಿಕೊಳ್ಳಲಾಗಿದೆ. ನಂತರ ಕೃತಿಗಳನ್ನು ಆ ನೆಲೆಗಟ್ಟಿನಲ್ಲಿ ವಿಶ್ಲೇಷಣೆಗೊಳಪಡಿಸಲಾಗಿದೆ. ಸಾಹಿತ್ಯ ಕೃತಿಗಳು ತಮ್ಮಷ್ಟಕ್ಕೆ ತಾವು ಸ್ವಯಂಪೂರ್ಣ ಘಟಕಗಳಲ್ಲ. ಅನ್ಯಜ್ಞಾನ ಶಿಸ್ತುಗಳ ತತ್ವಗಳನ್ನು ಅವು ಒಳಗೊಂಡಿರುತ್ತವೆ. ಕೃತಿ ಮತ್ತು ಕೃತಿಯು ವ್ಯಕ್ತಗೊಳ್ಳಬೇಕಾದ ಪ್ರಮುಖ ಮಾಧ್ಯಮವಾದ ಭಾಷೆಯ ನಡುವೆ ಅನ್ಯೋನ್ಯ ಸಂಬಂಧವಿದೆ. ಹಾಗೆಯೇ ಇನ್ನಿತರ ಜ್ಞಾನಶಿಸ್ತುಗಳಾದ ಮನಃಶಾಸ್ತ್ರ, ತತ್ವಶಾಸ್ತ್ರ, ಸಂಜ್ಞಾಶಾಸ್ತ್ರ ಮುಂತಾದ ಶಾಸ್ತ್ರದ ತತ್ವಗಳನ್ನು ಬಳಸಿಕೊಳ್ಳುವ ವಿಧಾನವನ್ನು ಅಧ್ಯಯನ ಅವಲಂಬಿಸಿದೆ.

ಮಹಿಳಾ ಸಾಹಿತ್ಯದ ತಾತ್ವಿಕ ಸ್ವರೂಪವನ್ನು ಅಧ್ಯಯನ ಮಾಡಲು ವಿವಿಧ ಅಧ್ಯಯನಗಳ ಫಲಿತವನ್ನು ಗಮನಿಸಲಾಗಿದೆ. ಕಾವ್ಯ-ಕತೆ-ಕಾದಂಬರಿ ಪ್ರಕಾರಗಳನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗುವುದು. ಅಧ್ಯಯನದ ವ್ಯಾಪ್ತಿಗೆ ಸಂಬಂಧಿಸಿದಂತೆ ಮಹಿಳೆಯರ ಕೃತಿಗಳನ್ನು ಮೂಲ ಆಕರವಾಗಿ ಬಳಸಿಕೊಳ್ಳಲಾಗುವುದು. ಉಳಿದಂತೆ ಸಂಬಂಧಿಸಿದ ವಿಮರ್ಶಾ ಲೇಖನಗಳು, ಸಂಶೋಧನಾ ಫಲಿತಗಳನ್ನು ಪೂರಕವಾಗಿ ಬಳಸಿಕೊಳ್ಳಲಾಗಿದೆ. ಬರಹಗಾರರನ್ನು ಪ್ರಾತಿನಿಧಿಕವಾಗಿ ಆಯ್ದುಕೊಳ್ಳುವ ವಿಧಾನದಲ್ಲಿ ಕಾಲಘಟ್ಟ, ಪ್ರಾದೇಶಿಕ ಹಂಚಿಕೆಯನ್ನು ಗಮನಿಸಲಾಗುವುದು. ಮಹಿಳಾ ಸಾಹಿತ್ಯದ ಅಭಿವ್ಯಕ್ತ ಕ್ರಮವನ್ನು ನಿರ್ವಚಿಸುವಾಗ, ಕೆಲವು ಮುಖ್ಯ ಬರಹಗಾರರ ಕೃತಿಗಳು ಕೈಬಿಟ್ಟು ಹೋಗಿರುವ ಸಾಧ್ಯತೆಗಳಿವೆ. ಅದಕ್ಕೆ ಕಾರಣ, ಕಾಲದ ಮಿತಿ ಮತ್ತು ಹಾಕಿಕೊಂಡಿರುವ ತಾತ್ವಿಕ ಚೌಕಟ್ಟಾಗಿದೆ. ಇದನ್ನು ಹೊರತುಪಡಿಸಿದರೆ ಬೇರಾವ ಉಪೇಕ್ಷೆಯ ಕಾರಣಗಳಿಲ್ಲ.

ಮಹಿಳಾ ಸಾಹಿತ್ಯ ಪರಂಪರೆಯ ಮೊದಲ ಬರಹಗಾರರಾದ ಅಕ್ಕಮಹಾದೇವಿ ಮುಂತಾದ ವಚನಕಾರರು, ಸಂಚಿ ಹೊನ್ನಮ್ಮನಂತಹ ಮಹಾಕಾವ್ಯ ರಚನೆಯಲ್ಲಿ ಪಂಡಿತರಾದ ಕವಿಗಳ ಕೃತಿಗಳು ಲಭ್ಯವಿವೆ. ಆದರೆ ಅಧ್ಯಯನದ ಚೌಕಟ್ಟನ್ನು 'ಆಧುನಿಕ' ಮಹಿಳಾ ಸಾಹಿತ್ಯಕ್ಕೆ ಸೀಮಿತಗೊಳಿಸಿಕೊಳ್ಳಲಾಗಿದೆ. ವಸಾಹತುಶಾಹಿ ಕಾಲಘಟ್ಟದಲ್ಲಿ ಬರೆಯಲು ಪ್ರಾರಂಭಿಸಿದ ಶಾಂತಾಬಾಯಿ ನೀಲಗಾರ, ನಂಜನಗೂಡಿನ ತಿರುಮಲಾಂಬ, ಆರ್.ಕಲ್ಯಾಣಮ್ಮನವರ ಕಾಲದಿಂದ, ಇಂದು ಬರೆಯುತ್ತಿರುವ ವೈದೇಹಿ, ನಾಗವೇಣಿ, ಮಮತಾ ಜಿ. ಸಾಗರ್‌ರವರು ರಚಿಸಿದ ಕಾಲಘಟ್ಟವನ್ನು ನಿಗದಿಪಡಿಸಿಕೊಳ್ಳಲಾಗಿದೆ. ಪ್ರಾತಿನಿಧಿಕವಾಗಿ ಆಯ್ದುಕೊಂಡ ಬರಹಗಾರರ ಎಲ್ಲಾ ಬರಹಗಳನ್ನು ಬಳಸಿಕೊಳ್ಳದೇ, ಅಗತ್ಯವೆನಿಸಿದ ಕೃತಿಗಳನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಸುಮಾರು ಮೂವತ್ತೈದಕ್ಕೂ ಹೆಚ್ಚು ಬರಹಗಾರರ ಪ್ರಾತಿನಿಧಿಕ ಕವಿತೆ-ಕತೆ-ಕಾದಂಬರಿಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗುವುದು.

### ೧.೩ ಅಧ್ಯಯನಕ್ಕೆ ಬಳಸಿಕೊಂಡ ಮೂಲ ಆಕರಗಳ ಮಾಹಿತಿ

ಮೊದಲ ಪೀಳಿಗೆಯ ಕವಿಗಳಾದ ತಿರುಮಲೆ ರಾಜಮ್ಮ, ಬೆಳಗೆರೆ ಜಾನಕಮ್ಮ, ನಂತರದ

ಪೀಳಿಗೆಯವರಾದ ಮಾಲತಿ ಪಟ್ಟಣಶೆಟ್ಟಿ, ಚ.ಸರ್ವಮಂಗಳ, ಸುಕನ್ಯಾ ಮಾರುತಿ, ಶಶಿಕಲಾ ವೀರಯ್ಯಸ್ವಾಮಿ, ಸ.ಉಷಾ, ಮಲ್ಲಿಕಾ ಘಂಟಿ; ಎಚ್.ಎಲ್.ಪುಷ್ಪಾ, ಪ್ರತಿಭಾನಂದಕುಮಾರ್, ಸವಿತಾ ನಾಗಭೂಷಣ್, ಮಮತಾ ಜಿ.ಸಾಗರ್‌ರವರ ಕವನ ಸಂಕಲಗಳ ಕವಿತೆಗಳನ್ನು ಆಯ್ದುಕೊಳ್ಳಲಾಗಿದೆ.

ಮೊದಲ ಪೀಳಿಗೆಯ ಕತೆಗಾರರಾದ ಶ್ಯಾಮಲಾದೇವಿ ಬೆಳಗಾಂವ್‌ಕರ್, ಸರಸ್ವತಿಬಾಯಿ ರಾಜವಾಡೆ, ಕೊಡಗಿನ ಗೌರಮ್ಮ; ನಂತರದ ಎಚ್.ಎಸ್.ಕಾತ್ಯಾಯಿನಿ, ವೀಣಾ ಶಾಂತೇಶ್ವರ್, ರಾಜಲಕ್ಷ್ಮಿ ಎನ್.ರಾವ್, ತ್ರಿವೇಣಿ, ವೈದೇಹಿ, ಬಾನು ಮುಷ್ತಾಕ್ ಮುಂತಾದವರ ಕಥಾ ಸಂಕಲನಗಳ ಕತೆಗಳನ್ನು ಪ್ರಬಂಧ ಒಳಗೊಂಡಿದೆ.

ಮೊದಲ ಪೀಳಿಗೆಯ ಕಾದಂಬರಿಕಾರರಾದ ಶಾಂತಾಬಾಯಿ ನೀಲಗಾರ, ನಂಜನಗೂಡಿನ ತಿರುಮಲಾಂಬ, ಆರ್.ಕಲ್ಯಾಣಮ್ಮ; ತ್ರಿವೇಣಿ, ಅನುಪಮಾ ನಿರಂಜನ, ಎಚ್.ವಿ.ಸಾವಿತ್ರಮ್ಮ, ಎಸ್.ವಿ.ಪ್ರಭಾವತಿ, ಸಾರಾ ಅಬೂಬಕ್ಕರ್, ಎಚ್.ನಾಗವೇಣಿ ಮುಂತಾದವರ ಕಾದಂಬರಿಗಳನ್ನು ವಿಶ್ಲೇಷಣೆಗೆ ಆಯ್ದುಕೊಳ್ಳಲಾಗಿದೆ.

## ೧.೪ ಅಧ್ಯಯನದ ಸ್ವರೂಪ

ಅಧ್ಯಯನದ ಬೆಳವಣಿಗೆಯ ದೃಷ್ಟಿಕೋನದಿಂದ ಎಂಟು ಅಧ್ಯಾಯಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲ ನಾಲ್ಕು ಅಧ್ಯಾಯಗಳು, ಮಹಿಳಾ ಸಾಹಿತ್ಯದ ಅಭಿವ್ಯಕ್ತಿ ಕ್ರಮವನ್ನು ಗುರುತಿಸಲು ತಳಹದಿಯನ್ನು ಒದಗಿಸಿವೆ. ನಂತರದ ಮೂರು ಅಧ್ಯಾಯಗಳು ಪ್ರಬಂಧದ ತಾತ್ವಿಕ ಸ್ವರೂಪವನ್ನು ಶೋಧಿಸುವ ಕೇಂದ್ರ ಭಾಗವಾಗಿವೆ. ಅಧ್ಯಯನದ ಸ್ಥೂಲ ಸ್ವರೂಪವನ್ನು ಕೆಳಗಿನಂತೆ ತಿಳಿಯಬಹುದಾಗಿದೆ.

೧. ಪ್ರಸ್ತುತ ಅಧ್ಯಾಯವು, ಪ್ರಬಂಧದ ಮುಖ್ಯ ಉದ್ದೇಶ, ವ್ಯಾಪ್ತಿ, ಬಳಸಿಕೊಂಡ ಆಕರಗಳ ಮೂಲ ಮಾಹಿತಿ ಮತ್ತು ಅಧ್ಯಯನದ ಸ್ವರೂಪದ ಕುರಿತು ಪ್ರವೇಶಿಕೆಯನ್ನು ನೀಡುತ್ತದೆ.

೨. ಮಹಿಳಾ ಸಾಹಿತ್ಯದ ಸ್ಥೂಲ ಸಮೀಕ್ಷೆಯನ್ನು ಎರಡನೇ ಅಧ್ಯಾಯ ಒಳಗೊಂಡಿದೆ. ಕೃತಿಗಳ ಕಾರ್ಯಕಾರಣ ಸಂಬಂಧವನ್ನು ಪರಿಶೀಲನೆ ಮಾಡದೇ ಔಪಚಾರಿಕವಾಗಿ ಬರೆದ ವಿಮರ್ಶೆಗಳಲ್ಲಿ 'ಉದಾರವಾದಿ ನಿಲುವು' ಕಾಣಿಸಿಕೊಳ್ಳುತ್ತದೆ. ಕೃತಿಗೆ ಸಂಬಂಧಿಸಿರದ ಅನ್ಯ ತತ್ವಗಳನ್ನು ಅಳವಡಿಸಿ, ಕೃತಿಯ 'ಮೌಲ್ಯ ನಿರ್ಣಯ' ಮಾಡುವ 'ಸಾಪೇಕ್ಷ ನೆಲೆ'; ಮಹಿಳಾ ಚಿಂತನೆಗಳನ್ನು ಕೇಂದ್ರವಾಗಿಟ್ಟುಕೊಂಡ 'ಸ್ತ್ರೀವಾದಿ ನೆಲೆ'; ಮಹಿಳಾ ಸಾಹಿತ್ಯವನ್ನು ಭಿನ್ನ ಆಯಾಮಗಳಲ್ಲಿ ನಿರ್ವಚಿಸುವ 'ಹೊಸ ಸಾಧ್ಯತೆಯ ಶೋಧನಾ ನೆಲೆ'ಗಳ ಮೂಲಕ ಮಹಿಳಾ ಸಾಹಿತ್ಯವನ್ನು ಅಧ್ಯಯನ ಮಾಡಿರುವುದನ್ನು ವಿಶ್ಲೇಷಿಸಲಾಗಿದೆ.

೩. ಮಹಿಳಾ ಸಾಹಿತ್ಯ ರಚನೆಯ ಸಾಂಸ್ಕೃತಿಕ ಪರಿಸರವನ್ನು ಮೂರನೇ ಅಧ್ಯಾಯದಲ್ಲಿ ವಿಶ್ಲೇಷಣೆಗೊಳಪಡಿಸಲಾಗಿದೆ. ಸಾಂಸ್ಕೃತಿಕ ಪರಿಸರವನ್ನು,

ಅ) ಸ್ವಾತಂತ್ರ್ಯ ಪೂರ್ವ ಮತ್ತು

ಆ) ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ಅಧ್ಯಯನ ಕೈಗೊಳ್ಳಾಗಿದೆ. ಬ್ರಿಟಿಶ್ ಆಡಳಿತದೊಂದಿಗೆ ಅನೇಕ ಸಮಾಜ ಸುಧಾರಕರು ಕೈಗೂಡಿಸಿ ಮಹಿಳೆಯರ ಪರವಾದ ಜಾಗೃತಿಯನ್ನು, ಕಾನೂನುಗಳನ್ನು ಜಾರಿ ಮಾಡಲು ಶ್ರಮಿಸಿದರು. ಇದರೊಂದಿಗೆ, ಮುದ್ರಣ, ಪತ್ರಿಕೆ ಪ್ರಕಟಣೆಗಳ ಸೌಲಭ್ಯ ಮಹಿಳೆಯರ ಬರಹಗಳನ್ನು ಪ್ರಭಾವಿಸಿರುವ ಬಗೆಯನ್ನು ಚರ್ಚಿಸಲಾಗಿದೆ. ಸ್ವಾತಂತ್ರ್ಯೋತ್ತರ ಪರಿಸರದಲ್ಲಿ ಶಿಕ್ಷಣ, ಉದ್ಯೋಗದ ಅವಕಾಶಗಳು ಮಹಿಳೆಯರಿಗೆ ದೊರಕಿದ್ದರಿಂದ, ಸೀಮಿತ ಬದುಕಿನ ಚೌಕಟ್ಟು ವಿಸ್ತಾರವಾಯಿತು. ಮಹಿಳಾ ಪರವಾದ ಚಳುವಳಿ, ಹೋರಾಟದ ನೆಲೆಗಳು ಬರಹಗಳಿಗೆ ಬೆಂಬಲ ನೀಡಿದ್ದನ್ನು ಅಧ್ಯಯನ ಮಾಡಲಾಗಿದೆ.

೪. ನಾಲ್ಕನೆಯ ಅಧ್ಯಾಯದಲ್ಲಿ 'ಅಭಿವ್ಯಕ್ತಿ ಕ್ರಮದ ತಾತ್ವಿಕ ಸ್ವರೂಪ'ವನ್ನು ಕುರಿತು ವಿಷದವಾಗಿ ಚರ್ಚಿಸಲಾಗಿದೆ. ಅಭಿವ್ಯಕ್ತಿ ಕ್ರಮವನ್ನು ವ್ಯಾಖ್ಯಾನಿಸಿದ ವಿವಿಧ ತತ್ವಶಾಸ್ತ್ರಜ್ಞರ ಹೇಳಿಕೆಗಳನ್ನು; ಕೃತಿಯಲ್ಲಿ ಬಳಕೆಯಾಗುವ ವಸ್ತು–ಭಾಷೆ–ಶೈಲಿ–ತಂತ್ರಗಳ ಜಿಜ್ಞಾಸೆ ನಡೆದಿದೆ. ಕಾವ್ಯ–ಕತೆ–ಕಾದಂಬರಿ ಪ್ರಕಾರಗಳೊಂದಿಗೆ ಮಹಿಳಾ ಬರಹಗಾರರು ಹೊಂದಿರುವ ಸಂಬಂಧವನ್ನು ವಿವೇಚಿಸಲಾಗಿದೆ.

೫. ಈ ಅಧ್ಯಾಯನದಲ್ಲಿ 'ಮಹಿಳಾ ಕಾವ್ಯದ ಅಭಿವ್ಯಕ್ತಿ ಸ್ವರೂಪ'ವನ್ನು ಶೋಧಿಸುವ ಕಾರ್ಯ ಕೈಗೊಂಡಿದೆ. 'ಭಾವಪ್ರಧಾನ ಮಾದರಿ', 'ಪೌರಾಣಿಕ ಪಾತ್ರಗಳ ಪುನರವಲೋಕನ ಮಾದರಿ', 'ಪ್ರತಿಮಾತ್ಮಕ ಮಾದರಿ', 'ಪ್ರಕೃತಿಜನ್ಯ ಮಾದರಿ', 'ನಿರಚನವಾದಿ ಮಾದರಿ' – ಈ ಐದು ಪ್ರಮುಖ ಪರಿಕಲ್ಪನೆಗಳಲ್ಲಿ ಮಹಿಳೆಯರ ಕಾವ್ಯವನ್ನು ತಾತ್ವಿಕ ಚಿಂತನೆಗೆ ಒಳಪಡಿಸಲಾಗಿದೆ. ರಾಷ್ಟ್ರಭಕ್ತಿ, ರಾಜಮ್ಮನವರ ಕಾವ್ಯದ ಮೂಲ ಸ್ಥಾಯಿಭಾವವಾದರೆ, ಜೀವನದ ಅನುಭವ ಶೋಧ, ಬೆಳಗೆರೆ ಜಾನಕಮ್ಮನವರ ಕೇಂದ್ರ ಪ್ರಜ್ಞೆಯಾಗಿದೆ. ಯಾವ ಪಂಥಕ್ಕೂ ಕಟ್ಟು ಬೀಳದೇ, ತಮ್ಮ ಮನಸ್ಸಿನಲ್ಲಿ ಉದ್ಭವಿಸಿದ ಭಾವನೆಗಳಿಗೆ ಕಾವ್ಯ ರೂಪ ಕೊಟ್ಟಿದ್ದಾರೆ. ಇವರಿಬ್ಬರ ಕಾವ್ಯವನ್ನು 'ಭಾವಪ್ರಧಾನ ಮಾದರಿ'ಯಲ್ಲಿ ಅಧ್ಯಯನ ಮಾಡಲಾಗಿದೆ. ರಾಮಾಯಣ, ಮಹಾಭಾರತ ಮುಂತಾದ ಸಾಂಪ್ರದಾಯಿಕ ಪುರಾಣಗಳಲ್ಲಿ, ಆದರ್ಶ ಪತಿವ್ರತೆಯರಾಗಿದ್ದ ಸ್ತ್ರೀ ಪಾತ್ರಗಳು, ಮಹಿಳಾ ಕವಿಗಳ ಮೂಲಕ ಪುನರವಲೋಕನಕ್ಕೆ ಒಳಗಾಗಿವೆ. 'ಪ್ರತಿಮಾತ್ಮಕ' ವಿಧಾನದಲ್ಲಿ ಸಾಂಪ್ರದಾಯಿಕ ಭಾಷಾ ಬಳಕೆಯಿಂದ ತಪ್ಪಿಸಿಕೊಂಡ ಖಾಸಗಿ ಬದುಕಿನ ಪರಿಕರಗಳನ್ನು ಪ್ರತಿಮೆಯಾಗಿಸಿ, ಹರಳುಗಟ್ಟಿದ ಭಾಷೆಯಲ್ಲಿ ರಚಿಸಿದ ಕಾವ್ಯವನ್ನು ಅಧ್ಯಯನ ಮಾಡಲಾಗಿದೆ. ಭುವಿ–ಬಾನು–ಸೂರ್ಯ–ಚಂದ್ರ–ಆಕಾಶ, ಹಕ್ಕಿ–ಹಳ್ಳ–ಕಡಲು–ಬೆಟ್ಟ–ಗುಡ್ಡಗಳು ಪ್ರಕೃತಿಯ ಸೃಷ್ಟಿಗಳಾಗುತ್ತಲೇ, ಕಾವ್ಯದ ಪ್ರತಿಮೆಗಳಾಗಿ ನಿಲ್ಲುವ 'ಪ್ರಕೃತಿ ಜನ್ಯ ಮಾದರಿ'ಯಲ್ಲಿ ಕವಿಯ ಕನಸು ವಿಷಾದ–ಸಂಭ್ರಮಗಳನ್ನು ದಾಖಲಿಸಲಾಗಿದೆ. 'ಯಾದೃಚ್ಛಿಕ ಸಂಕೇತಗಳ ಮೊತ್ತವಾದ' ಭಾಷೆಯ ಪಠ್ಯವನ್ನು ಒಡೆದು ನೋಡುವ 'ನಿರಚನವಾದಿ ಮಾದರಿ'ಯಲ್ಲಿ ಕವಿತೆ ಪಡೆದುಕೊಳ್ಳುವ ವಿವಿಧ ಧ್ವನಿಗಳನ್ನು ಪರಿಶೋಧಿಸಲಾಗಿದೆ.

೬. ಆರನೇ ಅಧ್ಯಾಯದಲ್ಲಿ 'ಕತೆಗಳ ಅಭಿವ್ಯಕ್ತಿ ಸ್ವರೂಪ'ವನ್ನು ತಾತ್ವಿಕ ಆಯಾಮಗಳಲ್ಲಿ ವಿಶ್ಲೇಷಿಸಿದೆ. ನೇರ ಕಥನ ವಿಧಾನವನ್ನು ಅನುಸರಿಸಿದ 'ವೃತ್ತಾಂತ ಮಾದರಿ'ಯಲ್ಲಿ ಕತೆಗಾರರು ಸೂಚಿತ ಪಾತ್ರಗಳ ಸಂಭಾಷಣೆಯನ್ನು ಬಳಸಿ ತಮ್ಮ ಆಲೋಚನೆಗಳನ್ನು ಮಂಡಿಸಿದ್ದಾರೆ. ಪ್ರಾರಂಭದ ಮಹಿಳಾ ಬರಹಗಾರರು ವೃತ್ತಾಂತ ವಿಧಾನವನ್ನು ಬಳಸಿಕೊಂಡಿರುವ ಬಗೆಯನ್ನು ಮಂಡಿಸಲಾಗಿದೆ. ಖಾಸಗಿ ಸಂಗತಿಗಳ ಹಂಚಿಕೊಳ್ಳುವಿಕೆಗೆ ಸಹಕಾರಿಯಾದ 'ಪತ್ರ ಮತ್ತು ದಿನಚರಿ' ರೂಪಗಳನ್ನು ಸಮರ್ಥವಾಗಿ ಬಳಸಿಕೊಂಡ ಮಾದರಿಯಲ್ಲಿ ವ್ಯಕ್ತವಾದ ಮಹಿಳಾ ಕೇಂದ್ರಿತ ಸಮಸ್ಯೆಗಳನ್ನು ಅಧ್ಯಯನ ಮಾಡಲಾಗಿದೆ. ಭಿನ್ನ ಪಾತ್ರಗಳ ಮೂಲಕ, ಭಿನ್ನ ಅಭಿಪ್ರಾಯಗಳನ್ನು ಮಂಡಿಸಲು ಸಾಧ್ಯವಿರುವ 'ಸರ್ವಸಾಕ್ಷಿ ಪ್ರಜ್ಞಾಮಾದರಿ'ಯ ಪ್ರಯೋಜನೆಗಳನ್ನು, ಕತೆಗಳ ಮೂಲಕ ತಿಳಿಯಲಾಗಿದೆ. 'ಪೌರಾಣಿಕ ಪಾತ್ರಗಳ ಪುನರವಲೋಕನ ಮಾದರಿ'ಯಲ್ಲಿ ಶಕುಂತಲೆ, ಊರ್ಮಿಳೆಯಂತಹ ಪಾತ್ರಗಳನ್ನು ಕೇಂದ್ರವಾಗಿಟ್ಟುಕೊಂಡು ಮಹಿಳಾ ಬದುಕಿನ ಅಸ್ತಿತ್ವವನ್ನು ಕಡೆಗಣಿಸಿದ ಪಿತೃಪ್ರಧಾನ ವ್ಯವಸ್ಥೆಯನ್ನು ನಯವಾಗಿ ಟೀಕಿಸಲಾಗಿದೆ. ಮಕ್ಕಳು ವ್ಯಕ್ತಪಡಿಸುವ ಮನೋವ್ಯಾಪಾರಗಳನ್ನು, ಮನಃಸ್ಥಿತಿಯ ಅಸ್ವಾಸ್ಥ್ಯ ಉಂಟಾಗಲು ಇರುವ ಕಾರಣಗಳನ್ನು 'ಮನೋ ವಿಶ್ಲೇಷಣಾತ್ಮಕ ಮಾದರಿ'ಯಲ್ಲಿ ಕತೆಗಳ ಆಧಾರಗಳ ಮೂಲಕ ವಿವೇಚಿಸಲಾಗಿದೆ. ವ್ಯಕ್ತಿತ್ವದ ಅಸ್ತಿತ್ವದ ಪ್ರಶ್ನೆಯನ್ನು ನಿಭಾಯಿಸುವಾಗ, ಹೆಣ್ಣಿನ ಮನಸ್ಸಿನ ಒಳತೋಟಿಗಳು, ಒಂಟಿತನ, ನಿರಾಸೆ, ಬದುಕಿನ ಆಯ್ಕೆಯಲ್ಲಿರುವ ದ್ವಂದ್ವಗಳನ್ನು ಹಿಡಿದುಕೊಡಲು 'ಪ್ರತಿಮಾತ್ಮಕ ವಿಧಾನ' ಹೇಗೆ ಸಹಕಾರಿಯಾಗಿದೆಯೆಂಬುದನ್ನು ಅಧ್ಯಯನ ಮಾಡಲಾಗಿದೆ. 'ವಾಸ್ತವತಾ ಮಾದರಿ'ಯಲ್ಲಿ ನಿರ್ದಿಷ್ಟ ಸಮುದಾಯದ ಸಾಂಸ್ಕೃತಿಕ ಆವರಣ, ಪ್ರಾದೇಶಿಕ ವೈಶಿಷ್ಟ್ಯತೆಗಳನ್ನು ಅವಲೋಕಿಸಲಾಗಿದೆ. ಈ ಹಿನ್ನೆಲೆಯಲ್ಲಿ ಹೆಣ್ಣಿನ ಬದುಕು ಬಾಡುವ ಮತ್ತು ಅರಳುವ ಪ್ರಕ್ರಿಯೆಯನ್ನು ಗಮನಿಸಲಾಗಿದೆ.

೭. ಕಾದಂಬರಿಗಳ ಅಭಿವ್ಯಕ್ತಿ ಸ್ವರೂಪವನ್ನು ಏಳನೇ ಅಧ್ಯಾಯದಲ್ಲಿ ಶೋಧಿಸಲಾಗಿದೆ. ಒಂದು ವಸ್ತು/ಸಮಸ್ಯೆಯನ್ನು ಎಳೆಎಳೆಯಾಗಿ ಅಭಿವ್ಯಕ್ತಿಸಲು ಸಾಧ್ಯವಾಗುವ ಕಾದಂಬರಿಗಳ 'ದೃಷ್ಟಾಂತ ಮಾದರಿ', 'ಪೌರಾಣಿಕ ಪಾತ್ರಗಳ ಪುನರವಲೋಕನ ಮಾದರಿ', 'ಮನೋವಿಶ್ಲೇಷಣಾತ್ಮಕ ಮಾದರಿ', 'ವಾಸ್ತವತಾವಾದಿ ಮಾದರಿ'– ಈ ನಾಲ್ಕು ಪರಿಕಲ್ಪನಾತ್ಮಕ ಆಯಾಮಗಳಲ್ಲಿ ಮಹಿಳೆಯರ ಕಾದಂಬರಿಗಳನ್ನು ವಿಶ್ಲೇಷಣೆಗೊಳಪಡಿಸಲಾಗಿದೆ. ವ್ಯಯಕ್ತಿಕ ಬದುಕು ಮತ್ತು ಸಾಮಾಜಿಕ ಸ್ಥಿತ್ಯಂತರಗಳ ಸಂಘರ್ಷದಲ್ಲಿ 'ಆಧುನಿಕ' ಮಹಿಳೆಯ ದೃಷ್ಟಾಂತ ಚಿತ್ರಣವನ್ನು ನೀಡುವುದು ಪ್ರಾರಂಭದ ಬರಹಗಾರರಿಗೆ ಅನಿವಾರ್ಯವಾಗಿತ್ತು. ಮಹಿಳಾ ಸಮಸ್ಯೆಗಳೇ ಪ್ರಧಾನವಾದ ಕಾದಂಬರಿಗಳನ್ನು 'ದೃಷ್ಟಾಂತ ಮಾದರಿ'ಯಲ್ಲಿಟ್ಟು ಚರ್ಚಿಸಲಾಗಿದೆ. ಮಹಿಳಾ ಪರಂಪರೆಯನ್ನು ನಿರ್ವಚಿಸಿಕೊಳ್ಳಲು ಮೂಲ ಆಕರಗಳಾದ ಧಾರ್ಮಿಕ ಗ್ರಂಥಗಳನ್ನು, ಮಹಾಕಾವ್ಯಗಳನ್ನು, ಪುರಾಣ ಕತೆಗಳನ್ನು ಮೊರೆ ಹೋಗುವುದು ಅನಿವಾರ್ಯವಾಗಿದೆ. ಈ ನಿಟ್ಟಿನಲ್ಲಿ ಮಹಿಳಾ

ಬರಹಗಾರರನ್ನು ತೀವ್ರವಾಗಿ ಕಾಡಿದ ಪುರಾಣ ಪಾತ್ರಗಳನ್ನು ಚಿಕಿತ್ಸಕ ದೃಷ್ಟಿಕೋನದಿಂದ ನೋಡಿದಾಗ, ಹೊಸ ತಿರುವುಗಳು, ಸ್ವಾಯತ್ತ ಬದುಕಿನ ಸಾಧ್ಯತೆಗಳು ಗೋಚರಿಸುತ್ತವೆಯೆಂಬುದನ್ನು 'ಪೌರಾಣಿಕ ಪಾತ್ರಗಳ ಪುನರವಲೋಕನ ಮಾದರಿ'ಯ ಕಾದಂಬರಿಗಳ ಮೂಲಕ ವಿಷದಪಡಿಸಲಾಗಿದೆ.

೮. 'ಮನೋವಿಶ್ಲೇಷಣಾತ್ಮಕ ಮಾದರಿ'ಯಲ್ಲಿ ಮಹಿಳೆಯ ಮನಃಸ್ಥಿತಿಯನ್ನು ನಿಯಂತ್ರಿಸುವ ಸಾಮಾಜಿಕ ವಿಧಿ–ನಿಷೇಧಗಳ ಬಗ್ಗೆ, ಕಟ್ಟುಪಾಡುಗಳ ಬಗ್ಗೆ ಗಮನ ಹರಿಸಲಾಗಿದೆ. ರೂಢಿ–ಸಂಪ್ರದಾಯಗಳ ಹೆಸರಿನಲ್ಲಿ ಮಹಿಳೆಯರಲ್ಲಿ ಬಿತ್ತುವ ಪಾತಿವ್ರತ್ಯದ ಬೀಜಗಳು ಭವಿಷ್ಯದ ಬದುಕಿನಲ್ಲಿ ಮುಳ್ಳುಗಳಾಗಿ ಬೆಳೆಯುವ ಹಂತವನ್ನು ಕೆಲವು ಪ್ರಾತಿನಿಧಿಕ ಕಾದಂಬರಿಗಳ ಮೂಲಕ ಕಂಡುಕೊಳ್ಳಲಾಗಿದೆ. ಮಾನಸಿಕ ಸ್ಥಿತಿಗೂ, ಸಾಮಾಜಿಕ ಪರಿಸರಕ್ಕೂ ಇರುವ ಅಗಾಧ ಸಂಬಂಧವನ್ನು ವಿಶ್ಲೇಷಿಸಲಾಗಿದೆ. 'ವಾಸ್ತವವಾದಿ ಮಾದರಿ'ಯಲ್ಲಿ ಮಹಿಳೆಯರ ಕಾದಂಬರಿಗಳು ಕಟ್ಟಿಕೊಡುವ ವಾಸ್ತವದ ಚಿತ್ರಣಗಳು ಯಾವ ಬಗೆಯಾಗಿವೆ ಎಂಬುದನ್ನು ವಿವೇಚಿಸಲಾಗಿದೆ. ತನ್ನದೇ ಆದ ವಿಶಿಷ್ಟತೆಯನ್ನು ಹೊಂದಿದ ಸಾಂಸ್ಕೃತಿಕ ಆವರಣವನ್ನು ಪರಿಚಯಿಸುವ ಮೂಲಕ ಬದುಕಿನ ಗತಿಗಳನ್ನು ದಾಖಲಿಸಿರುವುದನ್ನು ಇಲ್ಲಿ ಕಾಣಬಹುದು. ಧಾರ್ಮಿಕ ವಿಧಿ ನಿಷೇಧಗಳಲ್ಲಿ ಮಹಿಳೆಯ ಬದುಕು ಬಲಿಯಾಗುವ ವಾಸ್ತವ ಸಂಗತಿಗಳನ್ನು ಕಟ್ಟಿಕೊಡಲಾಗಿದೆ. ದಲಿತ ವರ್ಗದ ಮಹಿಳೆ ಎದುರಿಸಬೇಕಾದ ಶೋಷಕ ವ್ಯವಸ್ಥೆಯ ಚಿತ್ರಣವನ್ನು ಮಹಿಳಾ ಬರಹಗಾರರು ಪ್ರಾಮಾಣಿಕವಾಗಿ ಚಿತ್ರಿಸಲು ಪ್ರಯತ್ನಿಸಿದ್ದಾರೆ. 'ಆಧುನಿಕ' ಮಹಿಳೆಗಿರುವ ಹೊಸ ಸವಾಲು, ದ್ವಂದ್ವಗಳನ್ನು ಕಾದಂಬರಿಯ ಮೂಲಕ ದಾಖಲಿಸಲಾಗಿದೆ.

೯. ಮಹಿಳಾ ಸಾಹಿತ್ಯದ ಅಭಿವ್ಯಕ್ತಿ ಕ್ರಮವನ್ನು ಭಿನ್ನವಾದ ತಾತ್ವಿಕ ನೆಲೆಗಟ್ಟಿನಲ್ಲಿ ಕಟ್ಟಿಕೊಡುವ ಸಂಶೋಧನಾ ಪ್ರಬಂಧದಲ್ಲಿ ಸಾಧಿತವಾದ ಫಲಿತಗಳನ್ನು ಸಾರ ರೂಪದಲ್ಲಿ ಸಂಗ್ರಹಿಸಲಾಗಿದೆ. ಪ್ರಬಂಧ ರಚನೆಯಲ್ಲಿ ಪ್ರಾಯೋಗಿಕ ಅಧ್ಯಯನಕ್ಕೆ ಆಯ್ದುಕೊಂಡ ಮಹಿಳೆಯರ ಕೃತಿಗಳನ್ನು; ಪ್ರಾತಿನಿಧಿಕವಾಗಿ ಗುರುತಿಸಿಕೊಂಡಿರುವ ಪರಿಕಲ್ಪನೆಗಳ ನಡುವೆ ಇರುವ ಸಂಬಂಧಗಳನ್ನು ತಾತ್ವಿಕವಾಗಿ ಚರ್ಚಿಸಲಾಗಿದೆ. ಅಧ್ಯಯನ ಸಂದರ್ಭದಲ್ಲಿ ಎದುರಿಸಿದ ತೊಡಕುಗಳನ್ನು, ಬಿಡಿಸಿಕೊಂಡ ಬಗೆಯನ್ನು ಕಂಡುಕೊಳ್ಳಲಾಗಿದೆ. ಮಹಿಳಾ ಸಾಹಿತ್ಯವನ್ನು ಅನುಲಕ್ಷಿಸಿ, ಮುಂದೆ ಕೈಗೊಳ್ಳಬೇಕಾದ ಸಾಧ್ಯತೆಗಳನ್ನು ಪ್ರಸ್ತಾಪಿಸಲಾಗಿದೆ.

ಅಧ್ಯಾಯ ಎರಡು

# ಮಹಿಳಾ ಸಾಹಿತ್ಯದ ಅಧ್ಯಯನಗಳ ಸ್ಥೂಲ ಸಮೀಕ್ಷೆ

# ಅಧ್ಯಾಯ ಎರಡು

# ಮಹಿಳಾ ಸಾಹಿತ್ಯದ ಅಧ್ಯಯನಗಳ ಸ್ಥೂಲ ಸಮೀಕ್ಷೆ

## ೨.೧ ಪ್ರವೇಶ

ಮಹಿಳಾ ಸಾಹಿತ್ಯದ ನೆಲೆಗಳನ್ನು ಅನೇಕ ವಿಮರ್ಶೆಗಳು, ಸಂಶೋಧನೆಗಳು ಶೋಧನೆಗೆ ಒಳಪಡಿಸಿವೆ. ಈ ಅಧ್ಯಾಯದಲ್ಲಿ ಮಹಿಳಾ ಸಾಹಿತ್ಯ ಎಂಬ ಪ್ರತ್ಯೇಕೀಕರಣದ ಚರ್ಚೆಯನ್ನು ಮಂಡಿಸಲಾಗಿದೆ. ಮಹಿಳಾ ಸಾಹಿತ್ಯವನ್ನು ಪ್ರತ್ಯೇಕವಾಗಿ ನೋಡುವ ಪ್ರಯೋಜನಗಳನ್ನು ಮನಗಾಣಲಾಗಿದೆ. ಮತ್ತು ಮಹಿಳಾ ಸಾಹಿತ್ಯವನ್ನು ಅವಲೋಕಿಸಿರುವ ಬರಹಗಳನ್ನು ಕೆಲವು ತಾತ್ವಿಕ ಆಯಾಮಗಳಲ್ಲಿ ವಿಂಗಡಿಸಿ, ಸ್ಥೂಲವಾದ ಅಧ್ಯಯನ ಮಾಡಲಾಗಿದೆ.

ನಮ್ಮನ್ನು ಆವರಿಸಿಕೊಂಡಿರುವ ವಾತಾವರಣದ ಪರಿಧಿಯಲ್ಲಿ ಸಂಭವಿಸುವ ಘಟನೆಗಳಿಗೆ ಸ್ಪಂದಿಸಿ, ಅದಕ್ಕೊಂದು ಅಭಿವ್ಯಕ್ತಿಯ ರೂಪ ತೊಡಿಸುವ ಕಾರ್ಯವನ್ನು 'ಸಂವೇದನೆ'ಯೆಂದು ಗುರುತಿಸಲಾಗಿದೆ. ಅಭಿವ್ಯಕ್ತಗೊಳ್ಳುವ ಸಂವೇದನೆಯಲ್ಲಿ ಬುದ್ಧಿ ಮತ್ತು ಭಾವನೆಗಳೆರಡೂ ಮಿಳಿತವಾಗಿರುತ್ತವೆ. ಸಂವೇದನೆಯ ಸ್ವರೂಪವು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿ ಕಾಣಿಸಿಕೊಳ್ಳುತ್ತದೆ. ವ್ಯಕ್ತಿಯ ಅನುಭವ ಲೋಕದ ಗ್ರಹಿಕೆಗಳು ವೈಯಕ್ತಿಕತೆ ಮತ್ತು ಸುತ್ತಲಿನ ಪರಿಸರದ ಆವರಣವನ್ನು, ಅಧ್ಯಯನದ ವ್ಯಾಪ್ತಿಯನ್ನು ಅವಲಂಬಿಸಿರುತ್ತದೆ. ಬರಹಗಾರರ ಸೂಕ್ಷ್ಮ ಗ್ರಹಿಕೆ ಮತ್ತು ಅಭಿವ್ಯಕ್ತಿಸಬಲ್ಲ ಸಾಮರ್ಥ್ಯವನ್ನು ಅವಲಂಬಿಸಿ ಗಂಡು, ಹೆಣ್ಣಿನ ಅಂತರಂಗವನ್ನು; ಹೆಣ್ಣು, ಗಂಡಿನ ಅಂತರಂಗವನ್ನು ಗ್ರಹಿಸಿ ಅನಾವರಣಗೊಳಿಸಬಹುದು. ಆದರೆ ಈ ಮುಕ್ತ ಸಂವೇದನೆಯಲ್ಲಿ ಪುರುಷ ಬರಹಗಾರರು ಮಹಿಳೆಯರ ಅನುಭವದ ಪರಿಧಿಯೊಳಗೆ ಪ್ರವೇಶಿಸಿ, ಚಿತ್ರಿಸಿದ ಬರವಣಿಗೆಯಲ್ಲಿ ಮುಚ್ಚಿಹೋಗಬಹುದಾದ ಸಂಗತಿಗಳೇ ಹೆಚ್ಚಾಗಿರುವುದನ್ನು ಅನೇಕ ಅಧ್ಯಯನಗಳು ಗುರುತಿಸಿವೆ.

ಮಹಿಳೆಯರು ಬರವಣಿಗೆಯ ಕೃಷಿಗೆ ಇಳಿಯುವ ಹೊತ್ತಿಗೆ ಪುರುಷ ಲೋಕ ಸೃಷ್ಟಿಸಿದ ಸಾಹಿತ್ಯ ಪರಂಪರೆಯೊಂದು ನಿರ್ಮಾಣವಾಗಿ ಹೊಸ ಹೊಸ ಪ್ರಯೋಗಗಳಿಗೆ ನಾಂದಿ ಹಾಡಿತ್ತು. ಅಕ್ಷರ ಲೋಕಕ್ಕೆ ತಮ್ಮನ್ನು ಮೊದಲು ತೊಡಗಿಸಿಕೊಂಡ ಮಹಿಳೆಯರ ಸಂವೇದನೆಗಳಿಗೂ, ಬದಲಾದ ಇಂದಿನ ಸನ್ನಿವೇಶದ ಮಹಿಳೆಯರ ಸಂವೇದನೆಗಳಿಗೂ ಅನೇಕ ಬದಲಾವಣೆಗಳಾಗಿವೆ ಎಂಬುದನ್ನು ಅಧ್ಯಯನಗಳು ಗುರುತಿಸಿವೆ.

## ಮಹಿಳಾ ಸಾಹಿತ್ಯ ಪ್ರತ್ಯೇಕೀಕರಣದ ಚರ್ಚೆ

ಸಾಹಿತ್ಯ ಸಂವೇದನೆಯ ಹಿನ್ನೆಲೆಯಲ್ಲಿ 'ಮಹಿಳಾ ಸಾಹಿತ್ಯ' ಎಂದು ಪ್ರತ್ಯೇಕಿಸಿ ನೋಡುವ ಅಗತ್ಯವಿದೆಯೆ? ಎಂಬ ಬಗ್ಗೆ ಎರಡು ವಾದಗಳಿವೆ. ಮೊದಲನೆಯ ವಾದದಲ್ಲಿ, ಸಾಹಿತ್ಯ ನಿರ್ಮಿತಿಯ ಕಾರ್ಯದಲ್ಲಿ ತೊಡಗಿರುವ ಮಹಿಳೆ-ಪುರುಷರಿಬ್ಬರೂ ಸಮಾನರೇ ಆಗಿದ್ದಾರೆ. ಮಹಿಳಾ ಸಾಹಿತ್ಯವೆಂಬ ಪ್ರತ್ಯೇಕ ವರ್ಗೀಕರಣದಿಂದಾಗಿ ಸಾಹಿತ್ಯ ವಿಮರ್ಶಾ ವಲಯದಲ್ಲಿ ರಿಯಾಯಿತಿ ರೂಪದ, ಅನುಕಂಪ ದೃಷ್ಟಿಯ ಧೋರಣೆಗಳು ಕಾಣಿಸಿಕೊಳ್ಳುತ್ತವೆ. ಜತೆಗೆ ಮಹಿಳಾ ಸಾಹಿತ್ಯವೆಂಬ ಪ್ರತ್ಯೇಕ ಸ್ಥಾನದಿಂದ ಕೃತಿಗಳನ್ನು ಓದುವಾಗ ಮಹಿಳೆಯರ ಕೃತಿಗಳು ಎಂಬ ಕಾರಣಕ್ಕೆ ಉಪೇಕ್ಷೆಯ ಅಥವಾ ಕೆಳದರ್ಜೆಯ ನೋಟಗಳು ಎದುರಾಗುತ್ತವೆ.

೧. ಮಹಿಳಾ ಸಾಹಿತ್ಯವೆಂಬ ಪ್ರತ್ಯೇಕತೆಯನ್ನು ನಿರಾಕರಿಸುವ ಜಿ.ಎಸ್.ಶಿವರುದ್ರಪ್ಪನವರು "ಸಾಹಿತ್ಯ ನಿರ್ಮಿತಿ ಒಂದು ಮಾನಸಿಕ ಕ್ರಿಯೆ. ತತ್ಪರಿಣಾಮವಾದ ಸಾಹಿತ್ಯಾಭಿವ್ಯಕ್ತಿಯನ್ನು ಪರಿಶೀಲಿಸುವಲ್ಲಿ 'ಮಹಿಳಾ ಸಾಹಿತ್ಯ' ಎಂದು ಪ್ರತ್ಯೇಕವಾಗಿ ಗಮನಿಸುವುದೇ ಸರಿಯಲ್ಲ ಎಂದು ನನ್ನ ಅಭಿಪ್ರಾಯ. ಹಾಗೆ ಮಾಡುವುದರಿಂದ ಅದರ ಪರವಾದ ಅನಗತ್ಯವಾದ ಅನುಕಂಪಗಳೋ ರಿಯಾಯಿತಿಗಳೋ ಸಾಹಿತ್ಯ ವಿಮರ್ಶೆಯ ಜತೆಯಲ್ಲಿ ಸೇರಿಕೊಳ್ಳುವ ಅಪಾಯವಿದೆ" ('ಕಿಶೋರ ಕಾವ್ಯ', ಕಾವ್ಯ ಸಂವಾದ,ಪುಟ-೩೫) ಎಂಬ ನಿಲುವನ್ನು ವ್ಯಕ್ತಪಡಿಸುವ ಇವರು ಮಹಿಳಾ ಸಾಹಿತ್ಯದ ಇತ್ತೀಚಿನ ಬೆಳವಣಿಗೆಯನ್ನು ಬಂಡಾಯ ಸಾಹಿತ್ಯದ ಪ್ರೇರಣೆಯ ಹಿನ್ನೆಲೆಯಲ್ಲಿ ಚರ್ಚೆ ಬೆಳೆಸಿದ್ದಾರೆ. ಸಾಹಿತ್ಯ ಲೋಕ ಸಾರ್ವತ್ರಿಕವಾದುದು. ಈ ಲೋಕದಲ್ಲಿ ಯಾರಾದರೂ ತೊಡಗಬಹುದು, ಸಾಧನೆ ಮಾಡಬಹುದು. ಲಿಂಗಬೇಧವನ್ನು ಅಡ್ಡ ತರುವುದು ಸರಿಯಲ್ಲ ಎಂಬುದಾಗಿ ಅನೇಕ ಅಧ್ಯಯನಗಳು ತಮ್ಮ ವಾದವನ್ನು ಮಂಡಿಸಿವೆ..

ಎರಡನೇ ವಾದದಲ್ಲಿ ಮಹಿಳಾ ಸಾಹಿತ್ಯದ ಪ್ರತ್ಯೇಕ ಅಧ್ಯಯನದ ಮಹತ್ವವನ್ನು ಎತ್ತಿ ಹಿಡಿಯಲಾಗಿದೆ. ಸಾಹಿತ್ಯ ಕ್ಷೇತ್ರದಲ್ಲಿ ಪುರುಷ ಮಹಿಳೆಯರಿಬ್ಬರೂ ಸಮಾನವಾಗಿ ಪಾಲುಗೊಂಡಿದ್ದರೆ, ಪ್ರತ್ಯೇಕತೆಯ ಪ್ರಶ್ನೆಯೇ ಉದ್ಭವಿಸುತ್ತಿರಲಿಲ್ಲ. ಆದರೆ, ಅದು ಸಾಧ್ಯವಾಗಿಲ್ಲ. ಹಾಗೆ ಸಾಧ್ಯವಾಗದಿರುವ ಕಾರಣಗಳನ್ನು ಶೋಧಿಸುವಲ್ಲಿ ಪ್ರತ್ಯೇಕತೆಯ ಅಗತ್ಯವಿದೆ. ಮಹಿಳೆಯರ ಅನುಭವಗಳು ಪುರುಷ ಲೋಕದ ಅನುಭವಗಳಿಗಿಂತ ಭಿನ್ನವಾಗಿವೆ. ಈ ನಿಟ್ಟಿನಲ್ಲಿ ಮಹಿಳಾ ಸಾಹಿತ್ಯವೆಂಬ ವರ್ಗೀಕರಣ ರಿಯಾಯಿತಿ ಮತ್ತು ಅನುಕಂಪಗಳನ್ನು ನಿರಾಕರಿಸುತ್ತದೆ. ಅದಕ್ಕೆ ಬದಲಾಗಿ ಮಹಿಳೆಯರ ಬರಹಗಳ ವಿಶಿಷ್ಟತೆಗಳನ್ನು, ಹೊಸ ಸಾಧ್ಯತೆಗಳನ್ನು ಕಂಡುಕೊಳ್ಳುತ್ತದೆ.

ಮಹಿಳಾ ಸಾಹಿತ್ಯವನ್ನು ಕುರಿತು ವಿಜಯಾ ದಬ್ಬೆಯವರು, ಮಹಿಳೆಯ ಬದುಕನ್ನು ರೂಪಿಸುವಲ್ಲಿ ಕೌಟುಂಬಿಕ, ಸಾಮಾಜಿಕ, ರಾಜಕೀಯ, ಆರ್ಥಿಕ ಸಂರಚನೆಗಳು ಹೇಗೆ ಕಾರಣವಾಗಿವೆ ಎಂಬ ಹಿನ್ನೆಲೆಯಲ್ಲಿ ಮಹಿಳಾ ಸಾಹಿತ್ಯದ ಪ್ರತ್ಯೇಕೀಕರಣದ ಅಗತ್ಯತೆ ಮತ್ತು ಎದುರಿಸಬೇಕಾದ ಸಮಸ್ಯೆ ಸವಾಲುಗಳ ಬಗ್ಗೆಯೂ ಪ್ರತ್ಯೇಕ ಜಿಜ್ಞಾಸೆಯನ್ನು ಮುಂದಿಟ್ಟಿದ್ದಾರೆ. ಸ್ಪಷ್ಟತೆ ಮತ್ತು ಅಧ್ಯಯನದ

ಉಪಯುಕ್ತತೆಗಾಗಿ ಹೆಣ್ಣಿನ ದೃಷ್ಟಿಕೋನದಿಂದ ಬದುಕನ್ನು ಹಿಡಿಯುವ, ಹೆಣ್ಣಿನ ಮನಸ್ಸು ಬಾಹ್ಯದೊಂದಿಗೆ ಪ್ರತಿಕ್ರಿಯಿಸುವ ರೀತಿಯನ್ನು ಒರೆಗೆ ಹಚ್ಚುವ, ಹೆಣ್ಣಿನೊಳಗನ್ನು ತೋಡಿ ತೋರುವ ಸಾಹಿತ್ಯವನ್ನು, ಮಹಿಳಾ ಎಂಬ ವಿಶೇಷಣದೊಂದಿಗೆ ಗುರುತಿಸಬಹುದೆಂದು ತೋರುತ್ತದೆ ಎಂದಿದ್ದಾರೆ. ಈ ಮಾತು ಮಹಿಳಾ ಸಾಹಿತ್ಯದ ತಾತ್ವಿಕ ಚರ್ಚೆಗೆ ಸಮರ್ಥನೆ ನೀಡುತ್ತದೆ.

ಕೆ.ವಿ.ನಾರಾಯಣರವರು, ಮಹಿಳಾ ಸಾಹಿತ್ಯದ ಪ್ರತ್ಯೇಕೀಕರಣದ ವಾದವನ್ನು ಅಲ್ಲಗಳೆಯುವವರ ಸಿದ್ಧಾಂತವನ್ನು ಪ್ರಶ್ನಿಸಿದ್ದಾರೆ. ಹೆಂಗಸರು ರಚಿಸುವ ಕೃತಿಗಳ ಹಿನ್ನೆಲೆಯಲ್ಲಿ ಒಂದು ವಿಶೇಷವಾದ ಗುಣವಿರುತ್ತದೆ ಎಂಬ ಸಂಗತಿಯನ್ನು ವಿವೇಚಿಸಿದ್ದಾರೆ. ಮಹಿಳೆಯರ ಸಾಹಿತ್ಯವನ್ನು 'ಗಂಡುತನ'ಕ್ಕೆ ಪ್ರತಿಯಾದ 'ಹೆಣ್ಣುತನ'ದ ಪ್ರತೀಕವಾಗಿ ಅರ್ಥೈಸಿದ್ದಾರೆ. ಸಾಂಪ್ರದಾಯಿಕ 'ಹೆಣ್ಣುತನ'ವನ್ನು ವಿಂಗಡಿಸಿ, "ವಾಸ್ತವವಾಗಿ ನಾವು ವಿವಕ್ಷಿಸುತ್ತಿರುವ 'ಹೆಣ್ಣುತನ'ವೆಂಬುದು ಇದಲ್ಲ. ಇದು ಮುಖ್ಯವಾಗಿ ಲೋಕ ಗ್ರಹಿಕೆಯಲ್ಲಿ ಹಾಗೂ ಭಾಷಿಕ ಅಭಿವ್ಯಕ್ತಿಯಲ್ಲಿರುವ ಗಂಡುತನವನ್ನು ನಿರಾಕರಿಸಿ ಅದಕ್ಕೆ ಎದುರಾಗಿ ಇನ್ನೊಂದು ಸಾಧ್ಯತೆಯನ್ನು ಗುರಿಯಾಗಿಸಿಕೊಳ್ಳುತ್ತದೆ. ಇದು ಗಂಡುತನಕ್ಕೆ ಪೂರಕವಾದುದಲ್ಲ; ಪ್ರತಿಯಾದುದು" (ಮಹಿಳೆಯ ಮುನ್ನಡೆ, ಪುಟ–೮೧) ಎಂದಿದ್ದಾರೆ. ಸಂಸ್ಕೃತಿ ಹಾಗೂ ಭಾಷೆ– ಇವುಗಳ ವಕ್ತಾರನಾದ ಗಂಡು ಜಗತ್ತಿನ ಅಪೇಕ್ಷೆಗಳನ್ನು ಮಹಿಳಾ ಸಾಹಿತ್ಯ ಹೇಗೆ ಪ್ರತಿಕ್ರಿಯಿಸಿದೆ ಎಂಬುದನ್ನು ಚರ್ಚಿಸಿದ್ದಾರೆ.

ವಾದ–ವಿವಾದಗಳ ಬೆನ್ನಲ್ಲಿ ಮಹಿಳಾ ಸಾಹಿತ್ಯವೆಂಬ ಪ್ರತ್ಯೇಕ ವರ್ಗೀಕರಣವು ಪುರುಷ ಪ್ರಧಾನ ವ್ಯವಸ್ಥೆ; ಆ ವ್ಯವಸ್ಥೆಯೊಳಗಿನ ಮಹಿಳೆಯ ಬದುಕು; ಆ ಬದುಕಿಗೆ ಪ್ರತಿಕ್ರಿಯಿಸಿದ ರೀತಿಗಳನ್ನು ಅಧ್ಯಯನ ಮಾಡುತ್ತದೆ. ಪುರುಷ ಪ್ರಧಾನ ಧಾರೆಯಲ್ಲಿ ಅನೇಕ ಮಹಿಳೆಯರು ಬರವಣಿಗೆಗೆ ತೊಡಗಿದ್ದರು. ಆದರೆ, ಸಾಹಿತ್ಯ ವಿಮರ್ಶಾ ವಲಯ ಅವರನ್ನು ನಿರ್ಲಕ್ಷತನದಿಂದ ಕಂಡಿದೆ. ಮಹಿಳೆಯರು ಬರೆದುದು ಎಂಬ ಕಾರಣಕ್ಕಾಗಿ ಅವರ ಬರಹಗಳು ಉಪೇಕ್ಷೆಗೆ ಒಳಗಾಗಿವೆ. ಜತೆಗೆ ಮಹಿಳೆಯರು ಶಿಕ್ಷಣಕ್ಕೆ ತೆರೆದುಕೊಂಡು ಸಾಹಿತ್ಯ ಕ್ಷೇತ್ರಕ್ಕೆ ಕಾಲಿಡುವ ಹೊತ್ತಿಗೆ, ಸಾಹಿತ್ಯ ಕ್ಷೇತ್ರದಲ್ಲಿ ಪುರುಷರು ಬಹುದೂರ ಸಾಗಿದ್ದರು. ಪುರುಷ ಜಗತ್ತು ನಿಗದಿಪಡಿಸಿದ್ದ ವಿಮರ್ಶಾ ಮಾನದಂಡಗಳು ಆಗತಾನೇ ಬರೆಯತೊಡಗಿದ್ದ ಮಹಿಳೆಯರ ಬರವಣಿಗೆಯನ್ನು ಅರಿಯಲು ಸಾಫಲ್ಯವಾಗಲಿಲ್ಲ.

ಮಹಿಳೆಯರ ಸಾಹಿತ್ಯವನ್ನು ಕೆಲವು ಅಧ್ಯಯನಕಾರರು 'ಅಡುಗೆಮನೆ ಸಾಹಿತ್ಯ', 'ಜನಪ್ರಿಯ ಸಾಹಿತ್ಯ' ಎಂಬ ಹಣೆಪಟ್ಟಿಯಲ್ಲಿಟ್ಟಿದ್ದಾರೆ. ಮಹಿಳೆಯರು ನಿರ್ವಹಿಸುವ ಕಥಾ ವಸ್ತುಗಳೆಲ್ಲ ಕೌಟುಂಬಿಕ ವಲಯಕ್ಕೆ ಸೀಮಿತವಾಗಿರುತ್ತವೆ. ಅದನ್ನು ಮೀರುವ ಪ್ರಯತ್ನಗಳು ಕಡಿಮೆ ಎಂಬ ಅಪವಾದವಿದೆ. ಆದರೆ, ಇದುವರೆಗೂ ಕಡೆಗಣಿಸಲಾದ ಕುಟುಂಬದ ಬೇರೆ ಬೇರೆ ಮಗ್ಗಲುಗಳನ್ನು ಸಾಹಿತ್ಯದಲ್ಲಿ ಮರೆಮಾಚಲಾಗಿರುವುದನ್ನು ಮಹಿಳಾ ಸಾಹಿತ್ಯವು ಗುರುತಿಸುತ್ತದೆ. ದಕ್ಕಿದ ಅವಕಾಶಗಳಲ್ಲೇ ಭಿನ್ನ ಬರವಣಿಗೆಗೆ ತೊಡಗಿರುವ ಅನೇಕ ಲೇಖಕಿಯರು ಸಾಹಿತ್ಯದ ವಸ್ತು, ವಿನ್ಯಾಸ, ತಂತ್ರ, ಶೈಲಿಗಳನ್ನು ಪ್ರಶ್ನಿಸುತ್ತಲೇ ಹೊಸ ಮಾರ್ಗವನ್ನು ಕಂಡುಕೊಳ್ಳಲು ಪ್ರಯತ್ನಿಸಿರುವುದು ಸೂಕ್ಷ್ಮವಾಗಿ ಕಂಡುಬರುತ್ತದೆ.

ಪುರುಷ ಬರವಣಿಗೆಗೂ-ಮಹಿಳೆಯರ ಬರವಣಿಗೆಗೂ ಇರುವ ಅನೇಕ ವ್ಯತ್ಯಾಸ-ಭಿನ್ನತೆಗಳಿಗೆ ಕಾರಣವನ್ನು ಅನೇಕ ಅಧ್ಯಯನಗಳು ಸ್ಪಷ್ಟಪಡಿಸಿವೆ. ಮಾತೃಮೂಲ ಕುಟುಂಬ ಕ್ರಮೇಣ ತನ್ನ ಅಸ್ತಿತ್ವವನ್ನು ಕಳೆದುಕೊಂಡಂತೆ, ಕುಟುಂಬದ ಯಾಜಮಾನ್ಯತೆ ಪುರುಷರ ಕೈಗೆ ದಕ್ಕಿತು. ಕೃಷಿಯ ಅನ್ವೇಷಣೆ ಖಾಸಗಿ ಆಸ್ತಿಯ ಕಲ್ಪನೆಯನ್ನು ಹುಟ್ಟು ಹಾಕಿತು. ಖಾಸಗಿ ಆಸ್ತಿ ಪರಿಕಲ್ಪನೆಯಲ್ಲಿ ಗುಲಾಮತನ ಮತ್ತು ಯಜಮಾನಿಕೆ ವರ್ಗಗಳು ಉದ್ಭವಿಸಿದವು. ಪರಿಣಾಮ ಮಹಿಳೆ ಯಜಮಾನನ 'ವಸ್ತು'ವಾದಳು. ನಿಸರ್ಗ ಸೃಷ್ಟಿಯಲ್ಲಿ ಗಂಡಸು-ಹೆಂಗಸು ಇಬ್ಬರೂ ಸಮಾನ ಸಾಮರ್ಥ್ಯಗಳನ್ನು ಹೊಂದಿದ್ದರೂ, ಕ್ರಮೇಣ ಗಂಡಸು ಹೊರಗೆ ದುಡಿಯುವ-ಹೆಂಗಸು ಒಳಗಿನ ಕಾರ್ಯವನ್ನು ನಿರ್ವಹಿಸುವ ವಿಂಗಡಣೆ ಇಬ್ಬರ ನಡುವಿನ ಭಿನ್ನ ಲೋಕಗಳ ಸೃಷ್ಟಿಗೆ ಕಾರಣವಾಯಿತು.

ಮುಂದುವರೆದ ಈ ವ್ಯವಸ್ಥೆಯಲ್ಲಿ ಸಾಮಾಜಿಕ, ರಾಜಕೀಯ, ಆರ್ಥಿಕ ರಚನೆಗಳೆಲ್ಲ ಪುರುಷನ ಅಧಿಕಾರದಲ್ಲಿ ಕೇಂದ್ರೀಕೃತಗೊಂಡವು. ಬುದ್ಧಿ-ಭಾವಗಳ ವಿಕಾಸ ಸಾಹಿತ್ಯ ಸೃಷ್ಟಿಗೆ ಕಾರಣವಾಯಿತು. ವಸಾಹತುಶಾಹಿ ವ್ಯವಸ್ಥೆಯ ಪರಿಣಾಮ ಪಾಶ್ಚಾತ್ಯ ಮೂಲದ ಶಿಷ್ಟ ಸಾಹಿತ್ಯ ಪ್ರಕಾರಗಳು ಕನ್ನಡಕ್ಕೂ ಕಾಲಿಟ್ಟವು. ಸುದೀರ್ಘ ಇತಿಹಾಸವನ್ನು ಹುದುಗಿಸಿಟ್ಟುಕೊಂಡ ಕಾಲದ ಒಡಲಲ್ಲಿ ಮಹಿಳೆ ಸೃಜನಾತ್ಮಕವಾಗಿ ಪ್ರತಿಸ್ಪಂದಿಸಿದ್ದಾಳೆ. ಆದರೆ, ಸಾಂಸ್ಕೃತಿಕ ಸಂರಚನೆಯಲ್ಲಿ ಆಕೆಗೆ ಒದಗಿದ ಎರಡನೇ ದರ್ಜೆಯ ಪಾತ್ರ, ಹೊರಗನ್ನು ತಿಳಿಯಲು ಬಿಡದ ಸಾಮಾಜಿಕ ನಿರ್ಬಂಧಗಳು ಅವಳ ಲೋಕವನ್ನು ಸೀಮಿತಗೊಳಿಸುವಂತೆ ಮಾಡಿದವು. ಸುಧಾರಣಾವಾದಿ ಚಳುವಳಿಗಳು, ಮಹಿಳೆಯರು ಶಿಕ್ಷಣಕ್ಕೆ ತೆರೆದುಕೊಳ್ಳುವಂತೆ ಪ್ರೇರೇಪಿಸಿದವು ನಿಜ. ಆದರೆ ಶಿಕ್ಷಣ ಮಹಿಳೆಯರಿಗೆ ತಿಳುವಳಿಕೆಯನ್ನು ನೀಡಿತಾದರೂ, ವಿಶೇಷ ಶಕ್ತಿಯನ್ನೇನೂ ದಯಪಾಲಿಸಲಿಲ್ಲ. ಹಾಗಾಗಿ ಪುರುಷ ಪ್ರಧಾನ ಧಾರೆಗಳಲ್ಲೇ ಆಕೆ ನಡೆಯಬೇಕಾಯಿತು. ಅವರನ್ನೇ ಅನುಸರಿಸಿ-ಅನುಕರಿಸಬೇಕಾದ ಒತ್ತಡಕ್ಕೆ ಸಿಲುಕಬೇಕಾಯಿತು. ಈ ಹಿನ್ನೆಲೆಯಲ್ಲಿ ಮಹಿಳೆಯರು ತೊಡಗಿಸಿಕೊಂಡ ಸಾಹಿತ್ಯ ಪ್ರಕ್ರಿಯೆಯು ಅನೇಕ ಒತ್ತಡಕ್ಕೆ ಕಾರಣವಾಯಿತು.

ಮಹಿಳೆಯರ ಬರಹಗಳನ್ನು ಉಪೇಕ್ಷಿಸಲಾಗಿದೆಯೆಂಬ ಸಂಗತಿಯನ್ನು ಈಗಾಗಲೇ ಅರಿಯಲಾಗಿದೆ. ವಿಮರ್ಶೆಯ ಪರಿಭಾಷೆಗಳು ಕೂಡ ಬದಲಾವಣೆಯತ್ತ ಮುಖ ಮಾಡಿವೆ. ಶಿಕ್ಷಣ ಮತ್ತು ಉದ್ಯೋಗಾವಕಾಶಗಳು ಮಹಿಳೆಯರಿಗೀಗ ಹತ್ತಿರವಾಗಿದ್ದು, ಸಮಾಜದಲ್ಲಿ ನಡೆಯುವ ವಿದ್ಯಮಾನಗಳಿಗೆ ತನ್ನದೇ ಆದ ಪ್ರತಿಕ್ರಿಯೆಯನ್ನು ನೀಡುವ, ಪ್ರತಿಭಟಿಸುವ, ಹಕ್ಕು ಬಾಧ್ಯತೆಗಳನ್ನು ಹಂಚಿಕೊಳ್ಳುವ ನಿಟ್ಟಿನಲ್ಲಿ ಆಕೆಯ ಮಾನಸಿಕ-ಬೌದ್ಧಿಕ ಸ್ತರಗಳು ಹೆಚ್ಚು ಶಕ್ತಿಯುತವಾಗಿವೆ. ಪುರುಷರ ಸ್ವತ್ತಾಗಿದ್ದ ಬರಹದ ಪ್ರಕ್ರಿಯೆಯಲ್ಲಿ ಮಹಿಳೆ ಅನೇಕ ಮಜಲುಗಳನ್ನು ದಾಟಿ ಸ್ವಂತಿಕೆಯ ಮೆಟ್ಟಿಲನ್ನು ಏರತೊಡಗಿದ್ದನ್ನು ಗುರುತಿಸಲು ಮಹಿಳಾ ಸಾಹಿತ್ಯವೆಂಬ ಪ್ರತ್ಯೇಕ ವರ್ಗೀಕರಣದ ಅಧ್ಯಯನಗಳು ಅಗತ್ಯವಾಗಿವೆ.

ಮಹಿಳಾ ಸಾಹಿತ್ಯವೆಂಬ ಪ್ರತ್ಯೇಕೀಕರಣದ ನಿರಾಕರಣೆಯ ವಾದಗಳು ಏನೇ ಇದ್ದರೂ ಕನ್ನಡ ಸಾಹಿತ್ಯ ಲೋಕದಲ್ಲಿ ಮಹಿಳಾ ಬರಹಗಾರರು ನಿರ್ವಹಿಸಿದ ಪಾತ್ರದ ಬಗ್ಗೆ; ಅವರು ಎದುರಿಸಿದ

ಸವಾಲು-ಸಮಸ್ಯೆಗಳ ಬಗ್ಗೆ; ಸಾಹಿತ್ಯ ಬರವಣಿಗೆಯಲ್ಲಿ ತನ್ನನ್ನು ತೆರೆದುಕೊಂಡ ಬಗ್ಗೆ; ಅಂತರಂಗದ ಅಳಲನ್ನು ಮರೆಮಾಚಿ ಒಪ್ಪಿತ ಮೌಲ್ಯಗಳನ್ನು ಸಾದರಪಡಿಸಿದ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಲು, ಮಹಿಳೆಯರ ಸಾಹಿತ್ಯವನ್ನು ಪುನರ್ ಓದಿಗೆ, ಹೊಸ ಅಧ್ಯಯನದ ಸಾಧ್ಯತೆಗೆ ಒಳಪಡಿಸುವುದು ಅಗತ್ಯವಾಗಿದೆ. ಮಹಿಳೆಯರ ಸಾಹಿತ್ಯದಲ್ಲಿ ಮೂಡಿಬಂದ ವಿಭಿನ್ನ ಆಯಾಮಗಳನ್ನು, ವಿಶಿಷ್ಟ ಸಂವೇದನೆಗಳನ್ನು ಗುರುತಿಸಲು ಪ್ರತ್ಯೇಕ ವರ್ಗೀಕರಣದ ಅಧ್ಯಯನದಿಂದ ಮಾತ್ರ ಸಾಧ್ಯವಾಗುತ್ತದೆ. ಹಾಗೆ ಪ್ರತ್ಯೇಕವಾಗಿ ನೋಡದೆ ಹೋದರೆ, ಉಪೇಕ್ಷಿಸಲಾಗಿದ್ದ ಅನೇಕ ಕೃತಿಗಳು, ತಮ್ಮದೇ ಆದ ವಿಶಿಷ್ಟತೆಯನ್ನು ಹೊಂದಿರುವುದು ಗೋಚರಿಸದೇ ಹೋಗುವ ಸಾಧ್ಯತೆಗಳು ಹೆಚ್ಚಾಗಿರುತ್ತವೆ.

ಇದುವರೆಗೂ ಮಹಿಳೆಯರ ಸಾಹಿತ್ಯವನ್ನು ಅಧ್ಯಯನ ಮಾಡಿದ ಅಭಿಪ್ರಾಯಗಳನ್ನು ಕ್ರೂಢೀಕರಿಸಿ ಕೆಳಗಿನ ತಾತ್ವಿಕ ನೆಲೆಗಳಲ್ಲಿ ಗುರುತಿಸಲಾಗಿದೆ.

ಉದಾರವಾದಿ ನೆಲೆ

ಸಾಪೇಕ್ಷ ವಿಮರ್ಶೆಯ ನೆಲೆ

ಸ್ತ್ರೀವಾದಿ ವಿಮರ್ಶೆಯ ನೆಲೆ

ಹೊಸ ಶೋಧನೆಯ ಸಾಧ್ಯತೆಯ ನೆಲೆ

### ೨.೨ ಉದಾರವಾದಿ ನೆಲೆ

ಉದಾರವಾದಿ ನೆಲೆಯು, ನಿರ್ಧರಿಸಲ್ಪಟ್ಟ 'ಶ್ರೇಷ್ಠತೆ'ಯ ಮಾದರಿಯಾಚೆ ಸಾಹಿತ್ಯ ಕೃತಿಯನ್ನು ಇಟ್ಟು ಚರ್ಚಿಸುವುದಾಗಿದೆ. ಮಹಿಳೆಯರ ಕೃತಿಗಳನ್ನು ಗಣನೆಗೆ ತೆಗೆದುಕೊಳ್ಳುವಾಗ, ಆ ಕೃತಿಯ ಕಾರ್ಯಕಾರಣ ಸಂಬಂಧಗಳನ್ನು ಅಧ್ಯಯನಕ್ಕೆ ಒಳಪಡಿಸದೇ ಮಹಿಳೆಯರು ಏನೋ ಬರೆಯುತ್ತಾರೆ, ಅದರ ಬಗ್ಗೆ ಒಂದಿಷ್ಟು ಔಪಚಾರಿಕವಾಗಿ ಬರೆದರೆ ಸಾಕು ಎಂಬ ನಿಲುವು ಇರುತ್ತದೆ.

ಇಪ್ಪತ್ತನೇ ಶತಮಾನದಿಂದೀಚೆಗೆ ಸಾಕಷ್ಟು ಸಾಹಿತ್ಯಿಕ ಅಧ್ಯಯನದ ಚರ್ಚೆಗಳು/ವಿಮರ್ಶೆಗಳು ಪ್ರಕಟವಾಗಿವೆ. ಅದರಲ್ಲಿ ಮುಖ್ಯವಾಗಿ ಆರ್.ನರಸಿಂಹಾಚಾರ್‌ರವರ 'ಕರ್ನಾಟಕ ಕವಿಚರಿತೆ'ಯ ಸಂಪುಟಗಳು; ರಂ.ಶ್ರೀ. ಮುಗುಳಿಯವರ 'ಕನ್ನಡ ಸಾಹಿತ್ಯ ಚರಿತ್ರೆ' ಮತ್ತು 'ಕನ್ನಡ ಸಾಹಿತ್ಯದ ಇತಿಹಾಸ'; ಮೈಸೂರು ವಿಶ್ವವಿದ್ಯಾಲಯದ 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ'ಯ ಸಂಪುಟಗಳು; ಬೆಂಗಳೂರು ವಿಶ್ವವಿದ್ಯಾಲಯದ 'ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ'ಯ ಸಂಪುಟಗಳು; ಸಿ.ವೀರಣ್ಣನವರ 'ಕನ್ನಡ ಸಾಹಿತ್ಯ ಚರಿತ್ರೆ'; ತ.ಸು.ಶಾಮರಾಯರ ಮತ್ತು ಮರಿಯಪ್ಪ ಭಟ್ಟರ 'ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ' ಮತ್ತು 'ಸಂಕ್ಷಿಪ್ತ ಸಾಹಿತ್ಯ ಚರಿತ್ರೆ'... ಇತ್ಯಾದಿ ಸಾಹಿತ್ಯ ಚರಿತ್ರೆಗಳಲ್ಲಿ ಕೃತಿಯ ಕೊನೆಯ ಭಾಗದಲ್ಲಿ ಕೆಲವು ಮಹಿಳಾ ಸಾಹಿತಿಗಳ ಹೆಸರನ್ನು ಪ್ರಸ್ತಾಪಿಸಲಾಗಿದೆ. ಕೆಲವು ಮಹಿಳೆಯರ ಸಾಹಿತ್ಯ ಸಾಧನೆಯನ್ನು ನಾಮಮಾತ್ರ, ಸಾಂದರ್ಭಿಕವಾಗಿ ಪ್ರಸ್ತಾಪಿಸಲಾಗಿದೆ.

ಎಲ್.ಎಸ್.ಶೇಷಗಿರಿರಾವ್‌ರವರು ವಿಸ್ತೃತವಾಗಿ ಅಲ್ಲವಾದರೂ ಅಲ್ಲಲ್ಲಿ ಕೆಲವು ಮಹಿಳೆಯರ ಕೃತಿಗಳನ್ನು ಪ್ರಸ್ತಾಪಿಸುತ್ತ "ಸಾಹಿತ್ಯಕ್ಕಾಗಲೀ, ಸಾಹಿತ್ಯ ವಿಮರ್ಶೆಗಾಗಲೀ ಲಿಂಗವಿಲ್ಲ, ವಯಸ್ಸಿಲ್ಲ. ಇದನ್ನು ನೆನಪಿಟ್ಟುಕೊಂಡು ವಿಮರ್ಶಿಸಿದಾಗ ಒಟ್ಟಿನಲ್ಲಿ ಮಹಿಳೆಯರು ಕೊಟ್ಟಿರುವ ಕೊಡುಗೆ ಗಮನಾರ್ಹವಾದರೂ ವಿಶೇಷವಾದುದಲ್ಲ ಎಂದು ಹೇಳಬೇಕಾಗುತ್ತದೆ. ಸಾಮಾನ್ಯವಾಗಿ ಕೌಟುಂಬಿಕ ಜೀವನ ಇವರ ಕಥಾ ವಸ್ತು; ಹೃದಯ ಶ್ರೀಮಂತಿಕೆ ಇತರ ವಸ್ತು" (ಹೊಸಗನ್ನಡ ಸಾಹಿತ್ಯ ಚರಿತ್ರೆ, ಪುಟ-೧೫೮) ಎಂದು ಹೇಳಿದ್ದಾರೆ. ಇಲ್ಲಿ ಸಾಹಿತ್ಯ ವಲಯ ಒಳಗೊಳ್ಳಬೇಕಾದ ಮತ್ತು ಹೊರಗಿಟ್ಟು ನೋಡಲಾದ ಕೆಲವು ಸಂಗತಿಗಳಿವೆ ಎಂಬುದು ಸ್ಪಷ್ಟ. ಮಹಿಳೆಯರು ಪ್ರಧಾನವಾಗಿ ಗ್ರಹಿಸುವ ಕೌಟುಂಬಿಕ ಜಗತ್ತು ಸಾಹಿತ್ಯ ಜಗತ್ತಿನ ಆಚೆಗಿರುವಂಥದ್ದು ಎಂಬ ಪೂರ್ವಗ್ರಹಿಕೆಗಳು ಸಾಹಿತ್ಯ ವಿಮರ್ಶೆಯಲ್ಲಿ ಕೆಲಸ ಮಾಡಿವೆ.

ವ್ಯಕ್ತಿನಿಷ್ಠ ನೆಲೆಯಲ್ಲಿ ಮಹಿಳೆಯರ ಕೃತಿಗಳನ್ನು ಓದುವ ದ.ರಾ.ಬೇಂದ್ರೆ, ಪು.ತಿ.ನರಸಿಂಹಾಚಾರ್ ಮುಂತಾದವರು ಕೃತಿಗಳ ಒಳಗನ್ನು ತಾತ್ವಿಕ ನೆಲೆಗಟ್ಟಿಗೆ ಒಳಪಡಿಸುವ ಗೋಜಿಗೆ ಹೋಗುವುದಿಲ್ಲ. ಬದಲಾಗಿ ಮಹಿಳೆಯರ ಸಾಹಿತ್ಯವನ್ನು ಔದಾರ್ಯಪೂರ್ವಕವಾಗಿ ಬಣ್ಣಿಸಿದ್ದಾರೆ. ಇನ್ನೂ ಹೆಚ್ಚಿನ ಸಾಧನೆ ಮಾಡಲಿ ಎಂಬ ಹಾರೈಕೆಯೊಂದಿಗೆ ಮಹಿಳೆಯರ ಸಾಹಿತ್ಯವನ್ನು ಪ್ರೋತ್ಸಾಹಿಸುವ ಧೋರಣೆಯುಳ್ಳವರಾಗಿದ್ದಾರೆ.

ಎಚ್.ಎಸ್.ರಾಘವೇಂದ್ರರಾವ್‌ರವರು ಸಾಮಾಜಿಕ, ಸಾಂಸ್ಕೃತಿಕ ಚಳುವಳಿಗಳಿಂದ ಎಚ್ಚೆತ್ತ ಮಹಿಳೆಯರು ಸಾಹಿತ್ಯ ಸೃಷ್ಟಿಗೆ ಹೇಗೆ ಒಡ್ಡಿಕೊಂಡಿದ್ದಾರೆ ಎಂಬುದನ್ನು ವಿಸ್ತೃತವಾಗಿ ವಿಶ್ಲೇಷಿಸುತ್ತ "ಸಾಂಸ್ಕೃತಿಕ ಚಟುವಟಿಕೆಗಳನ್ನು ಶೋಷಕವರ್ಗ ಮತ್ತು ಶೋಷಿತವರ್ಗಗಳ ನಡುವೆ ಏರ್ಪಡುವ ಅಂತ:ಸಂಬಂಧಗಳ ಹಿನ್ನೆಲೆಯಲ್ಲಿ ನೋಡಿದಾಗ ಸಹಜವಾಗಿಯೇ ಸ್ತ್ರೀವಾದಿ ಚಿಂತನೆಯು ದಲಿತ, ಬಂಡಾಯ ಚಳುವಳಿಗಳೊಂದಿಗೆ ಸಂವಾದಿಯಾದ ನೆಲೆಗಳನ್ನು ಕಂಡುಕೊಳ್ಳುತ್ತದೆ. ಅದು ಸಾಹಿತ್ಯ ಕೃತಿಯ 'ಕಲಾತ್ಮಕತೆಗೆ' ಕೊಡುವಷ್ಟೇ ಮಹತ್ವವನ್ನು, ಅದು ರಚಿತವಾದ ಸಾಮಾಜಿಕ ಸಂದರ್ಭಕ್ಕೂ ಕೊಡಬೇಕೆಂಬ ವಾದವನ್ನು ಸಕಾರಣವಾಗಿಯೇ ಮಂಡಿಸುತ್ತದೆ. ಏಕೆಂದರೆ, ಸೌಂದರ್ಯನಿಷ್ಠ ವಿಮರ್ಶೆಯು ಬಳಸುವ ಮಾನದಂಡಗಳೂ ಪುರುಷ ಪ್ರಧಾನತೆಯ ನೆಲೆಯಿಂದಲೇ ಮೂಡಿ ಬಂದಿರುತ್ತದೆ. ಆದ್ದರಿಂದ 'ಕಲಾತ್ಮಕತೆ' ಎಂಬ ಪದದ ನಿರ್ವಚನವನ್ನೇ ಮರು ರೂಪಿಸುವ ಕಡೆಗೆ ಅವರ ಒಲವು ಇರುತ್ತದೆ. ತನ್ನತನದ ಅಭಿವ್ಯಕ್ತಿಯು ಈ ಮಾರ್ಗದ ಒಪ್ಪು-ತಪ್ಪುಗಳನ್ನು ಬೇರೆ ಯಾರೋ ಹಾಕಿಕೊಟ್ಟ ಅಳತೆಗೋಲುಗಳಿಂದ ಅಳೆಯಲು ಮಹಿಳೆಯರು ತಯಾರಿಲ್ಲ; ಇರಬಾರದು. ಸಂದರ್ಭ ಯಾವುದೇ ಇರಲಿ, ಶೋಷಿತ ವರ್ಗಕ್ಕೆ ತನ್ನದೇ ಆದ ಕಲಾಮೀಮಾಂಸೆಯನ್ನು ರೂಪಿಸಿಕೊಳ್ಳುವ ಹಕ್ಕನ್ನು ಯಾರೂ ಅಲ್ಲಗಳೆಯಲಾಗುವುದಿಲ್ಲ. ಆದ್ದರಿಂದಲೇ ಸ್ತ್ರೀವಾದಿ ಕಾವ್ಯ ಮೀಮಾಂಸೆ ಹಾಗು ಸಾಹಿತ್ಯ ವಿಮರ್ಶೆಗಳ ಬೆಳವಣಿಗೆ ಅನಿವಾರ್ಯ" (ಮಹಿಳಾ ಅಧ್ಯಯನ, ಪುಟ-೧೪೮) ಎಂದಿದ್ದಾರೆ.

ಎಚ್ಚೆತ್ತ ಮಹಿಳಾ ಸಾಹಿತ್ಯದ ಪರಂಪರೆಯನ್ನು ಕೊಡಗಿನ ಗೌರಮ್ಮ, ಶ್ಯಾಮಲಾದೇವಿ, ರಾಜಲಕ್ಷ್ಮಿ, ವೀಣಾ ಶಾಂತೇಶ್ವರ; ಕವಿಗಳಾದ ಹೇಮಾ ಪಟ್ಟಣಶೆಟ್ಟಿ, ಪ್ರತಿಭಾ ನಂದಕುಮಾರ್, ಸವಿತಾ ನಾಗಭೂಷಣ, ಶಶಿಕಲಾ ವಸ್ತ್ರದ, ಚ.ಸರ್ವಮಂಗಳ , ಸ.ಉಷಾರವರೆಗೆ ಗುರುತಿಸಿ ವಿಶ್ಲೇಷಿಸಿದ್ದಾರೆ. ಆದರೆ ಮಹಿಳಾ ಸಾಹಿತ್ಯ ನಡೆದು ಬಂದ ಬಗೆಯನ್ನು ಅವರ ಸಾಹಿತ್ಯ ಚಟುವಟಿಕೆಗಳ ಕ್ರಿಯಾಶೀಲತೆಯನ್ನು ತುಂಬ ಮುತುವರ್ಜಿಯಿಂದ ವಿಶ್ಲೇಷಿಸುವ ಎಚ್.ಎಸ್.ರಾಘವೇಂದ್ರರಾವ್‌ರವರು, ಸಾಹಿತ್ಯ ಚರಿತ್ರೆಯ ಅನಿವಾರ್ಯ ಭಾಗವಾಗಿ ಮಹಿಳೆಯರ ಕೃತಿಗಳನ್ನು ಅಧ್ಯಯನಕ್ಕೆ ಎತ್ತಿಕೊಳ್ಳುತ್ತಾರೆ ಹೊರತು ವಿಶಿಷ್ಟ ಅಂಶಗಳನ್ನು ಗುರುತಿಸಲು ಇಚ್ಛಿಸುವುದಿಲ್ಲ. ಕಮಲಾ ಹಂಪನಾ, ಶೈಲಜಾ ಉಡುಚಣ ಮುಂತಾದ ಕೆಲವು ಮಹಿಳೆಯರು ಕೂಡ ಮಹಿಳಾ ಸಾಹಿತ್ಯವನ್ನು ಸಮಗ್ರ ಸಾಹಿತ್ಯ ಚರಿತ್ರೆಯ ಭಾಗವಾಗಿ ಮಾತ್ರ ಚರ್ಚಿಸುತ್ತಾರೆ. ಉದಾರವಾದಿ ನಿಲುವಿಗೆ ಬಂದು ತಲುಪುತ್ತಾರೆ.

**೨.೩ ಸಾಪೇಕ್ಷ ವಿಮರ್ಶೆಯ ನೆಲೆ**

ಒಂದು ಕೃತಿಯನ್ನು ಅಧ್ಯಯನಕ್ಕೆ ಒಳಪಡಿಸುವಾಗ, ತಾವು ಮೊದಲೇ ಅಧ್ಯಯನ ಮಾಡಿದ ಮಾದರಿಗಳನ್ನು ಅಳವಡಿಸಿ ನೋಡಿ, ಕೃತಿಯ ಮೌಲ್ಯವನ್ನು ನಿರ್ಣಯಿಸುವುದು ಸಾಪೇಕ್ಷ ವಿಮರ್ಶೆಯ ನೆಲೆಯಾಗಿದೆ. ಕೃತಿಯ ಸಾಂಸ್ಕೃತಿಕ ಹಿನ್ನೆಲೆ ಮತ್ತು ಕೃತಿಯ ಒಳಗಿನ ಅಂತ:ಸಂಬಂಧಗಳು ಮರೆಯಾಗಿ ಅಧ್ಯಯನಕಾರರು ಅಪೇಕ್ಷಿಸಿದ ಮಾದರಿಗಳಿಗೆ ಕೃತಿಯ ಓದು ಒಳಪಡುತ್ತದೆ. ಸಾಪೇಕ್ಷ ವಿಮರ್ಶೆಯ ಈ ನೆಲೆಯಲ್ಲಿ ಪಾಶ್ಚಾತ್ಯ ವಿಮರ್ಶೆಯ ಮಾನದಂಡಗಳಿಗೆ ಬದ್ಧರಾದ ಅಧ್ಯಯನಕಾರರು, ಆ ಮಾದರಿಯ ತತ್ವಗಳನ್ನು ಮಹಿಳೆಯರ ಸಾಹಿತ್ಯಕ್ಕೆ ಅಳವಡಿಸಿ, ಹೋಲಿಸಿ, ಆ ಅಂಶಗಳು ಇವರ ಸಾಹಿತ್ಯದಲ್ಲಿ ಕಂಡು ಬರುವುದಿಲ್ಲವೆಂಬ ತೀರ್ಮಾನಕ್ಕೆ ಬಂದು ತಲುಪುತ್ತಾರೆ. ಉದಾರವಾದಿ ನೆಲೆಯಲ್ಲಿ ಮಹಿಳೆಯರ ಸಾಹಿತ್ಯವನ್ನು ಔದಾರ್ಯಯುತವಾಗಿ ಮತ್ತು ವೈಭವೀಕರಣದ ನೆಲೆಯಲ್ಲಿ ನೋಡಲಾಗಿದ್ದರೆ, ಕೆಲವು ಅಧ್ಯಯನಕಾರರು, ತಾವು ಬದ್ಧರಾದ ಸಾಹಿತ್ಯ ತತ್ವಗಳ ನೆರಳಲ್ಲಿ ಮಹಿಳೆಯರ ಸಾಹಿತ್ಯವನ್ನು ಕಟು ವಿಮರ್ಶೆಗೂ ಒಳಪಡಿಸಿದ್ದಾರೆ.

ಅಧ್ಯಯನಕಾರರ ಅಪೇಕ್ಷೆಗಳನ್ನು ಪೂರೈಸಿದಲ್ಲಿ ಆ ಕೃತಿ ಯಶಸ್ಸನ್ನು ಪಡೆಯುತ್ತದೆ. ಇಲ್ಲವಾದರೆ ಅದು ಅನರ್ಹ ಕೃತಿಯಾಗಿ ಹೊರಗುಳಿಯುತ್ತದೆ. ಜತೆಗೆ ಮಹಿಳೆಯರು ಬರೆದ ಕೃತಿಗಳು ಅನುಭಾವ ರಹಿತವಾದದ್ದು; ಹೊರಗಿನ ಜಗತ್ತನ್ನು ಕಾಣಲಾಗದ್ದು; ಕೇವಲ ಜನಪ್ರಿಯ ಸಾಹಿತ್ಯ ಮಾಲಿಕೆಗೆ ಸೇರ್ಪಡೆಯಾಗುವಂಥದ್ದು; ಮಹಿಳೆಯರು ಸಾಹಿತ್ಯವನ್ನು ರಚಿಸಲು ಶಕ್ತರಾಗಿಲ್ಲ ಎಂಬ ತೀರ್ಮಾನಕ್ಕೆ ತಲುಪಲಾಗಿದೆ.

ಮಾಸ್ತಿಯವರು ತಿರುಮಲಾಂಬರವರ ಕಾದಂಬರಿಗಳನ್ನು ಕುರಿತು ವಿಮರ್ಶೆ ಮಾಡುತ್ತ "ಇತರ ಗ್ರಂಥಗಳನ್ನು ಬರೆಯುವುದಕ್ಕಿಂತಲೂ ನಾವಲ್ಲನ್ನು ಬರೆಯುವುದು ಸರ್ವಸುಲಭವಾಗಿರುವುದೂ ನಾವಲಿನ ಪ್ರಾಬಲ್ಯಕ್ಕೆ ಕಾರಣವೆಂದು ತೋರುತ್ತದೆ. ಸರ್ವ ಸುಲಭವೆಂದರೆ, ಯಾರು ಬೇಕಾದರೂ ಕುಳಿತುಕೊಂಡು ಚೆನ್ನಾಗಿರುವುದೋ, ಚೆನ್ನಾಗಿಲ್ಲದುದೋ, ಓದುವುದಕ್ಕೆ ಸುಖವಾಗಿರುವುದೋ,

ಅಸಹ್ಯವಾಗಿರುವುದೋ, ಹೇಗಾದರೂ ಇರುವ ನಾಲ್ಕು ಮಾತನ್ನು "ರಾಮನು ಹೀಗೆಂದನು", "ಕೃಷ್ಣನು ಹಾಗೆಂದನು" ಎಂದು ಒಂದು ಕತೆಯಾಗಿ ಬರೆದಿಡಬಹುದು..." ('ಸತಿ ಹಿತೈಷಿಣಿ ಗ್ರಂಥಮಾಲೆ', ವಿಮರ್ಶೆ ಸಮಗ್ರ ಸಂಪುಟ, ಪುಟ-೫೧) ಎಂದು ಹೇಳುತ್ತಾ ತಿರುಮಲಾಂಬರವರ ಕಾದಂಬರಿಗಳನ್ನು ಉಲ್ಲೇಖಿಸಿ, ಕತೆಯ ನಿರೂಪಣೆಯ ಅಸಂಬದ್ಧ ಜೋಡಣೆ, ಕತೆಯ ಅನಪೇಕ್ಷಿತ ತಿರುವುಗಳನ್ನು ಸಂಗ್ರಹಿಸಿ ಮುಂದಿಟ್ಟಿದ್ದಾರೆ. ಇಲ್ಲಿ ಮಾಸ್ತಿಯವರು 'ಕಾದಂಬರಿ' ಪ್ರಕಾರದ ಬಗ್ಗೆಯೇ ಎತ್ತಿರುವ ಆಕ್ಷೇಪ ಒಂದಾದರೆ, ಅಂಥ ಜಾಳಾದ ಪ್ರಕಾರದಲ್ಲಿಯೂ ಮಹಿಳೆಯರು ಬರೆಯಲು ಅಸಮರ್ಥರಾಗಿದ್ದಾರೆ ಎಂಬ ಅಂಶವನ್ನು ಮನಗಾಣಿಸಲು ಪ್ರಯತ್ನಿಸಿದ್ದಾರೆ.

ಗಿರಡ್ಡಿ ಗೋವಿಂದರಾಜುರವರು, ಮಹಿಳೆಯರು ಕಾದಂಬರಿಗಳಲ್ಲಿ ಆಯ್ದುಕೊಂಡಿರುವ ವಸ್ತುವಿನ ನಿರ್ವಹಣೆಯ ಕುರಿತು ದೀರ್ಘವಾಗಿ ಚರ್ಚಿಸಿದ್ದಾರೆ "ಕಾದಂಬರಿಯಲ್ಲಿ ವಸ್ತುವನ್ನು ಸರಿಯಾಗಿ ಗ್ರಹಿಸುವುದು ಬದುಕಿನಲ್ಲಿ ಅನುಭವಗಳ ಅರ್ಥವನ್ನು ಗ್ರಹಿಸುವಷ್ಟೇ ಕಠಿಣವಾದ ಕೆಲಸ. ಆದರೆ, ಅದನ್ನು ಸರಿಯಾಗಿ ಗ್ರಹಿಸದ ಹೊರತು ಒಂದು ಕೃತಿಯ ಅಂಗಗಳಾದ ಘಟನೆ, ಪಾತ್ರ, ಸಂಘರ್ಷ, ನಿರೂಪಣೆಯ ಕೋನ, ಸಾಂಕೇತಿಕತೆ, ವ್ಯಂಗ್ಯ ಮುಂತಾದವುಗಳ ಔಚಿತ್ಯವನ್ನು ನಿರ್ಧರಿಸಲಿಕ್ಕೆ ಆಗುವುದಿಲ್ಲ. ಎಂದರೆ, ವಸ್ತುವೇ ಕಥೆಗೆ ಐಕ್ಯವನ್ನು, ಸಂಗತಿಗಳಿಗೆ ಅರ್ಥವನ್ನು ಒದಗಿಸುವ ಕೇಂದ್ರವಾಗಿರುತ್ತದೆ. ಅಂತೆಯೇ ವಸ್ತು ಕೃತಿ ರಚನೆಯಲ್ಲಿ ಮಹತ್ವದ ಪಾತ್ರ ವಹಿಸುತ್ತದೆ. ಕನ್ನಡದ ಕಾದಂಬರಿಕಾರ್ತಿಯರ ಮುಕ್ಕಾಲುಪಾಲು ಕೃತಿಗಳಲ್ಲಿಯ ಒಡೆದು ಕಾಣುವ ಅಂಶವೆಂದರೆ, ಇವುಗಳಲ್ಲಿ ಈ ಬಗೆಯ ಕೇಂದ್ರ ವಸ್ತುವೇ ಇಲ್ಲದಿರುವುದು... ಕನ್ನಡ ಲೇಖಕಿಯರ ಮುಖ್ಯ ದೋಷಗಳಾದ ಭಾವಾತಿರೇಕ, ಅಸಹಜ ನಿರೂಪಣೆ, ವಿನ್ಯಾಸ ರಾಹಿತ್ಯ ಅರ್ಥವಂತಿಕೆಯ ಅಭಾವಗಳೆಲ್ಲ ಇಲ್ಲಿವೆ" ('ಹೆಣ್ಣುಮಕ್ಕಳ ಕಾದಂಬರಿಗಳಲ್ಲಿ ವಸ್ತು ವಿನ್ಯಾಸ', ಸಮಗ್ರ ವಿಮರ್ಶೆ, ಪುಟ-೧೬೦) ಎಂದು ವ್ಯಾಖ್ಯಾನಿಸಿರುವ ಗಿರಡ್ಡಿಯವರು, ಕಾದಂಬರಿಯ ಸ್ವರೂಪದ ಬಗ್ಗೆ ಸ್ಪಷ್ಟಪಡಿಸಿ, ಆ ಸ್ವರೂಪದ ತತ್ವಗಳು ಹೆಣ್ಣುಮಕ್ಕಳು ಬರೆಯುವ ಕಾದಂಬರಿಗಳಲ್ಲಿ ಕಾಣೆಯಾಗಿದೆ ಎಂಬುದನ್ನು ಉದಾಹರಣೆ ಸಹಿತ ಮುಂದಿಟ್ಟಿದ್ದಾರೆ.

ಮಾಸ್ತಿಯವರಿಗೆ ಕಾದಂಬರಿ ಎಂಬ ಪ್ರಕಾರದ ಬಗ್ಗೆ ನಕಾರಾತ್ಮಕ ಭಾವನೆಯಿದ್ದರೆ, ಗಿರಡ್ಡಿಯವರು ಕಾದಂಬರಿ ಪ್ರಕಾರಕ್ಕೆ ನಿರ್ದಿಷ್ಟ ಗುಣಗಳುಳ್ಳ ಚೌಕಟ್ಟನ್ನು ಕಟ್ಟಿಕೊಟ್ಟಿದ್ದಾರೆ. ಇವರು ನಿರ್ಮಿಸಿಕೊಂಡಿರುವ ಚೌಕಟ್ಟಿನಲ್ಲಿ ಮಹಿಳೆಯರ ಕಾದಂಬರಿಗಳನ್ನು ಇಟ್ಟು ನೋಡಲಾಗಿದೆ. ಆಗ ಸಹಜವಾಗಿ ದೋಷಗಳು ಕಾಣಿಸಿಕೊಳ್ಳುತ್ತವೆ. ಮಹಿಳೆಯರ ಸಾಹಿತ್ಯವನ್ನು ದೂರುವ ಗಿರಡ್ಡಿಯವರು ಮುಂದುವರೆದು "ಹಾಗೆ ನೋಡಿದರೆ, ಮಹಿಳೆಯರು ಎಂಬ ಕಾರಣಕ್ಕಾಗಿ ಇವರ ಕೃತಿಗಳಿಗೆ ಸಿಗಬೇಕಾದುದಕ್ಕಿಂತ ಹೆಚ್ಚಿನ ಗಮನ ಸಿಕ್ಕಿದೆ. ವಾಸ್ತವವಾಗಿ ನಮ್ಮ ವಿಮರ್ಶೆ, ಸಮೀಕ್ಷೆಗಳಲ್ಲೆಲ್ಲ ಮಹಿಳೆಯರ ಸಲುವಾಗಿ ಪ್ರತ್ಯೇಕ ವಿಭಾಗಗಳನ್ನು ಕಲ್ಪಿಸಿಕೊಳ್ಳುವುದೇ ಒಂದು ವಿಶೇಷ ರಿಯಾಯತಿ... ಪ್ರತ್ಯೇಕವಾಗಿ ಒಂದು ಭಾಗವನ್ನು ಮಾಡಿಕೊಳ್ಳದಿದ್ದರೆ, ಯಾವ ಲೇಖಕಿಯ ಹೆಸರೂ ನಮ್ಮ ಉತ್ತಮ ಲೇಖಕರ ಹೆಸರಿನೊಡನೆ ಬರಲಾರದು" (ಅದೇ, ಪುಟ-೧೬೮) ಎಂಬ ತೀರ್ಮಾನ ಅಚ್ಚರಿ ಹುಟ್ಟಿಸದಿರಲಾರದು. ಇದು ಮಹಿಳೆಯರ ಸಾಹಿತ್ಯವನ್ನು ಓದುವ ದಿಕ್ಕನ್ನೇ ತಪ್ಪಿಸಿದಂತಾಗುತ್ತದೆ.

ಶಂಕರ ಮೊಕಾಶಿ ಪುಣೇಕರ್‌ರವರು, ಮಹಿಳೆಯರು ಕಾದಂಬರಿಯ ರಚನೆಗೆ ತೊಡಗಿದಾಗ ಸಂದರ್ಭಗಳನ್ನು ಹೇಗೆ ಜೋಡಿಸಬೇಕು ಎಂಬುದಕ್ಕೆ ಸಲಹೆಗಳನ್ನು ನೀಡುತ್ತಾರೆ. ಸಂದರ್ಭಗಳಿಗೆ ರೂಪದ ಒಪ್ಪ ಕೊಡುವ ಕಲೆಯನ್ನು ಸಾಧಿಸಲು ಪ್ರೊ. ಬ್ರೆಟ್, ಮೊಪಾಸಾ, ಜಾರ್ಜ್ ಎಲಿಯಟ್, ಚೆಕವ್ ಮುಂತಾದವರ ಕೃತಿಗಳನ್ನು ಅಭ್ಯಸಿಸಲು ಸೂಚಿಸುತ್ತಾರೆ. ಮಹಿಳೆಯರು ಪುರುಷ ಲೇಖಕರನ್ನು ಅನುಸರಿಸಬೇಡಿ ಎಂಬ ಸಾಧ್ಯತೆಯ ಕುರಿತು "ಗರ್ಭಧಾರಣೆಯ ಅನುಭವ, ಸ್ತನಪಾನ ಮಾಡಿಸುವ ದೈಹಿಕ ಅನುಭವ, ಮಗುವಿನ ಬೆಳವಣಿಗೆಯ ಅನುಭವ, ಅವನಲ್ಲಾಗುವ ಸೂಕ್ಷ್ಮ ಮಾನಸಿಕ ಬದಲಾವಣೆಗಳು, ಇವುಗಳನ್ನು ಮಹಿಳೆ ಯಥಾರ್ಥವಾಗಿ ಬಣ್ಣಿಸತೊಡಗಿದರೆ ಪುರುಷರು ಮೂಕರಾಗುವರು" ('ಲೇಖಕಿಯರಿಗೆ–ಮಹಿಳೆಯರಿಗೆ', ಸಾಹಿತ್ಯ ಜೀವಿ, ಪುಟ–೨೮೧) ಎಂದಿದ್ದಾರೆ. ಹಾಗೆ ಹೇಳುವಾಗ ಹೆಣ್ಣುಮಕ್ಕಳ ಬರವಣಿಗೆಯಿಂದ ನಿರೀಕ್ಷಿಸುವ ಅಪೇಕ್ಷೆಗಳು ಆಕೆಗೆ ಈಗಾಗಲೇ ಆರೋಪಿಸಲಾದ ಗುಣಗಳು ಮುಖ್ಯವಾಗುತ್ತವೆ ವಿನ: ಆಕೆಯು ವ್ಯಕ್ತಪಡಿಸುವ ಸಂವೇದನೆಗಳತ್ತ ಗಮನ ಸೆಳೆಯುವುದಿಲ್ಲ. ಮೇಲಿನ ಮಾತುಗಳ ತತ್ವ ಗಮನಿಸಿದಾಗ, ಮಹಿಳೆಯರ ಸಾಹಿತ್ಯವನ್ನು ಅಧ್ಯಯನಕ್ಕೆ ಒಳಪಡಿಸುವಾಗ 'ಸೃಜನಶೀಲ' ಸಾಹಿತ್ಯದ ಮಾರ್ಗದರ್ಶಿ ಸೂತ್ರಗಳು ಮತ್ತು 'ಸೃಜನಶೀಲ' ಸಾಹಿತ್ಯವನ್ನು ವಿಮರ್ಶಿಸಲು ಬಳಸುವ ಮಾನದಂಡಗಳು ಹೀಗೇ ಇರಬೇಕು ಎಂಬ ಪೂರ್ವಕಲ್ಪಿತ ಆಲೋಚನೆಗಳು ಕೆಲಸ ಮಾಡಿರುವ ಸಾಧ್ಯತೆಗಳನ್ನು ಸೂಚಿಸುತ್ತವೆ. ಸಾಪೇಕ್ಷ ನೆಲೆಯಲ್ಲಿ ವಿಮರ್ಶಕರು ಮಹಿಳೆಯರ ಕೃತಿಗಳನ್ನು ಪ್ರಧಾನ ಧಾರೆಯ ಕೃತಿಗಳೊಂದಿಗೆ ಹೋಲಿಸಿ, ಅವುಗಳಿಗೆ ಸರಿಸಾಟಿಯಾಗಲಾರದೆಂಬ ತೀರ್ಮಾನಕ್ಕೆ ಬಂದು ತಲುಪಿದ್ದಾರೆ. ಅದಕ್ಕೆ ಬದಲಾಗಿ, 'ಪ್ರಧಾನ ಧಾರೆ'ಯೊಂದಿಗೆ ಸಮಸಮವಾಗಿ ನಡೆಯಲು ಸಾಧ್ಯವಾಗದ ಮಹಿಳೆಯರ ಸಾಮಾಜಿಕ ಸ್ಥಿತಿ–ಗತಿಗಳನ್ನು ಗ್ರಹಿಸುವುದು ಮುಖ್ಯವಾಗುತ್ತದೆ. ಹೆಣ್ಣು ಎಂಬ ಕಾರಣಕ್ಕೆ ಕುಟುಂಬದೊಳಗೆ ಪ್ರಾರಂಭವಾಗುವ ವಿಧಿ–ನಿಷೇಧಗಳು, ಸಾಮಾಜಿಕ ಪರಿಧಿಗೆ ವಿಸ್ತರಿಸುತ್ತವೆ. ಶೈಕ್ಷಣಿಕ, ಆರ್ಥಿಕ, ರಾಜಕೀಯ ಮುಂತಾದ ಕ್ಷೇತ್ರಗಳಲ್ಲಿ ಅವಕಾಶಗಳಿಂದ ವಂಚಿತರಾದಾಗ, ಆ ಮಹಿಳೆಯರಿಗೆ ದಕ್ಕುವ ಪ್ರಪಂಚ ಸೀಮಿತ ವಾತಾವರಣವನ್ನು ಹೊಂದುವುದು ಸಹಜವಾಗಿದೆ. ಆಯಾ ಸಾಂಸ್ಕೃತಿಕ ವಾತಾವರಣಕ್ಕೆ ಹೊಂದಿಕೊಂಡ ಮಹಿಳೆಯರು, ತಮಗೆ ದತ್ತವಾದ ತಿಳುವಳಿಕೆಯಿಂದ ಕೃತಿಗಳನ್ನು ರಚಿಸಿದ್ದಾರೆ ಎಂಬುದನ್ನು ಗಮನಿಸಬೇಕಾದ ಅಗತ್ಯವಿದೆ.

ಕೃತಿಯಲ್ಲಿ ಆಯ್ದುಕೊಳ್ಳುವ ವಸ್ತು, ಕಂಡುಕೊಳ್ಳಲಾದ ಆಶಯ, ನಿರೂಪಣೆ, ಭಾಷೆ, ಶೈಲಿ, ತಂತ್ರ, ವಿನ್ಯಾಸ ಮೊದಲಾದ ಪರಿಕಲ್ಪನೆಗಳು ಮೂಲತಃ ಪುರುಷ ಪ್ರಣೀತವಾಗಿವೆ. ಅವುಗಳನ್ನು ಅನುಸರಿಸಿ/ಅನುಕರಿಸಿ ಬರೆದ ಮಹಿಳೆಯರು ಸೈ ಅನಿಸಿಕೊಳ್ಳುತ್ತಾರೆ. ಪರ್ಯಾಯ ಮಾರ್ಗದಲ್ಲಿ ಬರೆದ ಮಹಿಳೆಯರು ಉಪೇಕ್ಷೆಗೆ ಒಳಗಾಗುತ್ತಾರೆ. ಸಾಂಸ್ಕೃತಿಕ ಕಾರಣಗಳಿಗಾಗಿ ಪುರುಷರಿಗಿಂತ ಮಹಿಳೆಯರ ಸಂವೇದನೆಗಳು ಭಿನ್ನವಾಗಿವೆ. ಬದುಕುವ ನೆಲೆಯಲ್ಲಿ; ಬದುಕಿನ ಅನುಭವಗಳನ್ನು ಗ್ರಹಿಸುವಲ್ಲಿ ಅನೇಕ ಭಿನ್ನತೆಗಳಿವೆ, ವಿಶಿಷ್ಟತೆಗಳೂ ಇವೆ. ಹೊರ ಪ್ರಪಂಚವನ್ನು ಗ್ರಹಿಸುವ ದೃಷ್ಟಿಕೋನಗಳಲ್ಲಿ ವ್ಯತ್ಯಾಸಗಳಿವೆ. ಹಾಗಾಗಿ ಮಹಿಳೆಯರ ಅಭಿವ್ಯಕ್ತಿ ಕ್ರಮವೂ ಭಿನ್ನವಾಗಿದೆ ಎಂಬುದನ್ನು ನೆನಪಿಡಬೇಕು.

## ೨.೪. ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯ ನೆಲೆ

ಕನ್ನಡದಲ್ಲಿ ೮೦–೯೦ರ ದಶಕದಿಂದೀಚೆಗೆ ಸ್ತ್ರೀವಾದಿ ಸಾಹಿತ್ಯ ವಿಮರ್ಶೆ ವಿಸ್ತೃತ ಗತಿಯಲ್ಲಿ ಬೆಳೆಯಲಾರಂಭಿಸಿದೆ. ಲಿಂಗ ಪ್ರಭೇದ ಮತ್ತು ಲೈಂಗಿಕತೆಗಳ ಸಾಂಕೇತಿಕ ರಚನೆಗಳು ಈ ಸಾಹಿತ್ಯ ವಿಮರ್ಶೆಯಲ್ಲಿ ಪರಿಗಣಿತವಾಗುತ್ತವೆ. ಪ್ರಾರಂಭದಲ್ಲಿ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯು ಕನ್ನಡ ಸಾಹಿತ್ಯದಲ್ಲಿ ನಿರ್ವಹಿಸಲಾದ ಸ್ತ್ರೀ ಪಾತ್ರಗಳನ್ನು ಸಮಗ್ರವಾಗಿ ವಿಶ್ಲೇಷಣೆಗೆ ಒಳಪಡಿಸುವ ಕ್ರಮವನ್ನು ಒಳಗೊಂಡಿತ್ತು. ನಂತರ ಮಹಿಳೆಯರ ಸಾಹಿತ್ಯವನ್ನು ಪ್ರಮುಖ ಕೇಂದ್ರವಾಗಿಟ್ಟುಕೊಂಡು ಅಧ್ಯಯನ ಕ್ರಮವನ್ನು ವಿಸ್ತೃತವಾಗಿ ಬೆಳೆಸಲಾಗುತ್ತಿದೆ.

ಮಹಿಳೆಯರ ಸಾಹಿತ್ಯವನ್ನು ಪ್ರಮುಖ ಕೇಂದ್ರವಾಗಿಟ್ಟುಕೊಂಡ ಸ್ತ್ರೀವಾದಿ ಸಾಹಿತ್ಯ ಸಿದ್ಧಾಂತವು, ಬರಹದಲ್ಲಿ ತೊಡಗಿದ್ದ ಅನೇಕ ಮಹಿಳೆಯರ ಬರಹಗಳನ್ನು ಹೆಣ್ಣು ಎಂಬ ಕಾರಣಕ್ಕೆ ಸಾಹಿತ್ಯ ವಲಯದಲ್ಲಿ, ವಿಮರ್ಶಾ ವಲಯದಲ್ಲಿ ಹೇಗೆ ಉಪೇಕ್ಷೆ ಮಾಡಲಾಗಿದೆ ಎಬುದನ್ನು ನಿಕಷಕ್ಕೊಳಪಡಿಸಲಾಗಿದೆ.

ಮಹಿಳೆಯರ ಸಾಹಿತ್ಯವನ್ನು ಅಧ್ಯಯನ ಮಾಡುವಲ್ಲಿ ಅನೇಕ ಸ್ತ್ರೀವಾದಿಗಳು ಹೆಚ್ಚಿನ ಆಸಕ್ತಿಯನ್ನು ತಳೆದಿದ್ದಾರೆ. ವಿಜಯಾ ದಬ್ಬೆ, ಬಿ.ಎನ್.ಸುಮಿತ್ರಾಬಾಯಿ, ತೇಜಸ್ವಿನಿ–ಸೀಮಂತಿನಿ ನಿರಂಜನ, ನೇಮಿಚಂದ್ರ, ಎಸ್.ವಿ.ಪ್ರಭಾವತಿ, ವಿ.ಕೆ.ಮಣಿಮಾಲಿನಿ, ಗಾಯಿತ್ರಿ ನಾವಡ, ಎಚ್.ಎಸ್.ಶ್ರೀಮತಿ ಮುಂತಾದವರು ಸ್ತ್ರೀವಾದಿ ದೃಷ್ಟಿಕೋನದಿಂದ ಮಹಿಳೆಯರ ಕೃತಿಗಳನ್ನು ಪುನರ್ ರಚನೆಗೆ ಒಳಪಡಿಸಿದ್ದಾರೆ. ಸುದೀರ್ಘ ಸಾಹಿತ್ಯ ಪರಂಪರೆಯ ಇತಿಹಾಸದಲ್ಲಿ ಸಾಹಿತ್ಯ ವಿಮರ್ಶೆಯ ನೆಲೆಗಳು – ನಿರ್ದಿಷ್ಟ ಮಾನದಂಡಗಳು ಪುರುಷರಿಂದ ನಿರ್ಮಾಣವಾಗಿ ಚಾಲ್ತಿಯಲ್ಲಿದ್ದವು. ಮೌನ ಮುರಿದು ಮಾತಾಡಗೊಡಗಿದ ಮಹಿಳಾ ಸಾಹಿತ್ಯದ ಮೇಲೆ ಸಿದ್ಧ ವಿಮರ್ಶೆಯ ತತ್ವಗಳ ಗಧಾಪ್ರಹಾರ ನಡೆದಾಗ, ಬರಹದ ಒಳನೋಟ ಸಾಧ್ಯವಾಗುವುದಿಲ್ಲ ಎಂಬುದು ಸ್ತ್ರೀವಾದಿ ಸಿದ್ಧಾಂತದ ಪ್ರಮುಖ ಪ್ರಶ್ನೆಯಾಗಿದೆ. ಈ ನಿಟ್ಟಿನಲ್ಲಿ ಮಹಿಳೆಯರ ಸಾಹಿತ್ಯವನ್ನು ಅಧ್ಯಯನ ಮಾಡುವ ಹೊಸ ಮಾದರಿಯ ಅನ್ವೇಷಣೆಗೆ ಸ್ತ್ರೀವಾದಿ ಸಾಹಿತ್ಯ ವಿಮರ್ಶೆ ಮೊದಲಾಯಿತು.

- ಸ್ತ್ರೀತ್ವ ಮಾದರಿ
- ಸ್ತ್ರೀವಾದಿ ಮಾದರಿ
- ಸ್ವ ಅಭಿವ್ಯಕ್ತಿ/ ಸ್ತ್ರೀಯಾತ್ಮಕತೆಯ ಮಾದರಿ

ಮೊದಲ ಹಂತದ ಮಾದರಿಯಲ್ಲಿ ಪುರುಷ ಪ್ರಧಾನ ಸಂಸ್ಕೃತಿಯನ್ನು ಅಂತರ್ಗತಗೊಳಿಸಿಕೊಂಡ ಬರಹಗಳು ಗೋಚರಿಸುತ್ತವೆ. ಇಲ್ಲಿ 'ಸ್ತ್ರೀತ್ವ' ಎಂಬುದು ಪುರುಷ ನಿಷ್ಠವಾದ ಗ್ರಹಿಕೆಯಿಂದ ಹೆಣ್ಣಿನ ಸಿದ್ಧ ಮಾದರಿಗಳನ್ನು ರೂಪಿಸಲಾಯಿತು. ಈ ಮೌಲ್ಯಗಳ ಪ್ರತಿಪಾದನೆಗಾಗಿ ಸೀತೆ, ಸಾವಿತ್ರಿಯಂತಹ ಉದಾಹರಣೆಗಳು ಚಾಲ್ತಿಗೆ ಬಂದವು. ಅಂದರೆ, ಸ್ತ್ರೀಯರ ಮೇಲೆ ಪಿತೃಪ್ರಧಾನ ವ್ಯವಸ್ಥೆ ಕೆಲವು ನಿರ್ದಿಷ್ಟ ಮಾನದಂಡಗಳನ್ನು ಹೇರಿ ಅದನ್ನು 'ಸ್ತ್ರೀತ್ವ' ಎಂದು ಕರೆಯಲಾಗಿದೆ. ಇಂತಹ 'ಸ್ತ್ರೀತ್ವ'ದ

ಮಾದರಿಯ ಗುಣಗಳನ್ನು ನೇರವಾಗಿ ಸ್ವೀಕರಿಸಿದ ಲೇಖಕಿಯರು, ಪುರುಷ ಸ್ಥಿರೀಕರಣ ಮಾದರಿಗಳಿಂದ ಆಕರ್ಷಿತರಾಗಿ ವ್ಯವಸ್ಥೆಯೊಂದಿಗೆ ಒಪ್ಪಿತ ರೀತಿಯಲ್ಲಿ ರಾಜಿ ಮಾರ್ಗ ಅನುಸರಿಸಿದ್ದಾರೆ. ಸ್ತ್ರೀಯರು ಸಾಹಿತ್ಯ ರಚನೆಯಲ್ಲಿ ತೊಡಗುತ್ತಾರೆ. ಆದರೆ, ಬದುಕಿನ ಸಂಕೀರ್ಣತೆಯನ್ನು ವಿಶ್ಲೇಷಣೆಗೆ ಒಳಪಡಿಸದೇ, ಸಂಘರ್ಷಕ್ಕೆ ಇಳಿಯದೇ ಉದಾರವಾದಿ ನೆಲೆಯಲ್ಲಿ ಅವರ ಬರವಣಿಗೆ ಸಾಗುತ್ತದೆ.

ಎರಡನೇ ಹಂತದ ಮಾದರಿಯು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಪ್ರತಿರೋಧಿಸುವ ಘಟ್ಟವಾಗಿದೆ. ಸ್ತ್ರೀವಾದಿ ನಿಲುವು, ಸ್ತ್ರೀಯರ ಪರವಾಗಿರುವ ಧೋರಣೆ ಹೊಂದಿದೆ. ಪುರುಷಪ್ರಣೀತ ಸಂಸ್ಕೃತಿಯಲ್ಲಿ ಹೆಣ್ಣಿನ ಮೇಲೆ ಹೇರಲಾದ ನಿರ್ಬಂಧಗಳನ್ನು, ಶೋಷಣೆಯ ನೆಲೆಗಳನ್ನು ಗುರುತಿಸಿ, ಅದನ್ನು ಪ್ರತಿಭಟಿಸುವ ನಿಲುವು ಎದ್ದು ಕಾಣುತ್ತದೆ. ಈ ಮಾದರಿಯ ಬರಹಗಾರ್ತಿಯರು ಪುರುಷ ಬರಹಗಾರರ ಬರಹಕ್ಕಿಂತ ಭಿನ್ನವಾಗಿ ಮಹಿಳಾ ದೃಷ್ಟಿಕೋನದಿಂದ ತಮ್ಮ ಬಂಡಾಯದ ಬರಹಗಳ ಮೂಲಕ ಅಭಿವ್ಯಕ್ತಿಸುತ್ತಾರೆ. ಸಾಂಪ್ರದಾಯಿಕ ಮೌಲ್ಯಗಳನ್ನು ನಿಕಷಕ್ಕೆ ಒಳಪಡಿಸಿವೆ. ವೈರುಧ್ಯದ ಅಂಶಗಳನ್ನು ಹೊರಗೆಳೆದು ಪ್ರತಿರೋಧಿಸುವ ಮಾರ್ಗ ಇದಾಗಿದೆ. ಅಸಮಾನತೆಯ ನೆಲೆಗಳ ಬಗ್ಗೆಯೂ ಜಾಗೃತಿ ವಹಿಸಲಾಗಿರುತ್ತದೆ.

ಸ್ವ-ಅಭಿವ್ಯಕ್ತಿ ಅಥವಾ ಸ್ತ್ರೀಯಾತ್ಮಕತೆಯ ಹಂತದಲ್ಲಿ ಮಹಿಳೆಯರು ಈಗಾಗಲೇ ನಿರ್ಧರಿಸಲ್ಪಟ್ಟ ಸಾಹಿತ್ಯದ ವಸ್ತು-ವಿನ್ಯಾಸ-ತಂತ್ರ ಮುಂತಾದ ಪರಿಕರಗಳಿಗೆ ಸವಾಲಾಗುವಂಥ ಹೊಸದೊಂದು ಪರ್ಯಾಯ ಸಾಧ್ಯತೆಯತ್ತ ಮುಖಾಮುಖಿಯಾಗುವ ಸಾಹಿತ್ಯ ರಚನೆಗೆ ತೊಡಗುತ್ತಾರೆ. ಪ್ರಯೋಗ ಮತ್ತು ಪರಿಶ್ರಮ ಇದಕ್ಕೆ ಮೂಲಧಾತುವಾಗುತ್ತದೆ. ಜತೆಗೆ ಬರವಣಿಗೆಗೆ ಯಾವುದು ಯುಕ್ತವಲ್ಲವೆಂದು ಅಂಚಿಗೆ ತಳ್ಳಲ್ಪಟ್ಟಿತ್ತೋ ಅಂಥ ಜಗತ್ತಿನ ಮೌಲ್ಯಗಳನ್ನು ಪ್ರಧಾನ ನೆಲೆಗೆ ತರುವ ಕಾರ್ಯವೂ ನಡೆಯುತ್ತದೆ.

ಮೇಲಿನ ಮೂರು ಹಂತದ ಮಾದರಿಗಳನ್ನು ಕ್ರಮವಾಗಿ ಮಹಿಳೆಯರು ಸಾಹಿತ್ಯ ಬರವಣಿಗೆಗೆ ತೊಡಗಿದ ಪ್ರಾರಂಭದ ಕಾಲ-ನಂತರದಲ್ಲಿ ರೂಪಗೊಳ್ಳುತ್ತಿದ್ದ ಕಾಲ-ಮತ್ತು ಇಂದಿನ ಬರವಣಿಗೆಯ ಕಾಲದ ಧೋರಣೆಗಳೆಂದು ಕೆಲವು ಅಧ್ಯಯನಕಾರರು ಗುರುತಿಸಿದ್ದಾರೆ. ಆದರೆ ಈ ಹಂತಗಳು ಬರಹಗಾರ್ತಿಯರಲ್ಲಿ ಪಲ್ಲಟಗೊಳ್ಳುವ ಧೋರಣೆಯಾಗಿಯೂ ಕಾಣಿಸಿಕೊಳ್ಳುತ್ತವೆ. ಪ್ರಸ್ತುತದಲ್ಲಿ ಬರೆಯುತ್ತಿರುವ ಕೆಲವರು 'ಸ್ತ್ರೀತ್ವ'ದ ಮಾದರಿಗಳನ್ನೇ ಆದರ್ಶವಾಗಿಟ್ಟುಕೊಂಡಿರುವುದನ್ನೂ ಕಾಣಬಹುದು. ಇದಕ್ಕೆ ವ್ಯತಿರಿಕ್ತವೆನಿಸುವ ಪ್ರತಿರೋಧದ ಬರಹಗಳು, ಹಿಂದಿನ ಲೇಖಕಿಯರಲ್ಲೂ ತೋರಬಹುದಾಗಿದೆ. ಹಿಂದಿನ/ಇಂದಿನ ಒಟ್ಟು ಬರಹಗಾರ್ತಿಯರಲ್ಲಿ ಮೇಲಿನ ಮೂರು ಹಂತಗಳು ಬೇರೆ ಬೇರೆ ರೀತಿಯಲ್ಲಿ ಪ್ರಕಟಗೊಳ್ಳಬಹುದಾದ ಸಾಧ್ಯತೆಯ ವಾದವನ್ನು ಸಹ ಮುಂದಿಡಲಾಗಿದೆ. ಕನ್ನಡ ಸಂದರ್ಭದಲ್ಲಿ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯ ಮಾನದಂಡಗಳನ್ನು ನೇರವಾಗಿ ಅನುಕರಿಸಲಾಗಿದೆ, ಕೆಲವೊಮ್ಮೆ ಬದಲಾಯಿಸಿಕೊಳ್ಳಲಾಗಿದೆ. ಒಂದು ಚೌಕಟ್ಟಿನ ನೆಲೆಯಲ್ಲಿ ಸ್ತ್ರೀವಾದವು ಸಾಗುವುದರಿಂದ ಅದರಿಂದ ಉಂಟಾಗಬಹುದಾದ ಇತಿ-ಮಿತಿಗಳ ಬಗ್ಗೆಯೂ ಚರ್ಚೆ ನಡೆದಿದೆ.

ಡಿ.ಆರ್.ನಾಗರಾಜರವರು ಸ್ತ್ರೀವಾದಿ ಸಾಹಿತ್ಯ ಮೀಮಾಂಸೆಯ ಸಮಸ್ಯೆ ಮತ್ತು ಸಾಧ್ಯತೆಗಳನ್ನು ಚರ್ಚಿಸುತ್ತ 'ಕಾತ್ಯಾಯಿನಿ' ಮತ್ತು 'ಗಾರ್ಗಿ' ಮಾದರಿಗಳಲ್ಲಿ ಮಹಿಳಾ ಸಾಹಿತ್ಯವನ್ನು ವರ್ಗೀಕರಿಸಿದ್ದಾರೆ. ಸ್ತ್ರೀವಾದಿ ವಿಮರ್ಶೆಯು ಎದುರಿಸುತ್ತಿರುವ 'ಪರಂಪರೆ'ಯನ್ನು ಸಮಸ್ಯೆಯಾಗಿ ಗುರುತಿಸುತ್ತಾರೆ. ಪರಂಪರೆಯ ಹುಡುಕಾಟದಲ್ಲಿ ಮಹಿಳಾ ಸಾಹಿತ್ಯದ ಇತಿಹಾಸ ಚಿಕ್ಕದಾಗುತ್ತದೆಂದು ಹೇಳುತ್ತಾ, ವಿಮರ್ಶಾ ವಲಯ ಅಲ್ಲಗಳೆದಿರುವ ಮಹಿಳೆಯರ ಸಾಹಿತ್ಯವನ್ನು "ಇಲ್ಲಿ ಗಟ್ಟಿ ಅಭಿವ್ಯಕ್ತಿಯ ಚಿನ್ನ ಎಲ್ಲೋ ದೂಳು, ಕಸದಲ್ಲಿ ಮರೆಯಾಗಿ ಕೂತಿರುತ್ತದೆ. ಸ್ತ್ರೀ ಸಾಹಿತ್ಯದಲ್ಲಿ ವಿದ್ಯಾಭ್ಯಾಸ ಪುರುಷಾಧಿಕಾರದ ಅಂತರಂಗೀಕರಣದ ಕ್ರಮಗಳು ಸಾಹಿತ್ಯ ಸಂಸ್ಕೃತಿಯ ಯಜಮಾನಿಕೆಗಳು ಎಲ್ಲ ಸೇರಿ ಲೇಖಕಿಯನ್ನು ಅಧೀರಳನ್ನಾಗಿಸುವ ಸಾಧ್ಯತೆಗಳೇ ಹೆಚ್ಚು. ಆದರೆ ಅಧೀರತೆಯ ಬಯಲಿನಲ್ಲಿ ಪ್ರತಿಭಾವಂತೆ ಬಚ್ಚಿಟ್ಟುಕೊಳ್ಳುವ ಗೂಡನ್ನು ಕಟ್ಟಬಲ್ಲಳು. ಗೃಹವಾದಿನೀ ಸಾಹಿತ್ಯ ಪ್ರತಿಭೆಯ ಯಶಸ್ಸು ಇರುವುದೇ ಹೀಗೆ ಬಚ್ಚಿಡುವ, ಮುಚ್ಚಿಟ್ಟುಕೊಳ್ಳುವ, ಕಾಪಾಡಿಕೊಳ್ಳುವ ಕ್ರಮಗಳಲ್ಲಿ" ('ಸ್ತ್ರೀವಾದಿ ಸಾಹಿತ್ಯ ಮೀಮಾಂಸೆಯ ಸ್ವರೂಪ', ಸಾಹಿತ್ಯ ಕಥನ, ಪುಟ-೧೫೧) ಎಂದು ಹೇಳುತ್ತ, ಅದನ್ನು ಇಂದಿನ ವಿಮರ್ಶೆ ಸರಿಯಾಗಿ ಗುರುತಿಸಬೇಕೆಂದು ಹೇಳಿದ್ದಾರೆ.

ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯನ್ನು ಆಳವಾಗಿ ಅಧ್ಯಯನ ಮಾಡುವ ಕೆ.ಕೇಶವ ಶರ್ಮ ಸ್ತ್ರೀವಾದ ಎಂಬ ಸಿದ್ಧಾಂತದ ಬಗ್ಗೆ ಅಲ್ಲದೆ, ಸಾಹಿತ್ಯ ವಿಮರ್ಶೆಯಲ್ಲಿ ಬಳಸಲಾಗುವ 'ಸಿದ್ಧಾಂತ' ಎಂಬ ಪರಿಕಲ್ಪನೆಯ ಬಗ್ಗೆಯೇ ಮೂಲಭೂತವಾದ ಪ್ರಶ್ನೆಯನ್ನು ಮುಂದಿಟ್ಟಿದ್ದಾರೆ. ಸ್ತ್ರೀವಾದಿ ಅಧ್ಯಯನ ಕ್ರಮ ನಿರ್ಮಿಸಿಕೊಂಡಿರುವ ವರ್ತುಲದ ಅಪಾಯದ ಎಚ್ಚರಿಕೆಯನ್ನೂ ಗಮನಿಸಿದ್ದಾರೆ.

ಅನೇಕ ಸ್ತ್ರೀವಾದಿ ಅಧ್ಯಯಕಾರರಿಂದಾಗಿ, ತೆರೆಮರೆಗೆ ಸರಿಸಲಾಗಿದ್ದ ಸಾಹಿತ್ಯ ಬರಹಗಳು ಬೆಳಕು ಕಾಣಲು ಕಾರಣವಾಗಿದೆ. ೯೦ರ ದಶಕದಲ್ಲಿ ಸ್ತ್ರೀವಾದಿ ವಿಮರ್ಶೆಯು ಕನ್ನಡ ಸಾಹಿತ್ಯ ಲೋಕಕ್ಕೆ ಹೆಜ್ಜೆಯಿಟ್ಟಿತು. ಸಾಹಿತ್ಯ ಕೃತಿಯನ್ನು ಅಧ್ಯಯನ ಮಾಡಲು ಇರುವ ಅನೇಕ ಪರಿಕಲ್ಪನೆಗಳೊಂದಿಗೆ ಸ್ತ್ರೀವಾದವೂ ಒಂದು ಅಧ್ಯಯನದ ಮಾದರಿಯಾಯಿತು. ಪ್ರಾರಂಭದಲ್ಲಿ ಕನ್ನಡ ಸ್ತ್ರೀವಾದಿ ಚಿಂತನೆಗಳಿಗೆ ಚಾಲನೆಯನ್ನು ನೀಡಿದವರು ವಿಜಯಾ ದಬ್ಬೆ, ಬಿ.ಎನ್.ಸುಮಿತ್ರಾಬಾಯಿ ಮುಂತಾದವರು. ಸ್ತ್ರೀವಾದಿ ನೆಲೆಯಲ್ಲಿ ಮಹಿಳಾ ಸಾಹಿತ್ಯವನ್ನು ಅಧ್ಯಯನ ಮಾಡಿದ ಕೃತಿಗಳನ್ನು ಸ್ಥೂಲವಾಗಿ ಕೆಳಗಿನಂತೆ ಗಮನಿಸಲಾಗಿದೆ.

ವಿಜಯಾ ದಬ್ಬೆಯವರ 'ಮಹಿಳೆ ಸಾಹಿತ್ಯ ಸಮಾಜ', 'ನಾರಿ:ದಾರಿ-ದಿಗಂತ' ಮುಂತಾದ ಕೃತಿಗಳ ಕೆಲವು ಲೇಖನಗಳು ಮತ್ತು ಬಿ.ಎನ್.ಸುಮಿತ್ರಾಬಾಯಿಯವರ 'ಸಾರ್ವತ್ರಿಕದೆಡೆಗೆ', 'ವಿಚಯ', 'ಅಯನ' ಮುಂತಾದ ಸ್ತ್ರೀವಾದಿ ವಿಮರ್ಶಾ ಕೃತಿಗಳ ಲೇಖನಗಳಲ್ಲಿ, ಮಹಿಳಾ ಸಾಹಿತ್ಯ ಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಪಾಶ್ಚಾತ್ಯ ದೇಶದಲ್ಲಿ ಬೆಳೆದು ಬಂದ ಸ್ತ್ರೀವಾದಿ ವಿಮರ್ಶೆಯ ನೆಲೆಗಳನ್ನು ಗುರುತಿಸುವುದರೊಂದಿಗೆ, ಕನ್ನಡ ಸಾಹಿತ್ಯವನ್ನು ಮತ್ತು ಮಹಿಳಾ ಸಾಹಿತ್ಯವನ್ನು ಪುನರ್ ಓದಿಗೆ ಒಳಪಡಿಸಲಾಗಿರುವುದನ್ನು ಮೇಲಿನ ಕೃತಿಗಳಲ್ಲಿ ಕಾಣಬಹುದಾಗಿದೆ.

ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ ಪ್ರಕಟವಾದ 'ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ', 'ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ' ಎಂಬ ಕೃತಿಗಳಲ್ಲಿ ಸ್ವಾತಂತ್ರ್ಯಾ ಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಲೇಖಕಿಯರ ಕೃತಿಗಳನ್ನು ನಿಕಷಕ್ಕೆ ಒಳಪಡಿಸಲಾಗಿದೆ. ಕಾವ್ಯ-ಕತೆ-ಕಾದಂಬರಿ ಪ್ರಕಾರಗಳನ್ವಯ ಪ್ರತ್ಯೇಕ ಪರಿಶೀಲನೆಯನ್ನು ಕಾಣಬಹುದು. ಮಲ್ಲಿಕಾ ಘಂಟಿಯವರ 'ಕನ್ನಡದಲ್ಲಿ ಮಹಿಳಾ ಕಥಾ ಸಾಹಿತ್ಯ' ಎಂಬ ಕೃತಿಯಲ್ಲಿ 'ನವೋದಯ ಪೂರ್ವ', 'ನವೋದಯ', 'ಪ್ರಗತಿ ಶೀಲ', 'ನವ್ಯ', 'ದಲಿತ', 'ಬಂಡಾಯ' ಪಂಥಗಳಡಿಯಲ್ಲಿ ಮಹಿಳೆಯರ ಕತೆಗಳನ್ನು ವಿಶ್ಲೇಷಿಸಿದ್ದಾರೆ. ಸಾಧ್ಯವಿದ್ದಷ್ಟು ಎಲ್ಲಾ ಮಹಿಳೆಯರ ಕಥಾ ಸಂಕಲನಗಳನ್ನು, ಕಥೆಗಳನ್ನು ಒಂದೆಡೆ ಸೇರಿಸಿ ಮಹಿಳಾ ಕಥನ ಸಾಹಿತ್ಯ ಚರಿತ್ರೆಗೆ ಅಡಿಪಾಯ ಹಾಕಿದ್ದಾರೆ. ಯು.ಮಹೇಶ್ವರಿಯವರ 'ಇದು ಮಾನುಷಿಯ ಓದು', ಗಿರಿಜಾಶಾಸ್ತ್ರಿಯವರ 'ಕಥಾ ಮಾನಸಿ' ಮುಂತಾದ ಕೃತಿಗಳಲ್ಲಿ ಸ್ತ್ರೀವಾದಿ ದೃಷ್ಟಿಕೋನವನ್ನು ಪ್ರದಾನವಾಗಿಟ್ಟು ಕೊಂಡು ಕಾದಂಬರಿ-ಕತೆಗಳನ್ನು ಅಭ್ಯಸಿಸಿದ್ದಾರೆ. ಕರ್ನಾಟಕ ಲೇಖಕಿಯರ ಸಂಘದ 'ಲೇಖ-ಲೋಕ'ದ ಸಂಪುಟಗಳು, ಕುಲಶೇಖರಿಯವರ ಸಂಪಾದನೆಯ 'ಶತಮಾನದ ಕನ್ನಡ ಕವಿಯಿತ್ರಿಯರು', ಆರ್ಯಾಂಬ ಪಟ್ಟಾಭಿಯವರ ಸಂಪಾದನೆಯ 'ಅಧುನಿಕ ಕನ್ನಡ ಮಹಿಳಾ ಸಾಹಿತ್ಯ ಸಮೀಕ್ಷೆ' ಕೃತಿಗಳು ಮಹಿಳಾ ಸಾಹಿತ್ಯದ ಅವಲೋಕನಕ್ಕೆ ಸಮೃದ್ಧ ಮಾಹಿತಿಯನ್ನು ಒದಗಿಸುವ ಆಕರ ಗ್ರಂಥಗಳಾಗಿವೆ.

ಸ್ವಾತಂತ್ರ್ಯದ ಆಚೀಚೆಯಲ್ಲಿ ಬರೆದ ಮಹಿಳಾ ಬರಹಗಾರರು ತಮ್ಮ ಕಾವ್ಯ-ಕತೆ-ಕಾದಂಬರಿಗಳನ್ನು ಆಯಾ ಕಾಲದ ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ಕೆಲವು ಲೇಖಕಿಯರು ಪ್ರತ್ಯೇಕ ಸಂಕಲಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದ್ದುಂಟು. ಕನ್ನಡ ಓದುಗರಿಗೆ ಅಲಭ್ಯವಾದ ಅನೇಕ ಮಹಿಳೆಯರ ಬರಹಗಳನ್ನು ಒಟ್ಟುಗೂಡಿಸಿ, 'ವಾಚಿಕೆ' ಗಳನ್ನು ತಯಾರಿಸಿದ್ದು, ಮಹಿಳೆಯರ ಮಹತ್ವದ ಕಾರ್ಯವಾಗಿದೆ. ತಿರುಮಲಾಬರವರ ಆಯ್ದ ಕಾದಂಬರಿ, ಕಾವ್ಯ, ನಾಟಕ, ಪ್ರಬಂಧ ಇತರ ಬರಹಗಳನ್ನೊಳಗೊಂಡ 'ಹಿತೈಷಿಣಿಯ ಹೆಜ್ಜೆಗಳು' ಎಂಬ ಸಾಹಿತ್ಯ ವಾಚಿಕೆಯನ್ನು ವಿಜಯಾ ದಬ್ಬೆಯವರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಪ್ರಕಟಗೊಳಿಸಿದರು. ತಿರುಮಲಾಂಬರವರ ಬದುಕು-ಬರಹಗಳ ಬಗ್ಗೆ ಬೆಳಕು ಚೆಲ್ಲುವ ಪ್ರಸ್ತಾವನೆಯೂ ಆ ಕೃತಿಯಲ್ಲಿ ಒಡಮೂಡಿದೆ. ಹಾಗೆಯೇ ಸರಸ್ವತಿದೇವಿ ಗೌಡರ ಬರಹಗಳನ್ನು ಒಳಗೊಂಡ 'ಸಾರಸರಸ್ವತಿ', ಶ್ಯಾಮಲಾದೇವಿಯವರ ಬರಹಗಳನ್ನೊಳಗೊಂಡ 'ಶ್ಯಾಮಲಾ ಸಂಚಯ' ವಾಚಿಕೆಗಳನ್ನು ಸಿದ್ಧಪಡಿಸಿದರು. ಬಿ.ಎನ್.ಸುಮಿತ್ರಾಬಾಯಿಯವರು ಆರ್.ಕಲ್ಯಾಣಮ್ಮನವರ ಕುರಿತಾದ 'ಕಲ್ಯಾಣ ಸರಸ್ವತಿ', ಎಚ್.ಎಸ್.ಕಾತ್ಯಾಯಿನಿಯವರ ಬರಹಗಳ 'ಕಾತ್ಯಾಯಿನಿ'; ನೇಮಿಚಂದ್ರರು ಸಂಪಾದಿಸಿದ 'ಬೆಳಗೆರೆ ಜಾನಕಮ್ಮ ಬದುಕು-ಬರಹ'; ಟಿ.ಎಸ್.ಶ್ರೀವಳ್ಳಿಯವರು ಸಂಪಾದಿಸಿದ ಸರಸ್ವತಿಬಾಯಿ ರಾಜವಾಡೆಯವರ ಬರಹಗಳ 'ಗಿರಿಬಾಲೆ' ಎಂಬ ವಾಚಿಕೆಗಳು ಆಯಾ ಲೇಖಕಿಯರ ಬರಹಗಳನ್ನು, ಬರಹದ ಒಳನೋಟಗಳನ್ನು ಗ್ರಹಿಸಲು ಸಾಧ್ಯವಾಗುವ ವಿಶಿಷ್ಟ ಕೃತಿಗಳಾಗಿವೆ. ಸಬೀಹಾ ಭೂಮಿಗೌಡ, ಕೆ.ಆರ್.ಸಂಧ್ಯಾ, ಎಲ್.ಸಿ.ಸುಮಿತ್ರಾ, ಎಸ್.ಡಿ.ಶಶಿಕಲಾ, ಬಿ.ಎಸ್.ವೆಂಕಟಲಕ್ಷ್ಮೀ,

ಎಲ್.ಜಿ.ಮೀರಾ ಮುಂತಾದವರ ಲೇಖನಗಳು ಮಹಿಳಾ ಸಾಹಿತ್ಯವನ್ನು ಅವಲೋಕಿಸುವ ಕಾರ್ಯ ಕೈಗೊಂಡಿವೆ. ಎಚ್.ಎಸ್.ಶ್ರೀಮತಿಯವರ 'ತ್ರಿವೇಣಿ ಕಾದಂಬರಿಗಳ ಮರು ಓದು', ಸಿಮೋನ್ ದಿ ಬುವಾ ಅವರ 'ಸೆಕೆಂಡ್ ಸೆಕ್ಸ್' ಅನುವಾದ ಕೃತಿ ಮಹತ್ವದ್ದಾಗಿವೆ

ಎಚ್.ಎಸ್.ಶ್ರೀಮತಿಯವರು ಸಂಪಾದಿಸಿದ 'ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ'ಯು ಮಹತ್ವಾಕಾಂಕ್ಷೆಯ ಯೋಜನೆಯ ಫಲವಾಗಿದೆ. ಪ್ರಸ್ತಾವನೆಯ ಕೆಲವು ಲೇಖನಗಳು, ಮಹಿಳೆಯರೇ ಮಹಿಳಾ ಸಾಹಿತ್ಯ ಚರಿತ್ರೆಯನ್ನು ನಿರ್ಮಿಸಿಕೊಳ್ಳುವ ಅವಶ್ಯಕತೆಯನ್ನು, ಸಾಮಾಜಿಕ ಅವರಣದಲ್ಲಿ ಮಹಿಳೆ ಬರವಣಿಗೆಗೆ ತೊಡಗಿಕೊಳ್ಳಲು ಇರುವ ಅಡೆತಡೆಗಳನ್ನು ತಾತ್ವಿಕ ಹಿನ್ನೆಲೆಯಲ್ಲಿ ಚರ್ಚಿಸಿವೆ. "ಪರ್ಯಾಯ ಚಿಂತನೆಗೆ ಆಧಾರವಾಗಿ ಮೊದಲಿಗೆ ಮಹಿಳಾ ಸಾಹಿತ್ಯದ ಗುಣ-ಲಕ್ಷಣಗಳನ್ನು, ಅದರ ನಿಷ್ಠೂರ ವಾಸ್ತವಾಂಶಗಳನ್ನು ಗ್ರಹಿಸಲು ಯತ್ನಿಸೋಣ. ಇದು ಪುರುಷ ನಿರ್ಮಿತ ಸಾಹಿತ್ಯ ಚರ್ಚೆಗಳಂತೆ ಶ್ರೇಷ್ಠತೆಯ ರಾಜಕಾರಣವನ್ನು ನಡೆಸುವ ಉದ್ದೇಶದ್ದಲ್ಲ. ಆ ಚರ್ಚೆಗಳು 'ಮಹಿಳಾ ಸಾಹಿತ್ಯವು ಕೆಳದರ್ಜೆಯದು' ಎಂಬ ತೀರ್ಮಾನವನ್ನು ಹೇಳಿದ್ದಾವೆಂಬ ಕೀಳರಿಮೆಯಲ್ಲಿ ಮುಳುಗಿ, ಮಹಿಳಾ ಸಾಹಿತ್ಯದ ಶ್ರೇಷ್ಠತೆಯನ್ನು ಪ್ರತಿಪಾದಿಸಲು ಹೆಣಗುವ ಪರಿಯೂ ಅಲ್ಲ. ಬದಲಿಗೆ ನಮ್ಮ ಕಷ್ಟ-ಸುಖ, ಸಾಧನೆ-ಸಾಮರ್ಥ್ಯಗಳನ್ನು ಆವರಿಸಿರುವ ಕಾರಣಗಳನ್ನು ಸ್ಪಷ್ಟಪಡಿಸಿಕೊಳ್ಳುವ ಮೂಲಕವೇ ನಮ್ಮ ಪ್ರಯತ್ನಗಳನ್ನು ಅರ್ಥಪೂರ್ಣವಾಗಿಸಿಕೊಳ್ಳುವ ಚಿಂತನೆಗಳನ್ನು ನಾವೀಗ ಬೆಳೆಸಬೇಕಿದೆ" ('ಪ್ರಸ್ತಾವನೆ', ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪುಟ-೨೧) ಎಂಬ ಉದ್ದೇಶವನ್ನು ಸ್ಪಷ್ಟಪಡಿಸಿದ್ದಾರೆ. ಸಾಮಾಜಿಕ ಆವರಣವು ಲೇಖಕಿಯರನ್ನು ನಿರ್ಮಿಸಿದ್ದನ್ನು ಮುಖ್ಯವಾಗಿ ಗಮನಿಸಿ ಅವರ ಕೃತಿಗಳನ್ನು ಪ್ರತ್ಯೇಕ ಕ್ರಮಗಳಲ್ಲಿ ಗುರುತಿಸಲಾಗಿದೆ.

ಮಹಿಳಾ ಸಾಹಿತ್ಯ ಪರಂಪರೆಯನ್ನು ಗುರುತಿಸಿಕೊಳ್ಳಲು, ಆ ಮೂಲಕ ಹೊಸ ಸಾಧ್ಯತೆಯ ಅಧ್ಯಯನಗಳನ್ನು ಕೈಗೊಳ್ಳಲು ಮಹಿಳಾ ಸಾಹಿತ್ಯ ಚರಿತ್ರೆ ದಿಕ್ಸೂಚಿಯಾಗಿದೆ.

## ೨.೫ ಹೊಸ ಸಾಧ್ಯತೆಯ ಶೋಧನೆಯ ನೆಲೆ

ಮಹಿಳೆಯರ ಕೃತಿಗಳನ್ನು ಹಿಂದಿನ ಓದಿಗಿಂತ ಭಿನ್ನವಾಗಿ ಅಧ್ಯಯನಕ್ಕೆ ಒಳಪಡಿಸುವ ಪ್ರಯತ್ನವೂ ನಡೆಯುತ್ತಾ ಬಂದಿದೆ. ವಿರಳವಾದರೂ ಮಹಿಳೆಯರ ಸಾಹಿತ್ಯವನ್ನು ಬೇರೆ ಬೇರೆ ಆಯಾಮಗಳಲ್ಲಿ ನೋಡುವ ಅಧ್ಯಯನಗಳಾಗಿವೆ. ಮಹಿಳೆಯರು ನಿರೂಪಿಸಿದ ಪುರುಷ ಪ್ರಣೀತ ನಿಲುವುಗಳೊಳಗೆ ಕಾಣಿಸಿಕೊಳ್ಳುವ ಮಹಿಳೆಯರ ಅಂತಸ್ಥ ಧ್ವನಿಗಳನ್ನು ಗುರುತಿಸಲು ಪ್ರಯತ್ನಿಸಲಾಗುತ್ತದೆ. ಕನ್ನಡ ಸಾಹಿತ್ಯಕ್ಕೆ ಮಹಿಳೆಯರ ಕೊಡುಗೆ ನಗಣ್ಯವೆಂದು ಕೈ ಬಿಡಲಾಗಿದ್ದ ಅನೇಕ ಮಹಿಳೆಯರ ಕೃತಿಗಳನ್ನು ಪುನರ್ ಓದಿಗೆ ಒಳಪಡಿಸಲಾಗಿದೆ. ಸಿದ್ಧ ಮಾದರಿಯ ಮಾನದಂಡಗಳನ್ನು ಬದಿಗಿರಿಸಿ ಯಾವ ಯಾವ ಆಯಾಮಗಳಲ್ಲಿ ಮಹಿಳೆಯರ ಸಾಹಿತ್ಯವನ್ನು ಅಧ್ಯಯನ ಮಾಡಬಹುದು ಎಂಬ ಹೊಸ ಸಾಧ್ಯತೆಯ ಶೋಧದಲ್ಲಿ ಅನೇಕ ಅಧ್ಯಯನಕಾರರು ತೊಡಗಿಕೊಳ್ಳುತ್ತಿದ್ದಾರೆ.

ಕೆ.ವಿ.ನಾರಾಯಣರವರು: ಮಹಿಳೆಯರು ಸಾಹಿತ್ಯ ಸೃಷ್ಟಿಸುತ್ತಿದ್ದಾರೆ ಎಂಬ ನೆಲೆಯಲ್ಲಿ; ಸಾಹಿತ್ಯ ಕೃತಿಗಳಲ್ಲಿ ಮಹಿಳೆಯರು ಕೇಂದ್ರ ಬಿಂದುವಾಗಿದ್ದಾರೆ; ಮತ್ತು ಮಹಿಳೆಯರು ಓದುಗರೂ ಆಗಿದ್ದಾರೆ ಎಂಬ ಮೂರು ನೆಲೆಗಳಲ್ಲಿ ಮಹಿಳಾ ಸಾಹಿತ್ಯವನ್ನು ಅವಲೋಕಿಸಿದ್ದಾರೆ. ಗಂಡು ಜಗತ್ತಿನ ಅಪೇಕ್ಷೆಯನ್ನು ಪೂರೈಸುವ ನಿಟ್ಟಿನಲ್ಲಿ ಅನೇಕ ಮಹಿಳೆಯರ ಬರವಣಿಗೆ ಸಾಗಿರುವುದನ್ನು ಪ್ರಸ್ತಾಪಿಸುತ್ತಾ; "ಸಾಮಾಜಿಕವಾಗಿ ಹೆಣ್ಣಿನ ಬಗೆಗೆ ಇರುವ ಹಳೆಯ ಚಿಂತನೆಗಳನ್ನು ನಿರಾಕರಿಸಿ, ತನಗೆ ವಹಿಸಲಾದ ವರ್ತನಾ ಮಾದರಿಗಳಿಗೆ ಕಟ್ಟು ಬೀಳಲು ಬಯಸದ ಮನೋಭಾವವನ್ನು ಮಂಡಿಸಲು ಹೊರಟವರೆಲ್ಲರೂ ಕವಿತೆಗಳನ್ನು ಬರೆದಿದ್ದಾರೆ. ಆದರೆ ಇಂಥ ದೃಷ್ಟಿಕೋನ ಹೆಂಗಸರು ಬರೆದ ಕಥಾ ಸಾಹಿತ್ಯದಲ್ಲಿ ಢಾಳಾಗಿ ಕಂಡು ಬರುವುದಿಲ್ಲ. ಹೀಗಾಗಿಯೇ ಚಾಲ್ತಿಯ ವಿಮರ್ಶೆ ಹೆಂಗಸರ ಕವಿತೆಗಳಿಗೆ ನೀಡುವ ಮಹತ್ವವನ್ನು ಅವರ ಕಥೆ–ಕಾದಂಬರಿಗಳಿಗೆ ನೀಡುವುದಿಲ್ಲ" ('ಮಹಿಳೆಯ ಮುನ್ನಡೆ', ಪುಟ-೮೨) ಎಂದು ಹೇಳಿದ್ದಾರೆ. ಕವಿತೆಯಲ್ಲಿ ತಮ್ಮ ಅನುಭವ, ಅನಿಸಿಕೆಗಳನ್ನು ಸಂಕೇತಗಳ ಮೂಲಕ ವ್ಯಕ್ತಪಡಿಸುವ ಅವಕಾಶವಿರುತ್ತದೆ. ಜೊತೆಗೆ ಒಂಟಿತನದ ಭಾವವನ್ನು ಹೊರಗೆಡವಲು, ಮುಕ್ತವಾದ ಹಂಚಿಕೆ ಸಾಧ್ಯವಾಗಲು ಇರುವ ಕಾರಣಗಳನ್ನು ಚರ್ಚಿಸಿದ್ದಾರೆ. ಸಾಮಾಜಿಕ, ಆರ್ಥಿಕ ವ್ಯವಸ್ಥೆಯಲ್ಲಿ ರೂಪಗೊಂಡಿರುವ ಮಹಿಳೆಯರ ಉದ್ಯೋಗಗಳು, ಗಂಡು ಜಗತ್ತಿನ ಅಪೇಕ್ಷೆಗಳ ಮೂಲಕ ಹುಟ್ಟಿ ಬಂದಿವೆಯೆಂದು ಪ್ರತಿಪಾದಿಸಿದ್ದಾರೆ. ಪರ್ಯಾಯ ತಾತ್ವಿಕತೆ ರೂಪಗೊಂಡಾಗ ಮಾತ್ರ ನಿಜವಾದ ಹೆಣ್ತನ ಮೈದಳೆಯಬಹುದೆಂಬ ಹೊಸ ಸಾಧ್ಯತೆಯ ಕಡೆಗೆ ಗಮನಹರಿಸಿದ್ದಾರೆ.

'ಹೆಣ್ಣು ಮತ್ತು ಭಾಷೆ' ಕೃತಿಯಲ್ಲಿ 'ಭಾಷಾ ಕಲಿಕೆ ಮತ್ತು ಬಳಕೆಗಳಲ್ಲಿ ಹೆಣ್ಣಿಗೆ ಇರುವ ಸವಾಲುಗಳು' ಎಂಬ ಮುಖ್ಯ ಶೀರ್ಷಿಕೆಯ ಲೇಖನಗಳಲ್ಲಿ ಕೆ.ವಿ.ನಾರಾಯಣರು ಹೆಣ್ಣಿನ ಭಾಷೆಯ ಕುರಿತಂತೆ ತಾತ್ವಿಕವಾಗಿ ವಿವೇಚಿಸಿದ್ದಾರೆ. ಸಾಹಿತ್ಯವನ್ನು ಹಿನ್ನೆಲೆಯಲ್ಲಿಟ್ಟು ತಮ್ಮ ವಿಚಾರಗಳನ್ನು ಮಂಡಿಸಿದ್ದಾರೆ. ಸಾಮಾಜಿಕ ಸಂರಚನೆಯಲ್ಲಿ ಹೆಣ್ಣಿನ ಭಾಷಾ ಸಾಮರ್ಥ್ಯವನ್ನು ಹೇಗೆ ತಡೆಗಟ್ಟಲಾಗಿದೆ ಎನ್ನುವುದನ್ನು ವಿಶ್ಲೇಷಿಸಲಾಗಿದೆ. ಮುಕ್ತವಾದ ಅಭಿವ್ಯಕ್ತಿ ಸ್ವಾತಂತ್ರ್ಯವಿಲ್ಲದಾದಾಗ ಹೆಣ್ಣು ಮೌನವಾಗುತ್ತಾಳೆ. ಆ ಮೌನವು ಸ್ವಗತ ರೂಪವನ್ನು ಪಡೆಯುತ್ತದೆ ಮತ್ತು ಕವಿತೆಯ ರಚನೆಗೆ ಒತ್ತಾಸೆಯಾಗುತ್ತದೆ. ಹೆಣ್ಣು ಭಾಷೆಯ ಸಾಮರ್ಥ್ಯವನ್ನು ವೇಗವಾಗಿ ಕಲಿಯುತ್ತಾಳೆ. ಆದರೆ ಭಾಷೆಯನ್ನು ಬಳಸುವ ಸಂದರ್ಭದಲ್ಲಿ ಅಡೆತಡೆಯುಂಟಾಗುವುದಕ್ಕೆ ಇರುವ ಕಾರಣಗಳ ಶೋಧಕ್ಕೆ ಲೇಖಕರು ತೊಡಗಿದ್ದಾರೆ. ಮಹಿಳೆಯರ ಸಾಹಿತ್ಯ ಕೃತಿಗಳನ್ನು ಅಧ್ಯಯನಕ್ಕೆ ಕೈಗೊಳ್ಳುವ ಮೊದಲು ಭಾಷೆಯ ಮೂಲಕ ಗಂಡಸರು 'ಕಟ್ಟಲಾದ' ವಾಸ್ತವಗಳನ್ನು ಎಚ್ಚರಿಕೆಯಿಂದ ಗಮನಿಸಿ ಪರ್ಯಾಯ ಮಾರ್ಗಗಳನ್ನು ಅನುಸರಿಸಬೇಕೆಂಬ ಸುಳಿವುಗಳನ್ನು ನೀಡಿರುವುದು ಮಹತ್ವದ್ದಾಗಿದೆ.

'ಕನ್ನಡ ಮಹಿಳಾ ಸಾಹಿತ್ಯ: ಹೆಜ್ಜೆ ಗುರುತುಗಳು' ಎಂಬ ಕೆ.ಕೇಶವ ಶರ್ಮರವರ ಲೇಖನದಲ್ಲಿ ಮಹಿಳಾ ಸಾಹಿತ್ಯದ ಹೆಜ್ಜೆ ಗುರುತುಗಳನ್ನು ಪತ್ತೆ ಹಚ್ಚುವಾಗ ಯಾಕೆ, ಹೇಗೆ, ಏನು ಎಂಬ ದೃಷ್ಟಿಕೋನವಿಟ್ಟುಕೊಂಡು, ಆ ಸಾಹಿತ್ಯದ ಆಳ–ಅಗಲಗಳನ್ನು ಶೋಧಿಸುವ ಕಾರ್ಯಕ್ಕೆ ಮುಂದಾಗಿದ್ದಾರೆ.

ಮಹಿಳೆಯರ ಬರವಣಿಗೆಗಳು ಪಿತೃಪ್ರಧಾನ ಸಂಸ್ಕೃತಿಗಿಂತ ಭಿನ್ನವಾದ ದೃಷ್ಟಿಕೋನಗಳನ್ನು ಒಳಗೊಂಡಿದ್ದು, ಸ್ವ ಅನನ್ಯತೆಯನ್ನು ಎತ್ತಿ ಹಿಡಿಯುತ್ತವೆ. ಈ ತತ್ವವನ್ನು ಸಾಧಿಸಲು ತಿರುಮಲಾಂಬರವರ ಕಾಲಘಟ್ಟದಿಂದ ನಾಗವೇಣಿಯವರ ಕೃತಿಗಳತನಕ ಚರ್ಚಿಸಿದ್ದಾರೆ. ಕೇಶವಶರ್ಮರು ಕೊಡುವ ಒಳನೋಟಗಳಲ್ಲಿ ಮಹಿಳಾ ಸಾಹಿತ್ಯವನ್ನು ನೋಡುವ ದೃಷ್ಟಿಕೋನ ಬದಲಾಗಬೇಕು ಎಂಬ ಕಡೆ ಒತ್ತು ಇದ್ದು, ಮಹಿಳಾ ಬರವಣಿಗೆಯ ಅಭಿವ್ಯಕ್ತಿ ಕ್ರಮದ ಮಾದರಿಗಳ ಬಗ್ಗೆಯೂ ಸ್ಥೂಲವಾಗಿ ಅಧ್ಯಯನ ಮಾಡಿದ್ದಾರೆ.

ಕವಿತಾ ರೈ ಬಿ.ಆರ್.ರವರ 'ಮಹಿಳೆ ಅಸ್ತಿತ್ವದ ಸಂಕಥನ' ಎಂಬ ಕೃತಿಯಲ್ಲಿ, ಮಹಿಳಾ ಕಾದಂಬರಿಗಳನ್ನಿಟ್ಟುಕೊಂಡು: ವಿವಾಹ ಮತ್ತು ಕುಟುಂಬದ ಪರಿಕಲ್ಪನೆಯನ್ನು, ಅಧ್ಯಯನ ಮಾಡಿದ್ದಾರೆ. ಸಮಾಜ ಶಾಸ್ತ್ರ, ಸ್ತ್ರೀವಾದಿ ಅಧ್ಯಯನ ಮತ್ತಿತರ ಭಿನ್ನ ವೈಚಾರಿಕ ಶಾಸ್ತ್ರಗಳ ತಳಹದಿಯ ಮೂಲಕ ಮಹಿಳೆಯರ ಕಾದಂಬರಿಗಳನ್ನು ವಿಂಗಡಿಸಿ ಅಧ್ಯಯನ ಕೈಗೊಂಡಿದ್ದಾರೆ. ಮಹಿಳಾ ಸಾಹಿತ್ಯದ ಹೊಸ ಶೋಧನೆಯ ಸಾಧ್ಯತೆಗಳಲ್ಲಿ ಸ್ತ್ರೀವಾದಿ ವಿಮರ್ಶೆಯ ಅಧ್ಯಯನಗಳು ಮುಖ್ಯವಾಗಿವೆ ಎಂಬುದನ್ನು ಮರೆಯುವಂತಿಲ್ಲ. ಸಾಹಿತ್ಯ ವಿಮರ್ಶೆಗೆ ತನ್ನದೇ ಆದ ಸೀಮಿತ ಚೌಕಟ್ಟಿದ್ದರೂ, ಆ ಚೌಕಟ್ಟಿನ ಮಿತಿಯೊಳಗೆ, ಮರೆಗೆ ಸರಿಸಲಾಗಿದ್ದ ಅನೇಕ ಲೇಖಕಿಯರ ಸಾಹಿತ್ಯಗಳನ್ನು ಪುನರ್ ವಿಮರ್ಶೆಗೆ ಒಳಪಡಿಸಲು ಪ್ರಯತ್ನಿಸಲಾಗಿದೆ.

# ಅಧ್ಯಾಯ ಮೂರು

# ಮಹಿಳಾ ಸಾಹಿತ್ಯ ರಚನೆಯ ಸಾಂಸ್ಕೃತಿಕ ಪರಿಸರ

## ೩.೧ ಪ್ರವೇಶ

ಸಾಹಿತ್ಯವನ್ನು ಅಧ್ಯಯನ ಮಾಡುವಾಗ ಬರಹಗಾರರ ಸಾಂಸ್ಕೃತಿಕ ಪರಿಸರವನ್ನೂ ತಿಳಿಯುವುದು ಅವಶ್ಯವಾಗಿದೆ. ಮಹಿಳಾ ಬರಹಗಾರರ ಕೌಟುಂಬಿಕ, ಶೈಕ್ಷಣಿಕ ಸಂಗತಿಗಳನ್ನು ಗಮನಿಸಲಾಗಿದೆ. ಸಾಹಿತ್ಯ ದಿಗ್ಗಜರ, ಸಾಹಿತ್ಯ ಪಂಥಗಳ ಪ್ರಭಾವ ಪ್ರೇರಣೆಗಳನ್ನು ಗಮನಿಸಲಾಗಿದೆ. ಸಾಂಸ್ಕೃತಿಕ ಪರಿಸರವನ್ನು ಅಧ್ಯಯನ ಮಾಡುವಾಗ:

- ಸ್ವಾತಂತ್ರ್ಯಪೂರ್ವ ಮಹಿಳಾ ಸಾಹಿತ್ಯ ರಚನೆಯ ಸಾಂಸ್ಕೃತಿಕ ಪರಿಸರ
- ಸ್ವಾತಂತ್ರ್ಯೋತ್ತರ ಮಹಿಳಾ ಸಾಹಿತ್ಯ ರಚನೆಯ ಸಾಂಸ್ಕೃತಿಕ ಪರಿಸರ

ಎಂಬ ಪ್ರತ್ಯೇಕ ಭಾಗಗಳಲ್ಲಿ ಚರ್ಚೆ ಮಾಡಲಾಗಿದೆ. ಬರಹಗಾರರ ಪರಿಚಯಾತ್ಮಕ ನೆಲೆಯನ್ನು ಗುರುತಿಸುವುದರೊಂದಿಗೆ ಆಯಾ ಕಾಲದಲ್ಲಿ ಬರಹಗಾರರನ್ನು ಪ್ರಭಾವಿಸಿದ ಸಂಗತಿಗಳನ್ನು ಚರ್ಚೆಗೊಳಪಡಿಸಲಾಗಿದೆ.

## ೩.೨ ಸ್ವಾತಂತ್ರ್ಯ ಪೂರ್ವಕಾಲ

ಶಿಷ್ಟ ಬರಹಕ್ಕೆ ಮಹಿಳೆಯರು ತೊಡಗಿದ್ದು ೨೦ನೇ ಶತಮಾನದಿಂದೀಚೆಗೆ. ಅಂದರೆ, ವಸಾಹತುಶಾಹಿ ಆಡಳಿತದ ಸಂದರ್ಭದಲ್ಲಿ. ಕ್ರಿ.ಶ.೧೭೫೭ ರಿಂದ ೧೯೪೭ರವರೆಗಿನ ಅವಧಿಯು ಬ್ರಿಟಿಶ್ ವಸಾಹತುಶಾಹಿಯ ಕಾಲವಾಗಿತ್ತು. ಬರಹಕ್ಕೆ ತೊಡಗುವ ಕ್ರಿಯೆ ಮಹಿಳೆಯರಿಗೆ ತೀರ ಆಕಸ್ಮಿಕವಾಗಿ ಒದಗಿದುದಲ್ಲ. ಸಾಂಸ್ಕೃತಿಕ ಅವಸ್ಥಾಂತರಗಳ ಪ್ರಭಾವ, ಪ್ರೇರಣೆ, ಒತ್ತಡಗಳು ಕಾರಣವಾಗಿವೆ. ೧೯ನೇ ಶತಮಾನದ ಪ್ರಾರಂಭದ ಕಾಲಘಟ್ಟದಲ್ಲಾದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಬದಲಾವಣೆಗಳು ಸಾಹಿತ್ಯ ರಚನೆಯ ಮೇಲೂ ಗಾಢ ಪರಿಣಾಮವನ್ನು ಬೀರಿವೆ.

ಬ್ರಿಟಿಶರ ಆಳ್ವಿಕೆಯು ಭಾರತದಲ್ಲಿ ಭದ್ರಗೊಂಡಂತೆ ಅವರು ತರಬಯಸಿದ ಬದಲಾವಣೆಗಳೂ ಜಾರಿಗೊಳ್ಳತೊಡಗಿದವು. ಈಸ್ಟ್ ಇಂಡಿಯಾ ಕಂಪನಿಗೆ ಗುಮಾಸ್ತರು ಮತ್ತು ಅನುವಾದಕರ ಅಗತ್ಯವಿದ್ದುದರಿಂದ ಭಾರತದಲ್ಲಿ ಇಂಗ್ಲಿಶ್ ಶಿಕ್ಷಣ ಕ್ರಮವು ಪ್ರಾರಂಭವಾಯಿತು. ೧೮೧೩ ರಿಂದ ಕಂಪನಿಯು ವಿದ್ಯಾಭ್ಯಾಸಕ್ಕೆಂದೆ ಸ್ವಲ್ಪ ಹಣವನ್ನು ಮೀಸಲಿಟ್ಟಿತು. ೧೮೩೩ರ ವೇಳೆಗೆ ಇಂಗ್ಲಿಶನ್ನು ಆಡಳಿತ ಭಾಷೆಯನ್ನಾಗಿ ವಿಧಿಸಲಾಯಿತು. ೧೮೪೪ರಲ್ಲಿ ಲಾರ್ಡ್ ಹಾರ್ಡಿಂಜನು ಇಂಗ್ಲಿಶ್ ಕಲಿತ

ಭಾರತೀಯರಿಗೆ ಸರ್ಕಾರಿ ನೌಕರಿಗಳಲ್ಲಿ ಆದ್ಯತೆ ನೀಡಲಾಗುವುದೆಂದು ಘೋಷಿಸಿದ್ದನು. ಮುಕ್ತ ವ್ಯಾಪಾರಿಗಳು ಈ ನೀತಿಯನ್ನು ಸ್ವಾಗತಿಸಿದರು. ಕಾರಣ ಬ್ರಿಟಿಶರಿಗೆ ನಿಷ್ಠವಾದ ಭಾರತೀಯ ಸಮುದಾಯವೊಂದು ಸೃಷ್ಟಿಯಾಗುವಲ್ಲಿ ಇದು ಉಪಯೋಗಕ್ಕೆ ಬರುತ್ತದೆಂಬುದನ್ನು ಕಂಡುಕೊಂಡರು.

೧೮ನೇ ಶತಮಾನದ ಉತ್ತರಾರ್ಧ-೧೯ನೇ ಶತಮಾನದ ಪೂರ್ವಾರ್ಧದಲ್ಲಿ ಯುರೋಪಿನಲ್ಲಿ ಉಂಟಾದ ಔದ್ಯೋಗಿಕ ಮತ್ತು ವೈಜ್ಞಾನಿಕ ಕ್ರಾಂತಿಯ ಪರಿಣಾಮವಾಗಿ ಆಧುನಿಕತೆಯ ಪರಿಕಲ್ಪನೆ ಭಾರತಕ್ಕೆ ಪ್ರವೇಶಿಸಿತು. ಯುರೋಪಿನಲ್ಲಿ ಉಂಟಾದ ಔದ್ಯೋಗಿಕ ಸುಧಾರಣೆಗಳು ಭಾರತದಲ್ಲಿಯೂ ಕಾಣಬರತೊಡಗಿದವು. ಅನೇಕ ಆಧುನಿಕ ಯಂತ್ರಗಳು, ಸಂಚಾರ ಸಾಧನಗಳು ಅಚ್ಚರಿಯ ವಿಷಯಗಳಾದವು. ಯುರೋಪಿಯನ್ನರ ವಿಚಾರಗಳು ಭಾರತೀಯ ಮನೋಭಾವವನ್ನು ಬದಲಿಸುವಲ್ಲಿ ಪ್ರಭಾವ ಬೀರಿದವು. ಮುದ್ರಣ ಯಂತ್ರದಿಂದಾಗಿ ಭಾರತದ ಶೈಕ್ಷಣಿಕ ಮತ್ತು ಸಾಹಿತ್ಯಕ ಕ್ಷೇತ್ರಗಳಲ್ಲಿ ವರದಾನವಾಗಿ ಬಳಕೆಯಾಯಿತು. ಮಿಷನರಿಗಳು ಸ್ವಮತ ಕಾರ್ಯಾಚರಣೆಯಲ್ಲಿ ಮುದ್ರಣ ಯಂತ್ರವನ್ನು ಬಳಸಿ ಭಾರತದ ಶಿಕ್ಷಣ ಕ್ಷೇತ್ರದಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ನೇರವಾಗಿ ಪ್ರವೇಶವನ್ನು ಗಿಟ್ಟಿಸಿದವು. ಮುಖ್ಯವಾಗಿ ಬಾಸೆಲ್, ವೆಸ್ಲಿಯನ್ ಮತ್ತು ಲಂಡನ್ ಮಿಷನರಿಗಳು ಧರ್ಮ ಪ್ರಸರಣ ಚಟುವಟಿಕೆಗಳಿಂದ ಭಾರತೀಯ ಸಮಾಜದ ಮೇಲೆ ತಮ್ಮ ಪ್ರಭಾವ ಬೀರಲು ಪ್ರಯತ್ನಿಸಿದವು.

ವಾಣಿಜ್ಯೋದ್ಯಮದ ಉದ್ದೇಶಕ್ಕಾಗಿ ಭಾರತವನ್ನು ಪ್ರವೇಶಿಸಿದ ಆಂಗ್ಲರು ಕ್ರಮೇಣ ಇಲ್ಲಿನ ರಾಜಕೀಯದಲ್ಲಿ ಹಸ್ತಕ್ಷೇಪ ಮಾಡತೊಡಗಿದರು. ೧೮೫೭ರ ಸಿಪಾಯಿದಂಗೆಯ ಪರಿಣಾಮವಾಗಿ ಈಸ್ಟ್ ಇಂಡಿಯಾ ಕಂಪನಿಯ ಆಡಳಿತವು ಕೊನೆಗೊಂಡು, ಭಾರತದ ಅಧಿಕಾರದ ಸೂತ್ರವು ನೇರವಾಗಿ ಇಂಗ್ಲೆಂಡ್‌ನ ವಿಕ್ಟೋರಿಯ ರಾಣಿಗೆ ಹಸ್ತಾಂತರವಾಯಿತು. ಭಾರತೀಯರ ಜನಸಂಖ್ಯೆ, ರಾಜಕೀಯ ವಿಸ್ತಾರ, ಚರಿತ್ರೆಯ ದಾಖಲೆಗಳ ಪರಿಷ್ಕರಣೆ, ಸಮಾಜಿಕ ಜೀವನ, ಶೈಕ್ಷಣಿಕ-ಸಾಂಸ್ಕೃತಿಕ ಸ್ಥಿತಿಗತಿಗಳನ್ನು ಅಧ್ಯಯನ ಮಾಡುವುದು ಅಗತ್ಯವಿತ್ತು. ಹಾಗೆ ಕೈಗೊಂಡ ಅಧ್ಯಯನಗಳಿಂದ ದೇಶದ ಜಾತಿ ಪದ್ಧತಿ, ವಿವಿಧ ಆಚರಣೆಗಳು, ಕೆಲವು ಮೂಢ ನಂಬಿಕೆಗಳು, ದೇಶದ ಅರ್ಧಭಾಗದಷ್ಟಿದ್ದ ಮಹಿಳೆಯರಿಗೆ ಒದಗಿದ್ದ ಕೆಳದರ್ಜೆಯ ಸ್ಥಾನಮಾನ ಮುಂತಾದ ಸಂಗತಿಗಳು ಗೋಚರಿಸತೊಡಗಿದವು. ಸಾಂಸ್ಕೃತಿಕ ಮಾಹಿತಿಗಳನ್ನು ಆಧಾರವಾಗಿಟ್ಟುಕೊಂಡ ಬ್ರಿಟಿಶ್ ಸರಕಾರದ ಅಧಿಕಾರಿಗಳು ಭಾರತವು ಎಲ್ಲ ಕ್ಷೇತ್ರಗಳಲ್ಲಿ ಹಿಂದುಳಿದಿದೆಯೆಂದು, ಮಹಿಳೆಯರಿಗೆ ಅನ್ವಯಿಸಿದಂತೆ ಬಾಲ್ಯವಿವಾಹ, ವಿಧವಾ ಪದ್ಧತಿ, ಸತಿ ಹೋಗುವುದು ಮುಂತಾದ ಅನಿಷ್ಟ ಪದ್ಧತಿಗಳಿದ್ದು, ಇಂತಹವುಗಳನ್ನು ಹೋಗಲಾಡಿಸಿ ದೇಶವನ್ನು ಸುಭಿಕ್ಷ ಸ್ಥಿತಿಗೆ ತಾವು ತರುತ್ತೇವೆಂಬ ಭ್ರಮೆಯನ್ನು ಭಾರತೀಯರಲ್ಲಿ ಮೂಡಿಸಲು ಪ್ರಯತ್ನಿಸತೊಡಗಿದರು. ಭಾರತದ ಆಡಳಿತದ ಅಂಕುಶವನ್ನು ಭದ್ರವಾಗಿ ಹಿಡಿಯಲು ಇಂಥ ಅನೇಕ ತಂತ್ರಗಳನ್ನು ರೂಪಿಸತೊಡಗಿದರು. ಆದರೆ ಅವರ ಆಡಳಿತದ ಹಿಮ್ಮತ್ತುಗಳು ಏನೇ ಇದ್ದರೂ ಭಾರತದಲ್ಲಿ ರಾಷ್ಟ್ರೀಯ ಭಾವೈಕ್ಯ ಉದಿಸಲು, ದೇಶದ ಪರಂಪರೆಯನ್ನು ತಿಳಿಯಲು, ಮುಖ್ಯವಾಗಿ ಮಹಿಳೆಯರ ಸುಧಾರಣೆ ಕಡೆಗೆ ಗಮನ ಕೊಡಲು ಸಾಧ್ಯವಾಯಿತು.

'ಎ ವ್ಯೂ ಆಫ್ ದಿ ಹಿಸ್ಟರಿ ಲಿಟರೇಚರ್ ಎಂಡ್ ಮೈಥಾಲಜಿ ಆಫ್ ದಿ ಹಿಂದೂಸ್' ಎಂಬ ಗ್ರಂಥದ ಮುನ್ನುಡಿಯಲ್ಲಿ ವಿಲಿಯಂ ವಾರ್ಡ್ "ಎಂತಹ ವಿಷಾದಕರ ಸಂಗತಿ! ಇಡೀ ಭಾರತದಲ್ಲಿ ಹೆಣ್ಣುಮಕ್ಕಳಿಗಾಗಿ ಒಂದೇ ಒಂದು ಹಿಂದೂ ಶಾಲೆಯಿಲ್ಲ! ಹಿಂದೂಗಳ ಶಾಸನಗಳು, ಆಚಾರಗಳು ಮಹಿಳಾ ಮನಸ್ಸಿನ ಬೆಳವಣಿಗೆಗೆ ಮಾರಕವಾಗಿವೆ. ವೈಧವ್ಯವೆನ್ನುವುದು ಹಿಂದೂ ಮಹಿಳೆಯೊಬ್ಬಳ ಅತ್ಯಂತ ಭಯಾನಕವಾದ ದುರ್ವಿಧಿ, ಆ ಭೀತಿ ಅವಳನ್ನು ಸದಾ ಕಾಡುತ್ತದೆ. ಜ್ಞಾನಾರ್ಜನೆ ಮಾಡುವ ಧೈರ್ಯ ಅವಳಿಗೆಲ್ಲಿಂದ ಬರಬೇಕು? ಬರೆಯಲು ಓದಲು ಬರದ ಐವತ್ತು ಮಿಲಿಯನ್ ಮಹಿಳೆಯರ ಜನಸಂಖ್ಯೆ ಇಲ್ಲಿದೆ" ('ಶಿಕ್ಷಣ-ಸಾಂಪ್ರದಾಯಿಕ ರೂಪದಿಂದ ಆಧುನಿಕ ರೂಪದವರೆಗೆ', ಕರ್ನಾಟಕ ಚರಿತ್ರೆ (ಕ್ರಿ.ಶ.೧೮೦೦-೧೯೦೦), ಪುಟ-೨೩೩) ಎಂದು ಹೇಳಿದ್ದಾನೆ. ಭಾರತದ ಬೇರೆ ಬೇರೆ ಕ್ಷೇತ್ರಗಳ ಅಧ್ಯಯನ ಕೈಗೊಂಡ ಪಾಶ್ಚಾತ್ಯ ತಜ್ಞರ ತಂಡ ಬ್ರಿಟಿಶ್ ಸರಕಾರಕ್ಕೆ ವರದಿ ಮಾಡಿತ್ತು.

ಬ್ರಿಟೀಶರಿಂದ ಬಿಡುಗಡೆ ಬಯಸುವ ನಾವೇ ನಮ್ಮವರಿಗೆ ಬಿಡುಗಡೆ ನೀಡಿಲ್ಲದ ಶೋಚನೀಯ ಪರಿಸ್ಥಿತಿ ಎದುರಾದಾಗ, ರಾಷ್ಟ್ರೀಯ ಆಂದೋಲನದ ಭಾಗವಾಗಿ ಸಾಮಾಜಿಕ ಪಿಡುಗಾಗಿರುವ ವೈಧವ್ಯ, ಬಾಲ್ಯವಿವಾಹ, ಅಸ್ಪೃಶ್ಯತೆ, ವರದಕ್ಷಿಣೆ ಮುಂತಾದ ಪದ್ಧತಿಗಳನ್ನು ಹೋಗಲಾಡಿಸುವ ನಿಟ್ಟಿನಲ್ಲಿ ಸಮಾಜ ಸುಧಾರಕರು ತಮ್ಮ ಗಮನವನ್ನು ಹರಿಸುವುದು ಅನಿವಾರ್ಯವಾಯಿತು.

**೩.೨.೧ ಬರಹಗಾರರ ಪರಿಚಯಾತ್ಮಕ ನೆಲೆ**

ವಸಾಹತುಶಾಹಿ ಸಂದರ್ಭದಲ್ಲಿ ಶಿಕ್ಷಣವನ್ನು ಪಡೆದ ವಿದ್ಯಾವಂತ ಮೇಲ್ವರ್ಗದ ಪುರುಷರು, ಸಂಪ್ರದಾಯದ ಹೆಸರಿನಲ್ಲಿ ಮಹಿಳೆಯರಿಗೆ ಒದಗಿದ್ದ ದಾರುಣ ಸ್ಥಿತಿಗೆ ಮರುಗಿದರು. ಬಾಲ್ಯವಿವಾಹವಾಗಿರಬಹುದು, ವಿಧವೆಯರಿಗೆ ವಿಧಿಸಿದ್ದ ನಿರ್ಬಂಧಗಳಿರಬಹುದು, ಇಂತಹ ಸಂಪ್ರದಾಯಗಳನ್ನು ಮುರಿಯಲು ಅಸಾಧ್ಯವಾದಾಗ, ಅದಕ್ಕೆ ಪರ್ಯಾಯವಾದ ಸಹಕಾರಗಳನ್ನು ನೀಡಲು ಮುಂದಾದರು. ಶಿಕ್ಷಣ ಕೊಡಿಸುವುದು ಅವರ ಮುಂದಿದ್ದ ಮೊದಲ ಬೆಳಕಿಂಡಿಯಾಯಿತು. ದೊರೆತ ಅವಕಾಶದಲ್ಲಿ ಮಹಳೆಯರ ಕೈ ಲೇಖನಿ ಹಿಡಿಯಿತು. ಬರವಣಿಗೆಯಿಂದ ಕುಟುಂಬಕ್ಕೆ ಯಾವ ಅಡ್ಡಿಯೂ ಇಲ್ಲವೆಂದು ಗೊತ್ತಾದ ಮೇಲೆ ಅವರ ಬರಹಗಳಿಗೆ ಉತ್ತೇಜನವೂ ದೊರೆಯಿತು.

ಬರಹಕ್ಕೆ ತಮ್ಮನ್ನು ಸಂಪೂರ್ಣವಾಗಿ ಒಪ್ಪಿಸಿಕೊಂಡಿದ್ದ ಕರ್ನಾಟಕದ ಮೊದಲ ಸಮರ್ಥ ಕಾದಂಬರಿಗಾರ್ತಿಯಾದ ಕೀರ್ತಿಗೆ ಪಾತ್ರರಾದ ನಂಜನಗೂಡು ತಿರುಮಲಾಂಬ, ಆರ್.ಕಲ್ಯಾಣಮ್ಮನವರು ಬಾಲ್ಯದಲ್ಲೇ ವೈಧವ್ಯದ ಕೂಪಕ್ಕೆ ಬಲಿಯಾದವರು. ಅದೃಷ್ಟವಶಾತ್ ತಮ್ಮ ಅನುಭವದ ಲೋಕವನ್ನು ಸಮರ್ಥವಾಗಿ ಅಭಿವ್ಯಕ್ತಿಸಲು, ಬರವಣಿಗೆಗೆ ಮುಂದಾದರು. ಸ್ವಾತಂತ್ರ್ಯ ಪೂರ್ವದಲ್ಲಿ ಬರಹಕ್ಕಿಳಿದ ಉಳಿದ ಬರಹಗಾರ್ತಿಯರಾದ ತಿರುಮಲೆ ರಾಜಮ್ಮ, ಬೆಳಗೆರೆ ಜಾನಕಮ್ಮ, ಸರಸ್ವತಿಬಾಯಿ ರಾಜವಾಡೆ, ಶ್ಯಾಮಲಾದೇವಿ ಬೆಳಗಾಂವ್‌ಕರ್‌ರವರು ಸಾಹಿತ್ಯ ರಚನೆಗೆ ತೊಡಗಲು ಕುಟುಂಬದಲ್ಲಿದ್ದ ಪ್ರೇರಣೆ ಯಾವ ರೀತಿಯದಾಗಿತ್ತೆಂಬುದನ್ನು ತಿಳಿಯುವ ಪುಟ್ಟ ನೋಟ.

## ಅ) ಶಾಂತಾಬಾಯಿ ನೀಲಗಾರ

ಶಾಂತಾಬಾಯಿಯವರ ಜೀವನದ ಬಗ್ಗೆ ಹಾಗೂ ಇತರೆ ಬರಹಗಳ ಬಗ್ಗೆ ಹೆಚ್ಚಿನ ಮಾಹಿತಿಗಳು ಲಭ್ಯವಾಗಿಲ್ಲ. ಇವರನ್ನು ಕರ್ನಾಟಕದ ಮೊದಲ ಮಹಿಳಾ ಕಾದಂಬರಿಕಾರರೆಂದು ಇತ್ತೀಚೆಗೆ ಗುರುತಿಸಲಾಗಿದೆ. ತಿರುಮಲಾಂಬರವರ 'ಸುಶೀಲೆ' ಪ್ರಕಟವಾಗುವ ಐದು ವರ್ಷಗಳ ಮೊದಲೇ 'ಸದ್ಗುಣಿ ಕೃಷ್ಣಾಬಾಯಿ' ಪ್ರಕಟವಾಗಿದೆ. ವಿಜಯಾ ದಬ್ಬೆಯವರು ನೀಡುವ ಮಾಹಿತಿಯಂತೆ– ಶಾಂತಾಬಾಯಿಯ ತವರಿನವರು ಮೂಲತಃ ಕರ್ನಾಟಕದವರಾಗಿದ್ದರೂ, ವೃತ್ತಿಯ ಕಾರಣದಿಂದ ಮಹಾರಾಷ್ಟ್ರದಲ್ಲಿ ನೆಲೆಸಿದ್ದರು. ಅಲ್ಲಿ ಉಂಟಾದ ಪುರೋಗಾಮಿ ದೃಷ್ಟಿಕೋನದ ಪರಿಣಾಮವಾಗಿ ಶಾಂತಾಬಾಯಿಯವರನ್ನು, ತಂದೆ–ತಾಯಿಗಳು ಉನ್ನತ ವಿದ್ಯಾಭ್ಯಾಸದವರೆಗೆ ಅಭ್ಯಾಸ ಮಾಡಿಸಿದ್ದಾರೆ. ಶಾಂತಾಬಾಯಿಯವರು ಶಿಕ್ಷಣ ಪೂರೈಸಿದ ನಂತರ ಬಾಲಕಿಯರ ಶಾಲೆಯ ಮುಖ್ಯೋಪಾಧ್ಯಾಯಿನಿಯಾಗಿ ಕಾರ್ಯ ನಿರ್ವಹಿಸಿದ್ದಾರೆ.

ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘವು, 'ಸಂತುಷ್ಟೋ ಭಾರ್ಯಯಾ ಭರ್ತಾ' ಎಂಬ ಮನುವಿನ ಉಕ್ತಿಯನ್ನು ಕುರಿತು ಲೇಖನ ಆಹ್ವಾನಿಸಿದಾಗ, ಕೊಟ್ಟ ವಿಷಯದ ಚೌಕಟ್ಟಿನಲ್ಲಿ ಕಾದಂಬರಿಯನ್ನು ರಚಿಸಿದ್ದಾರೆ. "ಸ್ತ್ರೀ ಶಿಕ್ಷಣವು ಅವಶ್ಯವಾದದ್ದೂ, ಬುನಾದಿಯಿಂದ ಬಂದಂಥಾದ್ದೂ ಎಂದು ಇಲ್ಲಿ ಹೇಳುವ ಕಾರಣವಿಲ್ಲ. ಎಷ್ಟೋ ಸ್ತ್ರೀಯರು ಸಕಲ ವಿದ್ಯಾ ಪಾರಂಗತರಾಗಿಯೂ, ಸುಶೀಲೆಯರಾಗಿಯೂ, ಪತಿಗಳೊಡನೆ ಸ್ವಾತಂತ್ರ್ಯದಿಂದ ಮಾತಾಡುತ್ತಲೂ, ದೇಶ ಸಂಚಾರ ಮಾಡುತ್ತಲೂ ಸಭೆಗಳಲ್ಲಿ ಸಹ ವಾದ, ವಿವಾದ ಮಾಡುತ್ತಾ ಕೀರ್ತಿ ಪಡೆಯುತ್ತಿದ್ದರೆಂದು ವೇದಗಳಲ್ಲಿಯೂ, ಪುರಾಣಗಳಲ್ಲಿಯೂ ಹೇಳಲ್ಪಟ್ಟಿರುತ್ತದೆ" (ಸದ್ಗುಣಿ ಕೃಷ್ಣಾಬಾಯಿ, ಪುಟ–೦೯) ಎಂಬ ಮಾತುಗಳು ಮಹಿಳೆ ಶಿಕ್ಷಣ ಪಡೆಯಬೇಕಾದ ಜರೂರತ್ತನ್ನು ಪ್ರತಿಪಾದಿಸಿವೆ. ಅಲ್ಲದೆ ವೇದ, ಪುರಾಣ, ಶಾಸ್ತ್ರಗಳ ಉಲ್ಲೇಖಗಳನ್ನು ನೀಡಿ, ಸ್ತ್ರೀ ವಿದ್ಯಾಭ್ಯಾಸಕ್ಕೆ ಯೋಗ್ಯಳಾಗಿದ್ದಾಳೆಂದು ಮನಗಾಣಿಸಲು ಪ್ರಯತ್ನಿಸಿದ್ದಾರೆ. ಪತಿಯ ಕಾರ್ಯಗಳಲ್ಲಿ ಭಾಗಿಯಾಗಲು, ಕುಟುಂಬದ ಜವಾಬ್ದಾರಿಯನ್ನು ಸಮರ್ಥವಾಗಿ ನಿರ್ವಹಿಸಲು ಸ್ತ್ರೀ ವಿದ್ಯಾವಂತಳಾಗಬೇಕೆಂದಿದ್ದಾರೆ. ಸಮುದ್ರಯಾನ ಮಹಾಪಾಪವೆಂಬ ಮಡಿವಂತಿಕೆಯ ಪ್ರಶ್ನೆ ವಾದ–ವಿವಾದಕ್ಕೆ ಈಡಾದ ಸಂದರ್ಭದಲ್ಲಿ ಶಾಂತಾಬಾಯಿಯವರು, ಮಾಧವರಾಯನಷ್ಟೇ ಅಲ್ಲ, ಕೃಷ್ಣಾಬಾಯಿಯನ್ನೂ ಹಡಗು ಹತ್ತಿಸುವ ಸಾಹಸಕ್ಕೆ ಮುಂದಾಗಿದ್ದಾರೆ. ಪರದೇಶದಲ್ಲಾಗುತ್ತಿರುವ ಸುಧಾರಣೆಗಳನ್ನು ಭಾರತ ದೇಶದಲ್ಲಾಗುತ್ತಿರುವ ಮಂದಗತಿಯ ಸುಧಾರಣೆಗಳನ್ನು ಕಾದಂಬರಿಕಾರರು ಪರಸ್ಪರ ತೂಗಿ ನೋಡಿದ್ದಾರೆ.

ಮಹಿಳೆಯರಿನ್ನೂ ಬರಹಕ್ಕಿಳಿಯದ ಸಂಕ್ರಮಣ ಸ್ಥಿತಿಯಲ್ಲಿ ಶಾಂತಾಬಾಯಿಯವರು ಕಾದಂಬರಿಯನ್ನು ರಚಿಸಿರುವುದು ಶ್ಲಾಘನೀಯ ಕಾರ್ಯವಾಗಿದೆ. ಶಿಕ್ಷಣವನ್ನು ಪಡೆದ 'ಆಧುನಿಕ' ಮಹಿಳೆಯೊಬ್ಬಳು ಕಾದಂಬರಿಯ ಮೂಲಕ ನಮಗೆ ದಕ್ಕುತ್ತಾಳೆ.

## ಆ) ನಂಜನಗೂಡಿನ ತಿರುಮಲಾಂಬ

ತಿರುಮಲಾಂಬರವರ ತಂದೆ ವೆಂಕಟಕೃಷ್ಣ ಅಯ್ಯಂಗಾರರು ವಕೀಲಿ ವೃತ್ತಿ ಹಿಡಿದವರು. ಜತೆಗೆ ಸಮಾಜ ಸೇವಾ, ಸಮಾಜ ಜಾಗೃತ ಕಾರ್ಯಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಪುಸ್ತಕ ಭಂಡಾರ, ವಾಚನ ಶಾಲೆ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದರು. ೧೮೯೧ರಲ್ಲಿ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿ; ಎಕನಾಮಿಕ್ ಕಾನ್ಫರೆನ್ಸ್, ಲೆಜಿಸ್ಲೇಟಿವ್ ಕೌನ್ಸಿಲ್ ಮೊದಲಾದವುಗಳ ಸದಸ್ಯರಾಗಿ; ಪ್ರೌಢಶಾಲೆಯ ಅಧ್ಯಕ್ಷರಾಗಿ; ಪತ್ರಿಕೆಗಳ ಪ್ರೇರಕ ಶಕ್ತಿಯಾಗಿದ್ದರು. 'ಅರ್ಥ ಸಾಧನ ಕ್ರಮ', 'ಬುಕರ್ ಟಿ ವಾಷಿಂಗ್‌ಟನ್‌ರವರ ಚರಿತ್ರೆ', 'ವಿದ್ಯಾರ್ಥಿ ಕರಭೂಷಣ' ಪ್ರಬಂಧ, 'ಹರಿಶ್ಚಂದ್ರ ಚರಿತ್ರೆ', 'ಚೋರ ಗ್ರಹಣ ತಂತ್ರ' ಮುಂತಾದ ಪತ್ತೇದಾರಿ ಕಾದಂಬರಿಗಳನ್ನು ರಚಿಸಿದ ಬರಹಗಾರರೂ ಆಗಿದ್ದರು.

ಮಗಳು ತಿರುಮಲಾಂಬ ವಿಧವೆಯಾದಾಗ, ನೊಂದ ವೆಂಕಟಕೃಷ್ಣ ಅಯ್ಯಂಗಾರ್‌ಗೆ ಉಳಿದ ಮಾರ್ಗಗಳಿಗಿಂತ, ವಿದ್ಯೆಯನ್ನು ನೀಡುವ ಉಪಾಯ ಸೂಕ್ತವಾಗಿ ಕಂಡಿರಬೇಕು. ಮನೆಯಲ್ಲೇ ಅನೇಕ ಶಾಸ್ತ್ರ ಪುರಾಣ ಗ್ರಂಥಗಳನ್ನು; ಆಲೂರು ವೆಂಕಟರಾಯರ, ಬೆನಗಲ್ ರಾಮರಾವ್, ವೆಂಕಟರಂಗೋ ಕಟ್ಟಿ, ಮುಗುದಂ ಶ್ರೀನಿವಾಸರಾವ್, ಕೆರೂರು ವಾಸುದೇವಾಚಾರ್, ಮುದವೇಡಿಕರ್ ಮುಂತಾದ ಹಿರಿಯರ ಕೃತಿಗಳ–ಲೇಖನಗಳ ವಾಚನಕ್ಕೆ ಅಯ್ಯಂಗಾರರು ಅವಕಾಶ ಮಾಡಿಕೊಟ್ಟರು. ತಿರುಮಲಾಂಬರವರ ವೈಧವ್ಯದ ಸ್ಥಿತಿಯಲ್ಲಿ ಆಧ್ಯಾತ್ಮದೆಡೆ ಸೆಳೆಯುವ ಭಕ್ತಿಗೀತೆಯ ಸೃಷ್ಟಿಗೆ ಕಾರಣವಾಯಿತು. ಮುಂದೆ ದೇಶದೆಲ್ಲೆಡೆ ನಡೆಯುವ ವರ್ತಮಾನಗಳನ್ನು ಗಂಭೀರವಾಗಿ ಚಿಂತಿಸುವ ಲೇಖಕಿಯಾದರು.

## ಇ) ಆರ್.ಕಲ್ಯಾಣಮ್ಮ

"ಎಲ್ಲ ಬಾಲ ವಿಧವೆಯರಂತೆ ತಲೆಯ ಮೇಲೆ ಕೈ ಹೊತ್ತು, ನನ್ನ ಹಣೆಬರಹ ಹೀಗಾಯಿತೇ–ಎಂದು ಅಳುತ್ತ ಕತ್ತಲೆಯ ಕೋಣೆಯಲ್ಲಿ ಕುಳಿತು ಜೀವಮಾನವನ್ನು ಕಳೆಯುವುದಕ್ಕಿಂತ ಆ ವಿಧವೆಯರ ಏಳಿಗೆಗಾದರೂ ಇರುವ ಬುದ್ಧಿಯನ್ನುಪಯೋಗಿಸಿ ದುಡಿಯೋಣವೆಂದು" (ನೆಲದ ಮರೆಯ ನಿಧಾನ ಪುಟ–೦೯) ಮಾಡಿದ ಪ್ರತಿಜ್ಞೆಯೇ ಸಾಹಿತ್ಯ ರಚನೆ–ಸಮಾಜ ಸೇವೆಯ ಬದ್ಧತೆಗೆ ಕಾರಣವಾಯಿತು.

ತಂದೆ ಎಸ್.ರಾಮಸ್ವಾಮಿ ಅಯ್ಯಂಗಾರ್ ಮೈಸೂರು ಸರಕಾರದಲ್ಲಿ ಕೆಲಸ ನಿರ್ವಹಿಸುತ್ತಿದ್ದವರು. ಎಂ.ಎ.ಪಿಎಚ್.ಡಿ, ಎಫ್.ಎ.ಎಸ್.ಬಿಯಲ್ಲಿ ಪದವಿ ಗಳಿಸಿರುವ ಡಾ.ಎಸ್.ಕೃಷ್ಣಸ್ವಾಮಿ ಅಯ್ಯಂಗಾರ್, ಕಲ್ಯಾಣಮ್ಮನವರ ಚಿಕ್ಕಪ್ಪನಾಗಿದ್ದರು. ಇವರು ಮೈಸೂರು, ಮದರಾಸು ವಿಶ್ವವಿದ್ಯಾನಿಲಯಗಳಲ್ಲಿ ಚರಿತ್ರೆಯ ಪ್ರಾಧ್ಯಾಪಕರಾಗಿದ್ದವರು. ಭಾರತ ಸರಕಾರದ ಭೂಪರಿಶೋಧಕ ಶಾಖೆಯ ಗೌರವ ಸದಸ್ಯರೂ ಆಗಿದ್ದ ವಿದ್ಯಾವಂತರಾಗಿದ್ದರು. ಮನೆಯಲ್ಲೇ ಕುಳಿತು ಓದಲು ತಮಿಳು, ಸಂಸ್ಕೃತ, ಕನ್ನಡ ಪ್ರಾಚೀನ ಗ್ರಂಥಗಳನ್ನು ತಂದು ಕೊಟ್ಟಾಗ ಅಧ್ಯಯನ ಮಾಡತೊಡಗಿದರು. ಇವರ ಎಲ್ಲಾ ಕೃತಿಗಳ ಬೆನ್ನಿಗೆ

ಪ್ರಾಚೀನ ಗ್ರಂಥಗಳ, ಶಾಸ್ತ್ರ ಪುರಾಣ, ಇತಿಹಾಸಗಳ ಛಾಯೆ ಇರುವುದು ಈ ಕಾರಣದಿಂದಲೇ ಎಂದು ಕಾಣುತ್ತದೆ. ೨೧ನೇ ವರ್ಷದ ತಾರುಣ್ಯದಲ್ಲಿ 'ಶ್ರೀ ಶಾರದಾ ಸ್ತ್ರೀ ಸಮಾಜ'ವನ್ನು ಸ್ಥಾಪಿಸುವಲ್ಲಿ ಸಮಾಜ ಸುಧಾರಣೆಯ ಮನೋಭಾವವುಳ್ಳ ಚಿಕ್ಕಪ್ಪನವರು ಪ್ರೇರಕ ಶಕ್ತಿಯಾಗಿದ್ದರು. ಹಾಗೆಯೇ ಮೈಸೂರು ಮಹಾರಾಜರ ಮನೆತನದ ಪ್ರೋತ್ಸಾಹ ಇದ್ದೇ ಇರುತ್ತಿತ್ತು.

**ಈ) ಬೆಳಗೆರೆ ಜಾನಕಮ್ಮ**

ಅಣ್ಣ ಸೀತಾರಾಮ ಶಾಸ್ತ್ರಿ(ಕ್ಷೀರ ಸಾಗರ) ನಗೆ ನಾಟಕಗಳನ್ನು ಬರೆದು ಪ್ರಸಿದ್ಧರಾದವರು. ತಮ್ಮ ಕೃಷ್ಣಶಾಸ್ತ್ರಿ, ತಂಗಿ ಪಾರ್ವತಮ್ಮ ಕೂಡ ಸಾಹಿತ್ಯ ರಚನೆಯಲ್ಲಿ ತೊಡಗಿದವರು. ಬಡತನದ ಮಧ್ಯೆ ಬರಹದ ಸಂಪತ್ತು ಹೆಚ್ಚಿತ್ತು. ತಂದೆ ಚಂದ್ರಶೇಖರ ಶಾಸ್ತ್ರಿಗಳು ಜನಿವಾರವನ್ನು ಕಿತ್ತೆಸೆದು ಜಾತಿಭೇದಗಳನ್ನು ಮೀರಲು ಪ್ರಯತ್ನಿಸಿದವರು. ಮಗಳು ಜಾನಕಮ್ಮ ಕಟ್ಟಿ ಹಾಡುತ್ತಿದ್ದ ಹಾಡುಗಳನ್ನು ಬರೆದಿಡಲು ಪ್ರೋತ್ಸಾಹಿಸಿದವರು ಇವರೇ. ಬೇರೆಯವರೆದುರಿಗೆ ಹೆಮ್ಮೆಯಿಂದ ಆಕೆಯ ಪದ್ಯಗಳನ್ನು ಹಾಡುತ್ತಿದ್ದರು. ಮನೆಗೆ ಬರುತ್ತಿದ್ದ ಜಿ.ಪಿ.ರಾಜರತ್ನಂ, ಕೋ.ಚನ್ನಬಸಪ್ಪನವರ ಪ್ರೇರಣೆಯೂ ಇರುತ್ತಿತ್ತು.

ತವರು ಮನೆಯಲ್ಲಿ ಪ್ರೋತ್ಸಾಹದ ವಾತಾವರಣವಿದ್ದರೆ, ಗಂಡ ಕೃಷ್ಣಶಾಸ್ತ್ರಿಯವರು ಸಾಹಿತ್ಯದ ಬಗ್ಗೆ ಆಸಕ್ತಿಯಿಲ್ಲದವರು. ಹೆಂಡತಿ ಜಾನಕಮ್ಮ ಹಾರ್ಮೋನಿಯಂ ಹಿಡಿದು ತಮ್ಮ ಕವಿತೆಗಳನ್ನು ಬೇರೆಯವರೆದುರು ಹಾಡುವುದನ್ನು ಅಷ್ಟಾಗಿ ಸಹಿಸದವರು. ಈ ಹತಾಶೆಯ ವಾತಾವರಣದ ನಡುವೆಯೇ ತಮ್ಮ ಆಸಕ್ತಿಯನ್ನು ಉಳಿಸಿಕೊಂಡವರು.

**ಉ) ತಿರುಮಲೆ ರಾಜಮ್ಮ**

ಇಂಗ್ಲಿಶ್ ವ್ಯಾಕರಣ, ಗಣಿತ, ಸಂಸ್ಕೃತ ವ್ಯಾಕರಣಗಳಲ್ಲಿ ಪಂಡಿತರೂ, ಪ್ರೌಢಶಾಲೆಯ ಉಪಾಧ್ಯಾಯರಾದ ರಾಘವಾಚಾರ್ಯರು ರಾಜಮ್ಮನವರ ತಂದೆಯಾಗಿದ್ದರು. ತಾಯಿ ಸೀತಮ್ಮ ಹಾಡುತ್ತಿದ್ದ ಕನ್ನಡ, ತೆಲುಗು ಹಾಡುಗಳು, ತಂದೆಯ ಸಂಸ್ಕೃತ ಶ್ಲೋಕಗಳಿಂದ ರಾಜಮ್ಮನವರು ಪ್ರೇರೇಪಿತರಾಗಿದ್ದರು. ಮದುವೆಯಾದ ನಂತರ ಪತಿ ತಿ.ತಾ.ಶರ್ಮರು ವಿದ್ಯಾಭ್ಯಾಸ ಪೂರೈಸಲು ತೆರಳಿದಾಗ, ರಾಜಮ್ಮನವರು ಆ ಸಮಯವನ್ನು ತಮ್ಮ ಸಾಹಿತ್ಯ ಓದು, ಕಾವ್ಯ ರಚನೆ, ಸಂಗೀತಾಭ್ಯಾಸಕ್ಕೆ ಸದುಪಯೋಗ ಮಾಡಿಕೊಳ್ಳಲು ಅನುಕೂಲವಾಯಿತು. ಕುಟುಂಬದ ಸದಸ್ಯರಂತಿದ್ದ ಕೈಲಾಸಂ ಅವರಲ್ಲಿ ಅಪಾರ ಅಭಿಮಾನ ಹೊಂದಿದ್ದರು. ವೀರೇಶಲಿಂಗಂ ಪಂತುಲು, ವೆಂಕಟಾಚಾರ್ಯರು, ಗಳಗನಾಥ ಮುಂತಾದವರ ಸಾಹಿತ್ಯಾಭ್ಯಾಸವನ್ನೂ ಕೈಗೊಂಡರು. ಕನ್ನಡದ ಭೀಷ್ಮರೆಂದೇ ಪ್ರಖ್ಯಾತರಾದ ತಿ.ತಾ.ಶರ್ಮರು ಪತ್ನಿ ರಾಜಮ್ಮನವರ ಸೃಜನಶೀಲ ಕಾರ್ಯಗಳಿಗೆ ಬೆಂಬಲವಾಗಿ ನಿಂತಿದ್ದರು.

**ಊ) ಸರಸ್ವತಿಬಾಯಿ ರಾಜವಾಡೆ**

ತಂದೆ ನಾರಾಯಣ್‌ರಾವ್‌ರವರು ಮಗುವೊಂದು ತಾಯಿ ಗರ್ಭದಲ್ಲಿ ಅಂಕುರಿಸಿದ ವಿಷಯ ಕೇಳಿ ವಿರಕ್ತಿ ಹೊಂದಿ ಮನೆ ಬಿಟ್ಟು ಹೋದರು. ಹೀಗಾಗಿ ಗಿರಿಬಾಲೆಯವರು 'ತಂದೆಯನ್ನು ತಿಂದ

ಮಾರಿ' ಎಂಬ ಬೈಗುಳಗಳ ಮಧ್ಯೆಯೇ, ಬುದ್ಧಿವಂತೆಯಾಗಿ ಬೆಳೆದವರು. ಮನೆಯಲ್ಲಿ ಕಿತ್ತು ತಿನ್ನುವ ಬಡತನ. ಸ್ಲೇಟು-ಬಳಪಗಳನ್ನು ಕೊಳ್ಳಲೂ ಹಣವಿಲ್ಲದಿದ್ದಾಗ ಗಿರಿಬಾಲೆಯವರು "ನನಗೆ ಈಗಲೂ ನೆನಪಿದೆ. ನಾನು ಎರಡನೇ ತರಗತಿಯಲ್ಲಿದ್ದಾಗ ನನ್ನ ಕುಂಬಳ ಕಾಯಿ ಅಕ್ಷರಗಳಲ್ಲಿ 'ಓ ದೇವರೇ, ನನಗೆ ತುಂಬ ಕಷ್ಟವಾಗಿದೆ. ನಾನು ತುಂಬಾ ಓದಬೇಕು. ನನಗೆ ಸ್ಲೇಟು, ಬಳಪ ಕೊಳ್ಳಲೂ ಹಣವಿಲ್ಲ. ನನಗೆ ತುಂಬಾ ಹಣ ಕೊಡು, ಕಲೆಕ್ಟರ್ ಗಂಡನನ್ನು ಕೊಡು' ಎಂದು ಅಂಚೆ ಡಬ್ಬಕ್ಕೆ ಹಾಕಿದೆ. ಆ ದೇವರು ನನ್ನ ಮೊರೆ ಕೇಳಿದ ನಾನು ಕೇಳಿದ್ದನ್ನು, ಬೇಡಿದ್ದನ್ನು ಕೊಟ್ಟ" (ಸರಸ್ವತಿಬಾಯಿ ರಾಜವಾಡೆ, ಪುಟ-೨೦) ಎಂದು ಹೇಳಿದ್ದು ಕನ್ನಡದ ಪ್ರಸಿದ್ಧ ಕತೆಗಾರ್ತಿಗೊದಗಿದ ಸ್ಥಿತಿಯನ್ನು ಸೂಚಿಸುತ್ತದೆ.

ಗಿರಿಬಾಲೆಯವರಿಗಿಂತ ೩೬ ವರ್ಷ ವಯಸ್ಸಿನ ಅಂತರದ ಪತಿ ರಾಯಶಾಸ್ತ್ರಿ ರಾಜವಾಡೆಯವರು ಅಕೌಂಟೆಂಟ್ ಜನರಲ್ ಹುದ್ದೆ ನಿರ್ವಹಿಸಲು ಸಿಂಗಪುರದಲಿದ್ದಾಗ, ಗಿರಿಬಾಲೆಯವರಿಗೆ ಸಮಯ ಕಳೆಯುವುದೇ ಕಷ್ಟವಾಗಿತ್ತು. ಮನೆಗೆ ಯಾರೂ ಬರುವಂತಿರಲಿಲ್ಲ. ಅವರಿಗೂ ಎಲ್ಲೂ ಹೋಗಲು ಅನುಮತಿಯಿಲ್ಲದ ವಾತಾವರಣದಲ್ಲಿ ಅಂದಿನ ಪ್ರಸಿದ್ಧ ಪತ್ರಿಕೆಗಳಾದ 'ಸುಹಾಸಿನಿ', 'ಕಂಠೀರವ' ಇತ್ಯಾದಿ ಪತ್ರಿಕೆಗಳನ್ನು ಓದುತ್ತಿದ್ದರು. ಆಗಲೆ ಅವರಿಗೂ ಏನಾದರೂ ಬರೆಯಬೇಕೆಂಬ ಹಂಬಲ ಹುಟ್ಟಿದ್ದು. ಮನೆಯಲ್ಲೇ ಕುಳಿತು ಹಿಂದಿ, ತಮಿಳು, ಇಂಗ್ಲಿಶ್ ಭಾಷೆ ಕಲಿತು ಆಯಾ ಭಾಷೆಯ ಸಾಹಿತ್ಯವನ್ನು ಅಭ್ಯಾಸ ಮಾಡಿದ್ದರು. ಮನೆಯ ಹೊರಗಿನ ಚಟುವಟಿಕೆಗಳಿಗೆ ಹೇರಿದ ನಿರ್ಬಂಧಗಳ ಮಧ್ಯೆಯೇ ಗಿರಿಬಾಲೆ ಕತೆಗಾರ್ತಿಯಾಗಿ ಹೊರಹೊಮ್ಮಿದರು. ಪತಿಯ ನಿಷ್ಠೂರವನ್ನು ಕಟ್ಟಿಕೊಂಡು ತಮ್ಮ ಬರವಣಿಗೆಯನ್ನು ಮುಂದುವರೆಸಿದರು.

ಗೋವಿಂದ ಪೈಯವರ ಸಾಹಿತ್ಯದಿಂದ ಪ್ರೇರೇಪಿತರಾಗಿದ್ದ ಗಿರಿಬಾಲೆಯವರು ಅವರನ್ನು ತಮ್ಮ ಗುರುವೆಂದು ಭಾವಿಸಿದ್ದರು. ಪೈಯವರೂ ಇವರ ಲೇಖಕಿಯವರ ಕೌಟುಂಬಿಕ ಮತ್ತು ಸಾಹಿತ್ಯಿಕ ಚಟುವಟಿಕೆಗಳೆರಡರ ಬೆಂಬಲಕ್ಕೂ ತಮ್ಮ ಕೈ ಜೋಡಿಸಿದ್ದರು.

**೫) ಶ್ಯಾಮಲಾದೇವಿ ಬೆಳಗಾಂವ್‌ಕರ್**

ದುರದೃಷ್ಟವಶಾತ್ ಇವರ ಬಾಲ್ಯ, ಶಿಕ್ಷಣದ ಹೆಚ್ಚಿನ ವಿವರಗಳು ಅಲಭ್ಯವಾಗಿವೆ. ಸ್ವಾತಂತ್ರ್ಯ ಪೂರ್ವದ ಹೆಚ್ಚು ಲೇಖಕಿಯರು ಬ್ರಾಹ್ಮಣ ಸಮಾಜದ ಮಧ್ಯಮ ವರ್ಗದಿಂದ ಬಂದವರಾದರೆ, ಶ್ಯಾಮಲಾದೇವಿಯವರು ವೇಶ್ಯಾಕುಲದಿಂದ ಬಂದವರು. ಹಾಗಾಗಿ ಬೇರೆ ಲೇಖಕಿಯರಿಗಿಂತ ಶ್ಯಾಮಲಾದೇವಿಯವರ ಸಾಹಿತ್ಯ ಚಿಂತನೆಯ ಮಾರ್ಗ ಭಿನ್ನವಾಗಿದೆ. ಇವರ ಹೆಚ್ಚಿನ ಕತೆಗಳಿಗೆ ವೇಶ್ಯಾಕುಲ ಎದುರಿಸುವ ಸಮಸ್ಯೆಗಳೇ ಮುಖ್ಯ ವಸ್ತುವಾಗಿವೆ. ವೇಶ್ಯಾಕುಲವನ್ನು ಮುರಿದು ಶ್ಯಾಮಲೆಯವರನ್ನು ಮದುವೆಯಾದ ರಾಮಚಂದ್ರರಾಯರದು ಸುಧಾರಣಾ ಮನೋಭಾವ. ಜತೆಗೆ ಪತ್ನಿಯ ಬರವಣಿಗೆಗೆ ಮತ್ತು ಸಮಾಜಸೇವಾ ಕಾರ್ಯಗಳಿಗೆ ಬೆಂಬಲವಾಗಿ ನಿಂತಿದ್ದರು.

ಮೇಲಿನ ವಿವರಗಳು ಕೌಟುಂಬಿಕ ನೆಲೆ, ಮತ್ತು ಸಾಹಿತ್ಯ ವಲಯವು, ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮಹಿಳೆಯರು ತೊಡಗಿಕೊಳ್ಳಲು ಹೇಗೆ ಪೂರಕವಾಗಿದ್ದವು ಮತ್ತು ವ್ಯತಿರಿಕ್ತವಾಗಿದ್ದವು

ಎಂಬುದನ್ನು ವಿವರಿಸಲಾಗಿದೆ. ವಸಾಹತುಶಾಹಿ ಸಂದರ್ಭದಲ್ಲಿ ಉಂಟಾದ ಪ್ರಜ್ಞೆ, ಸಾಮಾಜಿಕ ಮತ್ತು ಸಾಹಿತ್ಯಿಕ ವಲಯಗಳಲ್ಲಿ ಮಹಿಳೆಯರು ಹೆಚ್ಚು ಹೆಚ್ಚು ಪಾಲ್ಗೊಳ್ಳುವಂತೆ ಮಾಡುವುದು ಅನಿವಾರ್ಯ ಸಂಗತಿಯಾಗಿತ್ತು. ಹಾಗಾಗಿಯೇ ವಿದ್ಯಾವಂತ ಮೇಲ್ಜಾತಿಯ ವರ್ಗವು ತಮ್ಮ ಕುಟುಂಬದಲ್ಲಿದ್ದ ಹೆಣ್ಣುಮಕ್ಕಳಿಗೆ ಮುಕ್ತವಾದ ಹೆಬ್ಬಾಗಿಲನ್ನು ತೆರೆಯದಿದ್ದರೂ, ಯುಕ್ತವೆಂದು ತೋರಿದ ಕಿಟಕಿಗಳನ್ನು ಧಾರಾಳ ತೆರೆದಿಟ್ಟರು. ಕಿಟಕಿಯಲ್ಲಿ ಕಂಡಷ್ಟು ಬೆಳಕಿನಲ್ಲಿಯೇ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮಹಿಳೆಯರ ಪ್ರವೇಶವಾಯಿತು.

**ಎ) ಕೊಡಗಿನ ಗೌರಮ್ಮ**

ಮೇಲು ಜಾತಿಯ ಸುಶಿಕ್ಷಿತ ಮಧ್ಯಮ ವರ್ಗದಲ್ಲಿ ಹುಟ್ಟಿ ಬೆಳೆದ ಗೌರಮ್ಮನವರು ಮಲೆನಾಡಿನ ಪರಿಸರದಲ್ಲಿ ಬೆಳೆದವರು. ಪ್ರೌಢಶಾಲೆಯವರೆಗೆ ವಿದ್ಯಾಭ್ಯಾಸ ಮಾಡಿದ ಗೌರಮ್ಮನವರು ತಮ್ಮ ಅಲ್ಪ ವಯಸ್ಸಿನಲ್ಲಿ ಅಪೂರ್ವ ಸಾಧನೆಯನ್ನು ಮಾಡಿದ್ದಾರೆ. ಗಾಂಧೀಜಿಯವರಿಂದ ಅಪಾರವಾಗಿ ಪ್ರಭಾವಿತವಾಗಿದ್ದ ಗೌರಮ್ಮನವರು, ತಮ್ಮ ಉಪವಾಸ ಸತ್ಯಾಗ್ರಹದಿಂದ ಗಾಂಧೀಜಿಯವರನ್ನು ಮನೆಗೆ ಬರುವಂತೆ ಮಾಡಿದರು. ತಮ್ಮ ಒಡವೆಗಳನ್ನು ಸ್ವ-ಇಚ್ಛೆಯಿಂದ ದಾನ ನೀಡಿದರು. ಗೌರಮ್ಮನವರು ಕೈಗೊಳ್ಳುವ ಕಾರ್ಯಗಳಿಗೆ ಪತಿ ಗೋಪಾಲಕೃಷ್ಣಯ್ಯನವರ ಸಹಕಾರವಿತ್ತು.

ಆರ್.ಕಲ್ಯಾಣಮ್ಮನವರೊಂದಿಗೆ ಸಂಪರ್ಕ ಹೊಂದಿದ್ದ ಗೌರಮ್ಮನವರಿಗೆ ಅಂದಿನ ಕಾಲದ ಬರಹಗಾರರಾಗಿದ್ದ ಪದ್ಮಾವತಿ ರಸ್ತೋಗಿ ಗೆಳತಿಯಾಗಿದ್ದರು. ಮಾಸ್ತಿ ಮತ್ತು ಬೇಂದ್ರೆಯವರ, ಶಿವರಾಮ ಕಾರಂತರ ಪರಿಚಯ ಮತ್ತು ಒಡನಾಟವಿತ್ತು. ಹೀಗಾಗಿ ಸಾಹಿತ್ಯ ಮತ್ತು ಸಾಂಸ್ಕೃತಿಕ ವಲಯದ ಚರ್ಚೆ, ಬದಲಾವಣೆಗಳು ಗೌರಮ್ಮನವರ ಬರವಣಿಗೆಗೆ ಪೂರಕವಾಗಿದ್ದವು. ಅವರ ಆಸಕ್ತಿ ಹಲವು ಕ್ಷೇತ್ರಗಳಲ್ಲಿ. ಅಂದರೆ, ಯಕ್ಷಗಾನ, ತಾಳಮದ್ದಲೆ, ಕುಮಾರವ್ಯಾಸ, ಉಮರ್ ಖಯ್ಯಾಮ್ ಕಾವ್ಯವನ್ನು ಗಮನಿಸಿದ್ದರು. ಜಾನಪದವೂ ಇವರ ಮುಖ್ಯ ಆಸಕ್ತಿಯಾಗಿದ್ದುದು, ಜನಪದ ಗೀತೆಗಳನ್ನು ಸಂಗ್ರಹಿಸಿರುವುದರ ಮೂಲಕ ತಿಳಿಯುತ್ತದೆ. ಜಮಖಂಡಿ, ಮಡಿಕೇರಿಯ ಸಾಹಿತ್ಯ ಸಮ್ಮೇಳನಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರು. ಇವರ ಒಂದು ಕತೆಗೆ ಉಡುಪಿ ಗೆಳೆಯರ ಬಳಗದಿಂದ ಚಿನ್ನದ ಪದಕವೂ ದೊರೆತಿತ್ತು.

ಅನೇಕ ಪ್ರಕಾರದ ಸಾಹಿತ್ಯ, ಸಾಹಿತಿಗಳ ಒಡನಾಡವನ್ನು ಬೆಳೆಸಿಕೊಂಡಿದ್ದ ಗೌರಮ್ಮನವರು, ಅಂದಿನ ಸುಧಾರಣಾವಾದಿ ನಿಲುವುಗಳಾದ ಮಹಿಳೆಯ ಶಿಕ್ಷಣ, ವರದಕ್ಷಿಣೆ, ವಿಧವಾ ಸಮಸ್ಯೆ, ಜಾತಿ ಸಂಘರ್ಷ ಮುಂತಾದ ಸಮಸ್ಯೆಗಳನ್ನು ತಮ್ಮ ಕತೆಗಳ ಮೂಲ ವಸ್ತುವಾಗಿರಿಸಿಕೊಂಡಿದ್ದಾರೆ. ಇವರ ಕತೆಗಳ ಆಸಕ್ತಿ ಇರುವುದು, ಹೆಣ್ಣಿನ ಸೂಕ್ಷ್ಮ ಸಂವೇದನೆಗಳ ಕಡೆಗೆ. ಇವರ ಕತೆಗಳನ್ನು ಮುಂದಿನ ಅಧ್ಯಾಯದಲ್ಲಿ ಪ್ರತ್ಯೇಕವಾಗಿ ಚರ್ಚಿಸಲಾಗಿದೆ.

### ೩.೨.೨ ರಾಷ್ಟ್ರೀಯತೆ

ರಾಷ್ಟ್ರೀಯತೆ ಎನ್ನುವುದು ಒಂದು ಭಾವನಾತ್ಮಕವಾದ ಮತ್ತು ಬೌದ್ಧಿಕ ಚಿಂತನೆಯ ನೆಲೆಯಾಗಿದೆ. ರಾಷ್ಟ್ರವು ಪ್ರಗತಿ ಹೊಂದಬೇಕೆಂಬ ಹಂಬಲ ಮತ್ತು ಆ ರಾಷ್ಟ್ರಕ್ಕಾಗಿ ಸೇವೆಯನ್ನು, ತ್ಯಾಗವನ್ನು ಸಲ್ಲಿಸಲು ಸಿದ್ಧವಾಗಿರುವ ಮನೋಧರ್ಮವನ್ನು ತಾಳಿದೆ. ರಾಷ್ಟ್ರ ಎನ್ನುವುದು ಕಣ್ಣಿಗೆ ಕಾಣುವುದಿಲ್ಲ. ತಾನಾಗಿಯೇ ನಮ್ಮ ಪ್ರಜ್ಞೆಯ ಮೇಲೆ ಅಚ್ಚೊತ್ತುವುದೂ ಇಲ್ಲ. ಇದರ ಇರವನ್ನು ಅಖಂಡ ರಾಷ್ಟ್ರದ ಏಕತ್ವವನ್ನು ಬರಹಗಾರರು ಮತ್ತು ಭಾಷಣಕಾರರು ಮನವರಿಕೆ ಮಾಡಿಕೊಡತೊಡಗಿದರು.

ಸ್ವಾತಂತ್ರ್ಯ ಪೂರ್ವದಲ್ಲಿ ನಮ್ಮ ರಾಷ್ಟ್ರವನ್ನು 'ಭರತಮಾತೆ', 'ಭಾರತ ಜನನಿ', 'ಭಾರತಿ' ಎಂದು ಕನ್ನಡಿಗರನ್ನು–ಕರ್ನಾಟಕವನ್ನು ಭಾರತಮಾತೆಯ ಮಕ್ಕಳೆಂದು ಗುರುತಿಸುವುದರ ಮೂಲಕ ಸಂಬಂಧ ಕಲ್ಪಿಸಲಾಗುತ್ತಿತ್ತು. ಸ್ವಾತಂತ್ರ್ಯದ ಕನಸನ್ನು ನನಸು ಮಾಡಲು ಇಂಥ ಭಾವನಾತ್ಮಕ ಸಂಬಂಧವನ್ನು ಹುಟ್ಟುಹಾಕುವುದು ಅನಿವಾರ್ಯವಾಗಿತ್ತು. ಪಾಶ್ಚಾತ್ಯರು ಪರಿಚಯಿಸಿದ ಯಂತ್ರಗಳ ಮಾದರಿ ನಮ್ಮ ದೇಶದಲ್ಲಿ ಈ ಹಿಂದೆಯೇ ಪ್ರಚಲಿತದಲ್ಲಿದ್ದವು. ವೇದಗಳಲ್ಲಿ ಹಬೆಯ ಯಂತ್ರಗಳ, ರೈಲುಗಳ, ಹಬೆಯ ದೋಣಿಗಳ, ಪುಷ್ಪಕ ವಿಮಾನಗಳನ್ನು ತಯಾರಿಸುವ ತಂತ್ರಜ್ಞಾನವಿತ್ತೆಂದು ಶಾಸ್ತ್ರಾಧಾರಗಳ ಪುರಾವೆಗಳನ್ನು ನೀಡಿ ದೇಶದ ಜನರನ್ನು ಉದ್ದೀಪಿಸಲಾಯಿತು.

'ರಾಷ್ಟ್ರೀಯತೆ ಎನ್ನುವುದು ನೆನಪುಗಳ ನಿರ್ಮಿತಿ' ಎಂದಿರುವ ಡಿ.ಆರ್. ನಾಗರಾಜ್ ರವರು "ರಾಷ್ಟ್ರೀಯತೆಯ ಉಗಮವೆಂದರೆ ಈ ಬಹುಮುಖೀ ವ್ಯಕ್ತಿತ್ವಗಳಲ್ಲಿ ಮೊದಲ ಬಾರಿಗೆ ಮುಖ್ಯ ಹಾಗೂ ದ್ವಿತೀಯಗಳೆಂಬ ತಾರತಮ್ಯ ಹುಟ್ಟಿ ಏಕಮುಖ ವ್ಯಕ್ತಿತ್ವದ ನಿರ್ಮಾಣವಾಗುತ್ತದೆ. ಭಾಷೆ, ಧರ್ಮ, ಸಂಸ್ಕೃತಿಗಳ ನೆಲೆಗಳಲ್ಲಿ ಜನಾಂಗವೊಂದರ ನೆನಪುಗಳನ್ನು ಆಯುವ ಮತ್ತು ಪುನರ್ ಸಂಘಟಿಸುವ ಒಂದು ಮಹಾನ್ ಪ್ರಕ್ರಿಯೆ ಪ್ರಾರಂಭವಾಗುತ್ತದೆ. ಎಲ್ಲೋ ಬಿಡಿಬಿಡಿಯಾಗಿ ಬೇರೆ ಬೇರೆ ಚೌಕಟ್ಟು ಮತ್ತು ಹಂದರಗಳಲ್ಲಿ ಮತ್ತು ವ್ಯವಸ್ಥೆಗಳಲ್ಲಿ ಅಡಕವಾಗಿದ್ದ ಹಾಗೂ ಚದುರಿ ಹೋಗಿದ್ದ ನೆನಪುಗಳನ್ನು ಒಂದು ನಿರ್ದಿಷ್ಟ ಸೂತ್ರಕ್ಕೆ ಪೋಣಿಸಲಾಗುತ್ತದೆ. ಹಳೆಯ ಸಂಗತಿಗಳನ್ನು ಹೊಸ ಅರ್ಥ ಮತ್ತು ಆಶಯಗಳಿಗೆ ತಕ್ಕಂತೆ ಜೋಡಿಸಿದಾಗ ಹೊಸ ಆಕಾರಗಳು ಹುಟ್ಟುತ್ತವೆ. ಹಳೆಯ ಸಾಂಸ್ಕೃತಿಕ, ಧಾರ್ಮಿಕ ನೆನಪುಗಳು ಹೊಸ ರಾಜಕೀಯ ಉದ್ದೇಶಗಳಿಗೆ ಅನುಗುಣವಾಗಿ ದುಡಿಯುತ್ತವೆ. ಹೀಗಾಗಿ ಆಧುನಿಕ ಸಮಾಜಗಳ ಎಲ್ಲ ಸಾಂಸ್ಕೃತಿಕ ಐಡೆಂಟಿಟಿಗಳೂ ನೆನಪುಗಳ ಪುನರ್ ಸಂಘಟನೆಯೇ. ಭಾರತ ರಾಷ್ಟ್ರೀಯತೆಯ ಉಗಮವೂ ಹೀಗೆಯೇ. ಕನ್ನಡ ರಾಷ್ಟ್ರೀಯತೆಯ ಉಗಮವೂ ಹೀಗೆಯೇ" (ಸಾಹಿತ್ಯ ಕಥನ, ಪುಟ–೨೮೩) ಎಂದು ವ್ಯಾಖ್ಯಾನಿಸಿದ್ದಾರೆ. ಭಾರತ, ಪಾಶ್ಚಾತ್ಯ ದೇಶಗಳ ಸಂಸ್ಕೃತಿಗಿಂತ ಉತ್ಕೃಷ್ಟವಾದುದು, ಭವ್ಯ ಇತಿಹಾಸವನ್ನು ಹೊಂದಿದೆ ಎಂಬುದನ್ನು ಸಾಬೀತು ಮಾಡಿಕೊಳ್ಳದ ವಿನಃ ರಾಷ್ಟ್ರೀಯ ಸಂಘಟನೆಯನ್ನು ಬಲಗೊಳಿಸಲು ಸಾಧ್ಯವಿರಲಿಲ್ಲ. "ಒಂದು ರಾಷ್ಟ್ರದ ಕಲ್ಪನೆ ಸಮಕಾಲೀನ ವ್ಯವಸ್ಥೆಯನ್ನು ಬದಲಾಯಿಸುವ ರಾಜಕೀಯವನ್ನು ಹುಟ್ಟು ಹಾಕುವಂತೆ ದೇಶದ ಗತಕಾಲದ ಬಗೆಗಿನ

ಒಂದು ಪರಿಕಲ್ಪನೆಯನ್ನು ಹುಟ್ಟು ಹಾಕುತ್ತದೆ. ರಾಷ್ಟ್ರದ ಪರಿಕಲ್ಪನೆ ಒಂದು ಕಡೆಗೆ ಭವಿಷ್ಯದಲ್ಲಿ ನಿಜವಾಗಬೇಕಾದ ಆದರ್ಶವಾಗಿದ್ದರೆ ಇನ್ನೊಂದು ಕಡೆಗೆ ದೇಶದ ಗತಕಾಲದ ಬಗ್ಗೆ ಒಂದು ಮಿಥ್- ಬದುಕಿನ ಜತೆಗೆ ಅರ್ಥಪೂರ್ಣವಾದ ಸಂಬಂಧಗಳನ್ನು ರೂಪಿಸಿಕೊಳ್ಳುವುದು ಸಾಧ್ಯವಾಗುತ್ತದೆ. ರಾಷ್ಟ್ರೀಯತೆಯ ಅದರ್ಶವನ್ನು ಇತಿಹಾಸದ ಮೂಲಕ ನೋಡುವ ಪ್ರಕ್ರಿಯೆ ಸ್ವಾತಂತ್ರ್ಯಪೂರ್ವ ಯುಗದಲ್ಲಿ ಸಹಜವಾಗಿತ್ತು" (ಅಮೂರ್ತತೆ ಮತ್ತು ಪರಿಸರ, ಪುಟ-೫೩)

ಹಾಗೆ ನೋಡಿದರೆ ಭಾರತದಲ್ಲಿ ಸ್ವಾತಂತ್ರ್ಯ ಚಳವಳಿಯ ತೀವ್ರ ಉತ್ಕರ್ಷದ ಪ್ರಸಂಗಗಳನ್ನು ಬಿಟ್ಟರೆ ಅಖಂಡವಾದ ರಾಷ್ಟ್ರೀಯ ಪ್ರಜ್ಞೆ ಮೂಡಿದ್ದೇ ಕಡಿಮೆ. ಏಕೆಂದರೆ, ಭಾರತವು ಇಂದಿಗೂ ಒಂದು ಅಖಂಡವಾದ, ಒಂದು ಧರ್ಮ-ಜಾತಿ-ವರ್ಗಗಳಿಂದ ಕೂಡಿದ ರಾಷ್ಟ್ರವಾಗಿಲ್ಲ.

ದೇಶದ ಎಲ್ಲ ಜನರನ್ನು ಒಂದುಗೂಡಿಸಲು ಮುಂದಾದಾಗ ಹಿಂದುಳಿದ ವರ್ಗಗಳ, ಜಾತಿಗಳ ಸಾಮಾಜಿಕ ಸಮಸ್ಯೆಗಳು ಆತಂಕವೊಡ್ಡಿದವು. ಬಡತನ ಅಸ್ಪೃಶ್ಯತೆ, ಬಾಲ್ಯವಿವಾಹ, ವೈಧವ್ಯದಿಂದುಂಟಾಗುವ ಪರಿಣಾಮಗಳನ್ನು ಗಮನಿಸಿ ಸುಧರಣಾ ಕಾರ್ಯಕ್ರಮಗಳನ್ನು ಕೈಗೆತ್ತಿಕೊಳ್ಳುವುದು ಸಮಾಜ ಸುಧಾರಕರಿಗೆ ಸವಾಲಾಗಿ ಪರಿಣಮಿಸಿತು.

ಇದರ ಜತೆಯಲ್ಲಿ ಸ್ವಾತಂತ್ರ್ಯದ ಹೋರಾಟಕ್ಕೆ ಮುಸ್ಲಿಮರ ಸಹಾಯವೂ ಬೇಕಾದಾಗ, ಹಿಂದೂ ಮುಸ್ಲಿಮರ ಭಾಯಿಭಾಯಿ ಸಂಬಂಧದ ಅವಶ್ಯಕತೆಯೂ, ಆಯಾ ಪ್ರಾದೇಶಿಕ ಜನರನ್ನು ಒಟ್ಟುಗೂಡಿಸಲು ಸ್ವಭಾಷಾ ಮೋಹವನ್ನು ಬೆಳೆಸುವುದು ರಾಷ್ಟ್ರೀಯತೆಯ ಅವಿಭಾಜ್ಯ ಅಂಶಗಳಾದವು. ಸ್ವಾತಂತ್ರ್ಯ ಆಂದೋಲನದಲ್ಲಿ ರಾಷ್ಟ್ರ ಪ್ರೇಮದೊಂದಿಗೆ ನಾಡುನುಡಿಯ ಅಭಿಮಾನಕ್ಕೂ ಒತ್ತು ನೀಡಲಾಯಿತು. ಬ್ರಿಟೀಶರ ಆಡಳಿತದಲ್ಲಿ ಕನ್ನಡ ಭಾಷೆಯನ್ನು ಆಡುವ ಜನರು ಹತ್ತಿಪ್ಪತ್ತು ಆಡಳಿತ ಘಟಕಗಳಲ್ಲಿ ಹಂಚಿಹೋಗಿದ್ದರು. ಇವುಗಳನ್ನು ಒಂದುಗೂಡಿಸುವುದು ಅಂದಿನ ಅಗತ್ಯ ಕ್ರಮವಾಗಿ ಕಂಡಿತು. ೧೯೦೫ರಿಂದ ೧೯೦೮ರವರೆಗೆ ಭುಗಿಲೆದ್ದ ಬಂಗಾಳ ವಿಭಜನಾ ವಿರೋಧಿ ರಾಷ್ಟ್ರೀಯ ಚಳುವಳಿಯ ಸಮಯದಲ್ಲಿ ರಾಷ್ಟ್ರೀಯ ಕಾಂಗ್ರೆಸ್ಸಿನ ತೀವ್ರಗಾಮಿ ಬಣದ ನಾಯಕರಾಗಿದ್ದ ಬಾಲಗಂಗಾಧರ ತಿಲಕರು ಒಂದೇ ಭಾಷೆಯನ್ನಾಡುವ ಜನರನ್ನೊಳಗೊಂಡ ಆಡಳಿತಾತ್ಮಕ ಪ್ರಾಂತ್ಯಗಳನ್ನು ರಚಿಸಬೇಕೆಂಬ ಬೇಡಿಕೆಗೆ ಬೆಂಬಲವನ್ನು ನೀಡಿದರು. ಗಾಂಧೀಜಿ ಕೂಡ ಕಾಂಗ್ರೆಸ್ ಸಂಘಟನೆಯ ಅಂಗರಚನೆಯನ್ನು ಭಾಷಾವಾರು ಪ್ರಾಂತ್ಯಗಳಾಗಿ ಪುನರ್ ವಿಂಗಡಿಸುವುದರಲ್ಲಿ ಕಾರ್ಯ ಚಟುವಟಿಕೆಗಳನ್ನು ರೂಪಿಸಿದರು.

೧೯೨೦ರಲ್ಲಿ ನಾಗಪುರದಲ್ಲಿ ನಡೆದ ರಾಷ್ಟ್ರೀಯ ಕಾಂಗ್ರೆಸ್‌ನ ಅಧಿವೇಶನವು ಭಾಷಾವಾರು ಪ್ರಾಂತ್ಯಗಳ ಬೇಡಿಕೆಯನ್ನು ಅನುಮೋದಿಸಿತಲ್ಲದೆ ತನ್ನ ಕಾಂಗ್ರೆಸ್ ಅಂಗ ರಚನೆಯನ್ನು ಭಾಷಾವಾರು ಪ್ರಾಂತ್ಯಗಳ ಅನುಸಾರವಾಗಿ ಪುನರ್ ಸಂಘಟಿಸಿತು. ಮಾತೃಭಾಷೆಗಳಲ್ಲಿ ಬೆಳೆದು ಬಂದ ಸಾಹಿತ್ಯ ಮತ್ತು ಪತ್ರಿಕೆಗಳು ಪ್ರಮುಖವಾದ ಪಾತ್ರವನ್ನು ನಿರ್ವಹಿಸಿದವು. ಭಾಷಾವಾರು ಪ್ರಾಂತ್ಯಗಳ ಹೋರಾಟದಲ್ಲಿ ಭಾಷಾ ಪ್ರಶ್ನೆಯನ್ನು, ಮುಂಚೂಣಿಯಲ್ಲಿರಿಸುವುದಕ್ಕೆ ಇವು ಸಹಾಯ ಮಾಡಿದವು.

"ಸಾಮಾಜಿಕ ಕ್ರಾಂತಿ ಇಲ್ಲದೆ ರಾಷ್ಟ್ರೀಯ ಚಳುವಳಿ ಪೂರ್ಣವಾಗುವುದಿಲ್ಲ. ಅದಕ್ಕಾಗಿ ವಿಚಾರ ಕ್ರಾಂತಿ ಮೊದಲು ಬೇಕು. ಆ ವಿಚಾರ ವೈಜ್ಞಾನಿಕ, ವಾಸ್ತವಿಕ ಜನತಾಭಿಮುಖಿವಾಗಿರಬೇಕು. ಸಮಾಜವಾದದತ್ತ ವಾಲಬೇಕು. ದೀನ ದಲಿತರ, ರೈತ ಕೂಲಿಕಾರರ, ಅಲ್ಪ ಸಂಖ್ಯರ, ಬಹುಜನ ಸಮುದಾಯದ ದಟ್ಟದರಿದ್ರ ಕಷ್ಟ ಕಾರ್ಪಣ್ಯಗಳಿಗೆ, ಬಾಳಿನ ಆಸೆ ನಿರಾಸೆಗಳಿಗೆ ಲೇಖಕ ನಾಲಿಗೆ ನೀಡಬೇಕು. ಸಮಾಜದ ಪಟ್ಟಭದ್ರ ಹಿತಾಸಕ್ತಿಗಳ ಪ್ರತಿಷ್ಠಿತ ಮ್ಯ-ಮಾನ್-ಮನ್ನೆಯರ ಮಂಡಳಿಗಳ ವಿರುದ್ಧ ಲೆಕ್ಕಣಿಕೆ ಎತ್ತಬೇಕು. ದೇಶದ್ರೋಹಿಗಳ ಖಂಡನೆ, ದೇಶಭಕ್ತರ ಮಂಡನೆ, ಕ್ರಾಂತಿ ವಿರೋಧಿ ರಾಷ್ಟ್ರೀಯ ಪುಢಾರಿಗಳ ಅನಾವರಣ- ಇದೆಲ್ಲ ಈ ಚಳುವಳಿಯ ಕಾರ್ಯಕ್ರಮವಾಯಿತು" (ಗೌರೀಶ ಕಾಯ್ಕಿಣಿ, 'ಸ್ವತಂತ್ರಪೂರ್ವ ಹೊಸಗನ್ನಡ ಸಾಹಿತ್ಯ', ಬಿಡುಗಡೆ ಬೆಳ್ಳಿ, ಪುಟ-೧೨೫)

೧೯ನೇ ಶತಮಾನದ ಕೊನೆಯ ಭಾಗದಲ್ಲಿ ಸ್ಥಾಪಿತವಾದ ಕಾಂಗ್ರೆಸ್ ಸಂಸ್ಥೆ, ಅನಿಬೆಸೆಂಟ್ ಹಾಗೂ ಗಾಂಧೀಜಿಯವರ ಬರುವಿಕೆಯಿಂದಾಗಿ ಮಹಿಳೆಯರ ಕಾರ್ಯಶಕ್ತಿಯನ್ನೊಪ್ಪಿತು. ಸ್ವಾತಂತ್ರ್ಯದ ಹೋರಾಟದಲ್ಲಿ ಮಹಿಳೆಯರ ಸಹಕಾರವನ್ನೂ ಗಾಂಧೀಜಿ ಬಯಸಿ, ಅವರನ್ನು ಆಹ್ವಾನಿಸಿದರು. ಸಾರ್ವಜನಿಕ ಸಂಸ್ಥೆಯ ಸ್ವರೂಪವನ್ನು ಪಡೆದ ಕಾಂಗ್ರೆಸ್ಸಿನಲ್ಲಿ ದೇಶ ಸೇವಕಿಯರ ತಂಡವೊಂದು ನಿರ್ಮಾಣವಾಯಿತು. ೧೯೨೪ರಲ್ಲಿ ಬೆಳಗಾವಿಯಲ್ಲಿ ಕೂಡಿದ ಅಖಿಲಭಾರತ ಕಾಂಗ್ರೆಸ್ ಅಧಿವೇಶನದಲ್ಲಿ ಕರ್ನಾಟಕದ ದೇಶ ಸೇವಕಿಯರೂ ಮುಂದುವರಿದು ಸೇವೆ ಸಲ್ಲಿಸಿದರು. ಪರದೇಶಿ ಬಟ್ಟೆ ಮದ್ಯದಂಗಡಿಗಳನ್ನು ಬಹಿಷ್ಕರಿಸಿ ಅಹಿಂಸಾತ್ಮಕ ವಿಧಾನಗಳಿಂದ, ಸಾಮಾಜಿಕ ಸುಧಾರಣೆಗಳಿಂದ ಲೋಕಪ್ರಿಯಗೊಳಿಸಲು ಯತ್ನಿಸಿದರು. ೧೯೨೯ರಿಂದ ೧೯೩೨ರವರೆಗೆ ನಡೆದ ಅಸಹಕಾರ ಚಳುವಳಿಯಲ್ಲಿ ಮಹಿಳೆಯರೂ ಸಕ್ರಿಯ ಭಾಗವಹಿಸಿದರು. ಲಾಟಿಪೆಟ್ಟು ತಿಂದು ಸೆರೆಮನೆ ಸೇರಿದರು. ತಮ್ಮ ಮತಾಧಿಕಾರಕ್ಕಾಗಿಯೂ ಹೋರಾಡಿದರು.

ಭಾರತವು ಬ್ರಿಟಿಶರ ಪಾರತಂತ್ರ್ಯದಿಂದ ಬಿಡುಗಡೆಗೊಳ್ಳಲು ಹಾತೊರೆಯುತ್ತಿದ್ದ ರಾಷ್ಟ್ರೀಯ ಚಳುವಳಿಯು, ಎಲ್ಲ ವರ್ಗ ಹಾಗೂ ಸಮುದಾಯಗಳನ್ನು ಆಕರ್ಷಿಸಿತ್ತು. ರಾಷ್ಟ್ರೀಯ ನಾಯಕರು ಉದ್ದೇಶ ಪೂರ್ವಕವಾಗಿಯೇ ರೈತಾಪಿ ಜನರನ್ನು, ಕಾರ್ಮಿಕರನ್ನು, ಮಹಿಳೆಯರನ್ನು, ತಮ್ಮ ಹೋರಾಟದಲ್ಲಿ ಪಾಲ್ಗೊಳ್ಳುವಂತೆ ಮಾಡಿದ್ದರು. ಈ ರಾಷ್ಟ್ರೀಯ ಚಳುವಳಿಗೆ ದೇಶದ ಅಪಾರವಾದ ಜನ ಬೆಂಬಲವಿದೆ ಎಂದು ಪ್ರಚಾರಪಡಿಸುವುದು ಅವರ ಮುಖ್ಯ ಉದ್ದೇಶವಾಗಿತ್ತು. ಪರಿಣಾಮವಾಗಿ ಭಾರತೀಯ ರಾಷ್ಟ್ರೀಯ ಚಳುವಳಿಯಲ್ಲಿ ಭಾರತದ ಬೇರೆ ಬೇರೆ ಸಮುದಾಯದ, ಜಾತಿಯ, ವಯಸ್ಸಿನ, ಪ್ರದೇಶಗಳ ಹೆಣ್ಣುಮಕ್ಕಳು ಭಾಗವಹಿಸಲಾರಂಭಿಸಿದರು.

ವಿಜಯಲಕ್ಷ್ಮಿ ಪಂಡಿತ್, ಕಮಲಾ ನೆಹರೂ, ಸ್ವರೂಪರಾಣಿ, ಸರೋಜಿನಿ ನಾಯ್ಡು, ಕೃಷ್ಣಾಹತೀಸಿಂಗ್, ಡಾಕ್ಟರ್ ಸುಶೀಲಾ ನಾಯರ್, ಮೀರಾಬೆನ್, ರಾಜಕುಮಾರಿ ಅಮೃತಾ ಕೌರ್, ಮೃದುಲಾಬೆನ್, ಪ್ರೇಮಾ ತಂಟರ್, ಸುಚೇತ ಕೃಪಲಾನಿ, ಕುಮಾರಿ ಸಲಾಮ್, ಉಷಾ ಮೆಹತಾ, ಮಣಿಬೆನ್ ಪಟೇಲ್

ಇವರಲ್ಲದೆ ಕರ್ನಾಟಕದಲ್ಲಿ ಯಶೋಧರಮ್ಮಾ ದಾಸಪ್ಪ, ಉಮಾಬಾಯಿ ಕುಂದಾಪುರ, ಬೀನಾದಾಸ, ಸೋಫಿಯಾ ಸೋಮಯಾಜಿ, ರುಕ್ಮಿಣಿ ಲಕ್ಷ್ಮೀಪತಿ, ಕೃಷ್ಣಾಬಾಯಿ ಪಣಜೀಕರ, ನಾಗಮ್ಮ ಪಾಟೇಲ್, ಕಮಲಾದೇವಿ ಚಟ್ಟೋಪಾಧ್ಯಾಯ ಮುಂತಾದವರ ನೇತೃತ್ವದಲ್ಲಿ ಮಹಿಳೆಯರು ರಾಷ್ಟ್ರೀಯ ಹೋರಾಟದಲ್ಲಿ ಭಾಗವಹಿಸಿದರು.

ರಾಷ್ಟ್ರೀಯ ಹೋರಾಟದಲ್ಲಿ ತೊಡಗಿದ್ದ ಮಹಿಳೆಯರಿಗೂ ಮತ್ತು ಬರಹಗಾರ್ತಿಯರಿಗೂ ಗಾಂಧೀಜಿಯವರೇ ಆದರ್ಶ ಪುರುಷ. ಗಾಂಧೀಜಿಯವರು ೧೯೨೧ರಲ್ಲಿ ಮೊದಲ ಅಸಹಕಾರ ಆಂದೋಲನದಲ್ಲಿ ಮಹಿಳೆಯರನ್ನು ಬುದ್ಧಿಪೂರ್ವಕವಾಗಿ ಸೇರಿಸಿಕೊಂಡರು. ಮಹಿಳೆಯರು ಮನೆಯಲ್ಲಿದ್ದುಕೊಂಡೇ ಆಂದೋಲನದಲ್ಲಿ ಭಾಗವಹಿಸಲು ಸಾಧ್ಯವಾಗುವಂತೆ ಹೋರಾಟದ ಕಾರ್ಯಕ್ರಮವನ್ನು ರೂಪಿಸಲಾಗಿತ್ತು. ಬ್ರಿಟಿಶ್ ವಸ್ತುಗಳ ಬಹಿಷ್ಕಾರ, ನೂಲುವಿಕೆ ಹಾಗೂ ಖಾದಿ ವಸ್ತ್ರಧಾರಣೆಯ ಮೂಲಕ ರಚನಾತ್ಮಕವಾದ ಸ್ವದೇಶಿ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು. ಸ್ವದೇಶಿ ವಸ್ತು-ವಿಚಾರಗಳು ಹಾಗೂ ಅಸಹಕಾರ ಆಂದೋಲನಗಳು ಮಹಿಳೆಯರಿಗೆ ಹೇಳಿಮಾಡಿಸಿದಂತಿತ್ತು. ಕುಟುಂಬದ ನಿರ್ವಹಣೆಯಲ್ಲಿ ಯಾವುದೇ ತೊಡಕಾಗದಂತೆ ಮಹಿಳೆಯರು ಹೋರಾಟದಲ್ಲಿ ಹೇಗೆ ತೊಡಗಿಕೊಳ್ಳಬಹುದೆಂದು ಗಾಂಧೀಜಿಯವರು ನಿರ್ದೇಶಿಸುತ್ತಿದ್ದರು.

೧೯೩೦ರಲ್ಲಿ ಉಪ್ಪಿನ ಮೇಲೆ ಹೇರಿದ್ದ ಕರವನ್ನು ವಿರೋಧಿಸಿ ಕಸ್ತೂರ ಬಾ, ಸಾಬರಮತಿ ಆಶ್ರಮದ ಮೂವತ್ತೇಳು ಮಹಿಳಾ ಸ್ವಯಂಸೇವಕರೊಂದಿಗೆ ಸತ್ಯಾಗ್ರಹ ಹೂಡಿದರು; ಸರೋಜಿನಿ ನಾಯ್ಡು, ಮಣಿಲಾಲ್ ಗಾಂಧಿಯೊಂದಿಗೆ ಸೇರಿಕೊಂಡು 'ಧರಾಸನ ಸಾಲ್ಟ್ ವರ್ಕ್ಸ್' ವಿರುದ್ಧ ಪ್ರದರ್ಶನ ನಡೆಸಿದರು. ಈ ಪ್ರದರ್ಶನದ ವೇಳೆ ಅಹಿಂಸಾ ನಿರತ ಸತ್ಯಾಗ್ರಹಿಗಳನ್ನು ದಮನಿಸುವ ಉದ್ದೇಶದಿದ ಪೋಲಿಸರು ಬಲಪ್ರಯೋಗ ಮಾಡಿದರು; ಕಮಲಾದೇವಿಯರು 'ವಾಡ್ಲಾ ಸಾಲ್ಟ್ ವರ್ಕ್ಸ್' ವಿರುದ್ಧ ೧೫೦೦೦ ಮಂದಿಯನ್ನು ಕೂಡಿಸಿ ಒಂದು ಮೆರವಣಿಗೆ ಹೊರಡಿಸಿದರು. ಉಪ್ಪಿನ ಕಾಯ್ದೆಗಳನ್ನು ಮುರಿಯುವಲ್ಲಿ ಮಹಿಳಾ ಸಂಘಟನೆಗಳು ಸಕ್ರಿಯ ಪಾತ್ರ ವಹಿಸಿದವು. ಉಪ್ಪಿನ ಸತ್ಯಾಗ್ರಹ ಹಾಗೂ ಅಸಹಕಾರ ಆಂದೋಲನಗಳು ಹೆಚ್ಚು ಹೆಚ್ಚು ಮಹಿಳೆಯರ ತೊಡಗುವಿಕೆಯನ್ನು ಉತ್ತೇಜಿಸಿದವು.

ಸ್ವಾತಂತ್ರ್ಯಪೂರ್ವದ ಮಹಿಳಾ ಬರಹಗಾರರಿಗೆ ರಾಷ್ಟ್ರೀಯ ಆಂದೋಲನ ಸಾಂದರ್ಭಿಕವಾಗಿದ್ದು, ಮಹಿಳೆಯರು ಹೇಗೆ ಪಾಲ್ಗೊಳ್ಳಬಹುದೆಂಬ ಬಗ್ಗೆ ಚರ್ಚೆಯಿದೆ. ರಾಷ್ಟ್ರಾಭಿಮಾನವನ್ನು ಕುರಿತು ಮಹಿಳೆಯರು ಪದ್ಯಗಳನ್ನು ರಚಿಸಿ ಅವುಗಳನ್ನು ಹಾಡುತ್ತಿದ್ದರು. ಆದರೂ ಕತೆ-ಕಾದಂಬರಿ-ಪ್ರಬಂಧ-ಲೇಖನದೊಳಗೆ ರಾಷ್ಟ್ರೀಯ ಚಳುವಳಿ ಮತ್ತು ಕರ್ನಾಟಕ ಏಕೀಕರಣ ಚಳುವಳಿಯ ವಸ್ತು ಪ್ರಾಸಂಗಿಕವಾಗಿ ಕಾಣಿಸಿಕೊಂಡಿದೆ.

೧೮೨೪ರಲ್ಲಿ ಕಿತ್ತೂರು ರಾಣಿ ಚನ್ನಮ್ಮ ಬ್ರಿಟೀಶರ ರಾಜನೀತಿಯನ್ನು ಪ್ರತಿಭಟಿಸಿ ಸ್ವಾತಂತ್ರ್ಯ ಸಂಗ್ರಾಮದ ಕಹಳೆಯನ್ನೂದಿದಳು; ಸಿಪಾಯಿದಂಗೆಯಲ್ಲಿ ಝಾಂಸಿ ರಾಣಿ ಲಕ್ಷ್ಮೀಬಾಯಿ ಸರ್ವಸ್ವವನ್ನೂ ಪಣಕ್ಕೆ ಒಡ್ಡಿ ಹೋರಾಡಿದ್ದು, ಇತ್ಯಾದಿ ಘಟನೆಗಳು ಮಹಿಳಾ ಬರಹಗಾರ್ತಿಯರಿಗೆ ಸ್ಫೂರ್ತಿಯಾಗಿವೆ.

ತಿರುಮಲಾಂಬ, ಆರ್.ಕಲ್ಯಾಣಮ್ಮ, ತಿರುಮಲೆ ರಾಜಮ್ಮ, ಜಯದೇವಿತಾಯಿ ಲಿಗಾಡೆ, ಸರಸ್ವತಿಬಾಯಿ ರಾಜವಾಡೆ, ಶ್ಯಾಮಲಾದೇವಿ ಬೆಳಗಾಂವ್‌ಕರ್, ಬೆಳಗೆರೆ ಜಾನಕಮ್ಮ ಮುಂತಾದವರು ಸ್ವಾತಂತ್ರ್ಯಪೂರ್ವ ಕಾಲದ ಮಹಿಳಾ ಲೇಖಕಿಯರಾಗಿದ್ದಾರೆ. ಇವರುಗಳಲ್ಲಿ ರಾಷ್ಟ್ರೀಯ ಆಂದೋಲನದಲ್ಲಿ/ಕನ್ನಡ ರಾಷ್ಟ್ರೀಯ ಹೋರಾಟದಲ್ಲಿ ನೇರವಾಗಿ ಭಾಗವಹಿಸಿದ ಬರಹಗಾರ್ತಿ ಜಯದೇವಿತಾಯಿ ಲಿಗಾಡೆಯವರು. ರಾಷ್ಟ್ರೀಯ ಆಂದೋಲನದ ವಿವಿಧ ಮಗ್ಗಲುಗಳನ್ನು ವಿವೇಚಿಸಿ ತಾತ್ವಿಕ ಆಯಾಮವನ್ನು ಕಟ್ಟಿಕೊಟ್ಟವರು ಆರ್.ಕಲ್ಯಾಣಮ್ಮನವರು. ಸಾಂದರ್ಭಿಕವಾಗಿ ಪ್ರತಿಸ್ಪಂದಿಸಿದವರು ತಿರುಮಲಾಂಬ, ತಿರುಮಲೆ ರಾಜಮ್ಮ, ಸರಸ್ವತಿಬಾಯಿ ರಾಜವಾಡೆ, ಶ್ಯಾಮಲಾದೇವಿಯವರು.

ಕನ್ನಡ ಸೇವೆಯ ಕಂಕಣ ತೊಡಲು ಗೃಹಿಣಿಯರು, ದುಡಿಯುವ ಮಹಿಳೆಯರು, ಹರೆಯದ ಹೆಣ್ಣುಮಕ್ಕಳು, ವಿಧವೆಯರು, ವಿದುಷಿಯರಿಗೆ 'ಎದ್ದೇಳಿ ಮೈಮುರಿದು, ಕರುನಾಡಿನುನ್ನತಿಗೆ, ಸಿದ್ಧಾಗಿ ಸಂಭ್ರಮದಿ' 'ನಿನ್ನಯಾ ಕಂದರನು, ಕನ್ನಡದ ಸೇವೆಗೆಯೆ ಅನುಗೊಳಿಸು' ಎಂದು 'ಗಿರಿಬಾಲೆ' ಎಂದು ಕರೆದುಕೊಂಡಿರುವ ಸರಸ್ವತಿಬಾಯಿ ರಾಜವಾಡೆಯವರು ಕರೆ ನೀಡಿದ್ದಾರೆ.

'ಜನಕಜೆ' ಎಂದು ಹೆಸರಾದ ಬೆಳಗೆರೆ ಜಾನಕಮ್ಮನವರು ತಿರುಮಲಾಂಬ, ಕಲ್ಯಾಣಮ್ಮ, ಶ್ಯಾಮಲಾದೇವಿಯವರಂತೆ ಹೊರಗಿನ ಜಗತ್ತನ್ನು ಪ್ರವೇಶಿಸಿದವರಲ್ಲ. ಕುಟುಂಬದೊಳಗಿನ ಸೀಮಿತ ವಾತಾವರಣದಲ್ಲಿ ತಮ್ಮ ಅಭಿವ್ಯಕ್ತಿಯನ್ನು ಹೊರಸೂಸಿದವರು.

ಮಹಿಳೆಯರು ನೇರವಾಗಿ ಚಳುವಳಿಗಳಲ್ಲಿ ಧುಮುಕಿದರು ಅಥವಾ ಇಲ್ಲ ಎನ್ನುವ ಪ್ರಶ್ನೆಗಿಂತ ಮಹಿಳೆಯರ ಮನಸ್ಸಿನಲ್ಲಿ ಸ್ವಾತಂತ್ರ್ಯ ಹೋರಾಟದ ಕಲ್ಪನೆಯನ್ನು, ಜಾಗೃತಿಯನ್ನು, ಸ್ಫೂರ್ತಿಯನ್ನು ಹುಟ್ಟು ಹಾಕಲು ಮಹಿಳಾ ಲೇಖಕಿಯರು ಶ್ರಮಿಸಿದ್ದಾರೆ.

ಕರ್ನಾಟಕದ ಆಧುನಿಕ ಕಾಲದ ಮೊದಲ ಹಂತದ ಸಮರ್ಥ ಲೇಖಕಿಯಾದ ತಿರುಮಲಾಂಬರವರು ರಾಷ್ಟ್ರೀಯ ಆಂದೋಲನಗಳಲ್ಲಿ ನೇರವಾಗಿ ಭಾಗವಹಿಸಿದವರಲ್ಲ. ರಾಜಕೀಯ ವರ್ತಮಾನಗಳ ಕಡೆಗೆ ಇವರ ಒಲವು ಕಡಿಮೆಯೆಂಬುದು ಅವರ ಬದುಕು-ಬರಹಗಳ ಮೂಲಕ ತಿಳಿಯುತ್ತದೆ. ತಿರುಮಲಾಂಬರವನ್ನು ಸಂಪೂರ್ಣವಾಗಿ ಆವರಿಸಿರುವ ವಿಚಾರಧಾರೆಗಳ ಅಭಿವ್ಯಕ್ತಿ ಬೇರೆ ವಿಷಯಗಳತ್ತ ವಾಲಿದ್ದವು. 'ಮಾತೃ ನಂದಿನಿ' ಕಾದಂಬರಿಯಲ್ಲಿ ರಾಷ್ಟ್ರೀಯ ಪ್ರಜ್ಞೆಯ ಪ್ರಸ್ತಾಪ ತುಂಡು ತುಂಡಾಗಿ ಕಾಣಿಸಿಕೊಳ್ಳುತ್ತದೆ.

ಆರ್.ಕಲ್ಯಾಣಮ್ಮನವರು ನೇರವಾಗಿ ಚಳುವಳಿಗಳಲ್ಲಿ ಭಾಗವಹಿಸದಿದ್ದರೂ ಅನೇಕ ಮಹಿಳೆಯರಲ್ಲಿ ರಾಷ್ಟ್ರೀಯ ಪ್ರಜ್ಞೆಯನ್ನು ಜಾಗೃತಗೊಳಿಸಿದರು. ತಮ್ಮ ಪತ್ರಿಕೆಯ ಮೂಲಕ, ಭಾಷಣಗಳ ಮೂಲಕ ದೇಶ ಸೇವೆಯ ವಿಚಾರಗಳನ್ನು ಮಂಡಿಸಿದವರು. ೧೯೨೪ರಲ್ಲಿ ಬೆಳಗಾವಿಯಲ್ಲಿ ಸೇರಿದ್ದ ಕಾಂಗ್ರೆಸ್ಸಿನ ಕರ್ನಾಟಕ ಭಗಿನೀ ಮಂಡಲದ ಪರಿಷತ್ತಿನ ಅಧ್ಯಕ್ಷತೆ ವಹಿಸಿ, ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ಕನ್ನಡ ಮಹಿಳೆಯರು ಧೈರ್ಯವಾಗಿ ಭಾಗವಹಿಸುವಂತೆ ಕರೆಯಿತ್ತರು. ೧೯೨೯ರಲ್ಲಿ ನಡೆದ ಮೈಸೂರು ಪ್ರಾಂತ್ಯ ಕಾಂಗ್ರೆಸ್ಸಿನ ಎರಡನೇ ಅಧಿವೇಶನದಲ್ಲಿ ಭಾಗವಹಿಸಿದ್ದರು. ನಂತರ ೧೯೬೦ರಲ್ಲಿ ಪ್ರಕಟವಾದ

ಕಾಂಗ್ರೆಸ್ ಸ್ಮರಣ ಸಂಚಿಕೆಯ ಸಲಹಾ ಸಮಿತಿಯ ಸದಸ್ಯೆಯಾಗಿಯೂ ದುಡಿದಿರುವರು. ಕಾಂಗ್ರೆಸ್ ಅಧಿವೇಶನವನ್ನು ಕುರಿತ ವರದಿಗಳನ್ನು ತಮ್ಮ 'ಸರಸ್ವತಿ' ಪತ್ರಿಕೆಯಲ್ಲಿ ಪ್ರಕಟಿಸುತ್ತಿದ್ದರು. ಜತೆಗೆ ಸ್ವತಂತ್ರ ಭಾರತದ ನಿರ್ಮಾಣಕ್ಕಾಗಿ ಗಾಂಧೀಜಿಯವರ ನೇತೃತ್ವದಲ್ಲಿ ನಡೆಯುತ್ತಿದ್ದ ಚಳುವಳಿಯನ್ನು ಪ್ರೋತ್ಸಾಹಿಸುತ್ತಿದ್ದರು. ಆ ಕಾಲದ ಉಳಿದ ಲೇಖಕಿಯರಿಗಿಂತ ರಾಷ್ಟ್ರೀಯ ಆಂದೋಲನಗಳ ಬಗ್ಗೆ ಹೆಚ್ಚು ಬರೆದ ಲೇಖಕಿ ಕಲ್ಯಾಣಮ್ಮನವರಾಗಿದ್ದಾರೆ.

ಮೈಸೂರು ಪ್ರಾಂತ್ಯವನ್ನಾಳುತ್ತಿದ್ದ ಒಡೆಯರ್ ಮನೆತನದೊಂದಿಗೆ ಆತ್ಮೀಯವಾದ ಸಂಬಂಧವನ್ನು ಇವರು ಹೊಂದಿದ್ದರು. ೧೯೩೭ರಲ್ಲಿ ಮೈಸೂರು ಸರಕಾರ ಕಲ್ಯಾಣಮ್ಮನವರನ್ನು 'ಪ್ರಜಾಪ್ರತಿನಿಧಿ ಸಭೆ'ಗೆ ಆಯ್ಕೆ ಮಾಡಿದ್ದಿತು. ಕಲ್ಯಾಣಮ್ಮನವರ ಎಲ್ಲ ಕಾರ್ಯಚಟುವಟಿಕೆಗಳಿಗೆ ಮಹಾರಾಜರು, ಪ್ರೋತ್ಸಾಹ, ಸಹಾಯ ಹಸ್ತವನ್ನು ನೀಡುತ್ತಿದ್ದರು. ಸಾರ್ವತ್ರಿಕ ಕಾರ್ಯ ಚಟುವಟಿಕೆಗಳತ್ತ ಮುಖ ಮಾಡಿದ್ದ ಕಲ್ಯಾಣಮ್ಮನವರಿಗೆ ಬ್ರಿಟೀಶ್ ಸರಕಾರದ ಆಡಳಿತವನ್ನು ಒಪ್ಪಿಕೊಂಡ ಮೈಸೂರು ಮಹಾರಾಜರ ಬೆಂಬಲದ ಅವಶ್ಯಕತೆಯಿತ್ತು. ಅದರ ಜತೆಜತೆಗೆ ಆ ಸಂದರ್ಭದಲ್ಲಿ ತೀವ್ರವಾಗಿ ನಡೆಯುತ್ತಿದ್ದ ರಾಷ್ಟ್ರೀಯ ಆಂದೋಲನಗಳು, ಗಾಂಧೀಜಿಯವರ ತತ್ವ ಪ್ರಣಾಲಿಕೆಗಳು ಇವರನ್ನು ಪ್ರಭಾವಿಸುತ್ತಿದ್ದವು. ಮೈಸೂರು ಮಹಾರಾಜರೊಂದಿಗಿನ ಬಾಂಧವ್ಯ ಮತ್ತು ರಾಷ್ಟ್ರೀಯ ಆಂದೋಲನಕ್ಕೆ ಒತ್ತು ನೀಡುವ ವಿಚಾರಧಾರೆಗಳೆರಡೂ ವೈರುಧ್ಯ ಆಯಾಮವನ್ನು ಪಡೆದುಕೊಂಡಿದ್ದರೂ ಕಲ್ಯಾಣಮ್ಮನವರ ಹೆಚ್ಚಿನ ಒಲವು ದೇಶದೆಲ್ಲೆಡೆ ನಡೆಯುತ್ತಿದ್ದ ಆಂದೋಲನಗಳ ಕಡೆಗಿರುವುದು ವ್ಯಕ್ತವಾಗುತ್ತದೆ.

೧೯೨೨ರಲ್ಲಿ ಪ್ರಕಟವಾದ 'ಹಿಂದೂ ಭಾಗ್ಯೋದಯ' ಮತ್ತು 'ಬ್ಯಾರಿಸ್ಟರ್ ರಾಮಚಂದ್ರನ್' ಎಂಬ ಎರಡು ನಾಟಕಗಳು ಸ್ವಾತಂತ್ರ್ಯ ಚಳುವಳಿಯನ್ನು ಕುರಿತದ್ದಾಗಿದೆ. ಭಾರತದಲ್ಲಿ ಆಗ ತೀವ್ರವಾಗಿ ನಡೆಯುತ್ತಿದ್ದ ಸ್ವದೇಶಿ ಚಳುವಳಿಯ ಪ್ರೇರಣೆ ಪಡೆದಿದೆ. ವಿದೇಶಿ ವಸ್ತ್ರಗಳ ದಹನದ ಮೂಲಕ ಭಾರತೀಯರಲ್ಲಿ ಮೂಡಿಸಬೇಕಿದ್ದ ಸ್ವದೇಶಾಭಿಮಾನ, ಭಾರತೀಯ ಸಂಸ್ಕೃತಿ ರಕ್ಷಣೆ, ಭಾರತೀಯರ ಸ್ವಾತಂತ್ರ್ಯ ಹೋರಾಟ, ವಿದೇಶಿ ಸಂಸ್ಕೃತಿಯ ಅನುಕರಣೆಯ ಹಾದಿಯಲ್ಲಿ ಭಾರತೀಯರ ಸ್ತ್ರೀಯರನ್ನು ಕೀಳಾಗಿ ಕಾಣುವ ಯುವಕರಲ್ಲಿ ಜಾಗೃತಿ ಮೂಡಿಸುವ ಆಶಯವನ್ನು ಈ ನಾಟಕ ಒಳಗೊಂಡಿದೆ. 'ಹಿಂದೂ ಭಾಗ್ಯೋದಯ' ನಾಟಕದಲ್ಲಿ ಭಾರತೀಯರ ದೌರ್ಬಲ್ಯದಿಂದಾಗಿ ಭಾರತವು ಇಂದು ಬ್ರಿಟಿಶರ ಪಾರತಂತ್ರ್ಯಕ್ಕೆ ಒಳಗಾಗಲು ಮುಖ್ಯ ಕಾರಣವಾಗಿದೆ ಎಂದು ವಿಶ್ಲೇಷಿಸುತ್ತಾರೆ. ಸ್ವಾತಂತ್ರ್ಯಾ ನಂತರ ದೇಶದ ರಾಜಕೀಯ ಆಡಳಿತವನ್ನು ಭಾರತೀಯರು ನಿರ್ವಹಿಸುವ ಬಗ್ಗೆ ಆತಂಕವೂ ವ್ಯಕ್ತವಾಗಿದೆ.

ಬ್ರಿಟೀಶರ ಅಂಕುಶಕ್ಕೆ ಒಳಗಾಗಿರುವ ಭಾರತದ ಪರಂಪರೆಯನ್ನು ತಮ್ಮ ಅನೇಕ ಲೇಖನಗಳಲ್ಲಿ ಸ್ಮರಿಸಿ, ಭವಿಷ್ಯದ ಭಾರತವನ್ನು ಕಟ್ಟುವ ಕಾರ್ಯದತ್ತ ಲೇಖನಿ ಸಾಗಿದೆ. 'ಜೀವ ಕಾರುಣ್ಯವೂ ಅಭಿಮಾನವೂ' ಎಂಬ ಲೇಖನದಲ್ಲಿ ಭರತ ಖಂಡಕ್ಕೆ ಈ ಹೆಸರು ಬರಲು ಕಾರಣ, ಮಹಾಮುನಿ ಜಡಭರತನೆಂದು ಗುರುತಿಸಿದ್ದಾರೆ. 'ಕನ್ನಡ ರಾಜ್ಯ ಸ್ಥಾಪನೆ' ಲೇಖನದಲ್ಲಿ ಕರ್ನಾಟಕದ ಇತಿಹಾಸವನ್ನು

ಹಂತ ಹಂತವಾಗಿ ಬಿಚ್ಚಿಟ್ಟು, ಹರಿದು ಹಂಚಿಹೋದ ಕರ್ನಾಟಕ ಏಕೀಕರಣಗೊಂಡ ಹಲವು ವಿವರಗಳನ್ನು ದಾಖಲಿಸುತ್ತಾರೆ.

ರಾಷ್ಟ್ರೀಯ ಆಂದೋಲನದಲ್ಲಿ ಭಾಗವಹಿಸಿದ ಮಹಿಳೆಯರನ್ನು/ಮಹನೀಯರನ್ನೂ ಕರ್ನಾಟಕದ ಜನತೆಗೆ 'ಸರಸ್ವತಿ' ಮೂಲಕ ಪರಿಚಯಿಸಿ, ರಾಷ್ಟ್ರ ಸೇವೆಗೆ ಜನತೆಯನ್ನು ಪ್ರೇರೇಪಿಸಿದ್ದಾರೆ. ಚಿತ್ತರಂಜನ್‌ದಾಸ್, ಗಾಂಧೀಜಿಯ ಅನುಯಾಯಿಯಾಗಿದ್ದ ವಿಧವೆ ಮಾತಂಗಿನಿದೇವಿ, ವಿಜಯಲಕ್ಷ್ಮಿ ಪಂಡಿತ್, ಸರೋಜಿನಿ ದೇವಿ, ಶಾಸನ ಸಭಾ ಸದಸ್ಯರು, ಕನ್ನಡತಿಯೂ ಆದ ಯಶೋಧರಾ ದಾಸಪ್ಪ ಮತ್ತು ಅಖಿಲ ಭಾರತ ಕಾಂಗ್ರೆಸ್ ಸಮಿತಿ ಸದಸ್ಯರಾದ ಕಮಲಾ ಚಟ್ಟೋಪಾಧ್ಯಾಯ, ಪ್ರಭಾವತಿ ಲಾಹೋರ್, ಡಾ.ಮುತ್ತುಲಕ್ಷ್ಮಿ, ಉಮಾಬಾಯಿ ಕುಂದಾಪುರ, ಹಂಸಮೇಥಾ, ಜಯಲಕ್ಷ್ಮಿದೇವಿ ಬಳ್ಳಾರಿ, ಕಮಲಾದೇವಿ ನೆಹ್ರೂ, ಆನಂದೀಬಾಯಿ ಮುಂತಾದ ದೇಶಭಕ್ತರನ್ನು, ಅವರ ಸೇವೆಯನ್ನು ಮನಗಾಣಿಸಿದ್ದಾರೆ. ಆಂಗ್ಲ ಮಹಿಳೆಯರಿಗೂ ಭಾರತೀಯ ಮಹಿಳೆಯರಿಗೂ ಇರುವ ಗುಣದೋಷಗಳನ್ನು ತಿಳಿಸಿದ ಕಲ್ಯಾಣಮ್ಮ, ಆಂಗ್ಲ ಮಹಿಳೆಯರ ಕಾರ್ಯಕ್ಷಮತೆಯನ್ನು ಎತ್ತಿ ಹಿಡಿದು ಎಲ್ಲದಕ್ಕೂ ಹಿಂಜರಿಯುವ ಭಾರತೀಯರ ಮಹಿಳೆಯರ ದೌರ್ಬಲ್ಯಗಳನ್ನು ಪಟ್ಟಿಮಾಡುತ್ತಾರೆ. ರಾಷ್ಟ್ರಾಭ್ಯುದಯದಲ್ಲಿ ಮಹಿಳೆಯರು ಭಾಗವಹಿಸುವ ಅವಶ್ಯಕತೆಯನ್ನು ಮನಗಾಣಿಸುವ ಪ್ರಯತ್ನ ಮಾಡಿದ್ದಾರೆ.

ಸರಸ್ವತಿಬಾಯಿ ರಾಜವಾಡೆಯವರು "೧೯೩೦ರಲ್ಲಿ ನಿರ್ಭೀತಿಯಿಂದ ಕಾರಾಗೃಹವನ್ನು ಹೊಕ್ಕುವ ಸಾಹಸವನ್ನೂ ಮಾಡಿ ಅಬಲೆ ಮಹಿಳೆಯು ಮಹಾತ್ಮರಿಂದ ದೇಶದ ಶಕ್ತಿಯೆಂದೆನಿಸಿಕೊಂಡಳು! ಅಂದಿನ ಸಂಗ್ರಾಮದ ವಿಜಯ ಕೇವಲ ಮಹಿಳೆಯರ ಪಾಲಿನದು" (ಗಿರಿಬಾಲೆ, ಪುಟ-೨೫೭) ಎಂದು ಮಹಿಳೆಯರ ಪಾಲುಗೊಳ್ಳುವಿಕೆಯ ಹೆಗ್ಗಳಿಕೆಯನ್ನು ನೆನೆದಿರುವವರು.

ರಾಷ್ಟ್ರೀಯ ಆಂದೋಲನಗಳ ಪರಿಣಾಮವು ಸಾಮಾನ್ಯ ಕುಟುಂಬದ ಮೇಲಾಗುವ ಪರಿಸ್ಥಿತಿಯನ್ನು ಭಿನ್ನವಾಗಿ ನೋಡಲು ಸಾಧ್ಯವಾಗಿರುವುದು ಶ್ಯಾಮಲಾದೇವಿ ಬೆಳಗಾಂವ್‌ಕರ್‌ರವರಿಗೆ. ಇವರ 'ಕಾಳ ರಾತ್ರಿ' ಎಂಬ ಕತೆಯಲ್ಲಿ, ಸ್ವಾತಂತ್ರ್ಯ ಚಳುವಳಿಗಾಗಿ ಹಗಲು ಇರುಳು ಎನ್ನದೆ ಪಾಲುಗೊಳ್ಳುವ ಸಂದರ್ಭದಲ್ಲಿ ಗಂಡಸರು ಮನೆಯ ಹೊರಗಿರುತ್ತಾರೆ. ಆಗ ಹೆಣ್ಣುಮಕ್ಕಳು ಅನುಭವಿಸುವ ಮಾನಸಿಕ ಯಾತನೆ, ಆತಂಕಗಳೇನು ಎಂಬುದನ್ನು ಕತೆ ವಿವೇಚಿಸುತ್ತದೆ.

ರಾಷ್ಟ್ರೀಯ ಆಂದೋಲನದೊಂದಿಗೆ ತಳುಕು ಹಾಕಿಕೊಂಡಿರುವ ಕನ್ನಡ ಭಾಷಾವಾರು ಪ್ರಾಂತ ರಚನೆಯ ಕಾರ್ಯವನ್ನು ಬೆಂಬಲಿಸುವಲ್ಲಿ ಅಂದಿನ ಲೇಖಕಿಯರು ತೀವ್ರವಾಗಿ ಸ್ಪಂದಿಸಿದ್ದಾರೆ. ರಾಷ್ಟ್ರೀಯ ಆಂದೋಲನವು, ದೇಶದ ಬಂಗಾಳ, ಮುಂಬೈ, ಗುಜರಾತ್, ಕಲ್ಕತ್ತ, ಮದ್ರಾಸ್, ಮಹಾರಾಷ್ಟ್ರ ಆಂಧ್ರ ಮುಂತಾದ ಭಾಗಗಳಲ್ಲಿ ತೀವ್ರವಾಗಿ ಕಾಣಿಸಿಕೊಂಡಿದೆ. ಆದರೆ ಕರ್ನಾಟಕದ ಈ ಭಾಗದಲ್ಲಿ ಅಂತಹ ತೀವ್ರವಾದ ಸಂಚಲನೆ ಕಾಣಿಸಿಕೊಳ್ಳದಿರಲು ಕಾರಣವೂ ಇದೆ. ೧೭೯೯ರಿಂದ ೧೮೩೦ರವರೆಗೆ ಮೈಸೂರು ಸಂಸ್ಥಾನ ಅಸ್ತಿತ್ವದಲ್ಲಿತ್ತು. ೧೭೯೯ರ 'ಸಹಾಯಕ ಸೈನ್ಯ ಒಪ್ಪಂದ'ದ ಪ್ರಕಾರ ಬ್ರಿಟೀಶರು ಮೈಸೂರು ಸಂಸ್ಥಾನದ ರಕ್ಷಣೆಯನ್ನು ತಮ್ಮ ಕೈಗೆತ್ತಿಕೊಂಡರು. ಬ್ರಿಟೀಶರ ಆಡಳಿತವನ್ನು ಮನ್ನಿಸಿ,

ಅವರ ಕೃಪಾ ಕಟಾಕ್ಷದಲ್ಲಿ ಮೈಸೂರು ಮಹಾರಾಜರು ಆಡಳಿತ ನಡೆಸುತ್ತಿದ್ದರು. ಹಾಗಾಗಿ ನೇರವಾಗಿ ಬ್ರಿಟೀಶರ ಆಡಳಿತಕ್ಕೆ ಒಳಪಟ್ಟ ಪ್ರದೇಶಗಳಲ್ಲಿ ಸಹಜವಾಗಿ ಆಂದೋಲನದ ಕಿಡಿಗಳು ಪ್ರಜ್ವಲಿಸಿವೆ. ಬ್ರಿಟೀಶರ ಪರೋಕ್ಷ ಆಡಳಿತದ ಕರ್ನಾಟಕದಲ್ಲಿ ಹೋರಾಟದ ಕಾವಿದೆ, ಆದರೆ ಜ್ವಾಲೆಯ ಉಜ್ವಲವಿಲ್ಲ. ಆದರೂ ದೇಶದ ಪಾರತಂತ್ರ್ಯವನ್ನು ಕೊನೆಗಾಣಿಸುವಲ್ಲಿ ಕನ್ನಡದ ಮಹಿಳೆಯರು/ಮಹಿಳಾ ಬರಹಗಾರರು, ತಮ್ಮ ಸೀಮಿತ ವ್ಯಾಪ್ತಿಯಲ್ಲಿ ಕೈಗೂಡಿಸಿದ್ದಾರೆ.

### ೩.೨.೩ ಶಿಕ್ಷಣ ಮತ್ತು ಮಹಿಳೆಯರು

೧೮೫೭ರ ಸಿಪಾಯಿ ದಂಗೆಯ ನಂತರ ಈಸ್ಟ್ ಇಂಡಿಯಾ ಕಂಪನಿಯಿಂದ ಇಂಗ್ಲೆಂಡ್ ರಾಣಿ ವಿಕ್ಟೋರಿಯಾ ಕೈಗೆ ಹಸ್ತಾಂತರವಾದ ಭಾರತದ ಆಡಳಿತವು, ಸಾಮಾಜಿಕವಾಗಿ, ರಾಜಕೀಯವಾಗಿ, ಸಾಹಿತ್ಯಕವಾಗಿ, ಒಟ್ಟು ಸಾಂಸ್ಕೃತಿಕ ಬದುಕಿನಲ್ಲಿ ಹಲವು ಬದಲಾವಣೆಗೆ ಕಾರಣವಾಯಿತು. ಯುರೋಪಿನ ಔದ್ಯೋಗಿಕ ಸುಧಾರಣೆಗಳು ಒಂದೊಂದಾಗಿ ಭಾರತದಲ್ಲಿ ಕಾಲಿಡತೊಡಗಿದವು. ಕೈಗಾರಿಕೆಗಳಿಗೆ ಸಂಬಂಧಿಸಿದ ಯಂತ್ರ ಸಾಮಗ್ರಿ, ಆಧುನಿಕ ಸಂಚಾರ ಸಾಧನಗಳು ಪ್ರಭಾವ ಬೀರತೊಡಗಿದವು. ಕ್ರೈಸ್ತ ಮಿಷನರಿಗಳಾದ ಬಾಸೆಲ್, ವೆಸ್ಲಿಯನ್, ಲಂಡನ್ ಮಿಷನರಿಗಳು ಧರ್ಮ ಪ್ರಸರಣ ಚಟುವಟಿಕೆಗಳಿಂದ ಭಾರತೀಯ ಸಮಾಜದಲ್ಲಿ ಗಾಢವಾದ ಪರಿಣಾಮವನ್ನು ಬೀರಿದವು. ಈ ಮಿಶನರಿಗಳು ಹಿಂದೂ ಧರ್ಮವನ್ನು ತೆಗಳಿ, ಜನರನ್ನು ಆ ಧರ್ಮದಿಂದ ವಿಮುಖರನ್ನಾಗಿ ಮಾಡ ಬಯಸಿದಷ್ಟೂ ತಮ್ಮ ಪುರಾತನ ಮತತತ್ವ ಪರಂಪರೆಗಳಲ್ಲಿ ಅಭಿಮಾನ ಹೆಚ್ಚುತ್ತಾ ಹೋಯಿತು. ಪಾಶ್ಚಾತ್ಯ ಸಂಪರ್ಕದ ಪರಿಣಾಮಗಳಲ್ಲಿ ಹೊಸ ಶಿಕ್ಷಣ ಕ್ರಮ ನಮ್ಮ ಭಾರತದ ಜನ ಸಮುದಾಯದಲ್ಲಿ ದ್ವಂದ್ವಯುತ ಸಂಚಲನವನ್ನುಂಟು ಮಾಡಿತು.

ಬ್ರಿಟೀಶರು ಭಾರತೀಯರನ್ನು ತಮ್ಮ ಆಡಳಿತದಲ್ಲಿ ಸಹಾಯಕರನ್ನಾಗಿ ನೇಮಿಸಿಕೊಳ್ಳಲು ಇಂಗ್ಲಿಶ್ ಶಾಲೆಗಳನ್ನು/ಕಾಲೇಜುಗಳನ್ನು ತೆರೆಯಲಾರಂಭಿಸಿದರು. ಬ್ರಿಟೀಶರು ಸ್ಥಾಪಿಸಿದ ಮುಂಬಯಿಯ ಎಲ್ಫಿನ್‌ಸ್ಟಲ್ ಕಾಲೇಜ್, ದಿಲ್ಲಿಯ ಉರ್ದು ಕಾಲೇಜ್, ಕಲ್ಕತ್ತದ ಹಿಂದೂ ಕಾಲೇಜ್, ಪುಣೆಯ ಡೆಕ್ಕನ್ ಕಾಲೇಜ್, ಇವು ಪ್ರಾಚೀನ ಪರಂಪರೆಗಳನ್ನು ಬಿಟ್ಟು ಕೊಡದೆ ಅದರಲ್ಲಿಯೇ ನ್ಯೂನ್ಯತೆಗಳನ್ನು ಸರಿಪಡಿಸುವ ಮೂಲಕ ಸುಧಾರಣೆಗೆ ತೊಡಗಿದವು.

ಬ್ರಿಟೀಶ್ ಆಡಳಿತವು ಭಾರತವನ್ನು ಹಿಡಿತದಲ್ಲಿಟ್ಟುಕೊಳ್ಳುವ ಪ್ರಯತ್ನದಲ್ಲಿ ಭಾರತದ ಅನೇಕ 'ದೋಷ'ಗಳನ್ನು ಪಟ್ಟಿ ಮಾಡಿತು. ಇದಕ್ಕೆ ಪ್ರತ್ಯುತ್ತರವಾಗಿ ಭಾರತ ದೇಶಕ್ಕಿರುವ ಪೂರ್ವೇತಿಹಾಸವನ್ನು, ಭವ್ಯ ಪರಂಪರೆಯನ್ನು ಬ್ರಿಟೀಶರಿಗೆ ತೋರಿಸಿಕೊಡುತ್ತ, ಪಟ್ಟಿಮಾಡಿದ 'ದೋಷ'ಗಳನ್ನು ಹೋಗಲಾಡಿಸಲು ಸುಧಾರಣವಾದವನ್ನು ಅನೇಕ ಸುಧಾರಕರು ಕೈಗೆತ್ತಿಕೊಂಡರು. ಈ ಎರಡು ಸಿದ್ಧಾಂತಗಳ ಮಧ್ಯೆ ಭಾರತೀಯ ಮಹಿಳೆ ಅದರಲ್ಲೂ ಮೇಲ್ಜಾತಿಯ, ಮಧ್ಯಮ ವರ್ಗದ ಮಹಿಳೆಯರ ಬದುಕು ಕೇಂದ್ರ ಬಿಂದುವಾಗುತ್ತದೆ.

ಮಹಿಳೆಯರಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಹೋಗಲಾಡಿಸಲು ಅನೇಕ ಸುಧಾರಕರು, ತಮ್ಮ ಜೀವನವನ್ನು ಮುಡಿಪಾಗಿಟ್ಟಿದ್ದಾರೆ. ಆದರೆ ಬ್ರಿಟೀಶ್ ಆಡಳಿತದ ಸಹಕಾರದೊಂದಿಗೆ ಸಮಾಜ ಸುಧಾರಕರು ಮಹಿಳೆಯರ ಸಮಸ್ಯೆಗಳನ್ನು ಕಾನೂನಿನ ವಿಧೇಯಕಗಳ ಮೂಲಕ ಹೋಗಲಾಡಿಸಲು ಪ್ರಯತ್ನಿಸುತ್ತಾರೆ ವಿನ: ಮಹಿಳೆಯರ ಅಂತರಂಗದಲ್ಲಿ ಸುಪ್ತವಾಗಿರಬಹುದಾಗಿದ್ದ ಚಿಂತನೆಗಳನ್ನು ಗೌಣವಾಗಿಸಿಬಿಡುತ್ತಾರೆ. ಸಮಾಜ ಸುಧಾರಕರ ಸುಧಾರಣೆಗಳನ್ನು ಮಹಿಳಾ ಬರಹಗಾರರು ಸ್ವಾಗತಿಸಿದ ವಿಧಾನ ಯಾವುದು ಎಂಬುದನ್ನು ಶೋಧಿಸುವುದು ಅಗತ್ಯವಾಗಿದೆ. ಕೆಲವು ಮಹಿಳೆಯರು ಸುಧಾರಕರ ದಾರಿಯನ್ನು ಹೆಚ್ಚು ಸಂಘರ್ಷವಿಲ್ಲದೆ ಒಪ್ಪಿಕೊಂಡಿದ್ದಾರೆ. ಕೆಲವರು ಆಕ್ಷೇಪ ವ್ಯಕ್ತಪಡಿಸಿದ್ದಾರೆ.

ಸ್ತ್ರೀ ಶಿಕ್ಷಣದಿಂದ ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಗಳಿಗೆ ಅನುಕೂಲವಾಗುತ್ತದೆಂದೋ ಅಥವಾ ಸಾಮಾಜಿಕ ಮತ್ತು ಆರ್ಥಿಕ ಸಂಚಲನಗಳು ಸಾಧ್ಯವಾಗಬಹುದೆಂದೋ ನಿರೀಕ್ಷಿಸಿ ಭಾರತೀಯರು ಇದನ್ನು ಬೆಂಬಲಿಸಿದರು. ಮೊದಮೊದಲು ಬಾಲಕರಿಗಾಗಿ ಸ್ಥಾಪಿತವಾದ ಹಿಂದೂ ಕಾಲೇಜಿನಂತಹ ಹಲವು ಶಾಲೆಗಳು ತಮ್ಮ ವರ್ಗದ ಹುಡುಗರ ಪ್ರಗತಿಯ ಅವಕಾಶಗಳನ್ನು ಹೆಚ್ಚಾಗಿಸುವ ಅಭಿಪ್ರಾಯವನ್ನಷ್ಟೇ ಹೊಂದಿದ್ದವು. ಬಾಲಕರ ಪ್ರಗತಿ ಸಾಧ್ಯವಾಗುತ್ತಿದ್ದಂತೆಯೇ ವಿದ್ಯಾವಂತ ವಧುಗಳಿಗಾಗಿ ಬೇಡಿಕೆಯೂ ಹೆಚ್ಚಿತು. ಸುಧಾರಣೆಯ ಬೆಂಬಲಿಗರು ಈ ಸಂಗತಿಯನ್ನು ಸಾಮಾಜಿಕ ಪ್ರಗತಿಯನ್ನು ಸಾಧಿಸುವ ಒಂದು ಸದಾವಕಾಶವೆಂದೇ ಮನಗಂಡರು. ಸ್ತ್ರೀ ಶಿಕ್ಷಣದ ಅಗತ್ಯ ಸಕಾರವಾದೊಂದು ತರ್ಕವನ್ನು ಪಡೆಯಿತು. ಸಮಾಜ ಸುಧಾರಣೆಯ ಆಶಯವೇ ಪ್ರಧಾನವಾಗಿದ್ದ ಈ ಬೆಂಬಲಿಗರಿಗೆ ಸ್ತ್ರೀ ಪುರುಷರಿಬ್ಬರೂ ವಿದ್ಯಾವಂತರಾದರೆ ಮಾತ್ರವೇ ಇದು ಸಾಧಿತವಾಗುತ್ತದೆಂಬ ಅಭಿಪ್ರಾಯ ಬಲವಾಯಿತು. ಪಾಶ್ಚಾತ್ಯ ಶಿಕ್ಷಣ ಪಡೆದ ಹಲವು ಬಂಗಾಲಿ ತರುಣರು ತಮ್ಮ ಹೆಂಡತಿಯರನ್ನು, ಹೆಣ್ಣುಮಕ್ಕಳನ್ನೂ ಕಠಿಣವಾದ ಪಾರಂಪರಿಕ ಕೌಟುಂಬಿಕ ನಿರ್ಬಂಧಗಳಿಂದ ಬಿಡುಗಡೆಗೊಳಿಸಿದರು (ನೋಡಿ: ಜರಾಲ್ಡಿನ್ ಫೋರ್ಬ್ಸ್, 'ಮಹಿಳೆಯರಿಗಾಗಿ ಶಿಕ್ಷಣ', ಆಧುನಿಕ ಭಾರತದಲ್ಲಿ ಮಹಿಳೆ)

ಬ್ರಿಟೀಶ್ ಪ್ರಭುತ್ವ, ಸ್ತ್ರೀ ಶಿಕ್ಷಣವನ್ನು ಆರಂಭಿಸುವುದರಿಂದ ಮಿಶನರಿಗಳಿಗೆ ಉಪಯುಕ್ತವೇ ಆಗಿತ್ತು. ಮತಾಂತರಗೊಳಿಸುವ ಹಿನ್ನೆಲೆಯಲ್ಲಿ ಮಹಿಳಾ ಸಮುದಾಯವನ್ನು ತಮ್ಮ ಕಾರ್ಯಚಟುವಟಿಕೆಯಲ್ಲಿ ಒಳಗು ಮಾಡಿಕೊಳ್ಳಲು ಸಹಾಯವಾಗುತ್ತಿತ್ತು. ಹುಡುಗರಿಗೆ ಮತ್ತು ಹುಡುಗಿಯರಿಬ್ಬರಿಗೂ ಸಹ ಶಿಕ್ಷಣವನ್ನು ಒಪ್ಪದಿರುವ ಸಾಂಪ್ರದಾಯಿಕ ಮನೋಭಾವದ ಸಂದರ್ಭವನ್ನು ಗಮನಿಸಿ ೧೮೧೯ರಲ್ಲಿ ಕಲ್ಕತ್ತದಲ್ಲಿ 'ಫೀಮೇಲ್ ಜುವೆನಿಲ್ ಸೊಸೈಟಿ' ಎಂಬ ಬ್ಯಾಪಿಸ್ಟ್ ಶಾಲೆ ಆರಂಭಗೊಂಡಿತು. ಹೀಗೆ ಬಂಗಾಲದಲ್ಲಿ ಆರಂಭಗೊಂಡ ಸ್ತ್ರೀ ಶಾಲೆಗಳ ಮಾದರಿಯಲ್ಲಿ ಮಿಶನರಿಗಳು ಭಾರತದಾದ್ಯಂತ ಶಾಲೆಗಳನ್ನು ತೆರೆದರು.

ಲಂಡನ್ ಮಿಶನರಿ ಸೊಸೈಟಿಯವರು ೧೮೩೩ರಲ್ಲಿ ಬಳ್ಳಾರಿ ಹಾಗೂ ಮೈಸೂರಿನಲ್ಲಿ; ೧೮೩೯ರಲ್ಲಿ ಬೆಳಗಾವಿಯಲ್ಲಿ; ೧೮೪೦ರ ಹೊತ್ತಿಗೆ ಬೆಂಗಳೂರಿನಲ್ಲಿ ಕನ್ನಡ ಶಾಲೆಯನ್ನು ಆರಂಭಿಸಿದರು. ಮಿಶನರಿಗಳು ಭಾರತದ ಹಲವೆಡೆ ಬಾಲಿಕೆಯರಿಗಾಗಿ ಶಾಲೆಗಳನ್ನು ತೆರೆಯಲು ಪ್ರಾರಂಭವಾದಾಗ ಸುಧರಣಾವಾದಿಗಳು ಮಹಿಳೆಯರ ಶಿಕ್ಷಣ ಹೇಗಿರಬೇಕು ಎಂಬುದನ್ನು ಯೋಚಿಸತೊಡಗಿದರು.

ಆರ್ಯ ಸಮಾಜ ಮತ್ತು ಬ್ರಹ್ಮ ಸಮಾಜ ಮುಂತಾದ ಸಮಾಜ ಸುಧಾರಣ ಸಂಘಟನೆಗಳು ಸ್ತ್ರೀ ಮಹಿಳಾ ಶಿಕ್ಷಣದ ವಿಚಾರವನ್ನು ಗಂಭೀರವಾಗಿ ಪರಿಗಣಿಸಿದವು. ಈಶ್ವರಚಂದ್ರ ವಿದ್ಯಾಸಾಗರ, ಜ್ಯೋತಿಬಾ ಫುಲೆ, ದಯಾನಂದ ಸರಸ್ವತಿ, ರಾನಡೆ, ಕರ್ವೆ ಮುಂತಾದವರು ಸ್ತ್ರೀ ಶಿಕ್ಷಣದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡರು. ೧೮೪೮ರಲ್ಲಿ ಕಲ್ಕತ್ತ ಫೀಮೇಲ್ ಸ್ಕೂಲ್, ೧೮೫೨ರಲ್ಲಿ ದಲಿತ ಸ್ತ್ರೀ ಶಾಲೆಗಳು ಆರಂಭಗೊಂಡವು. ೧೮೫೩ರಲ್ಲಿ ಈಶ್ವರಚಂದ್ರ ವಿದ್ಯಾಸಾಗರರು ವಿಶೇಷ ಶಿಕ್ಷಣಾಧಿಕಾರಿಯಾದ ಮೇಲೆ ಬಂಗಾಲದುದ್ದಕ್ಕೂ ಹಲವಾರು ಶಾಲೆಗಳನ್ನು ತೆರೆದರು.

ಇದೇ ಸಂದರ್ಭದಲ್ಲಿ ಇಸ್ಲಾಂ ಹಾಗೂ ಸಿಖ್ ಸಮಾಜಗಳು ಕೂಡ ಸ್ತ್ರೀ ಶಿಕ್ಷಣದತ್ತ ಗಮನ ಹರಿಸಿದವು. ಗುಜರಾತಿನಲ್ಲಿ ಡಂಗರಾಮ ಮೆಹತಾಜಿ, ಕರ್ಸನ್‌ದಾಸ್ ಮುಲ್ಜಿ, ಆಂಧ್ರದಲ್ಲಿ ವೀರೇಶಲಿಂಗಂ ಪಂತುಲು, ಪಂಜಾಬಿನಲ್ಲಿ ಜಸ್ಟೀಸ್ ಷಹಾದಿನ್, ಮುಂಬೈನ ತಾಯಬ್ ಅಲಿ, ಸರ್ ಸೈಯ್ಯದ್ ಅಹಮದ್ ಖಾನ್ ಆಲಿ, ಸೈಯ್ಯದ್ ಮುಮ್ತಾಜ್ ಅಲಿ, ನಾಸಿರ್ ಅಹಮದ್ ಮುಂತಾದವರು ಸ್ತ್ರೀ ಶಿಕ್ಷಣದ ಸಾಕಾರಕ್ಕಾಗಿ ಶ್ರಮಿಸಿದ್ದಾರೆ.

೧೮೬೭ರ ಹೊತ್ತಿಗೆ ಮೈಸೂರು ಸಂಸ್ಥಾನದಲ್ಲಿ ಮೂರು ಸರಕಾರಿ ಹೆಣ್ಣುಮಕ್ಕಳ ಶಾಲೆಗಳು, ಧಾರವಾಡ, ವಿಜಾಪುರ ಜಿಲ್ಲೆಗಳಲ್ಲಿ ೦೫ ಶಾಲೆಗಳು, ಉತ್ತರ ಕನ್ನಡದಲ್ಲಿ ೦೨ ಶಾಲೆಗಳು ತೆರೆಯಲ್ಪಟ್ಟವು. ಇದೇ ಹೊತ್ತಿನಲ್ಲಿ ೧೮೮೨ರಲ್ಲಿ ಹಂಟರ್‌ರವರ ಇಂಡಿಯನ್ ಎಜುಕೇಶನ್ ಕಮಿಷನ್ ವರದಿಯು, ಶಾಲೆಗೆ ಹೋಗಲು ಅರ್ಹರಾದ ವಯಸ್ಸಿನ ಪ್ರತಿಶತ ೯೮ಕ್ಕಿಂತಲೂ ಹೆಚ್ಚಿನ ಹುಡುಗಿಯರು ಶಾಲೆಗಳಿಗೆ ದಾಖಲಾಗಿರಲಿಲ್ಲ ಎಂಬ ಸಂಗತಿಯನ್ನು ತಿಳಿಸಿತು. ಜತೆಗೆ ಬಾಲಕಿಯರ ಶಾಲೆಗಳಿಗೆ ಹೆಚ್ಚು ಧಾರಾಳವಾಗಿ ಅನುದಾನಗಳನ್ನು ನೀಡಬೇಕೆಂದು, ಹೆಚ್ಚು ವಿದ್ಯಾರ್ಥಿವೇತನ ಹಾಗೂ ಬಹುಮಾನಗಳನ್ನು ನೀಡುವ ಮೂಲಕ ಬಾಲಕಿಯರ ಅವಕಾಶಗಳನ್ನು ಹೆಚ್ಚಿಸಬೇಕೆಂದೂ ಹೇಳಿತು. ಮುಂದಿನ ಎರಡು ದಶಕಗಳಲ್ಲಿ ಉನ್ನತ ಶಿಕ್ಷಣವು ತೀವ್ರವಾಗಿ ವಿಸ್ತರಿಸಿತು. ೧೮೮೭ರಲ್ಲಿ ನ್ಯಾಷನಲ್ ಸೋಷಿಯಲ್ ಕಾನ್ಫರೆನ್ಸ್ ಕೂಡ ಸ್ತ್ರೀ ಶಿಕ್ಷಣದ ಅಗತ್ಯವನ್ನು ಪ್ರತಿಪಾದಿಸಿತು. ೧೮೬೬ರ ನಂತರ ಸಿರಸಿ ಮತ್ತು ಕುಮಟಾಗಳಲ್ಲಿ ಹೆಣ್ಣುಮಕ್ಕಳಿಗಾಗಿಯೇ ಎರಡು ಶಾಲೆಗಳನ್ನು ತೆರೆಯಲಾಯಿತು. ೧೮೮೧ರ ವೇಳೆಗೆ ಹೆಣ್ಣುಮಕ್ಕಳ ನಾಲ್ಕು ಶಾಲೆಗಳನ್ನು ತೆರೆಯಲಾಯಿತು. ಲಂಡನ್ ಮಿಶನರಿಯು ೧೮೫೦ರ ನಂತರದಲ್ಲಿ ಬೆಳಗಾವಿ ಪ್ರದೇಶದಲ್ಲಿ ಬಾಲಕಿಯರಿಗಾಗಿ ಆರು ಶಾಲೆಗಳನ್ನು ತೆರೆಯಿತು.

ಮೇಲಿನ ಸ್ತ್ರೀ ಶಿಕ್ಷಣದ ಚರ್ಚೆಯ ಭಾಗವಾಗಿ, ಮಾದರಿ ಮೈಸೂರು ಸಂಸ್ಥಾನವು ೧೯೨೨ರ ಸುಮಾರಿಗೆ ಮಿಡಲ್ ಸ್ಕೂಲ್ ಮತ್ತು ಹೈಸ್ಕೂಲ್ ಪಠ್ಯಕ್ರಮದಲ್ಲಿ ಗೃಹ ವಿಜ್ಞಾನ, ಬ್ರಶ್ ವರ್ಕ್, ಸಂಗೀತ, ಕಸೂತಿ, ನರ್ಸಿಂಗ್‌ಗಳನ್ನು ಸೇರಿಸಿತು. ೧೯೩೨ರಲ್ಲಿ ಎಲ್.ಎಸ್.ನಲ್ಲಿ ಅಡಿಗೆ, ಲಾಂಡ್ರಿ, ಫೈನ್ ಆರ್ಟ್, ಗೃಹಕೃತ್ಯವನ್ನು, ೧೯೩೭ರಲ್ಲಿ ಪ್ರೌಢಶಾಲೆಯಲ್ಲಿ ಗೃಹ ವಿಜ್ಞಾನವನ್ನು ಪಠ್ಯವಾಗಿ ತರಲಾಯಿತು. ೧೯೪೦ರಲ್ಲಿ ಹೆಣ್ಣುಮಕ್ಕಳಿಗೆ ಪ್ರತ್ಯೇಕ ಪರೀಕ್ಷೆಯನ್ನು ನಡೆಸಲಾಯಿತು. ಈ ಪ್ರತ್ಯೇಕ ಶಿಕ್ಷಣವು ೧೯೪೪ರವರೆಗೂ ಮುಂದುವರೆದುದಾಗಿತ್ತು.

ಬಹು ಸಂಕೀರ್ಣವಾಗಿದ್ದ ಈ ಕಾಲದಲ್ಲಿ ನಡೆದ ಸಾಮಾಜಿಕ ಸುಧಾರಣೆಗಳು ಪುರುಷರಿಂದಲೇ ನಡೆದ ಪ್ರಯತ್ನಗಳಾಗಿದ್ದು ಸ್ತ್ರೀ ಶಿಕ್ಷಣ, ವಿಧವಾ ಪುನರ್ವಿವಾಹ, ಬಾಲ್ಯ ವಿವಾಹ ವಿರೋಧ, ಸತಿ ಪದ್ಧತಿಯ ನಿಷೇಧ, ವಿಧವೆಯರ ಕೇಶಮುಂಡನ ವಿರೋಧ ಮುಂತಾದ ಸ್ತ್ರೀ ಸಮಸ್ಯೆಗಳ ನಿವಾರಣೆಯತ್ತ ಗಮನ ಹರಿಸಲಾಯಿತು. ಇಂಥ ಸುಧಾರಣೆಗಳಿಂದ ಕೆಲವು ವರ್ಗದ ಮಹಿಳೆಯರಿಗೆ ಶಿಕ್ಷಣ ಪಡೆಯುವ ಅವಕಾಶ ದೊರೆಯಿತು.

ಸ್ವಾತಂತ್ರ್ಯ ಪೂರ್ವ ಲೇಖಕಿಯರು ಪಡೆದದ್ದು ಪ್ರಾಥಮಿಕ ಶಿಕ್ಷಣವನ್ನು ಮಾತ್ರ. ತಿರುಮಲಾಂಬ ಮತ್ತು ಶ್ಯಾಮಲಾದೇವಿಯವರು ನಾಲ್ಕನೆಯ ತರಗತಿಯವರೆಗೆ; ಕಲ್ಯಾಣಮ್ಮ ಮತ್ತು ತಿರುಮಲೆ ರಾಜಮ್ಮ ಲೋಯರ್ ಸೆಕೆಂಡಿಯರ್‌ವರೆಗೆ; ಬೆಳಗೆರೆ ಜಾನಕಮ್ಮ ಎರಡನೇ ತರಗತಿಯವರೆಗೆ; ಸರಸ್ವತಿಬಾಯಿ ರಾಜವಾಡೆಯವರು ಮಾತ್ರ ಎಸ್.ಎಸ್.ಎಲ್.ಸಿ, ರಾಷ್ಟ್ರಭಾಷಾ, ವಿಶಾರದ ಪರೀಕ್ಷೆಯನ್ನು ಪಾಸ್ ಮಾಡಿದ್ದರು. ಈ ಲೇಖಕಿಯರೆಲ್ಲ ಇನ್ನೂ ಮುಂದೆ ಓದಬೇಕೆಂಬ ಅಗಾಧ ಆಕಾಂಕ್ಷೆಯುಳ್ಳವರು. ಆದರೆ, ವಿವಾಹ ಬಂಧನ ಇದಕ್ಕೆ ತೊಡಕಾಯಿತು. ಮಹಿಳಾ ಬರಹಗಾರರು ಪ್ರತಿಪಾದಿಸುವ ಶಿಕ್ಷಣದ ಸ್ವರೂಪವನ್ನು ತಿಳಿಯುವ ಭಾಗವಾಗಿ ಕೆಳಗೆ ಕೆಲವು ಮಾತುಗಳನ್ನು ಕೊಡಲಾಗಿದೆ.

### ಅ) ಶಿಕ್ಷಣದ ಸ್ವರೂಪ

"ಪತಿಗೆ ಅನುಕೂಲೆಯಾದ ಪತ್ನಿಯೆಂದೂ ವಿಹಿತವನ್ನರಿತ ಮಾತೆಯೆಂದೂ ಹೇಳುವಂತಾದರೆ ಸಾಕು. ಹಾಗಾಗಲಿಕ್ಕೆ ಹೈಸ್ಕೂಲು, ಕಾಲೇಜುಗಳ ಅಭ್ಯಾಸವು ಬೇಕಾಗಿಲ್ಲ. ತಕ್ಕಮಟ್ಟಿಗೆ ಅಕ್ಷರ ಜ್ಞಾನ, ಸಾಮಾನ್ಯ ಲೆಕ್ಕಾಚಾರ, ತಕ್ಕಮಟ್ಟಿಗೆ ಪದಾರ್ಥಗಳ ಗುಣದೋಷ ವಿಚಾರ ಇವುಗಳು ತಿಳಿಯುವ ಮಟ್ಟಿಗೆ ಅಭ್ಯಾಸವೂ ವ್ಯಾಸಂಗವೂ ಆದರೆ ಸಾಕು. ಅದಕ್ಕೂ ಹೆಚ್ಚಿಗೆ ಬೇಕೆಂದರೆ ಸ್ವದೇಶದ ಇತಿಹಾಸ, ಧರ್ಮಸೂಕ್ಷ್ಮ, ಪುರಾಣ ಮತಗಳ ಸಾರ ಇವುಗಳನ್ನೂ ಪ್ರಾಪಂಚಿಕ ವ್ಯವಹಾರಗಳನ್ನೂ ಅವಕಾಶನುಸಾರ ತಿಳಿದುಕೊಳ್ಳಬಹುದು" (ಹಿತೈಷಿಣಿ ಹೆಜ್ಜೆಗಳು, ಪುಟ-೭೨)

"ಮಾತಾಪಿತೃಗಳು ತಮಗೆ ಅಪಖ್ಯಾತಿಯು ಬಾರದಂತೆ ಹೆಣ್ಣುಮಕ್ಕಳು ಅತ್ತೆಯ ಮನೆಗೆ ಹೋಗುವ ಕಾಲವು ಸಮೀಪಿಸುವುದಕ್ಕೆ ಮೊದಲೇ ಅವರನ್ನು ಉತ್ತಮ ಗುಣವುಳ್ಳವರನ್ನಾಗಿಯೂ, ತಿಳುವಳಿಕೆಯನ್ನುಳ್ಳವರಾಗಿಯೂ ಮಾಡಬೇಕು. ತಮ್ಮ ಪುತ್ರಿಯರಿಗೆ ಮೊದಲು ಗುಣಗಳನ್ನು ಕಲಿಸಿ ಜ್ಞಾನವತಿಯರನ್ನಾಗಿ ಮಾಡದೇ ಸಂಸಾರ ಸಾಗರದಲ್ಲಿ ಈಜುವುದಕ್ಕೋಸ್ಕರ ಅವರನ್ನು ಪುರುಷರ ಮನೆಗಳಿಗೆ ಕಳುಹಿಸುವುದು ಮಾತಾಪಿತೃಗಳ ಧರ್ಮವಲ್ಲ" (ಕಲ್ಯಾಣ ಸರಸ್ವತಿ, ಪುಟ-೧೪೩)

ಹಳ್ಳಿ ಸ್ತ್ರೀಯರನ್ನು ಕುರಿತು "ಅವರಲ್ಲಿ ಅನೇಕಾನೇಕ ಘೋರ ಅಂಧರೂಢಿಗಳಿರುತ್ತವೆ. ಅವುಗಳ ಸೆಳವಿಗೆ ಸಿಕ್ಕಿ ಪ್ರತಿ ಮನೆಗೆ ವರ್ಷಕ್ಕೆ ಸರಾಸರಿ ಎರಡರಂತೆ ಜೀವಗಳು ಎರವಾಗುತ್ತಿವೆ. ಶಿಕ್ಷಣವೇ ಅವುಗಳನ್ನುಳಿಸಲು ಸಮರ್ಥವಿದೆ... ಹಳ್ಳಿ ಸ್ತ್ರೀಯರು ಆಫೀಸಿನ ಕೆಲಸ ನಿರ್ವಹಿಸಬೇಕಾಗಿಲ್ಲ. ಅವರನ್ನು ರಾಷ್ಟ್ರದ ಮತ್ತು ಸಮಾಜದ ತಮ್ಮ ಕರ್ತವ್ಯ ಪಾಲನೆ ಮಾಡುವ ಶಕ್ತಿ ಕೊಡುವ ಉಚ್ಚ ನಾಗರೀಕರನ್ನಾಗಿ

ಮಾಡಬೇಕು. ಈ ಜಾಗೃತಿ ಕಾಲದಲ್ಲಿ ಜಾಗೃತ ನಾರಿಯರ ಅವಶ್ಯಕತೆಯಿದೆ. ಅದನ್ನು ಪೂರ್ತಿಗೊಳಿಸಲು ಶಿಕ್ಷಣ ವ್ಯವಸ್ಥೆಯಾಗಬೇಕು. ಅದಾಗದಿದ್ದರೆ ರಾಷ್ಟ್ರೋನ್ನತಿಯು ಬರೇ ಆಕಾಶ ಕೋಟೆಯೇ ಸರಿ" ('ಸ್ತ್ರೀ ಶಿಕ್ಷಣದ ಸಂಪೂರ್ಣತೆ ಎಂದು?', ಗಿರಿಬಾಲೆ, ಪುಟ-೨೪೦)

"ಸ್ತ್ರೀಯರಿಗೆ ಕೊಡುವ ಶಿಕ್ಷಣವು ಸರಿಯಾದದ್ದಿರಬೇಕು. ಸೊಳ್ಳೆ ನೊಣ ಮುಂತಾದ ಘಾತುಕ ಪ್ರಾಣಿಗಳ ಹುಟ್ಟು ಬೆಳವಣಿಗೆ, ಅವುಗಳಿಂದುಂಟಾಗುವ ಹಾನಿ ಮುಂತಾದವುಗಳನ್ನು ವಿವರವಾಗಿ ತಿಳಿಸಬೇಕು. ಸ್ವಚ್ಛತೆ, ಆರೋಗ್ಯ, ಶುಶ್ರೂಷೆ, ಸಂಗೋಪನ, ಪ್ರಥಮ ಚಿಕಿತ್ಸೆ, ಮಕ್ಕಳ ಮನೋವೃತ್ತಿಯ ಜ್ಞಾನ, ಅಂಗಿ ಟೊಪ್ಪಿಗೆಗಳನ್ನು ಹೆಣೆಯುವುದು, ಹರಿದವುಗಳನ್ನು ಹೊಲೆಯುವುದು, ಅಡಿಗೆ ಮಾಡುವುದು, ಸರ್ವಸಾಧರಣ ಔಷಧಗಳ ಉಪಯೋಗ ಮಾಡಿಕೊಳ್ಳುವ ಕ್ರಮ ಮುಂತಾದ ಉಪಯುಕ್ತ ವಿಷಯಗಳನ್ನು ಹೆಣ್ಣುಮಕ್ಕಳಿಗೆ ಕಲಿಸಿಕೊಡಬೇಕು" (ಶ್ಯಾಮಲಾದೇವಿ ಬೆಳಗಾಂವ್‌ಕರ್ 'ಗ್ರಾಮೋದ್ಧಾರ ಕಾರ್ಯದಲ್ಲಿ ಸ್ತ್ರೀಯರ ಭಾಗ', ಶ್ಯಾಮಲಾ ಸಂಚಯ, ಪುಟ-೨೫೨)

ಮೇಲಿನ ವ್ಯಾಖ್ಯಾನಗಳು ಮಹಿಳೆಯರಿಗೆ ಬೇಕಾದ ಶಿಕ್ಷಣದ ಸ್ವರೂಪವನ್ನು ಸ್ಪಷ್ಟಪಡಿಸಿವೆ. ಮಹಿಳೆಯರು ಪ್ರಾಥಮಿಕ ಶಿಕ್ಷಣವನ್ನು ಖಡ್ಡಾಯವಾಗಿ ಕಲಿಯುವಂತೆ ಪ್ರೇರೇಪಿಸಲಾಗಿದೆ. ಶಿಕ್ಷಣವನ್ನು ಪಡೆಯುವ ಮೂಲ ಉದ್ದೇಶ,

- ಪತಿಯೊಂದಿಗೆ ಎಲ್ಲ ಕಾರ್ಯಗಳಲ್ಲಿ ಸಹಕಾರಿಯಾಗಿರುವುದು. ಗಂಡನು ವಿದ್ಯಾವಂತನಾಗಿದ್ದು ಹೆಂಡತಿ ಅವಿದ್ಯಾವಂತಳಾದರೆ ಸಂಸಾರದ ಗಾಡಿ ಸುಗಮವಾಗಿ ಸಾಗುವುದಿಲ್ಲ. ಹೆಂಡತಿಯೇನು ಗಂಡನಷ್ಟು ಓದಿಕೊಂಡಿರಬೇಕಿಲ್ಲ. ಕೊನೇ ಪಕ್ಷ ಪ್ರಾಥಮಿಕ ಶಾಲೆಯನ್ನಾದರೂ ಕಲಿತಿರಬೇಕು.
- ಮಕ್ಕಳು ಭವಿಷ್ಯದಲ್ಲಿ ವಿದ್ಯಾವಂತರಾಗಲು ಗುಣವಂತರಾಗಲು ಮೊದಲು ತಾಯಿ ಶಿಕ್ಷಣವಂತೆಯಾಗಿರಬೇಕು.
- ಗೃಹಕಾರ್ಯಗಳನ್ನು ಹೆಚ್ಚು ಅಚ್ಚುಕಟ್ಟಾಗಿ ನೋಡಿಕೊಳ್ಳಲು, ಕುಟುಂಬದವರನ್ನು ಸಂಯಮ, ಪ್ರೀತಿಯಿಂದ ನೋಡಿಕೊಳ್ಳಲು ವಿದ್ಯೆ ಬೇಕು.
- ಕುಟುಂಬಕ್ಕೆರಗುವ ಆಪತ್ತುಗಳನ್ನು ಸಮರ್ಥವಾಗಿ ಎದುರಿಸಲು ವಿದ್ಯೆಯ ಅವಶ್ಯಕತೆಯಿದೆ.
- ಸಮಾಜದ ಮಹಿಳೆಯರೆಲ್ಲರ ಆ ಮೂಲಕ ರಾಷ್ಟ್ರದ ಸೇವೆಗೆ ತಮ್ಮನ್ನು ತೊಡಗಿಸಿಕೊಳ್ಳಲು ಶಿಕ್ಷಣ ಬೇಕು.
- ಭಾರತವು ಹಳ್ಳಿಗಳಿಂದ ತುಂಬಿದ ದೇಶವಾಗಿದ್ದು, ಹಳ್ಳಿಯ ಹೆಣ್ಣುಮಕ್ಕಳು ಉಚ್ಚ ನಾಗರಿಕರನ್ನಾಗಿ ಪರಿವರ್ತಿಸಲು ಶಿಕ್ಷಣದ ಅವಶ್ಯಕತೆಯಿದೆ.
- ಮಹಿಳೆಯು ಪ್ರಥಮ ಚಿಕಿತ್ಸೆಯನ್ನು ಕಲಿತಿರುವ ಕುಟುಂಬದ ಡಾಕ್ಟರ್ ಕೂಡ ಆಗಿರಬೇಕು.

ಸ್ವಾತಂತ್ರ್ಯಪೂರ್ವ ಮಹಿಳಾ ಲೇಖಕಿಯರು ಮಂಡಿಸುವ ಶಿಕ್ಷಣದ ಕುರಿತ ತತ್ವಗಳು ಸೀಮಿತ ತಳಹದಿಯನ್ನು ಹೊಂದಿವೆ ಎಂದೆನ್ನಿಸಬಹುದು. ಉನ್ನತ ಶಿಕ್ಷಣವನ್ನು, ಸಂಬಳ ತರುವ ಕೆಲಸಗಳನ್ನು ಆಕೆ ಹೊಂದಬೇಕಾಗಿಲ್ಲ ಎನ್ನುವುದು ಇವರ ಅಪೇಕ್ಷೆಯಾಗಿಲ್ಲ ನಿಜ. ಆದರೆ, ಕುಟುಂಬದ ವ್ಯವಸ್ಥೆಯನ್ನು

ಆಧುನಿಕ ಕಾಲಕ್ಕೆ ತಕ್ಕಂತೆ ಹೊಂದಿಸುವ ಮತ್ತು ಸಾಂಪ್ರದಾಯಿಕ ಸಂಬಂಧಗಳನ್ನು ಹಾಗೆ ಉಳಿಸಿಕೊಂಡು, ಹೊರಗೆ ದುಡಿಯುವ ಗಂಡಸರ ಮನಸ್ಸಿಗೆ ಒಪ್ಪುವ ಹಾಗೆ ಜೀವನವನ್ನು ನಿರ್ವಹಿಸಿಕೊಂಡು ಹೋಗುವುದು ಅಂದಿನ ಮಹಿಳೆಯರಿಗೆ ಅಗತ್ಯವಾಗಿ ಕಾಣಿಸಿತೇ ಹೊರತು, ಸಮಾಜ ಸುಧಾರಕರು ಮಂಡಿಸುವ ಅನೇಕ ವಿಚಾರಗಳನ್ನು ಸಾರಾ ಸಗಟಾಗಿ ಸ್ವೀಕರಿಸಲು, ನಿರಾಕರಿಸುವುದು ಅಂದಿನ ಲೇಖಕಿಯರ ಬದ್ಧತೆಯಾಗಿದೆ.

**ಆ) ದೈಹಿಕ ಶಿಕ್ಷಣ–ಒಂದು ವಾಗ್ವಾದ**

ಹೆಣ್ಣುಮಕ್ಕಳಿಗೆ ದೈಹಿಕ ಶಿಕ್ಷಣವನ್ನು ನೀಡಬೇಕೆ–ಬೇಡವೆ ಎಂಬ ಬಗ್ಗೆ ತೀವ್ರವಾದ ಚರ್ಚೆ ನಡೆದಾಗ, ಸರಕಾರ, ೧೯೦೭ರ ವೇಳೆಗೆ ಬಂಗಾಳದಲ್ಲಿ ಬದಲಾದ ಪಠ್ಯಕ್ರಮದಲ್ಲಿ ದೈಹಿಕ ಶಿಕ್ಷಣಕ್ಕೆ ಬದಲಾಗಿ ಹೆಣ್ಣುಮಕ್ಕಳಿಗೆ ಕಸೂತಿ ಹಾಗೂ ಗೃಹ ವಿಜ್ಞಾನವನ್ನು ಸೇರಿಸಲಾಯಿತು. ಆದರೆ, ಹೆಣ್ಣುಮಕ್ಕಳ ಸರ್ವಾಂಗೀಣ ಅಭಿವೃದ್ಧಿಗೆ ಬೇಕಾಗುವ ಸಕಲ ಸವಲತ್ತುಗಳನ್ನು ಒದಗಿಸಿಕೊಡಲು ಮುಂದಾದ ಆರ್. ಕಲ್ಯಾಣಮ್ಮನವರು 'ಶಾರದಾ ಸ್ತ್ರೀ ಸಮಾಜ'ಕ್ಕೆ ೧೯೨೨ರ ನಂತರ ಸ್ವಂತ ಕಟ್ಟಡವನ್ನು ಕಟ್ಟಿಸಿ ಅದರಲ್ಲಿ ಬ್ಯಾಡ್‌ಮಿಟನ್ ಮತ್ತು ಟೆನಿಸ್ ಆಟದ ಕೋರ್ಟನ್ನು ನಿರ್ಮಿಸಲಾಯಿತು.

ಈ ವರದಿಯಿಂದಾಗಿ ತೀವ್ರ ಅಸಮಾಧಾನಗೊಂಡ ತಿರುಮಲಾಂಬ ಅವರು "ಶಾರದಾ ಸಮಾಜವು ಕರ್ಣಾಟಕ ಮಹಿಳೆಯರ ಅಭ್ಯುದಯಕ್ಕಾಗಿಯೇ ಹುಟ್ಟಿರುವುದು. ಮಹಿಳಾಭ್ಯುದಯವಾಗಬೇಕದರೆ ನಮಗೆ ಉಚಿತವಾದ ನೀತಿ ಶಿಕ್ಷಣ, ಗೃಹ ಶಿಕ್ಷಣಗಳ ಪರವಾದ ಆಟಪಾಟಗಳೇ ಅವಶ್ಯವಾಗಿವೆ. ಅದನ್ನು ಬಿಟ್ಟು ಕೇವಲ ಪಾಶ್ಚಾತ್ಯ ಪದ್ಧತಿಯನ್ನು ನಮ್ಮವರ ಆಚರಣದಲ್ಲಿ ತರಬೇಕೆಂದರೆ ಶುಭಕಾರಿಯಲ್ಲ... ಏಕೆಂದರೆ, ನಮ್ಮ ಮಹಿಳೆಯರು, ತಾವು ಕೈಗೊಂಡಿರುವ ಗೃಹರಾಜ್ಯ ನಿರ್ವಾಹ ಕಾರ್ಯಗಳಲ್ಲಿ ಒಂದೊಂದು ಚಿಲ್ಲರೆ ಕೆಲಸವು ಕೂಡ ಮೇಲೆ ಹೇಳಿದ ವ್ಯಾಯಾಮಕ್ಕೂ ಮಿಗಿಲಾದ ಅಂಗ ಸಾಧನೆಯ ಬಲನ್ನುಂಟು ಮಾಡುತ್ತಿದೆ. ಅಂತಹದರಲ್ಲಿ ಅವರು ಬೆಳಗಾದುದು ಮೊದಲು ರಾತ್ರಿ ಮಲಗುವವರೆಗೆ ಮಾಡುವ ಸಣ್ಣದೊಡ್ಡ ಕೆಲಸಗಳೆಲ್ಲವೂ ಸೇರಿದರೆ ಅವರಿಗೆ ದಿನವೊಂದಕ್ಕೆ ಎಷ್ಟರಮಟ್ಟಿಗೆ ಅಂಗಸಾಧನೆಯಾಗಿರಬಹುದೆಂದು ಯೋಚಿಸಬೇಕಾಗಿದೆ. ಅತ್ತ ಗೃಹಕೃತ್ಯದ ಮೇಲಿನ ಅಭಿಮಾನವನ್ನು ತಪ್ಪಿಸಿ, ಇತ್ತ ಗುರುದೈವಭಕ್ತ ಸ್ವರೂಪ ಜ್ಞಾನಗಳನ್ನು ತಪ್ಪಿಸಿ, ಪುರುಷ ವರ್ಗಕ್ಕೆ ಸಮಾನರಾಗಬೇಕೆಂದು ಸ್ಪರ್ಧಿಸುವಂತೆ ಮಾಡುವ ಇಂತಹ ವಿದೇಶೀ ಆಚರಣಗಳು ಮಾತ್ರ ನಮ್ಮ ಅಂಗನೆಯರ ಪಾಲಿಗೆ ಬಾರದಂತೆ ಶಾರದಾ ಸ್ತ್ರೀ ಸಮಾಜವು ನೋಡಿಕೊಂಡರೆ ಎಷ್ಟೋ ಉಪಕಾರ ಮಾಡಿದಂತಾಗುತ್ತದೆ" (ಉದ್ಧೃತ: ನೆಲದ ಮರೆಯ ನಿಧಾನ, ಪುಟ–೩೭) ಎಂಬ ತೀರ್ಮಾನಕ್ಕೆ ಬರುತ್ತಾರೆ. ಆದರೆ, ಕಲ್ಯಾಣಮ್ಮನವರು ತಾವು ಹಮ್ಮಿಕೊಂಡ ಕಾರ್ಯವನ್ನು ಮುಂದುವರೆಸುತ್ತಾರೆ.

ಅಷ್ಟಕ್ಕೇ ನಿಲ್ಲದೆ, ಶಾರೀರಿಕ ವ್ಯಾಯಾಮದ ಚರ್ಚೆಯನ್ನು 'ಶಲ್ಲಕುಟ್ಟಿಗೆ ಚಿಕ್ಕಮ್ಮನು ಬರೆದ ಉತ್ತರ'ದಲ್ಲಿಯೂ ಮುಂದುವರೆಸಿದ್ದಾರೆ. "ಬೈಸಿಕಲ್ಲಿನಲ್ಲಿ ತಿರುಗುವ ಭಾಮೆಯರ

ವರ್ತನವನ್ನರಿಯಬೇಕೋ? ಅಂಗಡಿ ಮುಂಗಟ್ಟುಗಳಿಗೆ ಇಷ್ಟರಾದವರೊಡನೆ ಹೋಗಿ ಬರುವ ಅಂಗನೆಯರ ಆಚರಣವನ್ನರಿಯಬೇಕೋ? ಪ್ರಪಂಚದ ಕೋಲಾಹಲವನ್ನು ತಿಳಿದಿಕೊಳ್ಳಬೇಕೋ? ಏನು? ಅಂಗಸಾಧನೆಯೆಂದರೆ ಯಾವವು? ಟೆನ್ನಿಸ್ ಬ್ಯಾಡ್‌ಮಿಂಟನ್ ಇವುಗಳೇ ಅಹುದಷ್ಟೆ? ಆದರೆ ಅಷ್ಟರಿಂದ ಸಂಚಾರ ವೇಗ ಗಮನಶಕ್ತಿ ಬರಬಹುದು. ಕೈಗಳಿಗೆ ಬೀಸಿ ಎಸೆಯುವ ಗುರಿ ಹೊಡೆಯುವ ಬಲವುಂಟಾಗಬಹುದು. ಆದರೆ, ಲಂಘನ ಶಕ್ತಿಯೂ ಪಟುತ್ವವೂ ಬರಬೇಕಾದರೆ, ಗಂಡಸರು ಆಡುವಂತೆ 'ಫುಟ್ ಬಾಲ್ ಕ್ರಿಕೇಟ್'ಗಳೂ ಬೇಡವೇ?...ವಿವಿಧ ಅಂಗಸಾಧನೆಗಳಿಂದ ಕಾಯಪುಷ್ಟಿ ಹೊಂದಿ ಬಂದು, ಗೃಹ ಕಾರ್ಯದಲ್ಲಿ ಸ್ವಯಂ ದಕ್ಷತೆಯನ್ನು ಪ್ರದರ್ಶಿಸಿ ಮಾದರಿಯಾಗಿ ನಿಲ್ಲುವ ಮಹಿಳಾ ಮಣಿಯರನ್ನು ನೋಡಿದ ಬಳಿಕ ನಮ್ಮ ಹುಡುಗಿಯರನ್ನೂ ಕಳುಹಿದರಾಯಿತು. ಈಗಲಂತೂ ಬೇಕಾಗಿಲ್ಲ" (ಹಿತೈಷಿಣಿ ಹೆಜ್ಜೆಗಳು, ಪುಟ-೨೭೨) ಕಲ್ಯಾಣಮ್ಮನವರು ಮಹಿಳೆಯರಿಗೆ ಆಟದ ಮೈದಾನವನ್ನು ನಿರ್ಮಿಸಿದ ಘಟನೆ ಕುತೂಹಲಕಾರಿ ವಾಗ್ವಾದಕ್ಕೆ ಎಡೆ ಮಾಡಿಕೊಟ್ಟಿತು.

ತಿರುಮಲಾಂಬರವರ ವಿಚಾರಕ್ಕೆ ವ್ಯತಿರಿಕ್ತವಾಗಿ ಶ್ಯಾಮಲಾದೇವಿಯವರು ಶಾರೀರಿಕ ಶಿಕ್ಷಣವನ್ನು ಬೆಂಬಲಿಸಿ "ಮನುಷ್ಯನು ಈವರೆಗೆ ಬಗೆಬಗೆಯ ಸುಧಾರಣೆಗಳನ್ನು ಮಾಡುತ್ತ ಬಂದನೇ ಹೊರತಾಗಿ, ಶಾರೀರಿಕ ದುಡಿತವು ಕಡಿಮೆಯಾದಲ್ಲಿ ಶರೀರದೊಳಗಿನ ಸಾಮರ್ಥ್ಯವು ತಂತಾನೇ ಕಡಿಮೆಯಾದೀತೆಂಬ ಪರಿಣಾಮವನ್ನು ನೆನಪಿನಲ್ಲಿಟ್ಟು, ಹಾಗಾಗದಂತೆ ನೋಡಿಕೊಳ್ಳುವ ಮುಂಜಾಗರೂಕತೆಯನ್ನು ವಹಿಸಲಿಲ್ಲ. ಸುದೈವದಿಂದ ಈಗಲಾದರೂ ತನ್ನೀ ತಪ್ಪು ಮಾನವನ ಲಕ್ಷ್ಯಕ್ಕೆ ಬಂದಿದೆ. ಅಂತೆಯೇ ವ್ಯಾಯಾಮ ಶಾಲೆ, ಆಸನ ವರ್ಗಗಳು, ಶಾಲೆ-ಕಾಲೇಜುಗಳಲ್ಲಾರಂಭಿಸಿರುವ ಒತ್ತಾಯದ ಶಾರೀರಿಕ ಶಿಕ್ಷಣ, ಈಜು ಕಲಿಸುವ ಏರ್ಪಾಟುಗಳು ಅಲ್ಲಲ್ಲಿ ಕಾಣತೊಡಗಿವೆ. ಅಂತೂ ಕಳೆದುಕೊಂಡ ಶರೀರ ಸಂಪತ್ತಿಯನ್ನು ಮರಳಿ ದೊರಕಿಸಲಿಕ್ಕೆ ಮಾನವನು ಮತ್ತೆ ಪ್ರಯತ್ನಿಸುತ್ತಲಿದ್ದಾನೆ. ಈ ಆಸೆಯು ಪ್ರಶಂಸನೀಯವಾಗಿದೆ" ('ಜೀವನದಲ್ಲಿ ಶಿಸ್ತು', ಶ್ಯಾಮಲಾ ಸಂಚಯ, ಪುಟ-೨೭೦) ಎಂದು ಶ್ಲಾಘಿಸಿ, ಅದಕ್ಕೆ ಮಹಿಳೆಯರು ಹೇಗೆ ತಯಾರಿ ನಡೆಸಬೇಕೆಂಬ ಮಾರ್ಗದರ್ಶಿ ಸೂತ್ರಗಳನ್ನೂ ಹೀಗೆ ತಿಳಿಸುತ್ತಾರೆ "ಹೆಣ್ಣು ಹುಡುಗಿಯರಾದರೋ ಅವರನ್ನು ನೋಡಲಿಕ್ಕೂ ಆಗದು. ಪ್ರತಿಯೊಬ್ಬಳೂ ನಡೆಯುವಾಗ ವಿಪರೀತವಾಗಿ ಬಾಗಿ, ಡೂಗು ಹಾಯಿಸಿ ನಡೆಯುತ್ತಾಳೆ, ಅವಳಿಗೆ ತನ್ನೆದೆಯ ಬಗ್ಗೆ ನಾಚಿಕೆಯಾಗುತ್ತಿರಬೇಕು! ಹಾಗೆ ನೋಡಿದರೆ ತರುಣಿಯರಿಗೆ ತಮ್ಮ ಉನ್ನತ ಉರೋಭಾಗದ ಅಭಿಮಾನವುಂಟಾಗಿ, ನಿರ್ಭಯ-ನಿ:ಸಂಕೋಚ ರಿತಿಯಿಂದವರು ಸೆಟೆದು ನಡೆಯಬೇಕು. ತಲೆಯ ಮೇಲೆ ಭಾರ ಹೊತ್ತುಕೊಂಡು ಹೋಗುವ ಒಕ್ಕಲಿಗರ ಹೆಣ್ಣುಮಕ್ಕಳನ್ನು ನೋಡಿದರೆ ನನ್ನ ಮಾತಿನ ಅರ್ಥವು ಸ್ಪಷ್ಟವಾಗುವುದು. ಬ್ರಾಹ್ಮಣ ಸ್ತ್ರೀಯರು ಅವರೆದುರಿಗೆ ಹೇಗೆ ನಿ:ಸತ್ವರಾಗಿ ಕಾಣುತ್ತಾರೆ! ನೆಟ್ಟರಿಕೆಯ (ಸೆಟೆದು ನಡೆಯುವುದರ) ಬಗ್ಗೆ ಅವರಿಗೆ ಬೇಸರಿಕೆಯೇ ಎನಿಸುತ್ತಿರಬೇಕು ಇಲ್ಲವಾದರೆ ಸಾಯಕಲ್ ಮೇಲೆ ಕೂಡುವಾಗ ಸಹ ಸೆರಗು ಕಟ್ಟುವ ಅಗತ್ಯವು ಅವರಿಗನಿಸಬಾರದೆ?" (ಅದೇ, ಪುಟ-೨೭೦) ಎಂದು ಪ್ರಶ್ನಿಸಿ ಹುಡುಗಿಯರು ನೆಟ್ಟಗೆ ನಡೆಯಲು, ಸ್ವಾಭಿಮಾನದಿಂದ ನಡೆಯಲು ಕರೆ ನೀಡಿದ್ದಾರೆ. ಜತೆಗೆ "ಸಾರಂಶವೆಂದರೆ,

ಪೋಷಾಕಿನ ರೀತಿಯು ಸಮಯೋಚಿತವಾಗಿರಬೇಕೆಂದು ನನ್ನ ಅಭಿಮತ. ಸಭೇ-ಸಿನಿಮಾ-ತಿರುಗಾಟಗಳಿಗೆ ಹೋಗುವಾಗ ಕಚ್ಚೆ ಹಾಕದೆ ಪತ್ತಲವುಟ್ಟರೆ ಸೊಗಸಾಗಿ ತೋರುವುದು; ಆದರೆ ಅಡಿಗೆ ಮಾಡುವಾಗ, ಬಟ್ಟೆಯೊಗೆಯುವಾಗ, ಬಡಿಸುವಾಗ, ಬೀಸುವಾಗ, ಕುಟ್ಟುವಾಗ, ಕಚ್ಚೆ ಹಾಕಿ ಉಟ್ಟರೇ ಚಂದ. ಕವಾಯಿತು ಮಾಡುವಾಗ, ಟೆನಿಸ್ ಆಡುವಾಗ, ಈಜುವಾಗ ಪತ್ತಲ-ಸೀರೆಗಳೆರಡರ ಬದಲು ಚಣ್ಣದಂತಹ ಪೋಷಾಕೇ ಒಪ್ಪುವುದು" (ಅದೇ, ಪುಟ-೨೭೧) ಯಾವುದೇ ಮಡಿವಂತಿಕೆ, ಪೂರ್ವಾಗ್ರಹಗಳಿಲ್ಲದೆ ಮಹಿಳೆಯರು ದೈಹಿಕ ಶಿಕ್ಷಣದಲ್ಲಿ ಭಾಗವಹಿಸುವುದರ ಕುರಿತು ಚರ್ಚಿಸುತ್ತಾರೆ.

- ಸ್ತ್ರೀಯರಿಗೆ ಕೊಡುವ ಶಿಕ್ಷಣದ ಸ್ವರೂಪವು; ಓದು ಬರಹಗಳನ್ನು ಕಲಿಯಬೇಕು. ಆಧ್ಯಾತ್ಮಿಕ-ಪಾರಮಾರ್ಥಿಕ ಗುರಿಯನ್ನು ಕೇಂದ್ರವಾಗಿರಿಸಿಕೊಂಡಿರಬೇಕು. ಕುಟುಂಬವನ್ನು ಒಳ್ಳೆ ದಾರಿಯತ್ತ ಒಯ್ಯು ಗಂಡನ ಒಡನಾಡಿಯಾಗಿ ಸಹನೆ ತಾಳ್ಮೆಯಿಂದ ತನ್ನ ಜವಾಬ್ದಾರಿಯನ್ನು ತಿಳಿಯಲು ಶಿಕ್ಷಣ ಸಹಕಾರಿಯಾಗಬೇಕು ಎಂಬುದಕ್ಕೆ ಎಲ್ಲ ಲೇಖಕಿಯರ ಒಮ್ಮತವಿದೆ.
- ಶಿಕ್ಷಣದ ಅಂಗವಾದ ಪಠ್ಯೇತರ ಚಟುವಟಿಕೆಗಳು ಮಹಿಳೆಯರಿಗೆ ನಿಷಿದ್ಧವೆಂದು ಭಾವಿಸಿದ ನಿಲುವು ಒಂದು ಕಡೆಯಾದರೆ, ಶಾರೀರಿಕ ಚಟುವಟಿಕೆಗಳಿಂದ ಮನಸ್ಸಿಗೆ ಉಲ್ಲಾಸವು, ದೇಹಕ್ಕೆ ಚೈತನ್ಯವೂ ಸಿಗುವುದರಿಂದ ಬ್ಯಾಡ್‌ಮಿಟನ್, ಟೆನಿಸ್ ಮುಂತಾದ ಆಟಗಳಲ್ಲಿ ಮಹಿಳೆಯರು ಧಾರಾಳವಾಗಿ ಪಾಲ್ಗೊಳ್ಳಬಹುದೆಂಬ ಮುಕ್ತ ಚರ್ಚೆಯೂ ನಡೆದಿದೆ.

### ೩.೨.೪ ವಿಧವಾ ಪದ್ಧತಿ

ಪತಿಯು ಸತ್ತಾಗ, ಯಾವ ಪತ್ನಿಯು ಅವನೊಂದಿಗೆ ಚಿತೆಯೇರಲು ನಿರಾಕರಿಸುತ್ತಾಳೋ ಆಕೆ ವಿಧವೆಯಾಗಿ ಬದುಕುಳಿಯುತ್ತಾಳೆ. ಸಾಯದಿರುವುದಕ್ಕೆ ಪ್ರತಿಯಾಗಿ ಕಠಿಣವಾದ ಸಾಮಾಜಿಕ ಕಟ್ಟಳೆಗಳನ್ನು, ನಿರ್ಬಂಧಗಳನ್ನು ಸ್ವೀಕರಿಸಬೇಕಾದ ವ್ಯವಸ್ಥೆಯನ್ನು ಈ ಸಮಾಜ ಆಕೆಗೆ ನಿರ್ಮಿಸಿದೆ. ಇಂಥ ಪದ್ಧತಿಯನ್ನು ನಾವು ವೈಧವ್ಯ ಎಂದು ಕರೆಯುತ್ತೇವೆ. ಆದರೆ ಈ ವೈಧವ್ಯ ಪದ್ಧತಿಯು ಸತಿ ಹೋಗುವುದಕ್ಕಿಂತಲೂ ನರಕ ಸದೃಶವಾದುದು.

"ಪತ್ನಿಯನ್ನು ಕಳೆದುಕೊಂಡ ಪುರುಷನು ತೀರ ವೈಯುಕ್ತಿಕಾರ್ಥದಲ್ಲಿ ಒಂಟಿತನವನ್ನು ಅನುಭವಿಸುವುದಾದರೆ, ಪತಿಯನ್ನು ಕಳೆದುಕೊಂಡ ಸ್ತ್ರೀ ಅದನ್ನೊಳಗೊಂಡ ತನ್ನ ಸಾಮಾಜಿಕ ಸ್ಥಾನಮಾನ, ಆರ್ಥಿಕ ಅಭದ್ರತೆಯ ಜೊತೆ, ಲೈಂಗಿಕ ಶೋಷಣೆಗಳಿಗೂ ಒಳಪಡಬಹುದಾದ ಸ್ಥಿತಿಗೆ ಬರುತ್ತಾಳೆ. ವಿವಾಹ ಸಂಸ್ಥೆಯಲ್ಲಿ ಗಂಡನ ಅಧೀನದಲ್ಲಿದ್ದವಳು ನೇರವಾಗಿ ಕುಟುಂಬದ/ಸಮಾಜದ ಅಧೀನಕ್ಕೆ ಒಳಪಡುತ್ತಾಳೆ. ಅವರವರ ಸ್ಥಾನಮಾನಕ್ಕನುಗುಣವಾಗಿ ಸುತ್ತಲಿನ ಪ್ರತಿಯೊಬ್ಬರೂ ಆಕೆಯ ಮೇಲೆ ಒಡೆತನವನ್ನು ಹೊಂದಿದವರಾಗಿರುತ್ತಾರೆ. ಈ ಒಡೆತನವು ಅಂತಿಮವಾಗಿ ಸತಿ ಅಥವಾ ಅದಕ್ಕಿಂತ ಭೀಕರವಾಗಬಹುದಾದ ವಿಧವಾಚರಣೆಯನ್ನು ಅವಳ ಜೀವನಾದರ್ಶವಾಗಿ ರೂಪಿಸುತ್ತದೆ. ಒಂದೆಡೆ ಪಾವಿತ್ರ್ಯವನ್ನು ಅವಳ ಮೇಲೆ ಹೇರುತ್ತಲೇ ಅದನ್ನು ಕಳೆದುಕೊಳ್ಳುವ ಭಯ ಅಸಹಾಯಕತೆ

ಯನ್ನು ವ್ಯವಸ್ಥೆ ಏರ್ಪಡಿಸುತ್ತದೆ. ಅವಳನ್ನು ನಿರಂತರವಾಗಿ ದುಡಿಸಿಕೊಳ್ಳುತ್ತಲೇ ಸಮಾಜದ ನಿರುಪಯೋಗಿ ಅಂಗವಾಗಿ ತುಚ್ಛೀಕರಿಸುತ್ತದೆ. ಇವುಗಳ ವಿರುದ್ಧ ಆಕೆಯು ನಿಲ್ಲದಂತೆ ಮಾಡಲು ಧಾರ್ಮಿಕ ಭಯವನ್ನು, ಸಾಮಾಜಿಕ ದಂಡನೆಯನ್ನು ಉಗ್ರ ರೀತಿಯಲ್ಲಿ ಹೇರುತ್ತದೆ. ಇದರಿಂದಾಗಿ ಸ್ತ್ರೀ ಚಿತೆ ಏರುತ್ತಾಳೆ, ಇಲ್ಲ ವೈಧವ್ಯಕ್ಕೆ ಬಲಿಯಾಗುತ್ತಾಳೆ" (ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು, ಪುಟ–೮೦) ಪಿತೃಪ್ರಧಾನ ವ್ಯವಸ್ಥೆಯಲ್ಲಿ ಉಂಟಾಗಿರುವ ವೈಧವ್ಯದ ಗತಿಯನ್ನು ಮಾರ್ಮಿಕವಾಗಿ ಗುರುತಿಸಲಾಗಿದೆ.

ರಾಜಾರಾಮ ಮೋಹನರಾಯರು ಸ್ವತ: ತಮ್ಮ ಅತ್ತಿಗೆಯನ್ನು ಚಿತೆಯಲ್ಲಿ ಜೀವಂತವಾಗಿ ಸುಡುವುದನ್ನು ನೋಡಿ, ಸಹಗಮನದ ವಿರುದ್ಧ ದಂಗೆಯೆದ್ದರು. ಹಾಗೆಯೇ ಪುರುಷನೊಬ್ಬ ಹೆಂಡತಿ ಸತ್ತ ತಕ್ಷಣ ಬೇರೊಬ್ಬಳನ್ನು ಲಗ್ನ ಮಾಡಿಕೊಳ್ಳುವುದಾದರೆ ಇದರಿಂದ ಸ್ತ್ರೀ ಏಕೆ ವಂಚಿತಳಾಗಬೇಕು? ಈ ಸ್ವಾತಂತ್ರ್ಯ, ಸೌಲಭ್ಯವು ಇವಳಿಗೂ ದೊರೆಯಬೇಕು ಎಂಬುದು ಅಂದಿನ ಸುಧಾರಕರ ಧ್ಯೇಯವಾಯಿತು. ಚತುರ್ವೇದ ಪಂಡಿತರಾದ ಈಶ್ವರ ಚಂದ್ರರು ಮತ್ತು ವಿದ್ಯಾಸಾಗರರು ಧರ್ಮಶಾಸ್ತ್ರಕ್ಕೆ ಸಂಬಂಧಿಸಿದ ಎಲ್ಲಾ ಗ್ರಂಥಗಳ ಸಮಗ್ರ ಅಧ್ಯಯನಕ್ಕೆ ತೊಡಗಿ, ದ್ವಿತೀಯ ವಿವಾಹಕ್ಕೆ ಶಾಸ್ತ್ರ ಸಮ್ಮತಿ ಇದೆಯೆಂದು ತಿಳಿಸುತ್ತಾರೆ. ವಿಧವಾ ವಿವಾಹ ಆಗುವುದರಿಂದ ಯಾವ ದೋಷವೂ ಒದಗದೆಂದು ತಿಳಿಸಿದರು. 'ಹಿಂದೂ ವಿಧವೆಯರ ವಿವಾಹ' ಎಂಬ ಹೊತ್ತಿಗೆಯನ್ನು ಬರೆದು ಅದರ ಮೂಲಕ ಸಾರ್ವಜನಿಕ ಅಭಿಪ್ರಾಯ ರೂಪಿಸತೊಡಗಿದರು. ಮುಂದೆ ಇವರ ಹೋರಾಟದ ಪರಿಶ್ರಮದಿಂದಾಗಿ ಬ್ರಿಟೀಶ್ ಸರಕಾರ ೧೮೫೬ರಲ್ಲಿ ವಿಧವಾ ಮರು ವಿವಾಹ ಕಾಯ್ದೆ ಜಾರಿಗೊಳಿಸಿತು. ೧೮೮೯ರಲ್ಲಿ ಬಾಂಬೆ ಸಂಸ್ಥಾನದ ವಿಲಿಯಂ ಚಾಪ್ಲಿನ್ 'ವಿಧವಾ ಮಾಸಾಶನ' ನೀಡಿದ ದಾಖಲೆಯಿದೆ. ೧೯೩೭ರಲ್ಲಿ ಜಾರಿಗೊಳಿಸಲಾದ ಹಿಂದೂ ಮಹಿಳೆಯರ ಆಸ್ತಿ ಹಕ್ಕಿನಲ್ಲಿ ಮೊದಲಬಾರಿಗೆ ಅವಿಭಕ್ತ ಕುಟುಂಬದಲ್ಲಿ ವಿಧವೆಗೆ ಗಂಡನ ಆಸ್ತಿ ದೊರೆಯುವಂತಾದರೂ ಇದು ಆಕೆಗೆ ಆಸ್ತಿಯನ್ನು ಅನುಭವಿಸುವುದಕ್ಕೆ ಮಾತ್ರ ದೊರೆತ ಹಕ್ಕಾಗಿತ್ತು. ವಿಧವಾ ಮರುವಿವಾಹದ ಬಗ್ಗೆ ಕಾನೂನು ರೂಪಗೊಂಡಿದ್ದರೂ ಅದನ್ನು ಆಚರಿಸುವಲ್ಲಿ ಸಮಾಜದ ಹಿಂಜರಿಕೆ ಇನ್ನೂ ಮುಂದುವರಿಯುತ್ತಲೇ ಇದೆ.

ಜ್ಯೋತಿಬಾ ಫುಲೆಯವರು ೧೮೬೪ರಲ್ಲಿ ವಿಧವಾ ವಿವಾಹ ಸಮಾವೇಶ ನಡೆಸಿದರು. ವಿಧವೆಯರು ಅತ್ಯಾಚಾರಕ್ಕೊಳಗಾಗಿ ಅಥವಾ ಸಹಜ ಲೈಂಗಿಕ ಬಯಕೆಯ ದೆಸೆಯಿಂದಾಗಿ ಗರ್ಭಿಣಿಯರಾದಾಗ ಆತ್ಮಹತ್ಯೆ ಮಾಡಿಕೊಳ್ಳುವ ಪರಿಸ್ಥಿತಿ ಎದುರಾಗುತ್ತಿತ್ತು ಅಥವಾ ಕೂಸುಗಳನ್ನು ಹತ್ಯೆ ಮಾಡುತ್ತಿದ್ದರು. ಫುಲೆಯವರು ಇಂಥ ಗರ್ಭಿಣಿ ವಿಧವೆಯರಿಗಾಗಿ ೧೮೬೩ರಲ್ಲಿ 'ಬಾಲಹತ್ಯಾ ನಿಷೇಧಕ ಪ್ರಸೂತಿ ಗೃಹ'ವನ್ನು ಆರಂಭಿಸಿದರು. ಅಂಥವರಲ್ಲಿ ಕಾಶೀಬಾಯಿ ಎಂಬ ಬ್ರಾಹ್ಮಣ ವಿಧವೆಯ ಮಗನನ್ನು ಫುಲೆ ದಂಪತಿಗಳು ಸ್ವೀಕರಿಸಿ ಅವನನ್ನು ಡಾಕ್ಟರ್‌ನನ್ನಾಗಿ ಮಾಡಿರುವ ಉದಾಹರಣೆಯಿದೆ. ಮಹರ್ಷಿ ಕರ್ವೆಯವರು, ಮಹಾದೇವ ರಾನಡೆಯವರು ವಿಧವೆಯರಿಗಾಗಿ ಶಾಲೆಗಳನ್ನು ತೆರೆದರು. ಅಕ್ರಮವಾಗಿ ಹುಟ್ಟಿದ ವಿಧವೆಯರ ಮಕ್ಕಳನ್ನು ದತ್ತು ಪಡೆದರು. ಅಂದಿನ ಎಲ್ಲಾ ಪ್ರಗತಿಪರ ಚಿಂತಕರು, ಸಂಘಟನೆಗಳು

ವಿಧವಾ ವಿವಾಹದ ಪರ ಕಾರ್ಯಪ್ರವೃತ್ತರಾದರು. ಪಂಡಿತ ರಮಾಬಾಯಿ, ಕಮಲಾದೇವಿ ಚಟ್ಟೋಪಾಧ್ಯಾಯ ಮುಂತಾದವರು ಸ್ವತ: ವಿಧವಾ ವಿವಾಹವನ್ನು ಆಚರಿಸಿ ತೋರಿಸಿಕೊಟ್ಟರು. ಆಂಧ್ರದಲ್ಲಿ ವೀರೇಶಲಿಂಗಂ ಪಂತುಲು ಅವರು ವಿಧವಾ ವಿವಾಹವನ್ನು ಶಾಸ್ತ್ರೋಕ್ತವಾಗಿ ನಡೆಸಿದರು.

ಸಾಂಪ್ರದಾಯಿಕ ಆಚರಣೆಯಲ್ಲಿ ಮೌನವಾಗಿ ಅನುಭವಿಸುತ್ತಿದ್ದ, ಅನೇಕ ವಿಧವೆಯರ ಪ್ರತಿನಿಧಿಗಳಾಗಿ ತಮಗೊದಗಿರುವ ಹೀನಾಯ ಸ್ಥಿತಿಯನ್ನು ಸಮಾಜದೆದುರು ತೆರೆದುಕೊಂಡದ್ದು ಚರಿತ್ರೆಯಲ್ಲಿ ಇದೇ ಮೊದಲಾಯಿತು. ಹೊರಗಿನಿಂದ ಅವರಿಗೆ ತೋರುವ ಅನುಕಂಪಗಳೇ ಬೇರೆ ರೀತಿಯಾಗಿರುತ್ತವೆ. ಸ್ವತ: ವಿಧವೆಯರೇ ಬರಹಕ್ಕೆ ತೊಡಗಿಸಿಕೊಂಡು, ಬರಹದ ಮೂಲಕ ಅಭಿವ್ಯಕ್ತಿಸುವ ವಿಧಾನ ಹೊಸತಾದ ಪರಿಣಾಮವನ್ನು ಉಂಟು ಮಾಡಿತು.

ಮೇಲು ವರ್ಗದ ಕುಟುಂಬದಲ್ಲಿ ಈ ವಿಧವಾ ಪದ್ಧತಿ ದೊಡ್ಡ ಶಾಪವಾಗಿ ಪರಿಣಮಿಸಿದೆ. ಕೆಳಜಾತಿ/ವರ್ಗಗಳಲ್ಲಿ ಗಂಡ ಸತ್ತರೆ, ಆ ಮಹಿಳೆಗೆ ಕೂಡಿಕೆ ಅಥವಾ ಇತರೆ ಪದ್ಧತಿಗಳು ಪೂರಕವಾಗಿ ಒದಗುತ್ತವೆ. ಆದರೆ ಬ್ರಾಹ್ಮಣ ಜಾತಿಯಲ್ಲಿ ತೀವ್ರ ಸ್ವರೂಪ ಪರಿಣಾಮವನ್ನು ಉಂಟು ಮಾಡುತ್ತದೆ. ಒಬ್ಬ ಮಹಿಳೆಯ ಗಂಡ ತೀರಿ ಹೋದನೆಂದರೆ ಆಕೆಯ ಅಸ್ತಿತ್ವವೇ ಕೊನೆಗಾಣುತ್ತದೆ. ಜೀವಂತವಿದ್ದೂ ಜೀವಚ್ಛವವಾಗುವ ಪರಿಸ್ಥಿತಿಯೊದಗುತ್ತದೆ. ತಿರುಮಲಾಂಬ, ಕಲ್ಯಾಣಮ್ಮನವರು ಸ್ವತ: ಬಾಲವಿಧವೆಯರಾಗಿ ಬದುಕನ್ನು ಎದುರಿಸಿದ ಬರಹಗಾರ್ತಿಯರು. ಅಂಗಳದಲ್ಲಿ ಆಟವಾಡುತ್ತಿದ್ದ ಮುಗ್ಧ ಮಕ್ಕಳು, ಹಿರಿಯರ ಸಂಪ್ರದಾಯಕ್ಕೆ ಬಲಿಯಾಗಿ ಹಸೆಮಣೆಯನ್ನು ಏರುತ್ತಿದ್ದರು. ಹೆಂಡತಿ ಸತ್ತರೆ ಗಂಡುಮಕ್ಕಳು ಹೊಸ ವರಗಳಾಗುತ್ತಿದ್ದರು. ಗಂಡ ಸತ್ತರೆ ಬಾಲೆಯರು ವಿಧವೆಯಾಗುತ್ತಿದ್ದರು.

ಈ ಇಬ್ಬರೂ ಹಿರಿಯ ತಲೆಮಾರಿನ ಲೇಖಕಿಯರು ತಮ್ಮ ಗಂಡ ತೀರಿಹೋಗಿ ವಿಧವೆಯಾರದೆವೆಂದು ಮನೆಯಲ್ಲಿ ಸುಮ್ಮನೇ ಕುಳಿತವರಲ್ಲ. ತಂದೆ–ಚಿಕ್ಕಪ್ಪ ಮುಂತಾದ ಮನೆಯ ವಿದ್ಯಾವಂತ, ಸುಧಾರಿತ ಮನೋಭಾವದ ಹಿರಿಯರ ಪ್ರೋತ್ಸಾಹದಿಂದ ಸಾಹಿತ್ಯದಲ್ಲಿ–ಸಮಾಜದಲ್ಲಿ ತಮ್ಮ ಸಾಮರ್ಥ್ಯ ತೋರಿದವರು. ಹಿರಿಯರು ವಿಧಿಸಿದ ಕಟ್ಟುಪಾಡುಗಳನ್ನು ಒಪ್ಪಿಕೊಂಡೇ ಮುಂದೆ ತಮ್ಮ ಸಾಧನೆಯ ಹಾದಿ ಹಿಡಿದರು.



### ಅ) ವಿಧವಾ ಪದ್ಧತಿಯಲ್ಲಿನ ಅವಸ್ಥೆ

ಗಂಡನ ಮುಖ ನೋಡದೇ, ಅವನೊಡನೆ ಅನುರಾಗದ ಮಾತುಗಳನ್ನಾಡದೆ, ದಾಂಪತ್ಯ ಜೀವನದ ಸಿಹಿ–ಕಹಿಗಳನ್ನು ಅನುಭವಿಸದೆ, ವೈಧವ್ಯದ ಕೂಪಕ್ಕೆ ತುತ್ತಾದವರು, ಮೇಲ್ಜಾತಿಯ ಮಹಿಳೆಯರು. ಸಂಪ್ರದಾಯದ ಹೆಸರಿನಲ್ಲಿ ನಡೆಯುವ ಬಾಲ ವೈಧತ್ವದ ಸ್ಥಿತಿಯನ್ನು ಶತಮಾನಗಳ ಕಾಲ, ಪ್ರತಿಭಟಿಸುವ ಶಕ್ತಿಯಿಲ್ಲದೇ ಮೂಕವಾಗಿ ಆಲಾಪಿಸಿದ ಪರಂಪರೆಯೇ ನಮ್ಮ ಮುಂದಿತ್ತು. ಮಹಿಳೆಯರ ಪಾಲಿಗೆ ಮುಚ್ಚಿಕೊಂಡಿದ್ದ ಅಕ್ಷರ ಲೋಕ ಹಂತ ಹಂತವಾಗಿ ತೆರೆದುಕೊಳ್ಳತೊಡಗಿತು. ಮುದ್ರಣ ವ್ಯವಸ್ಥೆ, ಸಾಮಾಜಿಕ ಸುಧಾರಣೆಯ ಚಟುವಟಿಕೆಯಲ್ಲಿ, ಪುರುಷರ ಒತ್ತಾಸೆಯಿಂದ ಬರಹಕ್ಕೆ

ಇಳಿದ ಮಹಿಳೆಯರ ಮುಂದೆ, ಚಿಕ್ಕ ಜಗತ್ತೊಂದು ಅನಾವರಣಗೊಂಡಿತು. ವ್ಯವಸ್ಥೆಯಲ್ಲಿ ತಮ್ಮ ಸ್ಥಾನವನ್ನು, ತಮ್ಮ ಸೇವೆಯ ಕ್ಷೇತ್ರವನ್ನು ಗುರುತಿಸಿಕೊಳ್ಳುವ ಹಂಬಲದಲ್ಲಿದ್ದರು. ಸನಾತನ ಸಂಗತಿಗಳನ್ನು ವಿರೋಧಿಸಲಾರದ ಮತ್ತು ಸಮಾಜ ಸುಧಾರಣೆಯ ಹೇರಿಕೆಗಳನ್ನು ಒಪ್ಪಿಕೊಳ್ಳಲಾರದ ದ್ವಂದ್ವ ಪರಿಸ್ಥಿತಿಯನ್ನು ಎದುರಿಸಿದ್ದು, ಸ್ವಾತಂತ್ರ್ಯಪೂರ್ವ ಮಹಿಳಾ ಲೇಖಕಿಯರ ಮನಃಸ್ಥಿತಿಯಾಗಿದೆ.

ತಾವು ಸ್ವತಃ ಕಂಡುಂಡ ಯಮಯಾತನೆಯ ಸಂದರ್ಭಗಳನ್ನು ಪತ್ರಿಕೆಗಳಲ್ಲಿ, ಕೃತಿಗಳಲ್ಲಿ, ಮುನ್ನುಡಿಗಳಲ್ಲಿ ಸಾಂಕೇತಿಕವಾಗಿ ಮನಗಾಣಿಸಿದ್ದಾರೆ. "ಮುಂಡೆ" ಎಂಬ ಶಬ್ದವು ಸ್ತ್ರೀ ಸಮುದಾಯಕ್ಕೆಲ್ಲ ಕೆಟ್ಟ ಬೈಗುಳಾಗಿರುವುದು. 'ವಿಧವಾ', 'ವಿತಂತು', 'ಮುಂಡೆ' ಮೊದಲಾದ ಶಬ್ದಗಳು ಕಿವಿಗೆ ಬಿದ್ದೊಡನೆಯೇ ಎಂತಹ ಕಲ್ಲೆದೆಯಾದರೂ ಕರಗಿ ಹೋಗದಿರಲಾರದು. ಏಕೆಂದರೆ ಅಂತಹ ವಿಧವೆಯರಿಗೆ ಅಡಿಗಡಿಗೂ ತೊಡರಿಕೊಳ್ಳುತ್ತಿರುವ ಕಷ್ಟನಷ್ಟ ನಿಷ್ಠೂರಗಳ ವಿಚಾರವು, ಆ ಶಬ್ದ ಶ್ರವಣ ಮಾತ್ರದಿಂದಲೇ ಕಣ್ಣ ಮುಂದೆ ಬಂದು ನಿಂತಂತಾಗಿ ಮೈಮೇಲೆ ಮುಳ್ಳೇಳುವಂತೆ ಮಾಡುವುದರಿಂದ ಸತಿಯರ ಸರ್ವನಾಶಕರವಾದ ಈ ವೈಧವ್ಯವನ್ನು ದ್ವೇಷಿಸುವುದಾಗಲೀ, ಈ ಶಬ್ದದಿಂದ ಬೈದವರು ಮೇಲೆ ಉರಿದು ಬೀಳುವುದಾಗಲೀ ಸ್ವಾಭಾವಿಕವಾಗಿಯೇ ಇರುವುದು... ವಿಧವೆಯರ ಕರ್ತವ್ಯವಾವುದು? 'ವಿಧವಾ' ಎಂದರೆ ವಿರಕ್ತಿಯನ್ನು ಧರಿಸುವವಳು ಅಥವಾ ಧರಿಸಲರ್ಹರಾದವಳೆಂದು ಭಾವಿಸಬೇಕು... ಇದನ್ನು ನಾನು ಕಷ್ಟವೆಂದಾಗಲೀ ಈ ಜನ್ಮಧಾರಣವು ಅಸಾರವಾದುದೆಂದಾಗಲೀ ಕನಸು ಮನಸಿನಲ್ಲಿಯಾದರೂ ಭಾವಿಸಲಾರೆನು!!! ಅದೇಕೆನ್ನುವಿರಿ? ಆವುದೇ ಒಂದು ಹುಲ್ಲುಕಡ್ಡಿಯೂ ಕೂಡ ಕಾಲಾನುಕ್ರಮದಿಂದ ಮಹೋಪಕಾರಿಯಾಗಿ ಪರಿಣಮಿಸುವುದೆಂಬ ಆರ್ಯ ವಚನವನ್ನು ತಿಳಿದಿರುವ ನಾನು ಈ ಮಾನವ ಜನ್ಮವನ್ನು ಅಸಾರವೆಂದು ಹೇಳಬಹುದೇ?೨೬ (ಉದ್ಧೃತ: ತಿರುಮಲಾಂಬ, ಪುಟ-೨೦) ಎಂಬ ಮಾತಿನಲ್ಲಿ ಸಮಾಜದಲ್ಲಿ ಒದಗಿಸಲಾದ ಸಂಪ್ರದಾಯವನ್ನು ಸ್ವೀಕರಿಸಲು ಸಿದ್ಧವಿದ್ದಾರೆ. ಆದರೆ ಅವರನ್ನು ನಡೆಸಿಕೊಳ್ಳುವ ವಿಧಾನದಲ್ಲಿ ಸುಧಾರಣೆಯಾಗಬೇಕೆನ್ನುವುದು ಅವರ ನಿಲುವು.

**ಆ) ಕೇಶಮುಂಡನದ ವಿರೋಧ**

ತಿರುಮಲಾಂಬನವರಿಗೆ ಅಮಾನವೀಯವಾಗಿ ಕತ್ತರಿಸುವ ಕೇಶಮುಂಡನದ ಬಗ್ಗೆ ತೀವ್ರ ವಿರೋಧವಿದೆ "ಅವರ ರೂಪವೆಷ್ಟು ಸುಸ್ವರೂಪವಾಗಿದ್ದರೂ ಪತಿ ವಿಯೋಗವಾಯಿತೆಂದರೆ ಸಾಕು; ವಿರೂಪವಾಗುವುದು... ಅವರ ಜನ್ಮದೊಡನೆಯೇ ಹುಟ್ಟಿ ಬೆಳೆದ ಕೇಶರಾಸಿಯು ಸ್ಮರಿಸುವುದಕ್ಕೂ ಯೋಗ್ಯವಲ್ಲದ ರೀತಿಯಲ್ಲಿ ಹೇಯವಾದ ಹೃದಯ ವಿದ್ರಾವಕ ಘೋರ ಶಿಕ್ಷೆಗೆ ಗುರಿಯಾಗುವುದು. ಇದಕ್ಕೂ ಹೆಚ್ಚಿನ ಅಪಮಾನವುಂಟೆ?" (ಹಿತೈಷಿಣಿ ಹೆಜ್ಜೆಗಳು, ಪುಟ-೫೪) ಎಂಬ ಪ್ರಶ್ನೆಯನ್ನು ಮುಂದಿಡುತ್ತಾರೆ. ವಿಧವೆಯ ಮೇಲೆ ಹೊರಿಸುವ ವಿಧಿನಿಷೇಧಗಳನ್ನು, ತೋರುವ ಕ್ರೌರ್ಯಗಳನ್ನು ವಿಧವೆಯರಾದವರು ತಮ್ಮ ಅಭಿವೃದ್ಧಿಯ ಸಾಧನಗಳನ್ನಾಗಿ ಮಾಡಿಕೊಳ್ಳಬೇಕೆಂಬುದು ಅವರ ವಾದದಲ್ಲಿ ಕಾಣುತ್ತದೆ.

ಕೇಶಮುಂಡನದ ಬಗ್ಗೆ ಆಕ್ಷೇಪವೆತ್ತುವ ಕಾದಂಬರಿ ವಿಧವಾ ಪುನರ್ ವಿವಾಹದ ಪ್ರಸ್ತಾಪವನ್ನು ಅಲ್ಲಗಳೆಯುತ್ತದೆ. ಅದಕ್ಕೆ ಕೊಡುವ ಕಾರಣ "ಒಬ್ಬ ಬಡ ಹೆಂಗಸು ಒಬ್ಬ ಗಂಡಸನ್ನು ವಿವಾಹವಾಗಿರುವಳೆಂದು ಭಾವಿಸಿರಿ. ಅವನು ಮೃತನಾದರೆ ಆ ಹೆಂಗಸು ತನ್ನ ದಾರಿದ್ರ್ಯಾದಿ ದೋಷಗಳಿಂದ ಪೀಡಿತಳಾಗಿ, ಅನೇಕಾನೇಕ ಆಂತರಂಗಿಕ ರೋಗಪೀಡಿತನಾದ ಪುರುಷನನ್ನೇ ವಿವಾಹ ಮಾಡಿಕೊಳ್ಳಬೇಕಾದರೆ, ಏನು ಮಾಡಬಲ್ಲಳು? ಅನ್ಯಮಾರ್ಗವಿಲ್ಲದೆ ಅವನನ್ನೇ ವರಿಸಿ, ಅವನಿಂದಲೇ ಮಕ್ಕಳನ್ನು ಪಡೆದರೆ ಆ ಮಕ್ಕಳಿಂದ ದೇಶಕ್ಕೆ ಹಾನಿಯಲ್ಲವೋ...ಐರೋಪ್ಯದಲ್ಲಿ ಅನುದಿನವೂ ಎಷ್ಟು ಮಂದಿ, ಗಂಡಂದಿರನ್ನು ಬಿಟ್ಟೋಡುವರು? ಎಷ್ಟು ಮಂದಿ, ಹೆಂಡರನ್ನು ಬಿಟ್ಟು ಬಿಡುವರು? ಎಷ್ಟು ಮಂದಿ ಆಂತರಂಗಿಕ ರೋಗಗಳಿಂದ ಪೀಡಿತರಾಗಿರುವರು?" (ಅದೇ) ಎಂಬುದಾಗಿದೆ. ಗಂಡನನ್ನು ಕಳೆದುಕೊಂಡ ವಿಧವೆಯನ್ನು ಮರು ಮದುವೆಯಾಗಲು ಬರುವವರು ಎಂಥವರಿರುತ್ತಾರೋ ಏನೋ, ಅವನಿಂದ ಆಕೆ ಜೀವನ ಸಂತೃಪ್ತಿಯನ್ನು ಪಡೆಯಲು ಸಾಧ್ಯವಾಗುತ್ತದೆಯೊ? ಎನ್ನುವ ಪ್ರಶ್ನೆಗಳನ್ನು ಹಾಕಿಕೊಂಡಿದ್ದಾರೆ. ವಾಸ್ತವದಲ್ಲಿ ವಿಧವೆಯರಿಗೆ ಶಿಕ್ಷಣ ಪಡೆಯಲು, ಉಪಾಧ್ಯಾಯಿನಿಯಂತಹ ಕೆಲಸಗಳನ್ನು ನಿರ್ವಹಿಸಲು ಮುಂದುವರಿಯಬೇಕೆ ವಿನಃ ವಾಸ್ತವವಾಗಿ ಮರು ಮದುವೆಯಿಂದ ಹಲವು ತೊಡಕುಗಳು ಪ್ರಾರಂಭವಾಗುತ್ತವೆಯೆಂದು ಭಾವಿಸಿದ್ದಾರೆ. ವಿವಾಹ ವಿಚ್ಛೇದನಗಳು ಉಂಟಾಗುವ ಆತಂಕವೂ ಅವರನ್ನು ಆವರಿಸಿದೆ.

**ಇ) ವಿಧವಾ ಪುನರ್ ವಿವಾಹ**

ಯುವಕರ ಮನೋವೈಶಾಲ್ಯ ಮತ್ತು ವಿಧವೆಯರ ತಿಳುವಳಿಕೆಯಿಂದ ವಿಧವೆಯರ ನೋವು ಕಡಿಮೆಯಾಗಲು ಸಾಧ್ಯ ಎಂಬ ಗಾಂಧೀಜಿ ನಿಲುವನ್ನು ಕಲ್ಯಾಣಮ್ಮ ಅನುಮೋದಿಸುತ್ತಾರೆ. 'ಮೈಸೂರು ಪ್ರಜಾಪ್ರತಿನಿಧಿ ಸಭೆಯ ದಸರಾ ಅಧಿವೇಶನ'ದ ವರದಿಯಲ್ಲಿ 'ವಿಧವಾ ವಿವಾಹ ಸಮ್ಮತಿ'ಯ ಸೂಚನೆ ಮಂಡಿತವಾದಾಗ ಕೆಲವು ಸನಾತನಿಗಳು ವಿರೋಧ ವ್ಯಕ್ತಪಡಿಸಿದರು. ಆಗ ಕಲ್ಯಾಣಮ್ಮ ಸನಾತನ ಸಂಪ್ರದಾಯವನ್ನು ಹೊಂದಿರುವವರು ತಮ್ಮ ಮನೋಭಾವವನ್ನು ಪರಿವರ್ತಿಸಿಕೊಳ್ಳಲು ಕರೆ ನೀಡುತ್ತಾರೆ. ಕಲ್ಯಾಣಮ್ಮ ಪ್ರತಿಪಾದಿಸುವ ವಿಧವಾ ಪುನರ್ ವಿವಾಹಕ್ಕೆ ಶಾಸ್ತ್ರಾದಿಗಳ ಪುರಾವೆಯನ್ನು ಮುಂದಿಟ್ಟಿದ್ದಾರೆ.

ವಸಾಹತುಶಾಹಿ ಕಾಲಘಟ್ಟದಲ್ಲಿ ಪ್ರಕಟವಾದ ಗುಲ್ವಾಡಿ ವೆಂಕಟರಾಯರ 'ಇಂದಿರಾ ಬಾಯಿ' ಕಾದಂಬರಿ ಪುನರ್ ವಿವಾಹದ ಪ್ರಯೋಗವನ್ನು ಕೈಗೆತ್ತಿಕೊಂಡಿದೆ. ಪುನರ್ ವಿವಾಹದ ಮೂಲಕ ಉಂಟಾಗುವ ಸಮಸ್ಯೆಗಳನ್ನು ಕೆರೂರು ವಾಸುದೇವಚಾರ್ಯರ 'ಇಂದಿರಾ' ಕಾದಂಬರಿ ವಿಡಂಬನಾತ್ಮಕವಾಗಿ ಚಿತ್ರಿಸಿದೆ. ಇವೆರಡಕ್ಕಿಂತ ಭಿನ್ನವಾಗಿ ಮಹಿಳೆಯೊಬ್ಬಳ, ಅದರಲ್ಲೂ ವಿಧವೆಯರ ದೃಷ್ಟಿಕೋನದಲ್ಲಿ ವಿಧವಾ ಸಮಸ್ಯೆ ಹೇಗೆ ನಿರ್ವಹಿಸಲ್ಪಟ್ಟಿದೆ ಎಂಬುದಕ್ಕೆ ತಿರುಮಲಾಂಬ ಮತ್ತು ಕಲ್ಯಾಣಮ್ಮ ಮುಖ್ಯವಾಗುತ್ತಾರೆ. ತಿರುಮಲಾಂಬ ಬ್ರಹ್ಮಚರ್ಯೆ ಪಾಲನೆ-ದೇಶ ಸೇವೆಗೆ ವಿಧವೆಯರು

ಮುಡಿಪಾಗಿರಬೇಕೆಂದು ಪ್ರತಿಪಾದಿಸಿದರೆ, ಕಲ್ಯಾಣಮ್ಮ ವಿಧವೆಯರ ತಳಮಳಗಳನ್ನು ಗುರುತಿಸುತ್ತಲೇ, ಆಕೆಯ/ಸಮಾಜದ ಮನಸ್ಸನ್ನು ಮರುಮದುವೆಯತ್ತ ತಿರುಗಿಸುತ್ತಾರೆ. ಧರ್ಮಸಮ್ಮತವೂ ಅಹುದೆಂದು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುತ್ತಾರೆ.

- ವಿಧವೆಯರ ಅನುಭವಗಳ ಅಭಿವ್ಯಕ್ತಿಯನ್ನು ವಿಧವೆಯರೇ ಅಭಿವ್ಯಕ್ತಿಸಿದ್ದು ಸಾಹಿತ್ಯ ಚರಿತ್ರೆಯಲ್ಲಿ ಮೊದಲಾಯಿತು.
- ವಿಧವೆಯರನ್ನು ಸಮಾಜ ನಡೆಸಿಕೊಳ್ಳುತ್ತಿರುವ ಬಗೆಯನ್ನು ಎಲ್ಲ ಲೇಖಕಿಯರು ಖಂಡಿಸಿದ್ದಾರೆ.
- ವಾಸ್ತವ ಬದುಕಿನಲ್ಲಿ ವಿಧವಾ ವಿವಾಹ ತಂದೊಡ್ಡುವ ಪರಿಣಾಮಗಳನ್ನು ಅರಿತಿರುವ ತಿರುಮಲಾಂಬ ವಿಧವಾ ಪುನರ್ ವಿವಾಹವನ್ನು ನಿರಾಕರಿಸುತ್ತಾರೆ.
- ಪರಂಪರೆಯೊಂದಿಗೆ ವರ್ತಮಾನವನ್ನು ಗ್ರಹಿಸುವ ಕಲ್ಯಾಣಮ್ಮ ಹಿಂದಿನ ಶಾಸ್ತ್ರಾಧಾರ, ವೇದ-ಪುರಾಣಗಳಲ್ಲಿ ಪ್ರಚಲಿತದಲ್ಲಿದ್ದ ವಿಧವಾ ವಿವಾಹ ಪದ್ಧತಿಯ ಪುರಾವೆಗಳನ್ನು ಮುಂದಿಟ್ಟು ವಿಧವೆಯರಿಗೆ ಪುನರ್ ವಿವಾಹ ಮಾಡುವುದರಿಂದ ತಪ್ಪಿಲ್ಲವೆಂಬ ಧೃಡ ನಿರ್ಧಾರಕ್ಕೆ ಬರುತ್ತಾರೆ.
- ರಾಜವಾಡೆಯವರು ಸುಧಾರಣೆಯ ನಿಲುವುಗಳನ್ನು ಒಪ್ಪಿಕೊಳ್ಳುತ್ತಾರೆ. ಆದರೆ ವಿಧವೆಯೊಬ್ಬಳ ಶ್ರೇಯೋಭಿಲಾಷೆಯನ್ನು ಮಾಡುವ ನೆಪದಿಂದ ಆಕೆಯನ್ನು ವೇಶ್ಯಾವಾಟಿಕೆಗೆ ನೂಕುವ ಹುನ್ನಾರಗಳನ್ನು ತೋರಿಸಿಕೊಟ್ಟಿದ್ದಾರೆ.

### ೩.೨.೫ ಬಾಲ್ಯ ವಿವಾಹ –ಅಸಮ ವಿವಾಹ

ಬಹುತೇಕ ಎಲ್ಲಾ ಸಮಾಜಗಳಲ್ಲೂ ಕಂಡು ಬರುವ ವಿವಾಹ ಸಂಸ್ಥೆಯು ಸಮುದಾಯದಿಂದ ಸಮುದಾಯಕ್ಕೆ ಕೆಲವು ಭಿನ್ನ ಲಕ್ಷಣಗಳನ್ನು ಹೊಂದಿದ್ದರೂ ಹೆಚ್ಚಿನ ಪ್ರಮಾಣದ ಸಾಮ್ಯವನ್ನೇ ಹೊಂದಿವೆ. ಭಾರತದಲ್ಲಿ ಬಾಲ್ಯ ವಿವಾಹವು ಎಂದು ಆರಂಭಗೊಂಡಿತೆಂದು ನಿಖರವಾಗಿ ಹೇಳಲಾಗದಿದ್ದರೂ ಅದನ್ನು ಮಧ್ಯಕಾಲೀನ ಬೆಳವಣಿಗೆ ಎಂಬುದಾಗಿ ಸ್ವೀಕರಿಸಲಾಗಿದೆ. ಬಹುಶ: ಕಾಲದಿಂದ ಕಾಲಕ್ಕೆ ಹೆಚ್ಚುತ್ತಾ ಹೋದ ಪಾವಿತ್ರ್ಯದ ಕಲ್ಪನೆ, ಹೆಣ್ಣಿನ ಪಾವಿತ್ರ್ಯ ನಾಶವನ್ನೇ ಪೌರುಷದ ಸಂಕೇತವಾಗಿ ಪ್ರಕಟಿಸುತ್ತ ಬಂದ ಸಾಮಾಜಿಕ ಧೋರಣೆಗಳ ನಡುವಿನ ತಿಕ್ಕಾಟದಲ್ಲಿ ವಿವಾಹವೇ ಸ್ತ್ರೀಗೆ ಭದ್ರತೆಯನ್ನೊದಗಿಸುವ, ಪಾವಿತ್ರ್ಯವನ್ನು ರಕ್ಷಿಸುವ ಏಕೈಕ ಸಂಸ್ಥೆ ಎನ್ನುವ ನಿಲುವು ಬಲಗೊಳ್ಳುತ್ತಾ ಹೋಗಿ ಅಂತಿಮವಾಗಿ ಅದು ಬಾಲ್ಯವಿವಾಹ, ತೊಟ್ಟಿಲು ವಿವಾಹಗಳ ಹಂತವನ್ನು ತಲುಪಿತು. ಹೆಣ್ಣಿಗೆ ವಿವಾಹವೇ ಅಂತಿಮ ಎನ್ನುವುದಾದರೆ ಅದನ್ನು ಆದಷ್ಟು ಬೇಗನೆ ಮಾಡಿಬಿಡುವ ನಿರ್ಧಾರಕ್ಕೆ ಬರಲಾಗುತ್ತದೆ. ಹೆಣ್ಣು ಕುಟುಂಬಕ್ಕೆ ಹೊರೆ ಎನ್ನುವುದಾದರೆ ಅದನ್ನು ವಿವಾಹದ ಮೂಲಕ ಆದಷ್ಟು ಬೇಗನೆ ಇಳಿಸಿಕೊಳ್ಳುವುದು ಸಮಯೋಚಿತ ಎಂಬಂತಹ ವಿಚಾರಗಳಿಂದ ಸ್ತ್ರೀ ವ್ಯಕ್ತಿತ್ವ ಕುರಿತಾದ ಉಳಿದೆಲ್ಲ ವಿಚಾರಗಳು ನಗಣ್ಯವಾದವು.

ಬಾಲ್ಯ ವಿವಾಹ ಮತ್ತು ವಿಷಮ ವಿವಾಹದಿಂದಾಗಿ ಅಸಂಖ್ಯಾತ ಬಾಲೆಯರು ಕುಟುಂಬದ ಜವಾಬ್ದಾರಿಯನ್ನು ಹೊರಲು ಅಸಮರ್ಥರಾಗಿದ್ದರು. ಜತೆಗೆ ಸಾವಿರಾರು ಬಾಲೆಯರು ಮದುವೆಯಾದ

ಕೆಲ ದಿನಗಳಿಗೆ ಗಂಡ ಸತ್ತು ಬಾಲ ವಿಧವೆಯರಾಗಬೇಕಾಗಿದ್ದಿತು. ಸುಧಾರಣಾವಾದಿಗಳು ಸತೀ ಪದ್ಧತಿಯ ನಿಷೇಧದೊಂದಿಗೆ, ವಿಧವಾ ಪುನರ್ ವಿವಾಹದ ಮನ್ನಣೆಯೊಂದಿಗೆ ಬಾಲ್ಯ ವಿವಾಹದ ನಿಷೇಧದ ಒತ್ತಾಯವನ್ನು ತಂದರು. ಬಾಲ್ಯ ವಿವಾಹದ ನಿಷೇಧದ ಹೊರತು ವಿಧವಾ ಸಮಸ್ಯೆಯನ್ನಾಗಲೀ, ಸ್ತ್ರೀ ಶಿಕ್ಷಣ ವಿಚಾರವನ್ನಾಗಲೀ ಕೈಗೆತ್ತಿಕೊಳ್ಳುವುದು ವ್ಯರ್ಥವೆಂದು ಮನಗಂಡರು. ಹಿಂದೂ ಸಮಾಜದ ವಿಧವಾ ಸಮಸ್ಯೆ ನೇರ ಕಾರಣವಾಗಿ ಕಂಡು ಬಂದ ಬಾಲ್ಯ ವಿವಾಹದ ವಿರುದ್ಧ ಬ್ರಹ್ಮ ಸಮಾಜ, ಆರ್ಯ ಸಮಾಜಗಳು ಕಾರ್ಯಾಚರಣೆಗಿಳಿದವು.

**ರೂಪಿಸಲಾದ ಕಾನೂನು**

ಹೆಣ್ಣುಮಕ್ಕಳ ವಿವಾಹ ವಯಸ್ಸನ್ನು, ಬ್ರಹ್ಮ ಸಮಾಜ ೧೪ಕ್ಕೆ ನಿಗದಿಗೊಳಿಸಿತು. ಈಶ್ವರಚಂದ್ರ ವಿದ್ಯಾಸಾಗರರು ಬಾಲ್ಯವಿವಾಹವನ್ನು ತಡೆಗಟ್ಟಲೇ ಬೇಕೆಂಬ ಪ್ರತಿಜ್ಞೆಯನ್ನು ಕೈಗೊಂಡಿದ್ದರು. ಬಾಲ್ಯ ವಿವಾಹ ನಿಷೇಧ ಕಾನೂನನ್ನು ಜಾರಿಗೆ ತರಲು ಬ್ರಿಟೀಶ್ ಸರಕಾರಕ್ಕೆ ಒತ್ತಡ ತಂದರು. ೧೮೬೦ರಲ್ಲಿ ಇಂಡಿಯನ್ ಫೀನೆಲ್ ಕೋಡ್, ೧೦ ವರ್ಷ ವಯಸ್ಸಿನ ಕೆಳಗಿರುವ ಹೆಂಡತಿಯ ಮೇಲಿನ ಶಾರೀರಿಕ ಸಂಬಂಧವನ್ನು ನಿಷೇಧಿಸಲಾಯಿತು. ೧೮೭೨ರಲ್ಲಿ ದಿ ನೇಟೀವ್ ಮ್ಯಾರೇಜ್ ಆಕ್ಟ್ III ಜಾರಿಗೊಂಡಿತು. ೧೯೨೯ರಲ್ಲಿ ಜಾರಿಗೊಳಿಸಲಾದ ಬಾಲ್ಯವಿವಾಹ ನಿಷೇಧ ಕಾಯ್ದೆ ಬಂದ ಮೇಲೂ ಬಾಲ್ಯವಿವಾಹಗಳು ಜರುಗುತ್ತಲೇ ಇದ್ದವು. ವಿಪರ್ಯಾಸವೆಂದರೆ, ಕಾನೂನುಗಳನ್ನು ಜಾರಿಗೆ ತರಲು ಪ್ರಯತ್ನಿಸಿದ ಎಷ್ಟೋ ಜನ ಸುಧಾರಕರು ತಾವೇ ಬಾಲ್ಯ ವಿವಾಹಕ್ಕೆ ತುತ್ತಾಗಿದ್ದರು.

ವೈದ್ಯರು ವಿವಾಹ ವಯಸ್ಸನ್ನು ೧೪ ವರ್ಷಕ್ಕೆ ನಿಗದಿಗೊಳಿಸಬೇಕೆಂದು ಸರ್ಕಾರದ ಮೇಲೆ ಒತ್ತಡ ತಂದಾಗ ೧೮೯೧ರಲ್ಲಿ 'ಏಜ್ ಆಫ್ ಕನಸೆಂಟ್ ಆಕ್ಟ್' ಗೆ ತಿದ್ದುಪಡಿ ಕಾಯ್ದೆಯನ್ನು ಜಾರಿಗೆ ತರಲಾಯಿತು. ಅದರ ಪ್ರಕಾರ ವಿವಾಹಿತ ಹೆಂಗಸಿನೊಂದಿಗಿನ ಶಾರೀರಿಕ ಸಂಬಂಧದ ವಯಸ್ಸು ೧೦ರಿಂದ ೧೨ಕ್ಕೇರಿತು. ೧೯೨೭ರಲ್ಲಿ ಈ ಬಗ್ಗೆ ಮತ್ತೊಮ್ಮೆ ಚಿಂತನೆ ಆರಂಭಗೊಂಡು, ಜೋಷಿ ಕಮಿಟಿಯು ಶಿಫಾರಸ್ಸು ಮಾಡಿದಂತೆ ೧೯೨೯ರಲ್ಲಿ 'ಚೈಲ್ಡ್ ಮ್ಯಾರೇಜ್ ರಿಸ್ಟ್ರೈಂಟ್ ಆಕ್ಟ್' ಜಾರಿಗೊಳಿಸಿ ಹೆಣ್ಣುಮಕ್ಕಳ ವಿವಾಹದ ವಯಸ್ಸನ್ನು ೧೪ ವರ್ಷಕ್ಕೆ ನಿಗದಿಗೊಳಿಸಲಾಯಿತು. ಇದರಿಂದ ಬಾಲ್ಯವಿವಾಹಗಳು ನಿಲ್ಲದಿದ್ದರೂ ಹಿಂದಿಗಿಂತ ಸ್ವಲ್ಪ ಹತೋಟಿಗೆ ಒಳಗಾದವು.

ನಗರಗಳಲ್ಲಾಗಲಿ, ಗ್ರಾಮೀಣ ಪ್ರದೇಶಗಳಲ್ಲಾಗಲಿ, ಶ್ರೀಮಂತ ಅಥವಾ ಬಡತನ, ಮೇಲುಜಾತಿ, ಕೀಳುಜಾತಿ ಇತ್ಯಾದಿ ಯಾವುದೇ ಸಮಾಜದಲ್ಲಾಗಲಿ ಹೆಣ್ಣುಮಕ್ಕಳ ವಿವಾಹ ವಯಸ್ಸಿನ ಏರಿಕೆ-ಇಳಿಕೆಗಳು ಆಯ ಕುಟುಂಬಗಳ ಅಗತ್ಯಾಗತ್ಯಗಳನ್ನು ಅವಲಂಬಿಸಿದೆಯೇ ಹೊರತು ಸ್ತ್ರೀ ಸುಧಾರಣೆಯನ್ನೋ, ಕಾನೂನನ್ನೋ ಅಲ್ಲ. ಆದ್ದರಿಂದಲೇ ಕೆಲವೊಮ್ಮೆ ಬಾಲ್ಯವಿವಾಹಕ್ಕೆ ಪ್ರತಿಯಾಗಿ ಪ್ರೌಢವಿವಾಹವು ಸಮಸ್ಯೆಯ ಸ್ವರೂಪದಲ್ಲಿ ಕಾಲಿಡುತ್ತದೆ. ಎಷ್ಟೋ ಕುಟುಂಬಗಳು/ಹೆಣ್ಣುಮಕ್ಕಳು ತೆಗೆದುಕೊಂಡ ಪ್ರೌಢ ವಿವಾಹದ ತೀರ್ಮಾನಗಳಿಗೆ ಸಮಾಜವು ಸ್ಪಂದಿಸದ ಕಾರಣದಿಂದ

ಅವಿವಾಹಿತರಾಗಿ ಉಳಿಯುವ, ಸೂಕ್ತವಾದ ವರನಿಲ್ಲದೆ ಅತೃಪ್ತಿ ಹೊಂದುವ, ವಿವಾಹದ ನಂತರದ ಕೌಟುಂಬಿಕ ಪರಿಸರದಲ್ಲಿ ಏರುಪೇರನ್ನು ಎದುರಿಸುವ ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಹಾಗಾಗಿ ಸ್ತ್ರೀಯ ವಿವಾಹ ಸಂಬಂಧಿತ ಸಮಸ್ಯೆಗಳು ಪರಿಹಾರ ಕಾಣುವುದಕ್ಕಿಂತ ಹೆಚ್ಚಾಗಿ ಅಲ್ಲಲ್ಲಿಯೇ ತೊಡರಿಕೊಳ್ಳುತ್ತಿರುವಂತೆ ಭಿನ್ನ ಸಮಸ್ಯೆಗಳನ್ನು ಸೃಷ್ಟಿಸಿಕೊಳ್ಳುತ್ತಿರುವಂತೆ ಕಾಣುತ್ತವೆ. ಇದಕ್ಕೆ ಕಾರಣ ಸಮಾಜ ಹಾಗೂ ಅದರ ಪ್ರತಿಯೊಂದು ಅಂಗಸಂಸ್ಥೆಯು ಲಿಂಗತಾರತಮ್ಯವನ್ನು ಆಳವಾಗಿ ಸ್ವೀಕರಿಸಿ ಆಚರಿಸಿಕೊಂಡು ಬರುತ್ತಿರುವುದೇ ಆಗಿದೆ.

ತಿರುಮಲಾಂಬ, ಕಲ್ಯಾಣಮ್ಮ, ತಿರುಮಲೆ ರಾಜಮ್ಮ, ಬೆಳಗೆರೆ ಜಾನಕಮ್ಮ, ಸರಸ್ವತಿಬಾಯಿ ರಾಜವಾಡೆ, ಜಯದೇವಿ ತಾಯಿ ಲಿಗಾಡೆ ಮುಂತಾದ ಸ್ವಾತಂತ್ರ್ಯ ಪೂರ್ವ ಲೇಖಕಿಯರೆಲ್ಲರೂ ಬಾಲ್ಯ ವಿವಾಹಕ್ಕೆ ಒಳಗಾದವರು. ಅಂಗಳದಲ್ಲಿ ಆಟವಾಡುವ ೯ ರಿಂದ ೧೪ನೇ ವಯಸ್ಸಿನೊಳಗಿನ ಈ ಬಾಲೆಯರಿಗೆ ವಿವಾಹಬಂಧನವನ್ನು ತೊಡಿಸಲಾಯಿತು. ಸರಸ್ವತಿಬಾಯಿ ರಾಜವಾಡೆಯವರದು ಬಾಲ್ಯವಿವಾಹವೂ ಹೌದು-ಅಸಮ ವಿವಾಹವೂ ಹೌದು. ೧೫ನೇ ವರ್ಷದ ಸರಸ್ವತಿಯರವರು ೫೧ ವರ್ಷ ವಯಸ್ಸಿನ ರಾಯಶಾಸ್ತ್ರಿ ರಾಜವಾಡೆಯವರೊಂದಿಗೆ ವಿವಾಹವಾಗಬೇಕಾಯಿತು.

ಬಾಲ್ಯ ವಿವಾಹ ಎರಡು ರೀತಿಯಿಂದ ನೆರವೇರಬಹುದು. ಒಂದು ಸಂಬಂಧದಲ್ಲೇ ಗೊತ್ತು ಮಾಡಿ ಮಾಡುವ ವಿವಾಹ, ಮತ್ತೊಂದು ಎರಡನೆಯ ಸಂಬಂಧಕ್ಕೋ, ವಯಸ್ಸಾದ ವೃದ್ಧರೊಂದಿಗೋ ಮಾಡುವ ವಿಧಾನ. ಬಾಲ್ಯವಿವಾಹದಿಂದಾಗುವ ಪರಿಣಾಮಗಳನ್ನು ತಮ್ಮ ಕೃತಿಗಳಲ್ಲಿ ಲೇಖಕಿಯರು ಹಿಡಿದಿಟ್ಟಿದ್ದಾರೆ.

ತಿರುಮಲಾಂಬರವರು 'ವಿಕ್ರಮ', 'ವಿದ್ಯುಲ್ಲತ', 'ಮಣಿಮಾಲಾ' ಕೃತಿಗಳಲ್ಲಿ ಬಾಲ್ಯವಿವಾಹ, ಅಸಮ ವಿವಾಹದ ಬಗ್ಗೆ ಚರ್ಚಿಸಿದ್ದಾರೆ. ಕಲ್ಯಾಣಮ್ಮನವರು 'ಇಂದಿರೆ ಅಥವಾ ನಿರ್ಭಾಗ್ಯವನಿತೆ' (ಕಾದಂಬರಿ), 'ಮುರಿದ ರೆಂಬೆ', 'ನಿರ್ಭಾಗ್ಯ ನಳಿನಿ' (ಕತೆಗಳು), 'ನಿರ್ಮಲೆ' (ನಾಟಕ) ಇವಲ್ಲದೆ ಅನೇಕ ಲೇಖನಗಳಲ್ಲಿ ಈ ವಿಷಯದ ಪ್ರಸ್ತಾಪವಿದೆ. ಶ್ಯಾಮಲಾದೇವಿಯವರ 'ದೊಡ್ಡಮ್ಮ ನೋಡಿದ ವರ' (ಕತೆ) ಮತ್ತು ಇತರೆ ಬರಹಗಳ ಮೂಲಕ ಬಾಲ್ಯವಿವಾಹದ ವಿರೋಧವನ್ನು ಕಾಣಬಹುದಾಗಿದೆ.

### ೩.೨.೬ ವರದಕ್ಷಿಣೆ ಪದ್ಧತಿ

ವರದಕ್ಷಿಣೆ ಪದ್ಧತಿಗೆ ರಾಮಾಯಣ ಮಹಾಭಾರತದ ಕಾಲದ ಪುರಾವೆಗಳನ್ನು ವಿದ್ವಾಂಸರು ನೀಡಿದ್ದಾರೆ. ವರದಕ್ಷಿಣೆ ವಿವಾಹ ಪದ್ಧತಿಯು ವೈದಿಕರಲ್ಲಿ ಜಾರಿಯಲ್ಲಿದ್ದರೆ, ಅವೈದಿಕರಾಗಿದ್ದವರು ಕನ್ಯಾಶುಲ್ಕ ಕೊಟ್ಟು ವರನೊಂದಿಗೆ ಮದುವೆ ಮಾಡುತ್ತಿದ್ದರು. ಆದರೆ ಕ್ರಮೇಣ ವರದಕ್ಷಿಣೆ ಪದ್ಧತಿ ಅವೈದಿಕರನ್ನೂ ಆವರಿಸಿಕೊಂಡಿತು. ಇನ್ನು ಕೆಲವು ಬಡುಕಟ್ಟು ಜನಾಂಗಗಳಲ್ಲಿ, ಕನ್ಯಾಶುಲ್ಕ ಆಚರಣೆಯಲ್ಲಿದೆ. ೧೮ನೇ ಶತಮಾನದಲ್ಲಿ ಆರಂಭಗೊಂಡ ಆಧುನಿಕತೆಯ ಪ್ರಕ್ರಿಯೆಯಲ್ಲಿ ವೈದಿಕ ಸಮಾಜದ ನಡೆ ಮುಂದಿದ್ದರಿಂದ ಆದರ್ಶ ಸಮಾಜದ ಕುರುಹಾಗಿ, ಬುಡಕಟ್ಟು ಸಮಾಜದಲ್ಲಿ

ಕನ್ಯೆಗೆ ಕನ್ಯಾಪಿತೃವಿಗೆ ನೀಡುತ್ತಿದ್ದ ಉಡುಗೊರೆಯು ಕನ್ಯೆಯ ಮಾರಾಟವಾಗುತ್ತದೆಂಬ ವ್ಯಾಖ್ಯಾನದೊಂದಿಗೆ ನಿರಾಕರಣೆಗೊಳ್ಳುತ್ತಲೇ, ವರನಿಗೆ ಕೊಡುವ ಉಡುಗೊರೆಯು ವರನ ಶ್ರೇಷ್ಠತೆಯನ್ನು ಪುರಸ್ಕರಿಸುವ ದಕ್ಷಿಣೆಯಾಗಿ ವ್ಯಾಖ್ಯಾನಗೊಂಡು ಸ್ಥಾಪಿತವಾಯಿತು. ಇದರ ಪರಿಣಾಮವಾಗಿ, ವರದಕ್ಷಿಣೆಯಿಂದ ತಪ್ಪಿಸಿಕೊಳ್ಳಲು ಹೆಣ್ಣು ಶಿಶುಹತ್ಯೆ, ಭ್ರೂಣಹತ್ಯೆಗಳಂತಹ ಅಮಾನವೀಯ ಪದ್ಧತಿಗಳನ್ನು ಅಳವಡಿಸಿಕೊಂಡಿತು. ವರದಕ್ಷಿಣೆ ಎಂಬುದು ಹೆಣ್ಣಿನಿಂದ ಕುಟುಂಬಕ್ಕೆ ಒದಗುವ ಅಪಾಯವಾಗಿ ಮಾತ್ರ ಗ್ರಹಿಸಿ ಹೆಣ್ಣುಗಳ ಹತ್ಯೆಗೆ, ಅನಾದರಣೆಗೆ ತೊಡಗಲಾಯಿತು.

ಸಮಾಜ ಸುಧಾರಕರ ಗಮನ ಸೆಳೆದ ವರದಕ್ಷಿಣೆ ಪದ್ಧತಿಯು, ಹೆಣ್ಣು ಶಿಶುಗಳ ಹತ್ಯೆಗೆ ಕಾರಣವೆಂಬುದನ್ನು ಮನಗಂಡರು. ಜತೆಗೆ ವರದಕ್ಷಿಣೆ ನಿರಾಕರಣೆಯು ಪುರುಷನ ಆತ್ಮಸಮ್ಮಾನದ ವಿಚಾರ ಎಂಬುದಾಗಿ ಪ್ರತಿಪಾದಿಸತೊಡಗಿದರು. ಸುಶಿಕ್ಷಿತ ಗಂಡುಗಳು ವರದಕ್ಷಿಣೆ ನಿರಾಕರಿಸಬೇಕು ಎಂದು ಕರೆ ನೀಡಲಾಯಿತು. ಆದರೆ ವರದಕ್ಷಿಣೆ ನಿಲ್ಲುವುದಕ್ಕಿಂತ ಪರಿವರ್ತಿತರೂಪದಲ್ಲಿ ಅಂದರೆ ವರನಿಗೆ, ವರನ ಕಡೆಯವರಿಗೆ ಕೊಡಬೇಕಾದ ಕಾಣಿಕೆ, ಸೇವೆಗಳ ರೂಪದಲ್ಲಿ ಹೊಸರೂಪ ಪಡೆಯಿತು. ವರದಕ್ಷಿಣೆ ಪದ್ಧತಿಯು ಮದುವೆಯೊಂದಿಗೆ ಮುಗಿಯಬೇಕಾದ ಸಂಗತಿಯಾಗಿದ್ದದ್ದು, ವಿವಾಹದ ನಂತರವೂ ಹೆಣ್ಣಿನ ಜೀವನದಲ್ಲಿ ನಿರಂತರವಾಗಿ ಮುಂದುವರೆಯುವ ಸಂಗತಿಯಾಯಿತು. ತವರು ಮನೆಯಿಂದ ಮತ್ತಷ್ಟು ಹಣ ತರಲು ಆದೇಶಿಸುವುದು, ತರದಿದ್ದರೆ ಹೆಂಡತಿಯನ್ನು ನಿರ್ದಯವಾಗಿ ಹೊರಗಟ್ಟುವ ಇಲ್ಲವೆ ಜೀವಂತ ಸುಡುವ ಕೀಳುಮಟ್ಟಕ್ಕೂ ಇಳಿಯಲಾಯಿತು. ಸ್ವಾತಂತ್ರ್ಯಾ ನಂತರದಲ್ಲಿ ೧೯೬೧ರಲ್ಲಿ ಹೊರಡಿಸಲಾದ 'ಆ್ಯಂಟಿ ಡೌರಿ ಆಕ್ಟ್'ನ ನಂತರವಂತೂ ಕಾಣಿಕೆ, ಸೇವೆಗಳ ರೂಪವು ಬಲಗೊಂಡು ಬಹುರೂಪಿ ವರದಕ್ಷಿಣೆ ಪದ್ಧತಿ ರೂಢಿಗೆ ಬಂದಿತು. ೧೯೧೬ರ ವರದಕ್ಷಿಣೆ ನಿಷೇಧ ಕಾಯ್ದೆಗೆ ೧೯೮೪ ಮತ್ತು ೧೯೮೬ರಲ್ಲಿ ಎರಡು ಬಾರಿ ತಿದ್ದುಪಡಿಗಳನ್ನು ತರಲಾಗಿದೆ. ಆದರೂ ವರದಕ್ಷಿಣೆ ಕಿರುಕುಳವು ಇನ್ನೂ ನಿಂತಿಲ್ಲ.

ತಿರುಮಲಾಂಬರವರು ಕೇಶಮುಂಡನ, ಬಾಲ್ಯ ವಿವಾಹದ ವಿರುದ್ಧ ದನಿಯೆತ್ತಿದ್ದು, ವರದಕ್ಷಿಣೆಯ ನಿರ್ಮೂಲನದ ಬಗ್ಗೆಯೂ ತಮ್ಮ ಬೆಂಬಲವನ್ನು ಸೂಚಿಸುತ್ತಾರೆ. 'ಮಾತೃ ನಂದಿನಿ' ಕಾದಂಬರಿಯಲ್ಲಿ ವರದಕ್ಷಿಣೆ, ಬಾಲ್ಯವಿವಾಹ, ಸ್ತ್ರೀ ವಿದ್ಯಾಭ್ಯಾಸ ವಿರೋಧ, ಮದುವೆಯ ದುಂದುವೆಚ್ಚ ಮೊದಲಾದವುಗಳನ್ನು ಈ ಕಾದಂಬರಿಯ ನಾಯಕಿಯಾದ ನಂದಿನಿ, ನಾಗೇಶರಾಯ ಮೊದಲಾದವರು ವಿರೋಧಿಸುತ್ತಾರೆ.

ಸಮಾಜ ಸುಧಾರಕರು ಸಮಸ್ಯೆಗಳನ್ನು ಹೊರಗಿನಿಂದ ಚಿಂತನೆ ನಡೆಸಿದರೆ ಶ್ಯಾಮಲಾ ಮತ್ತು ಗಿರಿಬಾಲೆಯವರು ವೇಶ್ಯಾಕುಲದ ಅಂತರಗಂಗದ ತುಮುಲುಗಳನ್ನು, ಎದುರಿಸುತ್ತಿರುವ ವಿವಿಧ ಮಗ್ಗುಲುಗಳನ್ನು ನಿರ್ಭೀತಿಯಿಂದ ಮಂಡಿಸಿದ್ದಾರೆ.

### ೩.೩ ಸ್ವಾತಂತ್ರ್ಯೋತ್ತರ ಮಹಿಳಾ ಸಾಹಿತ್ಯ ರಚನೆಯ ಸಾಂಸ್ಕೃತಿಕ ಪರಿಸರ

೧೯ನೇ ಶತಮಾನದ ಮಧ್ಯ ಕಾಲದಲ್ಲಿ ಅಂದರೆ, ಸ್ವಾತಂತ್ರ್ಯಪೂರ್ವದಲ್ಲಿ ಮಹಿಳೆಯ ಸಾಮಾಜಿಕ, ಅರ್ಥಿಕ ಹಾಗೂ ರಾಜಕೀಯ ಸಂಗತಿಗಳನ್ನು ಕೇಂದ್ರವಾಗಿಟ್ಟುಕೊಂಡ ಸಾಹಿತ್ಯವನ್ನು ಮಹಿಳಾ

ಬರಹಗಾರರು ಸೃಷ್ಟಿಸಿದರು. ಮಹಿಳೆಯರು, ಮಹಿಳಾ ದೃಷ್ಟಿಕೋನದಿಂದ ಅಭಿವ್ಯಕ್ತಿಗೊಳಿಸುವ ಪ್ರಯತ್ನಗಳು, ಮೊದಲ ಹಂತದಲ್ಲಿ ಕಾಣಿಸಿಕೊಂಡವು. ಸ್ವಾತಂತ್ರ್ಯ ನಂತರ ಶಿಕ್ಷಣ, ಉದ್ಯೋಗಗಳಲ್ಲಿ ತೊಡಗಿಸಿಕೊಳ್ಳುವುದರ ಮೂಲಕ ಮಹಿಳೆಯರ ಬರಹ ಹೆಚ್ಚು ಶಕ್ತಿಯನ್ನು ಪಡೆಯಿತು.

ಯುರೋಪಿನ ಕೈಗಾರಿಕಾ ಕ್ರಾಂತಿಯ ತರುವಾಯ 'ಆಧುನೀಕರಣ' ಪ್ರಾರಂಭವಾಯಿತು. ಸಮಾನತೆ, ಸ್ವಾತಂತ್ರ್ಯ, ಜಾತ್ಯಾತೀತ ದೃಷ್ಟಿಕೋನ, ಸ್ತ್ರೀವಾದ, ಮಹಿಳಾ ಸಂವೇದನೆ ಮುಂತಾದ ಪ್ರಕ್ರಿಯೆಗಳು 'ಆಧುನೀಕರಣ'ದ ಪ್ರಭಾವದಿಂದಾಗಿವೆ. ವಿಜ್ಞಾನದಲ್ಲಿನ ಹೊಸ ಹೊಸ ಸಂಶೋಧನೆಗಳು; ವೈಚಾರಿಕೆ ಕ್ಷೇತ್ರದಲ್ಲಿನ ಕ್ರಾಂತಿ, ಔದ್ಯೋಗೀಕರಣದ ತೀವ್ರ ಬೆಳವಣಿಗೆ; ನಗರೀಕರಣ; ಕೃಷಿ ಪ್ರಧಾನ ಬದುಕಿನ ಅವನತಿ ಕಾಣಿಸಿಕೊಂಡವು.

ಕ್ರಿ.ಶ. ೧೯೪೭ರ ನಂತರ ರಾಜಕೀಯವಾಗಿ ದೇಶದ ಆಡಳಿತ ಬ್ರಿಟೀಶರಿಂದ ಭಾರತೀಯರಿಗೆ ಹಸ್ತಾಂತರವಾಯಿತು. ಸ್ವತಂತ್ರ ಭಾರತದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿದ್ದ ಸಮಸ್ಯೆಗಳು ಹೊಸ ರೂಪ ಪಡೆಯತೊಡಗಿದವು. ಬಂಡವಾಳಶಾಹಿ ಉತ್ಪಾದನಾ ವಿಧಾನ, ಭಿನ್ನ ಸಮಸ್ಯೆಗೆ ಕಾರಣೀಭೂತವಾಯಿತು. ಕಾರ್ಖಾನೆಯ ಮಾಲೀಕರು, ರಾಜಕಾರಣಿಗಳು, ಧಾರ್ಮಿಕ ಮುಖಂಡರು, ಜಮೀನುದಾರರು ತಮ್ಮ ಹಿತಾಸಕ್ತಿಗಳನ್ನು ಕಾಯ್ದುಕೊಳ್ಳುವ ದೃಷ್ಟಿಯಿಂದ ಬಂಡವಾಳಶಾಹಿಯ ಪಟ್ಟಭದ್ರ ವ್ಯವಸ್ಥೆಯ ಮುಂದುವರಿಕೆಗೆ ಕಾರಣರಾಗಿದ್ದಾರೆ.

ಕೈಗಾರಿಕಾ ಕ್ರಾಂತಿ, ಕೌಟುಂಬಿಕ ಮತ್ತು ಸಾಮಾಜಿಕ ವ್ಯವಸ್ಥೆಯನ್ನೇ ಪುನರ್ ನಿರ್ಮಾಣ ಮಾಡಿತು. ನಗರೀಕರಣ, ಆಧುನೀಕರಣ, ಜಾಗತೀಕರಣಗಳಿಂದ ವ್ಯವಸ್ಥೆಯ ರೂಪಗಳು ಬದಲಾವಣೆಗೊಂಡಿತು. ಶಿಕ್ಷಣ, ಉದ್ಯೋಗ, ಕೌಟುಂಬಿಕ ವಿಘಟನೆಗಳು ಹೆಚ್ಚತೊಡಗಿದಂತೆ, ಮಹಿಳಾ ಬರಹಗಾರರಲ್ಲಿ ಅಸ್ತಿತ್ವದ ಪ್ರಶ್ನೆ ತೀವ್ರ ಸ್ವರೂಪವನ್ನು ಪಡೆಯತೊಡಗಿತು.

ಭಾರತದ ಸರ್ವಾಂಗೀಣ ಅಭಿವೃದ್ಧಿಗಾಗಿ ಯೋಜನಾ ಆಯೋಗದ 'ಪಂಚ ವಾರ್ಷಿಕ ಯೋಜನೆಗಳು' ಹೆಣ್ಣು ಮಕ್ಕಳ ಅಭಿವೃದ್ಧಿಯ ಕಡೆಗೆ ಹೆಚ್ಚಿನ ಗಮನ ನೀಡತೊಡಗಿದವು. ಹೆಣ್ಣು ಮಕ್ಕಳ ಶಿಕ್ಷಣ; ಕೌಟುಂಬಿಕ ಕ್ಷೇಮಾಭಿವೃದ್ಧಿ; ಗರ್ಭಿಣಿ ಹಾಗು ಶಿಶು ಆರೋಗ್ಯ ಸಂರಕ್ಷಣೆ; ಕುಟುಂಬ ಯೋಜನೆ; ಮಹಿಳಾ ಕಾರ್ಮಿಕರ ಕ್ಷೇಮಾಭಿವೃದ್ಧಿ ಇತ್ಯಾದಿ ಕಾರ್ಯಕ್ರಮಗಳು ರೂಪಗೊಂಡವು. ೧೯೮೫ರಲ್ಲಿ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯವನ್ನು ರಚಿಸಿ, ಅದರ ಅಂಗ ಸಂಸ್ಥೆಯಾದ ಮಹಿಳಾ ಮತ್ತು ಕಲ್ಯಾಣ ಇಲಾಖೆಗೆ ಮಹಿಳೆಯರ ಅಭಿವೃದ್ಧಿಯನ್ನು ಕುರಿತಾದ ಕಾರ್ಯಕ್ರಮವನ್ನು ವಹಿಸಲಾಯಿತು.

ಮಹಿಳೆಯ ಬದುಕು, ದುಡಿಮೆಯೊಂದಿಗೆ ಸಮೀಕರಣಗೊಂಡಿತ್ತಾದರೂ ವಿವಿಧ ವಲಯಗಳಲ್ಲಿ ದುಡಿಮೆಯ ಸ್ವರೂಪ ಭಿನ್ನ ಸಮಸ್ಯೆಯನ್ನು ಸೃಷ್ಟಿಸಿತು. ಕುಟುಂಬದೊಳಗಿನ ಆಕೆಯ ದುಡಿಮೆಯ ಸುತ್ತ ಚರ್ಚೆಗಳು ಹುಟ್ಟಿಕೊಳ್ಳತೊಡಗಿದವು. ಹೆಣ್ಣಿನ ದೈಹಿಕ ಆರೋಗ್ಯದ ಬಗೆಗಿನ ದೃಷ್ಟಿಕೋನವೂ ಬದಲಾಯಿತು.

೧೯೫೬ರಲ್ಲಿ ಹಿಂದೂ ಸ್ತ್ರೀಯರ ಆಸ್ತಿಯ ಹಕ್ಕಿನ ಕಾಯ್ದೆ; ೧೯೫೯ರಲ್ಲಿ ಬಹುಪತ್ನಿತ್ವ ನಿಷೇದ ಕಾಯ್ದೆ; ೧೯೫೫ರಲ್ಲಿ ಹಿಂದೂ ವಿವಾಹ ಕಾಯ್ದೆ; ೧೯೬೧ರಲ್ಲಿ ವರದಕ್ಷಿಣೆ ಕಾಯ್ದೆ ಮತ್ತು ಪ್ರಸೂತಿ ಸೌಲಭ್ಯ ಕಾಯ್ದೆ; ೧೯೮೧ರಲ್ಲಿ ದೇವದಾಸಿ ಸಮರ್ಪಣಾ ನಿಷೇಧ ಆಧಿನಿಯಮ; ೧೯೭೬ರಲ್ಲಿ ಸಮಾನ ವೇತನ ಕಾಯ್ದೆ; ೧೯೭೮ರಲ್ಲಿ ಬಾಲ್ಯವಿವಾಹ ನಿಷೇಧ ತಿದ್ದುಪಡಿ ಮುಂತಾದ ಕಾನುನುಗಳು ಮಹಿಳೆಯರ ಕ್ಷೇಮಾಭಿವೃದ್ಧಿಯನ್ನು ಕುರಿತಾದವುಗಳಾಗಿವೆ.

### ೩.೩.೧ ಸಾಹಿತ್ಯ ಪಂಥಗಳ ಪ್ರಭಾವ

ಸ್ವಾತಂತ್ರೋತ್ತರ ಕಾಲದ ಸಾಹಿತ್ಯಿಕ ವಾತಾವರಣದಲ್ಲಿ 'ಪ್ರಗತಿಶೀಲ' ಪಂಥದಿಂದ ಕೆಲವು ಮಹಿಳಾ ಬರಹಗಾರರು ಪ್ರಭಾವಿತರಾಗಿದ್ದಾರೆ. ಸಾಮಾಜಿಕ ವಿಷಮತೆ, ಶೋಷಣೆ, ಬಂಡವಾಳಗಾರರು, ಭೂಮಾಲೀಕರ ವಿರುದ್ಧದ ಹೋರಾಟವನ್ನು, ತಮ್ಮ ಬರಹಗಳ ಮೂಲಕ ಬೆಂಬಲಿಸಿದರು. ಸಮಕಾಲೀನ ಸಮಸ್ಯೆಗಳಾದ ಹಸಿವು, ಬಡತನ, ವೇಶ್ಯಾ ಸಮಸ್ಯೆ ಮುಂತಾದವುಗಳು ಪ್ರಗತಿಶೀಲ ಸಾಹಿತ್ಯದಲ್ಲಿ ಮೂಡಿಬಂದಿವೆ. ಶೋಷಣೆಯ ವಿರುದ್ಧ ಪ್ರತಿಭಟಿಸುವುದು; ಸಾಮಾಜಿಕ ಸುಧಾರಣೆಯತ್ತ ಗಮನ ನೀಡುವುದು; ವಾಸ್ತವ ಬದುಕಿಗೆ ಪ್ರಥಮ ಆಧ್ಯತೆ ನೀಡುವುದು; ಬಂಡವಾಳಗಾರರು ಜಮೀನುದಾರರು, ಅಧಿಕಾರಿ ವರ್ಗದ ಅಪವಿತ್ರ ಮೈತ್ರಿಯನ್ನು ವಿರೋಧಿಸಿ ಸಾಹಿತ್ಯವನ್ನು ರಚಿಸಿದರು. ಶ್ರಮಿಕ ಮತ್ತು ಕೃಷಿಕ ಸಮಾಜವನ್ನು ಪ್ರತಿನಿಧಿಸಲಾಯಿತು. ಈ ಪಂಥದಲ್ಲಿ ತೊಡಗಿಸಿಕೊಂಡವರು, ಊಳಿಗಮಾನ್ಯ ಪದ್ಧತಿ, ಭೂಮಾಲೀಕತ್ವ, ಕಾರ್ಮಿಕ ಶೋಷಣೆಯನ್ನು ಬರಹದ ವಸ್ತುವಾಗಿ ಸ್ವೀಕರಿಸಿದರು. ಪರಂಪರಾಗತ, ಸಾಂಪ್ರದಾಯಿಕ ಮೌಲ್ಯಗಳನ್ನು ಪ್ರಶ್ನಿಸತೊಡಗಿದರು. ಅನುಪಮಾ ನಿರಂಜನ, ಎಚ್.ವಿ.ಸಾವಿತ್ರಮ್ಮ, ಎಂ.ಕೆ.ಇಂದಿರ ಮುಂತಾದವರ ಕೆಲವು ಕೃತಿಗಳು, ಮೇಲಿನ ಉದ್ದೇಶಗಳಿಂದ ಪ್ರಭಾವಿತವಾಗಿರುವುದನ್ನು ಕಾಣಬಹುದಾಗಿದೆ.

'ಪ್ರಗತಿಶೀಲ' ಪಂಥದ ಉದ್ದೇಶಗಳಿಗೆ ಹಿನ್ನೆಲೆಯಾಗಿ ಮಾರ್ಕ್ಸ್‌ವಾದ, ಸಮತಾವಾದದ ಸಿದ್ಧಾಂತಗಳು ಮಹತ್ವದ ಪಾತ್ರ ವಹಿಸಿದವು. ಕಾವ್ಯಕ್ಕಿಂತ ಸಣ್ಣಕತೆ ಮತ್ತು ಕಾದಂಬರಿ ಪ್ರಕಾರಗಳಲ್ಲಿ ಈ ಪಂಥದ ಉದ್ದೇಶಗಳು ಈಡೇರಿದವು. ಅ.ನ.ಕೃ., ತ.ರಾ.ಸು., ನಿರಂಜನ, ಬಸವರಾಜ ಕಟ್ಟೀಮನಿ ಮುಂತಾದವರ ಕೃತಿಗಳು ಮಹಿಳಾ ಬರಹಗಾರರಿಗೆ ಪ್ರೇರೇಪಣೆ ನೀಡಿದವು.

ಗೋಪಾಲಕೃಷ್ಣ ಅಡಿಗರು ಮುಂತಾದವರಿಂದ ಬೆಳೆದು ಬಂದ 'ನವ್ಯ' ಸಾಹಿತ್ಯ ಪಂಥದ ಉದ್ದೇಶಗಳು ಕ್ರಿ.ಶ.೧೯೫೦ರ ನಂತರ ಪ್ರಚಲಿತಗೊಂಡವು. ಅನಂತಮೂರ್ತಿ, ಯಶವಂತ ಚಿತ್ತಾಲ, ಲಂಕೇಶ, ಚಂಪಾ ಮುಂತಾದವರು ಬದುಕಿನ ಕುರಿತಾದ ವಿಶ್ಲೇಷಣೆಯನ್ನು, ತಮ್ಮ ಅನುಭವ–ಆಲೋಚನೆಗಳ ಮೂಲಕ ಅಭಿವ್ಯಕ್ತಿಸ ತೊಡಗಿದರು. ವೈಯಕ್ತಿಕ ನೆಲೆಯಿಂದ ಸಮಷ್ಟಿ ನೆಲೆಯವರೆಗೂ ವಿಸ್ತರಿಸಿ ನೋಡುವ ನೋಟವನ್ನು ಇದು ಒಳಗೊಂಡಿತ್ತು. ಎಡ್ಮಂಡ್ ಫ್ರಾಯ್ಡ್‌ನ ಲೈಂಗಿಕ ಜಿಜ್ಞಾಸೆ, ಮಾರ್ಕ್ಸ್, ಎಂಗೆಲ್ಸ್‌ರವರ ಆರ್ಥಿಕ ಸಿದ್ಧಾಂತ, ಬದುಕಿನಾಚೆಯ ಜಿಜ್ಞಾಸೆ ಪ್ರಾರಂಭವಾಯಿತು. 'ನವ್ಯ' ಪಂಥದಡಿ ಬರೆಯಲು ಪ್ರಾರಂಭಿಸಿದವರು ಕೆಲವು ಲಕ್ಷಣಗಳನ್ನು ಗುರುತಿಸಿಕೊಂಡಿದ್ದರು.

ಸಾಮಾಜಿಕ ಧೋರಣೆಗಿಂತ ವ್ಯಕ್ತಿಯ ವೈಯಕ್ತಿಕ ಸಮಸ್ಯೆಗಳು ಪ್ರಧಾನ ನೆಲೆಗೆ ಬಂದವು. ಇತರೆ ಪ್ರಕಾರಗಳಿಗಿಂತ ಕಾವ್ಯ ಪ್ರಕಾರ ಹೆಚ್ಚು ಪ್ರಖರತೆಯನ್ನು ಕಂಡದ್ದು ವಿಶಿಷ್ಟವಾಗಿದೆ. ಕಾವ್ಯ, ಸಾಮಾಜಿಕ ಮೌಲ್ಯಗಳ ಒರೆಗಲ್ಲಾಯಿತು. ವ್ಯಕ್ತಿತ್ವದ ದ್ವಂದ್ವದ ಭಾವನೆಗಳು ಪ್ರಕಟಗೊಳ್ಳಲು ಅವಕಾಶ ದೊರೆಯಿತು. ವ್ಯಕ್ತಿತ್ವದ ಔನತ್ಯ, ದೌರ್ಬಲ್ಯ, ಸಣ್ಣತನಗಳನ್ನು ಬಯಲುಗೊಳಿಸಿತು. ಮನಸ್ಸಿನ, ಮಾನಸಿಕ ವಿಶ್ಲೇಷಣೆಗೆ ಇಲ್ಲಿ ಹೆಚ್ಚು ಗಮನ ನೀಡಬಹುದಾಗಿದೆ. ಬದುಕಿನ ವಿಶ್ಲೇಷಣೆಯಲ್ಲಿ ಹೊಸ ಶೋಧಕವಾಗಿ ಭಾಷೆ ಬಳಕೆಗೊಂಡದ್ದೊಂದು ವಿಶೇಷ. ಸಾವಯವ ಸಮಗ್ರತೆಯ ಶಿಲ್ಪದ ಪರಿಕಲ್ಪನೆಯನ್ನು ಹುಟ್ಟು ಹಾಕಲಾಯಿತು. ವಿಮರ್ಶೆಗೆ ಹೆಚ್ಚು ಒತ್ತು ಸಿಕ್ಕಿತು. ವಾಸ್ತವದ ಚಿತ್ರಣ ಬಾಹ್ಯ ಜಗತ್ತಿನಲ್ಲಿರದೆ, ಮನುಷ್ಯನ ಪ್ರಜ್ಞೆಯಲ್ಲಿದೆಯೆಂಬುದನ್ನು ಮನಗಾಣಿಸಲು ಪ್ರಯತ್ನಿಸಲಾಯಿತು. 'ನವ್ಯ'ದ ಬರಹಗಳಲ್ಲಿ ಒಂಟಿತನ, ಅಸಹಾಯಕತೆ, ಹೆಣ್ಣು ಗಂಡಿನ ನಡುವಿನ ಸಂಬಂಧದ ಬಗ್ಗೆ; ಲೈಂಗಿಕ ಕಾಮದ ಬಗ್ಗೆ; ತೋರಿಕೆಯ ಸೌಂದರ್ಯದ ಹಿಂದಿರುವ ಕುರೂಪತೆ; ಅನಾಥ ಪ್ರಜ್ಞೆಯನ್ನು ಕಾಣಬಹುದು. ಮುಕ್ತ ಅಭಿವ್ಯಕ್ತಿಯ ಹಂಬಲದಿಂದ ಸಾಂಪ್ರದಾಯಿಕ ಮಡಿವಂತಿಕೆಯನ್ನು ಬರಹಗಾರರು ಕೊಡವಿ ನಿಂತರು. ವಸ್ತು, ತಂತ್ರ, ಶೈಲಿಯ ದೃಷ್ಟಿಯಿಂದ ವಿಶಿಷ್ಟತೆಯನ್ನು ಸಾಧಿಸಲು ಮುಂದಾಗಿದ್ದಾರೆ. 'ನವ್ಯ' ಪಂಥದ ಲಕ್ಷಣಗಳು ವೀಣಾಶಾಂತೇಶ್ವರ್ ಮತ್ತು ರಾಜಲಕ್ಷ್ಮಿ ಎನ್.ರಾವ್ ಮುಂತಾದ ಮಹಿಳೆಯರನ್ನು ಆಕರ್ಷಿಸಿದವು. ಮೇಲಿನ ಲಕ್ಷಣಗಳೊಂದಿಗೆ ಹೆಣ್ಣಿನ ಮನಸ್ಸಿನ ಮುಕ್ತ ಅಭಿವ್ಯಕ್ತಿ ಮಹಿಳಾ ಬರಹಗಾರರ ಮುಖ್ಯ ಹಿತಾಸಕ್ತಿಯಾಗಿತ್ತು.

ಕ್ರಿ.ಶ.೧೯೭೦ರ ನಂತರ, ವ್ಯಕ್ತಿವಾದಿ ನೆಲೆಗೆ ವಿರುದ್ಧವಾಗಿ, ಸಮಾಜವಾದಿ ನೆಲೆಯಲ್ಲಿ ಆಲೋಚಿಸುವ 'ದಲಿತ-ಬಂಡಾಯ' ಪಂಥದ ಉದ್ದೇಶಗಳು ಮಹಿಳಾ ಬರಹಗಾರರನ್ನು ಪ್ರೇರೇಪಿಸಲು ಮೊದಲಾಯಿತು. ಹೆಚ್ಚು ಮಹಿಳೆಯರು ಬರಹಕ್ಕೆ ತೊಡಗಲು 'ಬಂಡಾಯ'ದ ಸನ್ನಿವೇಶ ದಾರಿ ಮಾಡಿಕೊಟ್ಟಿತು. ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ದಮನಕ್ಕೆ ಒಳಗಾಗುವ 'ದಲಿತರು', ತಮ್ಮ ನೋವು, ಸಂಕಟ, ತಳಮಳಗಳನ್ನು, ಅನುಭವಿಸಿದ ಅಸ್ಪೃಶ್ಯತೆಯ ಭಾವನೆಗಳನ್ನು ಬರಹದ ಮೂಲಕ ಹಂಚಿಕೊಳ್ಳತೊಡಗಿದ್ದು, ಕನ್ನಡ ಸಾಹಿತ್ಯ ಹೊಸ ನೆಲೆಯನ್ನು ತಲುಪಲು ಕಾರಣವಾಯಿತು.

ವ್ಯಕ್ತಿ ಗೌರವ, ಪ್ರಜಾ ಪ್ರಭುತ್ವವಾದಿ ನೆಲೆ, ಎಡಪಂಥೀಯ ಆಲೋಚನೆಯನ್ನು ಮುಖ್ಯ ನೆಲೆಯಲ್ಲಿ ಶೋಧಿಸುವ 'ಬಂಡಾಯ' ಸಾಹಿತ್ಯ, ಮುಖ್ಯವಾಗಿ 'ದಲಿತ ಸಂವೇದನೆ', 'ಸ್ತ್ರೀ ಸಂವೇದನೆ', 'ಮುಸ್ಲಿಂ ಸಂವೇದನೆ'ಗಳನ್ನು ಹುಟ್ಟು ಹಾಕಿತು. ಮುಕ್ತ ಬದುಕಿನ ಆಯ್ಕೆಗೆ ಅಡ್ಡಿಯಾಗುವ ಶೋಷಣೆ, ಜಾತಿ, ಅಸ್ಪೃಶ್ಯತೆ, ಧರ್ಮ, ಪ್ರಭುತ್ವ, ಲಿಂಗಬೇಧ, ವರ್ಗ ಸಂಘರ್ಷ ಗಳನ್ನು ಕುರಿತು ತಮ್ಮ ಬದುಕಿನ ಇರುವಿಕೆ ಮತ್ತು ಪ್ರತಿಭಟನೆಯನ್ನು ಏಕಕಾಲಕ್ಕೆ ಪ್ರಕಟಿಸುತ್ತದೆ. ಬಂಡವಾಳಶಾಹಿ, ಅನಕ್ಷರತೆ, ಅಧಿಕಾರಶಾಹಿತ್ವ, ಶಿಕ್ಷಣ ಮುಂತಾದ ನೂರಾರು ಹದಗೆಟ್ಟ ವ್ಯವಸ್ಥೆಗಳಿಗೆ ಒಂದು ಜೀವಂತಿಕೆಯ ಚಾಲನೆಯಾಗಿ 'ಬಂಡಾಯ' ಸಾಹಿತ್ಯದ ಒಟ್ಟು ರಚನೆಗಳು ಮೂಡಿಬಂದಿವೆ. ವಾಸ್ತವತೆಯತ್ತ ಜನರನ್ನು

ಕರೆದೊಯ್ಯುವ ಹಾಗೂ ಆ ಮೂಲಕ ಜನರಲ್ಲಿ ವೈಚಾರಿಕ ಎಚ್ಚರ ನೀಡುವುದು; ವ್ಯವಸ್ಥೆಯ ಲೋಪದೋಷಗಳನ್ನು ಪ್ರಶ್ನಿಸುವುದು, ಖಂಡಿಸುವುದು; ಪ್ರತಿಭಟಿಸುವಿಕೆಯ ಮೂಲಕ ಸಾಮಾಜಿಕ ಬದಲಾವಣೆ ತರುವ ಉದ್ದೇಶವನ್ನು ಹೊಂದಿದ್ದಿತು.

ನಮ್ಮ ದೇಶದ ಎಲ್ಲಾ ಜಾತಿ, ವರ್ಗಗಳ ಮಹಿಳೆಯರೆಲ್ಲರೂ 'ದಲಿತ'ರಾಗಿದ್ದಾರೆಂಬುದನ್ನು, ಕೆಲವು ಮಹಿಳೆಯರ ಬರಹಗಳು ಮನವರಿಕೆ ಮಾಡಿವೆ. ಹೆಣ್ಣನ್ನು ಅಕ್ಷರದಿಂದ ವಂಚಿತರನ್ನಾಗಿ ಮಾಡಿದ ವ್ಯವಸ್ಥೆಯಲ್ಲಿ, ಮಹಿಳೆಯರು ಅಕ್ಷರಗಳ ಮೂಲಕ ಮಾತನಾಡಿದ್ದು ಸಾಹಿತ್ಯ ಚರಿತ್ರೆಯಲ್ಲಿ ದೊಡ್ಡ 'ಬಂಡಾಯ'ವಾಯಿತು. ಬೇರೆ ಬೇರೆ ವರ್ಗದಿಂದ, ಜಾತಿಯಿಂದ ಸಾಹಿತ್ಯಲೋಕ ಪ್ರವೇಶಿಸಿದ ಮಹಿಳೆಯರು ಅಸಮಾನತೆ, ಅನ್ಯಾಯದ ವಿರುದ್ಧ ಸಿಡಿದೆದ್ದರು. ಸಾಹಿತ್ಯ ಕ್ಷೇತ್ರದಿಂದ ದೂರವಿದ್ದ ಅನೇಕ ಮಹಿಳೆಯರು, ತಮ್ಮ ಅನುಭವ, ಆಲೋಚನೆಗಳನ್ನು ಬರಹಗಳ ಮೂಲಕ ಅಭಿವ್ಯಕ್ತಿಸಲು ಮುಂದಾದರು. ಗೀತಾ ನಾಗಭೂಷಣ್, ಬಿ.ಟಿ.ಲಲಿತಾ ನಾಯಕ್, ಸಾರಾ ಅಬೂಬಕ್ಕರ್ ಮುಂತಾದವರು ಈ ನೆಲೆಯಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ.

**೩.೩.೨ ಸ್ತ್ರೀವಾದದ ಪ್ರಭಾವ**

೨೦ನೇ ಶತಮಾನದ ಉತ್ತರಾರ್ಧದಲ್ಲಿ ಸಾಮಾಜಿಕ ದೃಷ್ಟಿಕೋನ ಬದಲಾಯಿತು. ಕ್ರಿ.ಶ.೧೯೭೫ರಲ್ಲಿ ಮಹಿಳಾ ಚಿಂತನೆಗಳು ಜಗತ್ತಿನ ಗಮನ ಸೆಳೆದವು. ಇದೇ ಸಂದರ್ಭದಲ್ಲಿ ಭಾರತದಲ್ಲೂ ಇಂತಹ ಪ್ರಜ್ಞೆ ಬೆಳೆಯತೊಡಗಿತು. ಸಿಮೋನ್ ದಿ ಬುವಾ ಮುಂತಾದ ಸ್ತ್ರೀವಾದಿಗಳಿಂದ ರೂಪಿಸಲ್ಪಟ್ಟ ಸ್ತ್ರೀವಾದಿ ಚಳುವಳಿಯ ಕಾವು ಕರ್ನಾಟಕಕ್ಕೂ ಪ್ರವೇಶಿಸಿತು. ಪಂಚವಾರ್ಷಿಕ ಯೋಜನೆಗಳು ಮಹಿಳಾ ಪರವಾದ ಯೋಜನೆಗಳನ್ನು ಜಾರಿಗೆ ತಂದವು. ಇದರಿಂದ ಸಾಂಪ್ರದಾಯಿಕವಾದ ಮಹಿಳಾ ಅವಗಣನೆ ಮರುಪರಿಶೀಲನೆಗೆ ಒಳಗಾಯಿತು. ಅಂತರ್‌ರಾಷ್ಟ್ರೀಯ ಮಹಿಳಾ ವರ್ಷದ ಘೋಷಣೆಯಾದಂದಿನಿಂದ ದೇಶದಲ್ಲಿ ಮಹಿಳಾ ಚಟುವಟಿಕೆಗಳು ಬಿರುಸಿನಿಂದ ಸಾಗಿವೆ. ಮಹಿಳೆಯರ ನೇತೃತ್ವದಲ್ಲಿಯೇ ನಡೆಯುವ ಮಹಿಳಾ ಚಳುವಳಿಗೆ ಉತ್ತೇಜನ ದೊರಕಿದೆ. ಬದಲಾದ ಸಾಮಾಜಿಕ, ಸಾಂಸ್ಕೃತಿಕ ಪರಿಸರದಲ್ಲಿ ಮಹಿಳಾ ಸಮಸ್ಯೆಗಳ ಸ್ವರೂಪವೂ ಬದಲಾಗಿವೆ. ಬಾಲ್ಯ ವಿವಾಹ, ವಿಧವಾ ವಿವಾಹ, ಅಂತರ್ಜಾತೀಯ ವಿವಾಹ, ಸ್ತ್ರೀ ಶಿಕ್ಷಣ ಮುಂತಾದ ಚರ್ಚೆಗಳು ಹಿನ್ನೆಲೆಗೆ ಸರಿದು, ಕೌಟುಂಬಿಕ ಕಲಹಗಳು, ಅಸಮಾನತೆಯ ಪ್ರಶ್ನೆ, ಲೈಂಗಿಕ ದಬ್ಬಾಳಿಕೆ, ಮಾನಭಂಗ ಮುಂತಾದ ಸಂಗತಿಗಳು ಮುಖ್ಯವಾಗಿ ಕಾಣಿಸಿಕೊಂಡಿವೆ. ಕೌಟುಂಬಿಕ ಬಿಕ್ಕಟ್ಟುಗಳು ಮಹಿಳಾ ಬರಹಗಳ ಕೇಂದ್ರ ವಸ್ತುವಾದವು. ಒಂದು ಕುಟುಂಬವನ್ನು ನಿಭಾಯಿಸುವಾಗ ಗಂಡು-ಹೆಣ್ಣು ವಹಿಸಬೇಕಾದ ಜವಾಬ್ದಾರಿಯಿಂದ ಉಂಟಾಗುವ ತಾಕಲಾಟಗಳು ಸಾಹಿತ್ಯದಲ್ಲಿ ಮೂಡಿ ಬರತೊಡಗಿದವು. ಮದುವೆ, ವೈವಾಹಿಕ ತಾಕಲಾಟಗಳು, ಪ್ರೀತಿ, ಪ್ರೇಮ ಮುಂತಾದ ಸಂಗತಿಗಳನ್ನು ಪುನರಾವಲೋಕನಕ್ಕೆ ಒಡ್ಡಿರುವುದು ಮಹಿಳೆಯರ ಬರಹಗಳಿಂದ ತಿಳಿಯುತ್ತದೆ. ಆರ್ಥಿಕ ಅಸಮಾನತೆಯ ಕಡೆಗೂ ಗಮನಹರಿಸಲಾಗಿದೆ. ಸಾಂಪ್ರದಾಯಿಕ ಕಟ್ಟಳೆ,

ಜಾತಿ–ಅಂತಸ್ತುಗಳ ಹಿನ್ನೆಲೆಯಲ್ಲಿಯೂ ಮಹಿಳೆಯರು ತಮ್ಮ ಮುಕ್ತ ಅಭಿಪ್ರಾಯಗಳನ್ನು ಮುಂದಿಡತೊಡಗಿದ್ದಾರೆ.

೭೦–೮೦ರ ದಶಕದಲ್ಲಿ ಕನ್ನಡ, ಇಂಗ್ಲೀಷ್ ಅಧ್ಯಾಪಕಿಯರು ಸಾಹಿತ್ಯ ಕೃಷಿಯಲ್ಲಿ ತೊಡಗಿದ್ದರೆ, ಇಂದು ಇಂಜಿನಿಯರ್, ಬ್ಯಾಂಕ್ ನೌಕರರು, ರಾಜಕಾರಣಿಗಳು, ವೈದ್ಯರು ಮುಂತಾದ ಹುದ್ದೆಗಳಲ್ಲಿರುವ ಮಹಿಳೆಯರು ಬರಹಕ್ಕೆ ತೊಡಗಿಸಿಕೊಂಡಿದ್ದಾರೆ. ಬ್ರಾಹ್ಮಣೇತರರು, ಗಮನಾರ್ಹವಾಗಿ ದಲಿತ ವರ್ಗದ ಮಹಿಳೆಯರು ವಿದ್ಯಾವಂತರಾಗಿ ಸಾಹಿತ್ಯ ಕ್ಷೇತ್ರಕ್ಕೆ ಧುಮುಕಿದ್ದಾರೆ. ಮಹಿಳೆಯರು ಸ್ವಯಂ ನಿರ್ಬಂಧಿತ ಮಿತಿಗಳನ್ನು ಮೀರಿ ಬರೆಯುವ ಆತ್ಮವಿಶ್ವಾಸವನ್ನು ದಿಟ್ಟತನವನ್ನು ಬೆಳೆಸಿಕೊಳ್ಳಲು ಅನೇಕ ಮಹಿಳಾ ಚಳುವಳಿಗಳು ಕಾರಣವಾಗಿವೆ. ವರ್ತಮಾನದ ಹೊಸ ಅರಿವಿನಲ್ಲಿ ಸ್ತ್ರೀ ವ್ಯಕ್ತಿತ್ವನ್ನು ಪುನರ್ ನಿರ್ಮಿಸುವ ಕೆಲಸವನ್ನು ಮಹಿಳೆಯರು ಮಾಡುತ್ತಿದ್ದಾರೆ. ಸಾಮಾಜಿಕ ಸ್ವಾಸ್ಥ್ಯವನ್ನು ಗಮನದಲ್ಲಿಟ್ಟುಕೊಂಡು ಜವಾಬ್ದಾರಿಯುತ ಬರವಣಿಗೆಗೆ ತೊಡಗಿದ್ದಾರೆ.

ಈ ಎಲ್ಲಾ ಬದಲಾವಣೆಗಳು ಮಹಿಳಾ ಅಭಿವ್ಯಕ್ತಿಗೆ ಒಂದು ನಿರ್ದಿಷ್ಟ ಆಯಾಮವನ್ನು ನೀಡಿವೆ. ಅಭಿವ್ಯಕ್ತಿಯಲ್ಲಾಗಲಿ, ಕತೆ ಹೇಳುವ, ಕವನ ಕಟ್ಟುವ ಚತುರತೆಯಲ್ಲಾಗಲಿ, ವಸ್ತುವಿನ ಆಯ್ಕೆಯಲ್ಲಾಗಲಿ ಮಹಿಳಾ ಬರಹಗಾರರು ಸಮರ್ಥವಾಗಿ ಬರೆಯುತ್ತಿದ್ದಾರೆ.

೯೦ರ ದಶಕದ ಪ್ರಾರಂಭದಲ್ಲಿ ಭಾರತೀಯ ಸ್ತ್ರೀವಾದ ಮಹತ್ವದ ತಿರುವನ್ನು ಪಡೆಯಿತು. ಮಹಿಳಾ ಸಮುದಾಯಗಳು ತಮ್ಮ ಬದುಕಿನ ಅಸ್ತಿತ್ವಕ್ಕಾಗಿ ಹೋರಾಟ ಮಾಡಿರುವುದನ್ನ ಅನೇಕ ಚಾರಿತ್ರಿಕ ದಾಖಲೆಗಳು ಸಾರಿವೆ. ಇಂದು ಮಹಿಳಾ ಪ್ರಶ್ನೆ ಪ್ರಭುತ್ವಗಳಿಗೆ ಪರ್ಯಾಯ ಶಕ್ತಿಯಾಗುವ ಎಲ್ಲಾ ಸಾಧ್ಯತೆಗಳನ್ನು ಪಡೆಯುತ್ತಿದೆ. ರೈತ ಚಳುವಳಿ, ಕಾರ್ಮಿಕ ಚಳುವಳಿ, ಪರಿಸರ ಚಳುವಳಿ, ಪಾನ ನಿಷೇಧ ಚಳುವಳಿಗಳಲ್ಲಿ, ರಾಜಕೀಯ ಮೀಸಲಾತಿ ಮುಂತಾದ ಹೋರಾಟಗಳಲ್ಲಿ ಸಕ್ರೀಯವಾಗಿ ಭಾಗವಹಿಸುತ್ತಿದ್ದಾರೆ. ಪತ್ರಿಕೆ, ರೇಡಿಯೋ, ಟಿ.ವಿ., ಸಿನಿಮಾ ಮುಂತಾದ ಮಾಧ್ಯಮಗಳಲ್ಲಿ ಮಹಿಳಾ ಪ್ರಶ್ನೆಗಳು ಪ್ರಾಮುಖ್ಯತೆಯನ್ನು ಪಡೆದವು. ಅದರಲ್ಲಿ ಪ್ರತಿನಿಧಿಸುವ 'ಸಕಾರಾತ್ಮಕ', 'ನಕಾರಾತ್ಮಕ' ದೃಷ್ಟಿಕೋನಗಳ ಬಗ್ಗೆ ಅಧ್ಯಯಗಳೂ ನಡೆದಿವೆ.

ಜಾಗತೀಕರಣವೆನ್ನುವುದು ಮುಕ್ತ ವ್ಯಾಪಾರದ ಉದ್ದೇಶವನ್ನು ಜಗತ್ತಿನಾದ್ಯಂತ ಜಾರಿಗೆ ತರುವುದಾಗಿದೆ. ಉತ್ಪಾದನೆ ಮತ್ತು ವಿತರಣೆಗಳ ನಡುವೆ ಕಾಲ–ದೇಶಗಳ ಗಡಿಗಳನ್ನು ಅಳಿಸಿ, ಇಡೀ ಜಗತ್ತೇ ಒಂದು ಹಳ್ಳಿಯೆಂಬ ಪರಿಕಲ್ಪನೆಯನ್ನು ಹುಟ್ಟು ಹಾಕಲಾಗಿದೆ. ತಂತ್ರಜ್ಞಾನದ ಮೂಲಕ, ಜಗತ್ತಿನ ಚಟುವಟಿಕೆಗಳನ್ನು ರೂಪಿಸುವ, ನಿಯಂತ್ರಿಸುವ ಕ್ರಿಯೆಗೆ 'ಜಾಗತೀಕರಣ' ಪ್ರೇರೇಪಿಸುತ್ತಿದೆ. ದೇಶದೇಶಗಳ ನಡುವೆ ಆರ್ಥಿಕ ನಿಯಮಗಳನ್ನು ಸಡಿಲಿಸಿ, ಮುಕ್ತವಾದ ಸಂಬಂಧವನ್ನು ನೆಲೆಗೊಳಿಸುವುದು, ಜಗತ್ತಿಗೆ ನಿಕಟವಾದ ಸಂಬಂಧವನ್ನು ಏರ್ಪಡಿಸುತ್ತದೆ.

ಮಹಾಪ್ರಬಂಧಕ್ಕೆ ಆಯ್ದುಕೊಂಡಿರುವ ಮಹಿಳಾ ಕವಿ–ಕತೆ–ಕಾದಂಬರಿಕಾರರ ಪುಟ್ಟ ಪರಿಚಯ ನೀಡಲಾಗಿದೆ. ಕಾರಣ, ಆಯಾ ಬರಹಗಾರರ ಸಾಮಾಜಿಕ, ಸಾಂಸ್ಕೃತಿಕ ವಾತಾವರಣ ಅವರನ್ನು

ಹೇಗೆ ರೂಪಿಸಿದೆ ಎಂಬ ವಿವರನ್ನು ತಿಳಿಯಬಹುದಾಗಿದೆ. ಪ್ರೇರಣೆ-ಪ್ರಭಾವ ಬೀರಿದ ಮಾಹಿತಿಗೆ ಒತ್ತು ನೀಡಲಾಗಿದೆ.

**೩.೩.೩ ಬರಹಗಾರರ ಪರಿಚಯಾತ್ಮಕ ನೆಲೆ**

ಇದೇ ಅಧ್ಯಾಯದ ಮೊದಲ ಭಾಗದಲ್ಲಿ ಸ್ವಾತಂತ್ರ್ಯಪೂರ್ವದಲ್ಲಿ ಮಹಿಳಾ ಬರಹಗಾರರ ಪರಿಚಯಾತ್ಮಕ ನೆಲೆಯನ್ನು ಗುರುತಿಸಲಾಗಿದೆ. ಸ್ವಾತಂತ್ರ್ಯೋತ್ತರದಲ್ಲಿ ಬರೆಯುತ್ತಿರುವ ಬರಹಗಾರರ ಪರಿಚಯವನ್ನು ಕೆಳಗೆ ನೀಡಲಾಗಿದೆ. ಸಾಹಿತ್ಯ ರಚನೆಯ ಹಿನ್ನೆಲೆಯಲ್ಲಿ ಬರಹಗಾರರನ್ನು ರೂಪಿಸಿದ ಸಂಗತಿಗಳೂ ಮುಖ್ಯವಾಗಿವೆ.

**ಅ) ಹೆಚ್.ವಿ. ಸಾವಿತ್ರಮ್ಮ**

ಸಾವಿತ್ರಮ್ಮನವರಿಗೆ ಪತಿಯ ಮನೆಯಲ್ಲಿ ಶೈಕ್ಷಣಿಕವಾದ ವಾತಾವರಣವಿತ್ತು. ಪತಿ ಎಚ್.ವಿ.ನಾರಾಯಣರು, ತಾತ ಎಚ್.ವಿ.ನಂಜುಂಡಯ್ಯನವರು ಮೈಸೂರು ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿದ್ದರು. ಮೂರು ಚಿನ್ನದ ಪದಕಗಳೊಂದಿಗೆ ಬಿ.ಎ. ಪದವಿ ಪಡೆದ ಸಾವಿತ್ರಮ್ಮನವರು, ಇಂಗ್ಲೀಷ್ ಮತ್ತು ಹಿಂದಿ ಭಾಷೆಯನ್ನು ಚೆನ್ನಾಗಿ ಬಲ್ಲವರಾಗಿದ್ದರು. 'ನವೋದಯ', 'ಪ್ರಗತಿಶೀಲ' ಚಳುವಳಿಗಳಿಂದ ದೂರ ಉಳಿದಿದ್ದ ಇವರು ತಮ್ಮದೇ ಆದ ಸ್ತ್ರೀಪರವಾದ ದೃಷ್ಟಿಕೋನ ಬೆಳೆಸಿಕೊಂಡಿದ್ದರು. ಮೊದಲ ಬಾರಿಗೆ ರಾಮಾಯಣದ ಸ್ತ್ರೀ ಪಾತ್ರಗಳನ್ನು ಕೃತಿಯ ಕೇಂದ್ರದಲ್ಲಿರಿಸಿ, ಪುನರ್ ಓದಿಗೆ ತೊಡಗಿಸಿಕೊಂಡರು. ಸ್ವತಂತ್ರ ಕೃತಿಗಳನ್ನು ಮತ್ತು ಅನುವಾದ ಕೃತಿಗಳನ್ನು ಇವರು ಹೊರತಂದಿದ್ದಾರೆ.

**ಆ) ತ್ರಿವೇಣಿ**

ತ್ರಿವೇಣಿ ಎನ್ನುವ ಅಂಕಿತನಾಮದಲ್ಲಿ ಬರೆದ ಅನುಸೂಯ ಶಂಕರ್‌ರವರು ಮೂಲತಃ ಮಂಡ್ಯದವರು. ಪತಿ ಶಂಕರ್, ಆಂಗ್ಲ ಭಾಷೆಯ ಪ್ರಾಧ್ಯಾಪಕರು. ತ್ರಿವೇಣಿಯವರಿಗೆ ದೊಡ್ಡಪ್ಪನವರಾದ ಬಿ.ಎಂ.ಶ್ರೀಯವರು ನಿರ್ಮಿಸಿದ ಸಾಹಿತ್ಯ ಪರಂಪರೆಯಿತ್ತು. ಮನಃಶಾಸ್ತ್ರದಲ್ಲಿ ಪದವೀಧರೆಯಾದ ತ್ರಿವೇಣಿಯವರು ತಮ್ಮ ಪತಿಯ ಸೂಚನೆಯಂತೆ ಮನೋವೈಜ್ಞಾನಿಕ ಸಮಸ್ಯೆಗಳನ್ನು ಕೇಂದ್ರವಾಗಿಟ್ಟುಕೊಂಡು ಕತೆ, ಕಾದಂಬರಿಗಳನ್ನು ರಚಿಸಿದರು. ಕಾದಂಬರಿ ರಚಿಸುವಾಗ ಉದ್ದೇಶ ಪೂರ್ವಕವಾಗಿ ಮನಃಶಾಸ್ತ್ರದ ಪ್ರಮೇಯಗಳನ್ನು ಬಳಸಿದ್ದಾರೆ. ಈ ಬಗೆಯ ದೃಷ್ಟಿಕೋನದ ಕೃತಿಗಳು ಓದುಗರಿಗೆ ಹೊಸ ಅನುಭವ ನೀಡಿದವು. ಮನಃಶಾಸ್ತ್ರದೊಂದಿಗೆ ಲೋಕಗ್ರಹಿಕೆಯನ್ನು ಗಮನದಲ್ಲಿರಿಸಿಕೊಂಡು, ಸಮಾಜದ ಭಿನ್ನ ಆಯಾಮಗಳನ್ನು ಕಟ್ಟಿಕೊಡಲು ಶಕ್ತರಾಗಿದ್ದರು. ತ್ರಿವೇಣಿಯವರ ಬದುಕಿನಲ್ಲಿ ತೀವ್ರವಾಗಿ ಬಳಲುವಂತೆ ಮಾಡಿದ್ದು ಉಬ್ಬಸ ರೋಗ. ಬಾಲ್ಯದಿಂದಲೂ ಅನುಭವಿಸಿದ ಈ ಯಾತನೆಯಿಂದ ನರಳಿ ಕ್ರಿ.ಶ.೧೯೬೩, ಜುಲೈ ೨೯ರಂದು ಕೊನೆಯುಸಿರೆಳೆದರು.

**ಇ) ಅನುಪಮಾ ನಿರಂಜನ**

ಅನುಪಮಾರವರು ಒಂದು ತಾತ್ವಿಕ ನೆಲಗಟ್ಟನ್ನು ಹೊಂದಿ, ಕತೆ ಕಾದಂಬರಿಗಳನ್ನು ರಚಿಸಿದ್ದಾರೆ.

'ಪ್ರಗತಿಶೀಲಪಂಥ'ದ ಧ್ಯೇಯೋದ್ದೇಶಗಳನ್ನು ಕೃತಿಗಳಲ್ಲಿ ಅಳವಡಿಸಿಕೊಂಡಿದ್ದಾರೆ. ಹೆಣ್ಣಿನ ಸಮಸ್ಯೆಗಳ ಮೂಲದಲ್ಲಿರುವ ಸಾಮಾಜಿಕ, ಆರ್ಥಿಕ, ರಾಜಕೀಯ ದೃಷ್ಟಿಕೋನದ ವಿವೇಚನೆಯಿದೆ. ಅನುಪಮಾರವರು ಹೆಣ್ಣಿನ ಸಮಸ್ಯೆಯನ್ನು ಸಾಮಾಜಿಕ ಚಿತ್ರಣದ ಮೂಲಕ ನೀಡುತ್ತಾರೆ. ವರ್ಗಸಂಘರ್ಷದ ಆಧಾರವಾದ ಮಾರ್ಕ್ಸ್‌ವಾದದ ಬೆಳಕಿನಲ್ಲಿ ವಿಶ್ಲೇಷಿಸುವ ವಿಧಾನ ಅನುಸರಿಸುತ್ತಾರೆ. ವರ್ಗ ವೈಷಮ್ಯ; ಲಿಂಗಬೇಧ, ನೀತಿಯಾಧಾರಿತ ವ್ಯವಸ್ಥೆಯ ಬಲವಾದ ಶಕ್ತಿಗಳು ಸ್ತ್ರೀಯರ ಒಳ ಹೊರಗಿನ ಬದುಕನ್ನು ಅಸ್ವತಂತ್ರವಾಗಿಸಿರುವುದನ್ನು ವಾಸ್ತವದ ವಿವರಗಳ ಮೂಲಕ ದಾಖಲಿಸುತ್ತಾರೆ. ವ್ಯಕ್ತಿಯ ಆಂತರಿಕವಾದ ತಳಮಳದ ಮೂಲಕ ಪ್ರತಿಭಟನೆ ವ್ಯಕ್ತವಾಗಲು ಸಾಮಾಜಿಕ ಪರಿಸರ ಹೇಗೆ ಕಾರಣವಾಗುತ್ತದೆ ಎಂಬುದನ್ನು ಕೃತಿಗಳ ಮೂಲಕ ಮನವರಿಕೆ ಮಾಡಿಸಲು ಯತ್ನಿಸಿದ್ದಾರೆ. ಇವರ ಸ್ತ್ರೀ ವ್ಯಕ್ತಿತ್ವಗಳು ಸಮಸ್ಯೆಯ ಪರಿಹಾರಕ್ಕೆ ವ್ಯಕ್ತಿಗತ ನೆಲೆಯಲ್ಲಿ ಯತ್ನಿಸಿದರೂ ಸಮುದಾಯದ ಬದಲಾವಣೆಗೆ ಪ್ರೇರಕ ಶಕ್ತಿಯಾಗುವಂತೆ ಚಿತ್ರಿಸುವುದ ಇವರ ವೈಶಿಷ್ಟ್ಯವಾಗಿದೆ. ವೈದ್ಯರಾಗಿರುವ ಅನುಪಮಾರವರು ಕೆಳವರ್ಗದಿಂದ ಬಂದವರಾಗಿದ್ದು, ನೋವು,ಸಂಕಟಗಳನ್ನು ಸ್ವತಃ ಅನುಭವಿಸಿದವರಾಗಿದ್ದಾರೆ. ಪ್ರೀತಿಸಿ ಮದುವೆಯಾದ ನಿರಂಜನರು ಕೊನೆಗಾಲದವರೆಗೂ ಅನುಪಮಾರವರಿಗೆ ಸದಾ ಸ್ಫೂರ್ತಿಯಾಗಿದ್ದರು.

**ಈ) ಎಚ್.ಎಸ್. ಕಾತ್ಯಾಯಿನಿ**

ತ್ರಿವೇಣಿ, ಅನುಪಮಾ, ಸಾವಿತ್ರಮ್ಮ ಮುಂತಾದವರ ಸಮಕಾಲೀನರಾದ ಕಾತ್ಯಾಯಿನಿಯವರು ನಲವತ್ತರ ದಶಕದಲ್ಲಿ ಕಥಾ ಕ್ಷೇತ್ರಕ್ಕೆ ಕಾಲಿಟ್ಟರು. ಭೌತಶಾಸ್ತ್ರ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆದು, ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದಾರೆ. ಓದಬೇಕೆಂಬ ಮಹತ್ವಾಕಾಂಕ್ಷೆಯಲ್ಲಿ ಮದುವೆಯನ್ನು ತಿರಸ್ಕರಿಸಿ, ಬ್ರಹ್ಮಚರ್ಯವನ್ನು ಪಾಲಿಸಿ, ಉದ್ಯೋಗ, ಸಾಹಿತ್ಯ ಸೇವೆಯಲ್ಲಿ ತೊಡಗಿಕೊಂಡರು. ಗ್ರಾಮೀಣ ಪ್ರದೇಶದಿಂದ ಬಂದ ಇವರು ಕೆಳವರ್ಗದ ಪ್ರತಿನಿಧಿಯಾಗಿ, ಕತೆಗಳ ಮೂಲಕ ಕಾಣಿಸಿಕೊಂಡಿದ್ದಾರೆ. ಜಿ.ಪಿ.ರಾಜರತ್ನಂರವರ ಪ್ರೇರಣೆ ಸದಾ ಇತ್ತು. ಕೆಲವು ಅನಪೇಕ್ಷಿತ ಕಾರಣಗಳಿಂದಾಗಿ ಸಾರ್ವಜನಿಕ ಬದುಕಿನಿಂದ ವಿಮುಖರಾದ ಕಾತ್ಯಾಯಿನಿಯವರು ಒಬ್ಬೊಂಟಿಯಾಗಿ ಜೀವನ ನಿರ್ವಹಿಸಿದ್ದಾರೆ.

**ಉ) ವೀಣಾ ಶಾಂತೇಶ್ವರ್**

ಮೂಲತಃ ಧಾರವಾಡದವರಾದ ವೀಣಾರವರು ಆಂಗ್ಲ ಭಾಷಾ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ವೀಣಾರವರಿಗೆ, ಕಾಮೂ, ಕಾಫ್ಕಾ, ಫ್ರಾಯ್ಡ್‌ರಂತಹ ಮನಃಶಾಸ್ತ್ರಜ್ಞರ, ಚಿಂತಕರ ಹಾಗೂ ಕನ್ನಡ 'ನವ್ಯ' ಲೇಖಕರಾದ ಶಾಂತಿನಾಥ ದೇಸಾಯಿ, ಲಂಕೇಶ್, ತೇಜಸ್ವಿ, ಕಂಬಾರ, ಅನಂತಮೂರ್ತಿ ಮೊದಲಾದವರ ಆಲೋಚನೆಗಳು ಪ್ರಭಾವ ಬೀರಿರುವುದನ್ನು ಕಾಣಬಹುದಾಗಿದೆ. 'ಆಧುನಿಕ' ಮಹಿಳೆಯ ಸಮಸ್ಯೆಗಳನ್ನು ಶೋಧಿಸುವ ವೀಣಾರವರಿಗೆ, ಸಾಮಾಜಿಕ ಆಯಾಮಕ್ಕಿಂತ ವ್ಯಕ್ತಿಗತ ನೆಲೆ ಮುಖ್ಯ ಕಾಳಜಿಯಾಗಿದೆ. ಗಂಡು, ಹೆಣ್ಣುಗಳ ಸಂಬಂಧಗಳ ಭ್ರಮಾತ್ಮಕ ಸ್ವರೂಪವನ್ನು ಬಯಲಿಗೆಳೆಯುತ್ತಾರೆ. ಸಾಂಕೇತಿಕ ಅಭಿವ್ಯಕ್ತಿಯ ಕ್ರಮವನ್ನು ವೀಣಾರವರು ಅನುಸರಿಸಿದ್ದಾರೆ.

ಊ) ರಾಜಲಕ್ಷ್ಮಿ ಎನ್.ರಾವ್

ಬೆಂಗಳೂರಿನಲ್ಲಿ ಜನಿಸಿದ ರಾಜಲಕ್ಷ್ಮಿಯವರ ಮನೆಯಲ್ಲಿ ಸಾಹಿತ್ಯಿಕ ವಾತಾವರಣ ನಿರ್ಮಾಣವಾಗಿತ್ತು. ಬಿ.ಎಂ.ಶ್ರೀಯವರು ಇವರ ತಾತ. ಜತೆಗೆ ಅಡಿಗರು, ಬಿ.ಸಿ. ರಾಮಚಂದ್ರಶರ್ಮ, ಕೆ.ಸದಾಶಿವ ಮುಂತಾದವರ ಸಂಪರ್ಕದಲ್ಲಿ, ಚರ್ಚೆಗಳಲ್ಲಿ, ಅವರ ಚಿಂತನೆಗಳಲ್ಲಿ ಪಾಲ್ಗೊಳ್ಳುತ್ತಿದ್ದ ಇವರು, 'ನವ್ಯ' ಪಂಥದ ಉದ್ದೇಶಗಳನ್ನು ತಮ್ಮ ಕತೆಗಳಲ್ಲಿ ಅಳವಡಿಸಿಕೊಂಡಿದ್ದಾರೆ. ಆಂಗ್ಲ ಸಾಹಿತ್ಯವನ್ನು ಓದಿಕೊಂಡ ಅನುಭವವೂ ಇವರಿಗೆ ನೆರವಾಗಿದೆ. ರಾಮಚಂದ್ರಶರ್ಮರು ತಮ್ಮ ಮೇಲೆ ಅಪಾರವಾದ ಪ್ರಭಾವ ಬೀರಿದ್ದಾರೆಂದು ಹೇಳಿಕೊಂಡಿದ್ದಾರೆ. ಅಣು ವಿಜ್ಞಾನಿಯೊಂದಿಗೆ ಮದುವೆಯಾಗಿ ಹೆಣ್ಣು ಮಗುವಿನ ತಾಯಿಯಾಗಿದ್ದರು. ಆದರೆ ಮುಂದೆ ಕೆಲವು ವರ್ಷಗಳ ನಂತರ ಆಧ್ಯಾತ್ಮ ದೀಕ್ಷೆ ಪಡೆದು, ಪರತತ್ವದ ಕಡೆಗೆ ಆಸಕ್ತಿ ತೋರಿದರು.

ಋ) ಸಾರಾ ಅಬೂಬ್ಬಕ್ಕರ್

ಸಾರಾ ಅಬೂಬ್ಬಕ್ಕರ್‌ರವರು ಮೂಲತ: ಕರಾವಳಿ ತೀರದವರು. ಇವರು ಸ್ತ್ರೀ ವಿಮೋಚನಾ ಬರವಣಿಗೆಯ ನೆಲೆಯಿಂದ ಬಂದವರಾಗಿದ್ದಾರೆ. ನಲವತ್ತನೇ ವಯಸ್ಸಿನಲ್ಲಿ ತಮ್ಮ ಬರವಣಿಗೆಯನ್ನು ಪ್ರಾರಂಭಿಸಿದರು. 'ಖುರ್‌ಆನ್' ಸಮ್ಮತವಾದ ತಲಾಕ್ ಪದ್ಧತಿಯನ್ನು ತಮ್ಮ ಬರವಣಿಗೆಯ ಕೇಂದ್ರ ವಸ್ತುವಾಗಿಟ್ಟುಕೊಂಡಿದ್ದಾರೆ. ಶರತ್‌ಚಂದ್ರ ಚಟರ್ಜಿ, ರವೀಂದ್ರನಾಥ ಟ್ಯಾಗೋರ್ ಮುಂತಾದ ಬಂಗಾಳಿ ಲೇಖಕರ ಸ್ತ್ರೀ ಪಾತ್ರಗಳು; ಲಂಕೇಶ್‌ರವರಿಂದ ದೊರೆತ ಪ್ರೋತ್ಸಾಹ; ಶಿವರಾಮ ಕಾರಂತ, ತ್ರಿವೇಣಿ ಮುಂತಾದವರ ಕೃತಿಗಳಿಂದ ಪ್ರಭಾವಿತರಾಗಿದ್ದಾರೆ. "ನಮ್ಮ ಮುಸ್ಲಿಂ ಮಹಿಳೆಯರು ಹಲವು ವಿಧದಲ್ಲಿ ಸಾಮಾಜಿಕ ಮತ್ತು ಧಾರ್ಮಿಕ ಶೋಷಣೆಗೆ ಒಳಗಾಗುತ್ತಿರುವುದನ್ನು ನಾನು ಹುಟ್ಟಿದಂದಿನಿಂದಲೂ ನೋಡುತ್ತಲೇ ಇದ್ದೆ. ಎಷ್ಟೋ ಜನ ಬಡ ಹೆಂಗಸರು ತಮ್ಮ ದು:ಖದ ಕತೆಗಳನ್ನು ನನ್ನ ತಾಯಿಯೊಡನೆ ಹೇಳಿ ಕಣ್ಣೀರು ಸುರಿಸುತ್ತಿದ್ದರು. ಗಂಡ ತಾಲಾಖ್ ಕೊಟ್ಟಿದ್ದು ಅಥವಾ ಖರ್ಚಿಗೆ ಏನೂ ಕೊಡದೆ ಸತಾಯಿಸಿದ್ದು, ಮತ್ತೂ ಒಂದೆರಡು ಮದುವೆ ಮಾಡಿಕೊಂಡದ್ದು ಮುಂತಾದ ಕತೆಗಳು. ತಲಾಖ್ ಬೇಕೆಂದು ಕೇಳಿದ ಹೆಂಡತಿಗೆ ತಲಾಖ್ ಕೊಡದೆ ಏಳೆಂಟು ವರ್ಷಗಳವರೆಗೆ ನ್ಯಾಯಾಲಯಕ್ಕೆ ಅಲೆದಾಡಿಸಿದ ಕತೆಗಳೂ ಇವೆ. ಇಂತಹ ಹೆಚ್ಚಿನ ಮೊಕದ್ದಮೆಗಳಲ್ಲಿ ಈ ಹೆಂಗಸರ ಪರವಾಗಿ ನನ್ನ ತಂದೆಯೇ ವಾದಿಸುತ್ತಿದ್ದರು. ಹೆಂಗಸರ ಈ ಸಂಕಷ್ಟ, ಅಲೆದಾಟ, ಬಡತನವೆಲ್ಲವನ್ನೂ ನೋಡುತ್ತಲೇ ನಾನು ಬೆಳೆದೆ" (ಲೇಖನ ಗುಚ್ಛ, ಪುಟ–೦೪) ಎಂಬ ಮಾತುಗಳು, ಅವರು ಬಾಲ್ಯದಿಂದ ಕಂಡುಂಡ ಅನುಭವಗಳನ್ನು ಬರವಣಿಗೆಯಲ್ಲಿ ಮೂಡಿಸಿದ ಬಗೆಯನ್ನು ತೋರಿಸುತ್ತವೆ.

ಎ) ವೈದೇಹಿ

ಮೂಲತಃ ಕರಾವಳಿ ಭಾಗದವರಾದ ವೈದೇಹಿಯವರು ಗೃಹಿಣಿಯಾಗಿ, ಬರಹಗಾರರಾಗಿ ಎರಡನ್ನೂ ಸಮಾನ ಪಾತಳಿಯಲ್ಲಿಟ್ಟು ಬದುಕನ್ನು ಸ್ವೀಕರಿಸಿದವರು. ಅವಿಭಕ್ತ ಕುಟುಂಬದಲ್ಲಿ ಬೆಳೆದ

ಇವರಿಗೆ ಮನೆ ತುಂಬ ಜನ, ದನ, ಮದುವೆ, ಮುಂಜಿ, ಬಸಿರು–ಬಾಣಂತನ ಮುಂತಾದ ಕಾರ್ಯ ಚಟುವಟಿಕೆಗಳಿಂದ ಕೂಡಿದ ವಾತಾವರಣ 'ದೈವದತ್ತ' ಅವಕಾಶವಾಗಿತ್ತು. ಬರಹದ ಪ್ರಪಂಚಕ್ಕೆ ತೆರೆದುಕೊಂಡ ಬಗ್ಗೆ 'ಅಕ್ಷರ ಪ್ರಪಂಚಕ್ಕೆ ತೆರೆದುಕೊಂಡುದು ಸಾಮಾಜಿಕ ಅವಕಾಶ ಎನ್ನೋಣ. ನನ್ನಷ್ಟಕ್ಕೆ ಕತೆ, ಕವನ ಬರೀತಿದ್ರೆ, ನನ್ನ ಯಾರೂ ಗಮನಿಸುತ್ತಿರಲಿಲ್ಲ. ಅದೇ ನನಗೆ ಅನುಕೂಲ ಆಯ್ತು. ನನ್ನ ಅಣ್ಣಂದಿರ, ತಂದೆಯ ಪ್ರೋತ್ಸಾಹ ನನಗೆ ದೊರೆಯಿತು. ಅಣ್ಣನ ಕತೆಯೊಂದು ಪತ್ರಿಕೆಯಲ್ಲಿ ಪ್ರಕಟವಾದದು ಕಂಡಾಗ ನನಗೆ ಇದ್ದಕ್ಕಿದ್ದಂತೆ ಹೊರ ಪ್ರಪಂಚದ ಸಾಧ್ಯತೆಯತ್ತ ಗಮನ ಹರಿಯಿತು. ಅವನ ಕತೆ ಪ್ರಕಟವಾಗುವುದಾದರೆ, ನನ್ನದು ಯಾಕೆ ಆಗಬಾರದು ಎಂದು ಕೇಳಿಕೊಂಡೆ. ಹೀಗೆ ಒಂದೊಂದು ಪ್ರಕಟವಾಗ್ತಾ ನಾನೂ ಬರೆಯಬಲ್ಲೆ ಎಂಬ ಧೈರ್ಯ ಬಂತು" (ಬಗೆ, ಪುಟ–೬೯) ಎಂದು ವೈದೇಹಿ ಹೇಳಿದ್ದಾರೆ. ಬರಹಕ್ಕೆ ತೊಡಗಿದ ಪ್ರಾರಂಭದ ಗತಿಯು ಅವರ ಮೇಲಿನ ಮಾತುಗಳಿಂದ ವ್ಯಕ್ತವಾಗುತ್ತದೆ. ಮುಂದುವರಿದಂತೆ, ವಾಸ್ತವತೆಯ ಪ್ರತಿಪಾದನೆ, ಸ್ವಪ್ರಜ್ಞೆ, ಸಮಾಜ ವಿಮರ್ಶೆ, ಪ್ರತಿಭಟನೆ, ವೈಚಾರಿಕತೆ, ಅಂತರ್ಮುಖತೆ ಮುಂತಾದ ಲಕ್ಷಣಗಳನ್ನುಳ್ಳ ಕತೆಗಳನ್ನು ರಚಿಸಲು ಮುಂದಾದರು. ವ್ಯವಸ್ಥೆಯಲ್ಲಿ ತಾವು ಕಂಡ ವಾಸ್ತವ ಜಗತ್ತಿನ ಚಿತ್ರಣದೊಂದಿಗೆ, ಮತ್ತು ಅದರೊಂದಿಗೆ ಹೆಣೆದುಕೊಂಡಿರುವ ಹೆಣ್ಣಿನ ಸತ್ವಯುತ ಬದುಕನ್ನೂ ಚಿತ್ರಿಸಿದ್ದಾರೆ.

ಕೆಳವರ್ಗದಿಂದ ಬಂದ ಮಹಿಳೆಯರು ಬರವಣಿಗೆ ಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡದ್ದು, ಆ ಮೂಲಕ ಸಮಾಜದ ಅತ್ಯಂತ ನಿರ್ಲಕ್ಷಿತ ಘಟಕಗಳಾದ ದಲಿತ, ಮುಸ್ಲಿಂ ಜನಾಂಗದ ವಾಸ್ತವಿಕ ಚಿತ್ರಣ ಅನಾವರಗೊಳ್ಳುವಂತಾದುದು ಸಾಂಸ್ಕೃತಿಕ ಅರಿವಿನ ದಾಖಲೆಯಾಗಿದೆ. ಸಾವಿರಾರು ವರ್ಷಗಳಿಂದ ಆರ್ಥಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ತುಳಿತಕ್ಕೊಳಗಾದ ಜನತೆಯ, ಹಳ್ಳಿಯ, ಕೆಳವರ್ಗದ ಜಾತಿ, ಮತಗಳ, ಶೋಷಿತ ಮಹಿಳೆಯರ ಬದುಕು–ಬವಣೆಗಳು ದಾಖಲುಗೊಂಡವು. ಪ್ರತಿಭೆಗೆ ಸವಾಲಾಗುವಂತಹ ಸಾಮಾಜಿಕ, ಸಾಂಪ್ರದಾಯಿಕ ಬಿಕ್ಕಟ್ಟುಗಳನ್ನು ಎದುರಿಸಿ ದಮನಕ್ಕೊಳಗಾದವರ ಸಂವೇದನೆಗಳನ್ನು ಕತೆ, ಕಾದಂಬರಿಗಳ ಮೂಲಕ ಅಭಿವ್ಯಕ್ತಿಸಿದವರಲ್ಲಿ ಸಾರಾ ಅಬೂಬಕ್ಕರ್, ಬಾನು ಮುಷ್ತಾಕ್, ಬಿ.ಟಿ. ಲಲಿತಾನಾಯಕ್, ಗೀತಾ ನಾಗಭೂಷಣ್ ಮುಂತಾದವರು, ಮೊದಲ ತಲೆಮಾರಿನ ಪ್ರಮುಖರಾಗಿದ್ದಾರೆ.

**ಎ) ಗೀತಾ ನಾಗಭೂಷಣ್**

ಸಾವಳಗಿಯಲ್ಲಿ ಜನಿಸಿದ ಗೀತಾರವರು ಅನಕ್ಷರಸ್ಥ ಕಡುಬಡ ಕುಟುಂಬದಲ್ಲಿ ಮೇಲ್ವರ್ಗದವರ ಅಸಹನೆ, ತಿರಸ್ಕಾರಗಳ ಮಧ್ಯೆ ಬೆಳೆದವರು. ಅಕ್ಷರ ಕಲಿತು, ಅಧ್ಯಾಪನಾ ವೃತ್ತಿಯೊಂದಿಗೆ ಕತೆ, ಕಾದಂಬರಿಗಳ ರಚನೆಗೆ ತೊಡಗಿದರು. ಜನಪರ ಕಾಳಜಿ, ಸಮಾಜ ಪರಿವರ್ತನೆಯ ಕನಸುಗಳನ್ನು ಹೊತ್ತ ಇವರು ಕೆಳಗೇರಿಯ ಕತ್ತಲು ಲೋಕದ ಮೌನಗಳಿಗೆ ಮಾತಾಗಿದ್ದಾರೆ. ವ್ಯವಸ್ಥೆಯ ಒಳಗಿನ ಕ್ರೌರ್ಯ, ನೋವುಂಡ ಗೀತಾರವರು ಕಾದಂಬರಿಗಳ ಮೂಲಕ ಕೊಡುವ ಜಗತ್ತು ವಾಸ್ತವಿಕವಾಗಿದೆ; ಸಮಾಜಮುಖಿಯಾಗಿದೆ. ಸಾಂಸ್ಕೃತಿಕ ಆವರಣವು ಪ್ರಾದೇಶಿಕ ಸತ್ವದಿಂದ ಕೂಡಿದೆ.

ಐ) ಮಲ್ಲಿಕಾ ಘಂಟಿ

ಬಿಜಾಪುರದ ಬಸವನ ಬಾಗೇವಾಡಿ ತಾಲೂಕಿನ ಅಗಸಬಾಳದಲ್ಲಿ ಜನಿಸಿದ ಮಲ್ಲಿಕಾ ಘಂಟಿಯವರು ಕೆಳವರ್ಗದಿಂದ ಬಂದವರು. ಪ್ರಸ್ತುತ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಜನಪರ ಚಳುವಳಿ, ಮಹಿಳಾ ಪರವಾದ ಚಳುವಳಿಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡವರು. ಒಬ್ಬ ವ್ಯಕ್ತಿ ತನ್ನ ಬದುಕಿಗೆ, ಮಾತಿಗೆ ಮತ್ತು ಬರಹಕ್ಕೆ ಬದ್ಧನಾಗಿರಬೇಕು. ಬದುಕು, ಬರಹಗಳೆರಡಕ್ಕೂ ವ್ಯತ್ಯಾಸವಿಲ್ಲದಂತೆ ಬರೆದಾಗ ಮಾತ್ರ ಬರಹಕ್ಕೊಂದು ಮೌಲ್ಯವಿದೆ ಎಂದು ನಂಬಿದವರು. ಚಳುವಳಿ ಮತ್ತು ಸಾಹಿತ್ಯಕ್ಕೆ ಪರಸ್ಪರ ಸಂಬಂಧವಿರಬೇಕೆಂದು ಬಯಸಿದವರು. ಮಲ್ಲಿಕಾ ಘಂಟಿಯವರು, ಸಾಹಿತ್ಯ ಓದುಗ ವರ್ಗದಲ್ಲಿ ಎಚ್ಚರದ ಪ್ರಜ್ಞೆಯನ್ನು ಮೂಡಿಸುವ ಕೆಲಸ ಮಾಡಬೇಕೆಂದು ಕರೆ ನೀಡುತ್ತಾರೆ.

ಒ) ಎಸ್.ವಿ.ಪ್ರಭಾವತಿ

ಮೂಲತಃ ಮಂಡ್ಯ ಜಿಲ್ಲೆಯ ಕೆ.ಆರ್.ಪೇಟೆ ತಾಲೂಕಿನ ಹೊಸಹೊಳಲು ಗ್ರಾಮದವರು. ಕಾವ್ಯ, ಸಂಶೋಧನೆ, ವಿಮರ್ಶೆಯಲ್ಲಿ ಪ್ರಮುಖವಾಗಿ ತೊಡಗಿಸಿಕೊಂಡ ಪ್ರಭಾವತಿಯವರು ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದವರು. ಸಾಹಿತಿಗಳಾದ ಎಸ್.ವಿದ್ಯಾಶಂಕರರು ಇವರ ಪತಿಯಾಗಿದ್ದಾರೆ.

ಓ) ಎಚ್.ನಾಗವೇಣಿ

ಮೂಲತಃ ಕರಾವಳಿ ತೀರದ ನಾಗವೇಣಿಯವರು, ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದಲ್ಲಿ ಗ್ರಂಥಪಾಲಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಮಲೆನಾಡಿನ ಪ್ರಾದೇಶಿಕ ಪರಿಸರವನ್ನು ಹಿನ್ನೆಲೆಯಲ್ಲಿಟ್ಟುಕೊಂಡು ಕೆಳವರ್ಗದ ಪ್ರತಿನಿಧಿಯಾಗಿ, ಕತೆ, ಕಾದಂಬರಿಗಳನ್ನು ರಚಿಸಿದ್ದಾರೆ. "ನಾನು ಕಡಲತಡಿಯಲ್ಲಿ ಬೆಳೆದವಳು. ತುಳುನಾಡ ಸಿರಿಯನ್ನು ಕಂಡವಳು. ನಾನು ಹುಟ್ಟಿದ್ದು ಬೆಳೆದಿದ್ದು, ಹೊರಜಗತ್ತನ್ನು ನೋಡಿದ್ದು ಎಲ್ಲಾ ಅಲ್ಲೇ. ಭೂತ, ಕೋಲ, ಕಂಬಳ, ತಾಳಮದ್ದಲೆ, ಯಕ್ಷಗಾನದ ಜೊತೆ ಕಡಲು, ತೀರ, ಅಲೆ, ಅಲೆ-ಬಲೆ, ಬಿರುಮಳೆ, ಕರೆಗಾಳ, ಮೀನಿನ ವಾಸನೆ ಎಲ್ಲವೂ ನನ್ನ ಒಳ ಹೊರಗನ್ನು ತುಂಬಿಕೊಂಡಿತ್ತು. ಅದು ನನ್ನ ಒಳಗೋ, ನಾನು ಅದರ ಒಳಗೋ" ('ಬಹಿರಂಗದಲ್ಲಿ', ನಾಕನೇ ನೀರು)ಎಂಬ ಮಾತುಗಳು ಅವರ ಪ್ರಾದೇಶಿಕ ಪ್ರೀತಿಯ ಪರಿಚಯವನ್ನು ನೀಡುತ್ತದೆ.

ಔ) ವಿಜಯಾ ದಬ್ಬೆ

ವಿಜಯಾರವರು ಬೇಲೂರು ತಾಲೂಕಿನ 'ದಬ್ಬೆ' ಹಳ್ಳಿಯಿಂದ ಬಂದವರು. ಮಹಿಳಾ ಚಳುವಳಿಗಾರರಾಗಿ, ಸಮತಾ ಅಧ್ಯಯನ ಕೇಂದ್ರದ ರುವಾರಿಯಾಗಿ, ಸ್ತ್ರೀವಾದಿ ಚಿಂತಕಿಯಾಗಿ, ಕವಿಯಾಗಿ, ಅನುವಾದಕರಾಗಿ.. ಹೀಗೆ ವಿವಿಧ ಕ್ಷೇತ್ರಗಳಲ್ಲಿ ಕಾರ್ಯ ನಿರ್ವಹಿಸಿದ್ದಾರೆ. "ಕಳೆದ ಇಪ್ಪತ್ತು ವರ್ಷಗಳ ಮಹಿಳಾ ಚಳುವಳಿ ನನ್ನನ್ನೂ, ನನ್ನ ಬರಹಗಳನ್ನು ವಿಭಿನ್ನ ವಿಷಯ ಕ್ಷೇತ್ರಗಳಿಗೆ ಒಯ್ದಿದೆ. ನನಗೆ ಸಾಮಾನ್ಯ ಪರಿಚಯವಿರುವ ನೆಲೆಗಳಿಂದಲೂ ಮಹಿಳಾ ದೃಷ್ಟಿಕೋನದಿಂದ,

ಉಭಯಲಿಂಗ ಪ್ರಧಾನ ವ್ಯವಸ್ಥೆಗಾಗಿ ನನ್ನನ್ನು ಮಾತಡಹಚ್ಚಿದೆ. ಶೋಧನೆಗೆ ತೊಡಗಿಸಿದೆ. ಸ್ತ್ರೀವಾದ ರೂಪು ಪಡೆಯುವುದು ಇಂಥ ಸಾವಿರಾರು ಶೋಧನೆಗಳಿಂದ, ವಿಶ್ಲೇಷಣೆಗಳಿಂದ, ಪ್ರಯತ್ನಗಳಿಂದ" ('ಮೂಕ ನೆನಕೆ', ನಾರಿ: ದಾರಿ–ದಿಗಂತ,) ಎಂಬ ಮಾತುಗಳ ತತ್ವ ಅವರ ಕವಿತಾ ರಚನೆಗೂ ಅನ್ವಯವಾಗುತ್ತವೆ.

**ಅಂ) ಮಾಲತಿ ಪಟ್ಟಣಶೆಟ್ಟಿ**

ಉತ್ತರ ಕರ್ನಾಟಕ, ಧಾರವಾಡ ಭಾಗದ ಮಾಲತಿಯವರು ಆಂಗ್ಲ ಭಾಷಾ ಪ್ರಾಧ್ಯಾಪಕಿಯಾಗಿ ಕಾರ್ಯ ನಿರ್ವಹಿಸಿದ್ದಾರೆ. "ನಾನು ಸಾಹಿತ್ಯ ಜಗತ್ತಿನಲ್ಲಿ ಏಕಲವ್ಯನಂತೆ ನನ್ನನ್ನೇ ನಾನು ಅಭಿವ್ಯಕ್ತಿಗೊಳಿಸಿಕೊಳ್ಳುತ್ತಾ, ತಿದ್ದಿಕೊಳ್ಳುತ್ತಾ ಬಂದಿದ್ದೇನೆ. ಅತ್ಯಂತ ಸಂವೇದನಾಶೀಲ ಮನಸ್ಸಿನ ಅನುಭವ ಮತ್ತು ಸಾಮಾಜಿಕ ಕಳಕಳಕಿ ಇವೇ ನನಗೆ ಮಾರ್ಗದರ್ಶನ ನೀಡುತ್ತಿವೆ. ಮತ್ತು ಅವು ಕಾವ್ಯಕ್ಕೆ ಪ್ರೇರಣೆಗಳೂ ಆಗಿವೆ. ನನ್ನ ಮೇಲೆ ಯಾರ ಪ್ರಭಾವವೂ ಇದ್ದಂತೆ ಕಾಣುವುದಿಲ್ಲ. ಆದರೆ ಇಂಗ್ಲೀಷ್ ಕವಿಗಳಾದ ಶೆಲ್ಲಿ, ವರ್ಡ್ಸ್‌ವರ್ತ್, ಶೇಕ್ಸ್‌ಪಿಯರ್ ಮತ್ತು ಕನ್ನಡದ ಬೇಂದ್ರೆ ಇವರ ಪ್ರಭಾವ ಅಪರೋಕ್ಷವಾಗಿ ಇರಬಹುದು"(ಮಂದಾರ, ಪುಟ–೧೬೭) ಎಂಬ ಮಾಲತಿಯವರ ಮಾತುಗಳಲ್ಲಿ ಕಾವ್ಯಕ್ಕಿರುವ ಪರಿಸರದ ವಿವರಣೆಯನ್ನು ಗಮನಿಸಬಹುದು.

**ಅ:) ಸುಕನ್ಯಾ ಮಾರುತಿ**

ಇವರೂ ಮೂಲತಃ ಧಾರವಾಡ ಭಾಗದ ಕವಿಯಾಗಿದ್ದಾರೆ. ಸುಕನ್ಯಾರವರು ಕನ್ನಡ ಅಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಕಾವ್ಯ ರಚನೆಯನ್ನು ಕುರಿತು "ಕವಿತೆ ಕಟ್ಟುವುದು ಸಂಕಟದ ಪ್ರಸಂಗವೇ. ನಾವು ಕವಿತೆಯನ್ನು ನಿರ್ಮಿಸಲಾರೆವು. ಆದರೆ, ಕವಿತೆ ನಮ್ಮನ್ನು ನಿರ್ಮಿಸುತ್ತದೆ. ಈ ನಿರ್ಮಾಣ ಪ್ರಕ್ರಿಯೆ ಹೊಸ ಸಮಾಜದ ನಿರ್ಮಾಣದಷ್ಟೇ ಮುಖ್ಯವೆಂದು ನಾನು ಭಾವಿಸಿದ್ದೇನೆ. ನನ್ನ ಅನೇಕ ಸಂಕಟದ ಸಮಯದಲ್ಲಿ ದುಃಖದ ದಿನಗಳಲ್ಲಿ, ಸಂಭ್ರಮದ ವೇಳೆಯಲ್ಲಿ ಕವಿತೆ ನನ್ನನ್ನು ಬದುಕಿಸಿದೆ. ವ್ಯಕ್ತಿ, ಕುಟುಂಬ ಮತ್ತು ಸಮಾಜಗಳ ಈ ಚಲನಶೀಲ ಘಟಕಗಳ ಸುತ್ತ ಇದು ಬೆಳೆಯುತ್ತಿದೆ. ಕವಿತೆ ಹೀಗೆ ಎಲ್ಲವನ್ನೂ ಆವರಿಸಿದೆ ('ಎರಡು ಮಾತು', ಬಿಂಬದೊಳಗಣ ಮಾತು) ಎಂಬ ಸುಕನ್ಯಾರವರ ಮಾತುಗಳು ಕಾವ್ಯ ರಚನೆಗಿರುವ ಖಾಸಗಿತನದ ಕಾರಣಗಳನ್ನು ವ್ಯಕ್ತಪಡಿಸಿದೆ.

**ಕ) ಚ.ಸರ್ವ ಮಂಗಳ**

ಸರ್ವಮಂಗಳಾರವರು ಮೂಲತ: ಶಿವಮೊಗ್ಗ ಜಿಲ್ಲೆಯ ಚನ್ನಗಿರಿಯವರು. ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸಿ, ನಿವೃತ್ತರಾಗಿದ್ದಾರೆ. 'ನವ್ಯ ಪಂಥ'ದ ಉದ್ದೇಶಗಳಿಂದ, ಪ್ರಭಾವಿತರಾಗಿದ್ದ ಸರ್ವಮಂಗಳಾರವರು ಅಧ್ಯಾಪನಾ ವೃತ್ತಿಯಲ್ಲಿ ತೊಡಗಿದವರು. "ನನ್ನ ನೆಲೆಯನ್ನು ಕಂಡುಕೊಳ್ಳಲು ನಾನು ನಡೆಸಿದ ಪ್ರಯತ್ನ ಈ ಪದ್ಯಗಳು" ಎಂಬ ತತ್ವ ಕಾವ್ಯ ರಚನೆಗೆ ಕಾರಣವಾಗಿವೆ.

ಖ) ಸ. ಉಷಾ

ಇವರು ಮೂಲತ: ಹಾಸನ ಜಿಲ್ಲೆಯ ಅರಸೀಕೆರೆ ತಾಲೂಕಿನ ಜಾವಗಲ್‌ನವರು. ಅರಸಿಕೆರೆಯಲ್ಲಿ ಅಧ್ಯಾಪಕರಾಗಿ ಕಾರ್ಯನಿರ್ವಹಿಸಿ, ಸ್ವಯಂನಿವೃತ್ತಿಯನ್ನು ಪಡೆದಿದ್ದಾರೆ. ಸಧ್ಯಕ್ಕೆ ಶಿವಮೊಗ್ಗದಲ್ಲಿ ನೆಲೆಸಿದ್ದಾರೆ. ಕವನ ಸಂಕಲನ, ಕಾದಂಬರಿ ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ ಸಾಧನೆ ಮಾಡಿದ್ದಾರೆ. ಸಾಂಕೇತಿಕತೆ, ಹೆಣ್ಣಿನ ಅಸ್ತಿತ್ವದ ಶೋಧ ಇವರ ಕಾವ್ಯದ ಮುಖ್ಯ ಅಭಿವ್ಯಕ್ತಿ ಕ್ರಮವಾಗಿವೆ.

ಗ) ಸವಿತಾ ನಾಗಭೂಷಣ್

ಮೂಲತಃ ತೀರ್ಥಹಳ್ಳಿಯವರಾದ ಸವಿತಾರವರಿಗೆ ಆಸಕ್ತಿಯಿರುವುದು ಮನಸೆಳೆಯುವ ಮಲೆನಾಡಿನ ಪ್ರಾಕೃತಿಕ ಪರಿಸರದೊಂದಿಗೆ. "ಬಸವಣ್ಣನ ವಚನಗಳ ಸರಳತೆ, ಬದ್ಧತೆ, ಅಕ್ಕನ ವಚನಗಳ ಭಾವ ತೀವ್ರತೆ, ನೆರುಡಾನ ಕವನಗಳ ಮಾಂತ್ರಿಕತೆ, ಅಮೃತಾ ಪ್ರೀತಮಳ ಕವನಗಳ ಉನ್ಮಾದತೆ ನನಗೆ ಅಚ್ಚುಮೆಚ್ಚು. ಕನ್ನಡದ ಕುವೆಂಪು, ಬೇಂದ್ರೆ, ಕೆ.ಎಸ್.ನ., ಜಿ.ಎಸ್.ಎಸ್., ನಿಸಾರ್ ಅಹಮದ್, ಕೆ.ವಿ.ತಿರುಮಲೇಶ್, ಎಚ್.ಎಸ್.ವಿ., ಎಚ್.ಎಸ್.ಶಿವಪ್ರಕಾಶ್, ಸಿದ್ಧಲಿಂಗಯ್ಯ ಇವರ ಕವನಗಳನ್ನು ಮುಂದಿಟ್ಟುಕೊಂಡು ಕವನ ಬರೆಯಲು ತೊಡಗಿದೆ. ಬಾಗಲೋಟಿ ದೇವರಾಯ, ಲಂಕೇಶ್, ತೇಜಸ್ವಿ, ಅನಂತಮೂರ್ತಿ, ದೇವನೂರು ಮಹದೇವ ಇವರ ಗದ್ಯ, ದಾರಿ ತೋರಿದವು" ('ಕಾಡು ಲಿಲ್ಲಿ ಹೂವುಗಳು', ಆಕಾಶ ಮಲ್ಲಿಗೆ, ಪುಟ-೦೮) ಎಂಬ ಮಾತುಗಳಲ್ಲಿ ವಿವಿಧ ಸಾಹಿತಿಗಳ ಪ್ರಭಾವ ವಲಯ ಸವಿತಾರನ್ನು ಹೇಗೆ ರೂಪಿಸಿದೆ ಎಂಬುದನ್ನು ತಿಳಿಯಬಹುದು.

ಘ) ಮಮತಾ ಜಿ.ಸಾಗರ್

ಇವರು ಪ್ರಸ್ತುತ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಉಪನ್ಯಾಸಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. "ನವ್ಯ ಮಾರ್ಗದಿಂದ ನಾವು ಕಲಿತ ಕ್ರಾಫ್ಟ್‌ಮನ್‌ಶಿಫ್ ಅದ್ಭುತವಾದದ್ದು. ಕನ್ನಡ ಭಾಷೆಯನ್ನು ನಮ್ಮ ಲಯಗಳಿಗೆ ತಕ್ಕಂತೆ ಪಳಗಿಸಿಕೊಳ್ಳುವಂಥ ಸ್ಕಿಲ್ಲನ್ನು ನವ್ಯ ನಮಗೆ ಹೇಳಿಕೊಟ್ಟಿತು. ಈ ಹೊತ್ತಿನ ಕಾವ್ಯ, ವ್ಯಕ್ತಿ ಕೇಂದ್ರಿತ ಅನ್ನೋ ಹೆಸರಿನಲ್ಲಿ ಎಷ್ಟು ಸೆಲ್ಫ್ ಸೆಂಟರ್ಡ್ ಮತ್ತು ಸೆಲ್ಫ್ ಇಗೋಯಿಸ್ಟಿಕ್ ಆಗಿತ್ತೆನ್ನುವುದು ಈಗ ತಿಳಿಯುತ್ತದೆ. ಇಲ್ಲಿಯ 'ವ್ಯಕ್ತಿ' ಮತ್ತು 'ಸೆಲ್ಫ್' ಎರಡೂ ಸಾಧಾರಣವಾಗಿ ಗಂಡಿನ ದೃಷ್ಟಿಕೋನವನ್ನೇ ಹೊಂದಿರುವಂಥದ್ದು ಎಂದು ತಿಳಿಯಲು ಹೆಚ್ಚು ಸಮಯ ಬೇಕಾಗುವುದಿಲ್ಲ" ('ನಾನು ಹೇಳಬೇಕಾದ್ದು', ನದಿಯ ನೀರಿನ ತೇವ) ಎಂಬ ಮಮತಾರವರ ಮಾತುಗಳು, ಕಾವ್ಯ ರಚನೆಯು ಹೊಸ ದಿಕ್ಕಿಗೆ ತಿರುಗಿದ ಸೂಚನೆಯನ್ನು ನೀಡುತ್ತವೆ. 'ನವ್ಯ'ದ ತಾಂತ್ರಿಕ ವಿಧಾನವನ್ನು ಹೆಚ್ಚಾಗಿ ಬಳಸಿಕೊಂಡಿದ್ದ ಕವಿಗಳು, ಆ ವಿಧಾನದಿಂದ ಸರಿದು ಹೊಸ ವಿಧಾನಗಳ ಶೋಧನೆಗೆ ತೊಡಗಿದ್ದಾರೆ ಎಂಬುದು ಮನವರಿಕೆಯಾಗುತ್ತದೆ.

ಙ) ಪುಷ್ಪಾ ಎಚ್.ಎಲ್.

ಪುಷ್ಪಾರವರು, ಕನ್ನಡ ಅಧ್ಯಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಕಿ.ರಂ.ನಾಗರಾಜ,

ಜಿ.ಎಸ್.ಶಿವರುದ್ರಪ್ಪ, ಬರಗೂರು ರಾಮಚಂದ್ರಪ್ಪ, ಎಚ್.ಎಸ್.ಶಿವಪ್ರಕಾಶ್, ಸಿದ್ಧಲಿಂಗಯ್ಯ, ಸುರಂ ಎಕ್ಕುಂಡಿ, ಗಂಗಾಧರ ಚಿತ್ತಾಲ, ಕೆ.ಎಸ್.ನರಸಿಂಹಸ್ವಾಮಿಯವರ ಕಾವ್ಯಗಳು ಪ್ರೇರಣೆ ನೀಡಿವೆಯೆಂದು ಸಾಂದರ್ಭಿಕವಾಗಿ ಹೇಳಿಕೊಂಡಿದ್ದಾರೆ. ಕಾವ್ಯದ ಉದ್ದೇಶವನ್ನು ಕುರಿತು "ನವು ಸುತ್ತಮುತ್ತಲಿನ ವಿಷಯ ಸ್ಥಿತಿಯ ಬಗ್ಗೆ ದೌರ್ಜನ್ಯಗಳ ಬಗ್ಗೆ ಪ್ರತಿಭಟಿಸುವ ಶಕ್ತಿಯಿಲ್ಲದೆ ಕಣ್ಣಾರೆ ಕಂಡು ಮೌನಿಗಳಾಗುತ್ತೇವೆ. ಇಂತಹ ಸಂದರ್ಭದಲ್ಲಿ ಕ್ರಿಯೆ ಅನುಕೂಲಕರವಾಗಿ ಒದಗದಿದ್ದರೂ, ಬರಹವಂತೂ ಅವಕಾಶ ಮಾಡಿಕೊಡುತ್ತದೆ"('ನನ್ನೊಳಗಿನ ಮಾತು', 'ಅಮೃತಮತಿ ಸ್ವಗತ') ಎಂಬ ಮಾತುಗಳಲ್ಲಿ ಕಾವ್ಯ ಮಾರ್ಗದ ಮೂಲಕ, ವ್ಯವಸ್ಥೆಯಲ್ಲಿ ನಡೆಯುತ್ತಿರುವ ದೌರ್ಜನ್ಯಗಳನ್ನು ಪ್ರತಿಭಟಿಸುವ ಮಾರ್ಗವನ್ನು ಕಂಡುಕೊಂಡಿದ್ದಾರೆ. ಸಾಮಾಜಿಕ ಅಸಮಾನತೆ, ಕ್ರೌರ್ಯ, ಹಿಂಸೆಗಳ ವಿರುದ್ಧ ನೇರವಾಗಿ ಹೋರಾಟ, ಚಳುವಳಿ ಮೂಲಕ ತೊಡಗಿಸಿಕೊಳ್ಳುವುದು ಒಂದು ಮಾರ್ಗವಾದರೆ, ತಾತ್ವಿಕ ಚಿಂತನೆಗಳನ್ನು ಓದುಗರಲ್ಲಿ ಹರಡುವ ಮೂಲಕ, ಕಾವ್ಯ, ಕತೆ, ಲೇಖನ ಮುಂತಾದ ಬರಹಗಳ ಮೂಲಕ ಎಚ್ಚೆತ್ತುಕೊಳ್ಳುವುದು ಮತ್ತೊಂದು ಮಾರ್ಗವಾಗಿದೆ.

ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಮಹಿಳಾ ಸಾಹಿತ್ಯ ರಚನೆಯ ಸಾಂಸ್ಕೃತಿಕ ಪರಿಸರವನ್ನು ಗಮನಿಸಿದಾಗ ಕೆಲವು ಅಂಶಗಳು ಸ್ಪಷ್ಟವಾಗುತ್ತವೆ. ಪುರುಷ ಬರಹಗಾರರ ಪ್ರೇರಣೆ-ಪ್ರಭಾವಗಳು ಮಹಿಳೆಯರನ್ನು ಆವರಿಸಿದರೂ ತಮ್ಮದೇ ಆದ ಚಿಂತನೆಗಳನ್ನು ಕಾವ್ಯ, ಕತೆ, ಕಾದಂಬರಿ, ಲೇಖನಗಳ ಮೂಲಕ ಅಭಿವ್ಯಕ್ತಿಸಿದ್ದಾರೆ. ವಸಾಹತುಶಾಹಿ ಕಾಲದಲ್ಲಿ ರಾಷ್ಟ್ರೀಯತೆ, ಸಮಾಜ ಸುಧಾರಣೆಯಂತಹ ಸಂಗತಿಗಳಿಗೆ ಮುಖಾಮುಖಿಯಾಗುತ್ತಿದ್ದ ಸಾಹಿತ್ಯ, ಸ್ವಾತಂತ್ರ್ಯೋತ್ತರದಲ್ಲಿ ವ್ಯಕ್ತಿ ನೆಲೆಯ ಅಭಿವ್ಯಕ್ತಿ ಪ್ರಮುಖವಾಗಿರುವುದನ್ನು ಗುರುತಿಸಬಹುದಾಗಿದೆ. ಅಭಿವ್ಯಕ್ತಿಸುವ ಮಾಧ್ಯಮದಲ್ಲಿ ಮಹಿಳೆಯರು ಹಿಂದಿಗಿಂತ ಹೆಚ್ಚು ಸ್ವಾತಂತ್ರ್ಯವನ್ನು ವಹಿಸಿದ್ದಾರೆ. ತಮ್ಮ ಚಿಂತನೆಗಳನ್ನು ಮುಕ್ತವಾಗಿ ಹಂಚಿಕೊಳ್ಳುತ್ತಿರುವುದನ್ನು ಕಾಣಬಹುದಾಗಿದೆ.

# ಅಧ್ಯಾಯ ನಾಲ್ಕು

# ಅಭಿವ್ಯಕ್ತಿ ಕ್ರಮದ ತಾತ್ವಿಕ ಸ್ವರೂಪ

## ೪.೧ ಪ್ರವೇಶ

ಅಭಿವ್ಯಕ್ತಿಸುವ ವಿಧಾನವನ್ನು ಕುರಿತಂತೆ ಹಿಂದಿನಿಂದ ನಡೆದುಬಂದ ಚರ್ಚೆಯ ನೆಲೆಗಳನ್ನು ಉಲ್ಲೇಖಗಳೊಡನೆ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಅಭಿವ್ಯಕ್ತಿ ಕ್ರಿಯೆಯಲ್ಲಿ ಭಾಷೆ, ಶೈಲಿ, ತಂತ್ರ, ವಸ್ತು, ನಿರೂಪಣೆಗಳು ಸಾಹಿತ್ಯ ರಚನೆಯ ಆಧಾರ ಸ್ತಂಭವಾಗಿವೆ. ಮಹಿಳೆಯರ ಅಭಿವ್ಯಕ್ತಿ ಕ್ರಮವು ಒಳಗೊಂಡ ಸಾಹಿತ್ಯದ ತಾಂತ್ರಿಕ ಮತ್ತು ತಾತ್ವಿಕ ಅಂಶಗಳನ್ನು ಚರ್ಚೆಗೆ ಒಳಪಡಿಸಲಾಗಿದೆ. ಕಾವ್ಯದ ಅಭಿವ್ಯಕ್ತಿ ಮತ್ತು ಕಥನದ ಅಭಿವ್ಯಕ್ತಿಯ ಲಕ್ಷಣಗಳನ್ನು ಅವಲೋಕಿಸಲಾಗಿದೆ.

## ೪.೨ ಅಭಿವ್ಯಕ್ತಿ ಕ್ರಮದ ಚರ್ಚೆಯ ನೆಲೆಗಳು

ಅಭಿವ್ಯಕ್ತಿ ಕ್ರಮದ ತಾತ್ವಿಕ ಸ್ವರೂಪವನ್ನು ನಿಘಂಟಿನ ಅರ್ಥ ಮತ್ತು ತಾತ್ವಿಕ ಅರ್ಥದಲ್ಲಿ ವಿಂಗಡಿಸಿ ಅಧ್ಯಯನ ಮಾಡಲಾಗಿದೆ. 'ಅಭಿವ್ಯಕ್ತಿ' ಎಂಬ ಪದದಲ್ಲಿ, ಎರಡು ಪದಗಳಿವೆ. ಒಂದು 'ಅಭಿ', ಇನ್ನೊಂದು 'ವ್ಯಕ್ತಿ' ಅಥವಾ 'ವ್ಯಕ್ತ'. ಅವ್ಯಯ ರೂಪವಾದ 'ಅಭಿ' ಎಂಬ ಶಬ್ದವು ಉಪಸರ್ಗವಾಗಿ, ಕರ್ಮ ಪ್ರವಚನೀಯವಾಗಿ, ವಿಶೇಷಣವಾಗಿ ಬಳಕೆಯಾಗುತ್ತದೆ. ಲಕ್ಷಣ; ಚಿನ್ಹೆ; ಗುರುತು; ವ್ಯಾಪ್ತಿ; ಇಚ್ಛೆ; ಸುತ್ತಲೂ; ಒಳಗೆ; ಮುಂಭಾಗ; ಮಾತು; ಭಾಗ; ಪಾಲು ಮುಂತಾದ ಅರ್ಥಗಳನ್ನು ಹೊಂದಿದೆ.

'ವ್ಯಕ್ತ' ಎಂಬ ಪದವು ಸ್ಫುಟವಾದ; ಸ್ಪಷ್ಟವಾದ; ಗೋಚರವಾಗುವ; ಕಣ್ಣಿಗೆ ಕಾಣಿಸುವ; ಚೆನ್ನಾಗಿ ತಿಳಿಯಬಹುದಾದ ಎಂಬ ಅರ್ಥದಲ್ಲಿ, ವಿಶೇಷಣ/ಕ್ರಿಯಾ ವಿಶೇಷಣವಾಗಿ ಬಳಕೆಗೊಂಡಿದೆ.

'ವ್ಯಕ್ತಿ' ಎಂಬ ಪದವು, ವಿಮರ್ಶೆಯಿಂದ ಕಂಡು ಬರುವ ವ್ಯತ್ಯಾಸ; ಸ್ಪಷ್ಟವಾಗಿ ತೋರುವಿಕೆ; ದೃಷ್ಟಿಗೆ ಗೋಚರವಾಗುವಿಕೆ; ಸ್ಪಷ್ಟತೆ; ಸ್ಫುಟವಾಗಿರುವಿಕೆ; ನಿಜ ಸ್ವರೂಪ; ಯಥಾರ್ಥವಾದ ರೂಪ; ಪ್ರತ್ಯೇಕವಾದ ಚರಾಚರಾಭೂತಗಳು; ಶಬ್ದ ಲಿಂಗಗಳಿಗೆ ಇರುವ ಅರ್ಥವನ್ನು ವ್ಯಕ್ತಗೊಳಿಸುವ ಶಕ್ತಿಯಾಗಿದೆ. ಮೇಲಿನ ಎರಡು ಪದಗಳು ಸೇರಿದ 'ಅಭಿವ್ಯಕ್ತಿ' ಎಂಬ ಪದಕ್ಕೆ ಸ್ಪಷ್ಟವಾಗಿ ಕಾಣುವಿಕೆ; ಪ್ರಕಟವಾಗಿರುವಿಕೆ; ಸೂಕ್ಷ್ಮ ರೂಪದಲ್ಲಿದ್ದುದರ ಸ್ಥೂಲ ರೂಪದಿಂದ ಕಾಣಿಸಿಕೊಳ್ಳುವಿಕೆಯ ಅರ್ಥವನ್ನು ಹೊಂದಿದೆ.

ಇಂಗ್ಲಿಶ್‌ನ 'Expression' ಎಂಬ ಪದಕ್ಕೆ ಸಮಾನವಾಗಿ ಅಭಿವ್ಯಕ್ತಿ ಎಂಬ ಪದವನ್ನು ಕನ್ನಡದಲ್ಲಿ ಬಳಸಲಾಗುತ್ತದೆ. Expression ಎಂದರೆ, ಹೊರಸೂಸುವಿಕೆ; ನಿರೂಪಣೆ; ನಿರೂಪಿಸುವುದು; ಭಾವನೆಗಳ–ಗುಣಗಳ ಪ್ರಕಟ; ನುಡಿಯುವುದು; ಹೇಳಿಕೆ; ಮಾತಿನಲ್ಲಿ ತಿಳಿಯಪಡಿಸುವಿಕೆ; ಪದ ಪ್ರಯೋಗ, ಪದ

ವಿನ್ಯಾಸ, ಮಾತಿನ ಜೋಡಣೆ, ವಾಕ್ಸರಣಿ; ಪದ, ಶಬ್ದ, ಪದಗುಚ್ಛ; ಪದಶಕ್ತಿ, ಶಬ್ದ ಶಕ್ತಿ, ಪದಗಳ ಯಾ ಮಾತಿನ ಮೂಲಕ ಅಭಿವ್ಯಕ್ತಗೊಳಿಸುವ ಶಕ್ತಿ; ಮುಖ ಭಾವ, ಮುಖ ಭಂಗಿ; (ಕಂಠದ) ಧ್ವನಿ, ಏರಿಳಿತ, ಉಚ್ಚಾರ ರೀತಿ; ಅಭಿವ್ಯಕ್ತಿ ವ್ಯಂಜನೆ, ಶೀಲ, ಗುಣ ಭಾವ ಮೊದಲಾದವುಗಳನ್ನು ನಿರೂಪಿಸುವ ರೀತಿ ಎಂಬ ಅರ್ಥವನ್ನು ಹೊಂದಿದೆ.

ಮೇಲಿನ ಪದಗಳು, ಅಭಿವ್ಯಕ್ತಿ ಎಂಬ ಪದದ ನಿಘಂಟಿನ ಅರ್ಥಗಳಾಗಿವೆ. ಅಭಿವ್ಯಕ್ತಿ ಕ್ರಮದ ತಾತ್ವಿಕ ಸ್ವರೂಪದ ಅರ್ಥವನ್ನು ಕೆಳಗಿನಂತೆ ವಿಶ್ಲೇಷಿಸಿಕೊಳ್ಳಲಾಗಿದೆ.

ಸ್ಥೂಲವಾಗಿ ಹೇಳುವುದಾದರೆ ಅಭಿವ್ಯಕ್ತಿಯು, ವ್ಯಕ್ತಿಯೊಳಗೆ ಅಮೂರ್ತವಾಗಿ ಹುಟ್ಟಿಕೊಂಡ ಹಲವಾರು ಭಾವನೆಗಳನ್ನು ಮೂರ್ತ ರೂಪದಲ್ಲಿ, ಭಾಷಾ ಮಾಧ್ಯಮದ ಮೂಲಕ ವ್ಯಕ್ತಪಡಿಸುವ ವಿಧಾನವಾಗಿದೆ. ಈ ಅಭಿವ್ಯಕ್ತಿಯ ಸ್ವರೂಪ ಸಾಹಿತ್ಯಿಕ ಮಾಧ್ಯಮವಾದ, ಭಾಷೆಯೊಂದಿಗೆ ಸಂಗೀತದ ರೂಪಕ್ಕೆ; ಶಿಲ್ಪ ಮತ್ತು ವಾಸ್ತು ರೂಪಕ್ಕೆ; ಚಿತ್ರಕಲೆ ರೂಪಕ್ಕೆ; ನಾಟ್ಯ ಮತ್ತು ನಾಟಕ ರೂಪಕ್ಕೆ ಸಂಬಂಧಿಸಿದ ಬಹು ವಿಧಾನಗಳನ್ನು ಅರ್ಥೈಸುತ್ತದೆ.

ವ್ಯಕ್ತಿಯು ತನ್ನ ಅನುಭವ, ಅಮೂರ್ತವಾದ ಭಾವನೆ, ಆಲೋಚನೆ, ಬಯಕೆ ಚಿಂತನೆಗಳಿಗೆ ಸಾಮಾಜಿಕವಾಗಿ ಅಂಗೀಕೃತವಾದ ಯಾವುದೇ ಒಂದು ಮಾಧ್ಯಮದಲ್ಲಿ, ತಕ್ಕಮಟ್ಟಿಗೆ ಖಚಿತವಾದ, ಮೂರ್ತವಾದ ರೂಪವನ್ನು ಕೊಡುವ ಕ್ರಿಯೆ. ತನ್ನ ಅನುಭವ ಇತ್ಯಾದಿಗಳನ್ನು ಸಮಾಜದ ಇತರರೊಂದಿಗೆ ಹಂಚಿಕೊಳ್ಳುವುದು ಮತ್ತು ತನ್ನ ಆಲೋಚನೆ ಚಿಂತನೆಗಳತ್ತ ಅವರನ್ನು ಒಲಿಸಿಕೊಳ್ಳುವುದು ಅಭಿವ್ಯಕ್ತಿಯ ಹಿಂದಿರುವ ಉದ್ದೇಶಗಳಾಗಿವೆ. (ವಿಮರ್ಶೆಯ ಪರಿಭಾಷೆ, ಪುಟ–೧೬)

ಅಭಿವ್ಯಕ್ತಿಯ ಸ್ವರೂಪವನ್ನು ಕುರಿತು ಅಭಿನವ ಗುಪ್ತನು ತನ್ನ ಕೃತಿಯಾದ 'ಅಭಿನವ ಭಾರತಿ'ಯಲ್ಲಿ ಸಾಂದರ್ಭಿಕವಾಗಿ ವಿಶ್ಲೇಷಿಸಿದ್ದಾನೆ. ಅಭಿವ್ಯಕ್ತಿಯು ಒಂದು ವ್ಯವಸ್ಥಿತವಾದ ಕ್ರಿಯೆ. ಒಳಗಡೆ ಇರುವ ಸಂಗ್ರಹದಿಂದ ಒಂದು ಆಯ್ಕೆ ಅದಕ್ಕೆ ಅಗತ್ಯ. ಆದ್ದರಿಂದ ಅಭಿವ್ಯಕ್ತಿ ಕ್ರಿಯೆಯು ಜ್ಞಾನ ಇಚ್ಛೆ ಹಾಗೂ ಆತ್ಮಚೈತನ್ಯ ಅಥವಾ ಆನಂದಗಳನ್ನು ಪೂರ್ವಭಾವಿಯಾಗಿ ಹೊಂದಿರುತ್ತದೆ. ಆತ್ಮಾನಂದ ಇರದಿದ್ದರೆ ಇಚ್ಛೆ ಇರುವುದಿಲ್ಲ. ಇಚ್ಛೆ ಇಲ್ಲದಿದ್ದರೆ ಯಾವ ಜ್ಞಾನವೂ ಸಾಧ್ಯವಿಲ್ಲ. ವಿಷಯದ, ಅದನ್ನು ಪಡೆಯುವ ಸಾಧನದ ಮತ್ತು ಮಾರ್ಗಗಳ ಜ್ಞಾನವಿರದಿದ್ದರೆ ವ್ಯವಸ್ಥಿತವಾದ ಕ್ರಿಯೆ ಇರುವುದಿಲ್ಲ. ಆದ್ದರಿಂದ ವಿಶ್ವಾತ್ಮವನ್ನು ಕುರಿತಂತೆ ವಿಮರ್ಶ ಎಂಬ ಶಬ್ದವು ಅನುಕ್ರಮವಾಗಿ ಆತ್ಮ ಪ್ರಜ್ಞೆ ಅಥವಾ ಇಚ್ಛೆ ಜ್ಞಾನ ಮತ್ತು ಕ್ರಿಯೆ ಇವುಗಳನ್ನು ಉಂಟು ಮಾಡುವ ಶಕ್ತಿಯನ್ನು ಸೂಚಿಸುತ್ತದೆ. (ಅಭಿನವ ಗುಪ್ತ, ಪುಟ–೩೯)

ಅಭಿನವಗುಪ್ತನು ಅಭಿವ್ಯಕ್ತಿಗೆ ಸಂಬಂಧಿಸಿದಂತೆ 'ಪ್ರಕಾಶ', 'ವಿಮರ್ಶ' ಎಂಬ ಪರಿಭಾಷೆಗಳನ್ನು ಬಳಸಿದ್ದಾನೆ. 'ಪ್ರಕಾಶ' ಎನ್ನುವುದನ್ನು ಅಭಿವ್ಯಕ್ತಿಯ ಆಂತರ್ಯದೊಳಗೆ ಅಡಗಿರುವ ಪರತತ್ವದ ರೂಪವಾಗಿಯೂ, 'ವಿಮರ್ಶ' ಎನ್ನುವುದು ಆನಂದ, ಇಚ್ಛಾ, ಜ್ಞಾನ ಮತ್ತು ಕ್ರಿಯೆಗಳಿಗೆ ಕಾರಣವಾದ ಅಭಿವ್ಯಕ್ತಿಯ ಶಕ್ತಿಯ ಅಂಶವನ್ನು ಸೂಚಿಸುತ್ತದೆ. ಕನಸಿನ ಅಥವ ಕಲ್ಪನೆಯ ವಸ್ತುಗಳು ವ್ಯಕ್ತಿಯೊಬ್ಬನ

ಮನಸ್ಸಿನಿಂದ ಕಲ್ಪಿತವಾಗಿರುವಂತೆಯೇ ಅಭಿವ್ಯಕ್ತಿಗೊಂಡಿರುವ ಜಗತ್ತು ಪರತತ್ತ್ವದಿಂದ ಕಲ್ಪಿತವಾಗಿದೆ ಎಂದು ಈ ಸಿದ್ಧಾಂತ ಭಾವಿಸುತ್ತದೆ. ಸಹೃದಯನ ಮನಸ್ಸಿನಲ್ಲಿ ಸುಪ್ತವಾಗಿ ಇದ್ದದ್ದು ಸ್ಫುಟವಾಗಿರುವುದೇ ಅಭಿವ್ಯಕ್ತಿ ಎನ್ನಲಾಗಿದೆ.

ಅಭಿವ್ಯಕ್ತಿಯ ಹಂತದಲ್ಲಿ ಇಚ್ಛಾನುಸಾರ ಅಭಿವ್ಯಕ್ತಿಗೊಂಡ ಪರಿಮಿತ ವಸ್ತುರಾಶಿಯಿಂದ ಕೆಲವು ವಸ್ತುಗಳು, ಅದರಿಂದ ಪ್ರತ್ಯೇಕವಾಗಿರುವಂತೆ ಪ್ರಕಟವಾಗುತ್ತದೆ. ಇದು ಬಹುಮಟ್ಟಿಗೆ ನಮ್ಮ ಕನಸಿನ ಅಥವಾ ಕಲ್ಪನಾ ಸೃಷ್ಟಿಯ ಸ್ಥಿತಿಯಂತಿರುತ್ತವೆ. ಆಗ ನಾವು ನಮ್ಮವೇ ಭಾವನೆಗಳನ್ನು ನಮ್ಮಿಂದ ಬಾಹ್ಯವಾಗಿರುವ ವಸ್ತುಗಳಂತೆ ಹೊರತರುತ್ತೇವೆ ಅಥವಾ ರೂಪಿಸುತ್ತೇವೆ. ಅಲೆಗಳು ಸಮುದ್ರದಲ್ಲಿರುವಂತೆ, ಆಭಾಸಗಳು ಪರತತ್ತ್ವದ ಒಳಗಿರುತ್ತವೆ. ಅಲೆಗಳ ಫಲವಾಗಿ ಸಮುದ್ರದಿಂದ ಯಾವುದೂ ಹೊರಕ್ಕೆ ಹೋಗುವುದಾಗಲೀ ಒಳಕ್ಕೆ ಬರುವುದಾಗಲಿ ಆಗದಿರುವಂತೆ ಆಭಾಸದ ಅಭಿವ್ಯಕ್ತಿಯಿಂದಾಗಿ ವಿಶ್ವ ಚೈತನ್ಯದಲ್ಲಿ ಯಾವುದೇ ವಾಸ್ತವಿಕ ಲಾಭವಾಗಲಿ ನಷ್ಟವಾಗಲಿ ಆಗುವುದಿಲ್ಲ ಎನ್ನುವುದು ಇದರ ತಿರುಳು.

'All art is expression, therefore all expression is art' (ಎಲ್ಲ ಕಲೆಯೂ ಅಭಿವ್ಯಕ್ತಿಯಾಗಿದೆ. ಆದ್ದರಿಂದ ಎಲ್ಲ ಅಭಿವ್ಯಕ್ತಿಯೂ ಕಲೆಯೇ ಆಗಿದೆ) ಎಂದಿರುವ ಇಟಲಿಯ ಬೆನೆಡೆಟ್ಟೋ ಕ್ರೋಚೆ ಅಭಿವ್ಯಕ್ತಿಯ ಕುರಿತು 'Phylosophy of spirit or mind' ಕೃತಿಯಲ್ಲಿ ಚರ್ಚಿಸಿದ್ದಾನೆ: "ಈ ಪ್ರಪಂಚದಲ್ಲಿ ಸತ್ಯಕ್ಕೇನಾದರೂ ಆಧಾರವಿದ್ದರೆ ಅದು ಮನಸ್ಸಿಗೆ ಅರ್ಥವಾದದ್ದು. ಸತ್ಯವನ್ನು ತಿಳಿದುಕೊಳ್ಳಲು ನಾವು ಅವಲೋಕಿಸುವ ಈ ಲೋಕದ ವಿಷಯಗಳೆಲ್ಲ, ನಿಜವಾಗಿ ಇರುವುದು ವಾಸ್ತವಿಕ ಜಗತ್ತಿನಲ್ಲಲ್ಲ. ಮನಸ್ಸಿನಲ್ಲಿ. ಈ ಎಲ್ಲ ಸತ್ಯದ ಅರಿವಿನಿಂದ ತುಂಬಿದ ಮನಸ್ಸು ಒಂದು ಪ್ರಕ್ರಿಯೆ. ಅನೇಕ ರೀತಿಗಳಿಂದ ಅನೇಕವನ್ನು ಗ್ರಹಿಸಿದರೂ ಮನಸ್ಸೊಂದು ಏಕರೂಪದ ಚಟುವಟಿಕೆ. ನಾವೊಂದು ದೃಶ್ಯವನ್ನು ನೋಡಿದರೆ, ಆ ದೃಶ್ಯವು ಮನದ ಕ್ರಿಯೆಯಾಗಿ ಪರಿವರ್ತನೆಗೊಂಡು ಅಭಿವ್ಯಕ್ತಿಗೊಳ್ಳುತ್ತದೆ. ಇದು ಆ ದೃಶ್ಯದ ಸತ್ಯ; ಅಸ್ತಿತ್ವ" (ಸಾಹಿತ್ಯದಲ್ಲಿ ತತ್ತ್ವವಾದಗಳು, ಪುಟ–೭೬) ಅಭಿವ್ಯಕ್ತಿ ಎನ್ನುವುದು ಮನಸ್ಸಿನ ಕ್ರಿಯೆಯಾಗಿದೆ. 'ಪ್ರತಿಭಾನ'ವೇ ಅಭಿವ್ಯಕ್ತಿಯ ಮುಖ್ಯ ಸಾಧನವಾಗಿದೆ ಎಂಬುದು ಕ್ರೋಚೆಯ ವಿಚಾರ. ಪ್ರತಿಭಾನ (Intuition) ಎಂದರೆ "ನಮ್ಮ ಚಿತ್ ಈ ಲೋಕಾನುಭವವನ್ನು ಎರಡು ರೀತಿಯಲ್ಲಿ ಗ್ರಹಿಸುತ್ತದೆ. ಒಂದು ಪ್ರತಿಭಾನದ ಮೂಲಕ. ಮತ್ತೊಂದು ಬುದ್ಧಿ ವ್ಯಾಪಾರದ ಮೂಲಕ. ಮೊದಲನೆಯದು ಒಂದು ರಸ ವ್ಯಾಪಾರ. ಎರಡನೆಯದು ತಾರ್ಕಿಕ ವ್ಯಾಪಾರ. ತರ್ಕ ಪ್ರತಿಭಾನವನ್ನು ಅವಲಂಬಿಸಿದ್ದರೂ, ಪ್ರತಿಭಾನವು ತರ್ಕವನ್ನು ಅವಲಂಬಿಸಿಲ್ಲ. ಈ ಪ್ರತಿಭಾನ ಎನ್ನುವುದು ಎಲ್ಲರಲ್ಲೂ ಇದೆ. ಅದು ವಸ್ತುಗಳಿಗೆ ಮನಸ್ಸು ಮಿಡಿಯುವುದರಿಂದ ಆಗುವ ಸಂವೇದನಾ ಜ್ಞಾನವಲ್ಲ. ಅಥವಾ ಬುದ್ಧಿಪೂರ್ವಕವಾಗಿ ಗ್ರಹಿಸುವ ವಿಧಾನವೂ ಅಲ್ಲ. ಅದೊಂದು ನಿರಂತರತೆಯನ್ನು ಗ್ರಹಿಸುವ ಶಕ್ತಿ" (ಕಾವ್ಯಾರ್ಥ ಪದಕೋಶ, ಪುಟ–೨೦)ಯಾಗಿದೆ.

ವಸ್ತು, ಸತ್ಯ–ಅಸತ್ಯಗಳು, ವಿಚಾರ, ವಿವೇಕಗಳು ಮೊದಲು ಮನಸ್ಸಿಗೆ ತಲುಪುವುದಕ್ಕೆ ಕಾರಣ ಪ್ರತಿಭಾನ. ಪ್ರತಿಭಾನವು ಸಂಪೂರ್ಣವಾಗಿ ಅಭಿವ್ಯಕ್ತಿಯಾದಾಗ ಅದು ಕಲೆಯಾಗುತ್ತದೆ. ಪ್ರತಿಭಾನ ಪ್ರತಿಮೆಯಾಗಿ ರೂಪಗೊಂಡಾಗ ಅಭಿವ್ಯಕ್ತಿಯ ದರ್ಶನವಾಗುತ್ತದೆ.

ಕೃತಿ, ಶಿಲ್ಪ, ಸಂಗೀತ, ಚಿತ್ರಕಲೆ ಮುಂತಾದವುಗಳು ಪ್ರತಿಭಾನದ ಹೊರ ರೂಪಗಳಾಗಿವೆ. "O ಅನ್ನುವವನು ತನ್ನ ಮನದಲ್ಲಿ ಹೊಳೆದ ಭಾವವೊಂದಕ್ಕೆ ರೂಪು ಕೊಡಲು ಬಯಸುತ್ತಾನೆ. ಆ ಬಯಕೆಯ ಹಿಂದೆ ಅಭಿವ್ಯಕ್ತಿಯ ಒತ್ತಡವಿದೆ. ಆಗ ಅವನ ಮನದ ಮುಂದೆ ಹಲವಾರು ಶಬ್ದಗಳು ಪದ ಪಂಕ್ತಿಗಳು ತೇಲಿ ಬರುತ್ತವೆ. ಅವುಗಳ ಮೂಲಕ ತನ್ನ ಭಾವಾಭಿವ್ಯಕ್ತಿ ಸಾಧ್ಯವೇ ಎಂದು ನೋಡುತ್ತಾನೆ. ಒಂದು ರೀತಿಯ ಪದ–ಪಂಕ್ತಿಗಳು, ಒ ಎಂದು ಇಟ್ಟುಕೊಳ್ಳೋಣ. ಅವುಗಳನ್ನು ಪರಿಶೀಲಿಸಿ ಅವು ತನ್ನ ಭಾವಕ್ಕೆ ತಕ್ಕವಲ್ಲವೆಂದು ತಳ್ಳಿ ಬಿಡುತ್ತಾನೆ. ಆದರೆ ಮತ್ತೊಂದು ಬಗೆಯ-`m' ಎನ್ನೋಣ– ಪದರಚನಾ ಪರಂಪರೆ ತೇಲಿ ಬರುತ್ತದೆ. ಆಗಲೂ ಅಭಿವ್ಯಕ್ತಿ ತಪ್ಪಿಸಿಕೊಳ್ಳುತ್ತದೆ. ಈ ವೇದನಾ ವ್ಯಾಪಾರ ಮುಗಿದ ಮೇಲೆ ಒಮ್ಮೆಗೆ ಅವನಿಗೇ ಅರಿವಿಲ್ಲದಂತೆ ಈ ಭಾವಾಭಿವ್ಯಕ್ತಿಗೆ ತಕ್ಕ ಪದ ಸಾಮಗ್ರಿ ನುಗ್ಗಿ ಬರುತ್ತದೆ. ಅದು ಅಪ್ರಯತ್ನ ಪೂರ್ವಕವಾಗಿ, ನಿರಂತರವಾಗಿ ಬಂದು ಪ್ರಸ್ತುತ ಭಾವಕ್ಕೆ ಆಕಾರವನ್ನು ನೀಡುತ್ತದೆ. ಹೀಗೆ ಪ್ರತಿಭಾ ವ್ಯಾಪಾರದಿಂದ ಮನಸ್ಸಿನಲ್ಲಿ ಮೊದಲು ಮೂಡುವ ಈ ಕೃತಿಯೇ ಅಭಿವ್ಯಕ್ತಿ. ಈ ಮಾನಸಿಕವಾದ 'ಅಭಿವ್ಯಕ್ತಿ'ಯನ್ನು ಆತ ಬರಹದ ಮೂಲಕ ಬಹಿರ್ಗತಗೊಳಿಸುವುದು ಅನಂತರದ ಕ್ರಿಯೆ" (ಸೌಂದರ್ಯ ಸಮೀಕ್ಷೆ, ಪುಟ–೮೫)ಯಾಗುತ್ತದೆ.

ಒಂದು ಭಾವನೆ, ಯಾವುದೇ ತರ್ಕವಿಲ್ಲದೆ, ಅಪ್ರಯತ್ನಪೂರ್ವಕವಾಗಿ, ಕವಿಯ ಮನಸ್ಸಿನಲ್ಲಿ ಮೈದುಂಬಿಕೊಂಡಾಗಲೇ ಪ್ರತಿಭಾನ ಸಂಭವಿಸಿದೆ. ಈ ಪ್ರತಿಭಾನವನ್ನೇ ಅಭಿವ್ಯಕ್ತಿ ಎಂದು ಕ್ರೋಚೆ ಕರೆದಿದ್ದಾನೆ. ಹೀಗಾಗಿ ಕಲೆಯು ವೈಯಕ್ತಿಕವಾದ, ತೀರ ಖಾಸಗಿಯಾದ ಅಭಿವ್ಯಕ್ತಿಯಾಗಿದ್ದು, ಅದನ್ನು ಹೊರ ರೂಪಕ್ಕೆ ಇಳಿಸಿದರೆ, ಮೂಲ ಭಾವನೆ ಕಾಣೆಯಾಗಿ, ಅದರ ಛಾಯೆ ಮಾತ್ರ ಉಳಿಯುತ್ತದೆ. ಕಲೆಯ ಬಗ್ಗೆ ಮಾಡುವ ವಿಶ್ಲೇಷಣೆ, ವರ್ಗೀಕರಣ, ವ್ಯಾಕರಣ, ರೂಪಕಗಳು, ಅಲಂಕಾರಿಕ ಭೇದಗಳನ್ನು ಕ್ರೋಚೆಯ ಸಿದ್ಧಾಂತ ಅಲ್ಲಗಳೆಯುತ್ತದೆ. ಪ್ರತಿಯೊಂದು ಅಭಿವ್ಯಕ್ತಿಯು ಹೊರಗಣ್ಣಿಗೆ ಕಾಣಲಾರದ ಅನುಭವವಾಗಿದೆ. ಉದಾಹರಣೆಗೆ "ಆಂತರಿಕ ಲೋಕ ನಮ್ಮ ವಶವಾದಾಗ, ಸ್ಪಷ್ಟ ಚಿತ್ರವನ್ನೋ, ಆಕೃತಿಯನ್ನೋ ಮಾನಸಿಕವಾಗಿ ಗ್ರಹಿಸಿದಾಗ, ಸಂಗೀತದ ರಾಗವೊಂದನ್ನು ಒಳಗಿವಿಯಲ್ಲಿ ಕೇಳಿದಾಗ, ಅಲ್ಲಿಯೇ ಅಭಿವ್ಯಕ್ತಿಯ ಉಗಮವಾಯಿತು. ಅದು ಅಲ್ಲಿಗೇ ಸಂಪೂರ್ಣ. ಅದು ಅನ್ಯ ಕ್ರಿಯಾ ನಿರಪೇಕ್ಷಣೀಯ. ನಾವು ಅದನ್ನು ಬರೆಯಲು ಯತ್ನಿಸುವುದಾಗಲೀ, ಹೇಳಲು ಬಾಯಿ ಬಿಡುವುದಾಗಲೀ ನಾವಾಗಿ ಮಾಡುವ ಉದ್ದೇಶಪೂರ್ವಕವಾದ ಕ್ರಿಯೆಯೇ (ಅದೇ, ಪುಟ–೮೫)ಆಗಿದೆ.

ಲೋಕದರ್ಶನದಿಂದ ಪಡೆದ ಅನುಭವವೊಂದನ್ನು ಪ್ರತಿಭಾನದ ಮೂಲಕ ಗ್ರಹಿಸಿದರೆ ಅದು ಅಭಿವ್ಯಕ್ತಿಯಾಗುತ್ತದೆಯೇ, ಎಂಬ ಪ್ರಶ್ನೆಯನ್ನು, ಕ್ರೋಚೆಯ 'The expressionistic Art Theory' ಬಗ್ಗೆ ಎತ್ತಲಾಗಿದೆ. ಅಂತರಂಗದಲ್ಲಿ ಅಭಿವ್ಯಕ್ತಿಗೊಂಡ ಅನುಭವ ಬೇರೆಯವರನ್ನು ತಲುಪಲು ಮಾಧ್ಯಮದ

ಅವಶ್ಯಕತೆಯಿದೆ. ಒಳಗಿನ ಅನುಭವವು ಗೋಚರವಾಗುವುದು, ಹೊರಗಣ್ಣಿಗೆ ಕಂಡಾಗ ಮಾತ್ರ "ಕ್ರೋಚೆ ಪ್ರತಿಭಾನ ಗೋಚರವಾದ ಅಭಿವ್ಯಕ್ತಿ ಕಲಾಕೃತಿಯಾಗಿ ರೂಪಗೊಳ್ಳುವಾಗ ಅದೂ ಕೂಡ ಪ್ರತಿಭಾನದ ಕ್ರಿಯೆ ಎಂದು ಹೇಳಿದರೂ, ಅದು ಕೃತಿ ರಚನೆಯಾಗುವ ಕಾಲದಲ್ಲಿ ಅವನ ಬುದ್ಧಿ ಅದನ್ನು ಎಷ್ಟರ ಮಟ್ಟಿಗೆ ಸಂಸ್ಕರಿಸಿ, ತದನಂತರ ಅಭಿವ್ಯಕ್ತಿಗೊಳಿಸುತ್ತದೆ ಎನ್ನುವ ಅಂಶವನ್ನು ನಿರ್ಲಕ್ಷಿಸಿದ್ದಾನೆ" (ಅದೇ. ಪುಟ-೮೭)

ವಿದ್ವಾಂಸರು ಚರ್ಚಿಸುವ ಮಿತಿಗಳೇನೇ ಇದ್ದರೂ, ಮೊದಲ ಬಾರಿಗೆ ಕ್ರೋಚೆ, ಅಭಿವ್ಯಕ್ತಿಯ ಆವಿರ್ಭಾವವು ಮನಸ್ಸಿನ ಭಾವನೆಗೆ, ಅಂತರಂಗಕ್ಕೆ ಸಂಬಂಧಿಸಿದ್ದೆಂದು ಹೇಳಿರುವುದು ಮಹತ್ವದ್ದಾಗಿದೆ. ಪ್ರತಿಭಾನ ಕೇವಲ ಕಲಾಕಾರನದು ಮಾತ್ರವಲ್ಲ, ಅದನ್ನು ಆಸ್ವಾದಿಸುವ ಸಹೃದಯನಲ್ಲೂ ಇದೆ ಎಂಬುದರ ಕಡೆಯೂ ಲಕ್ಷ್ಯವಹಿಸಿದ್ದಾನೆ. ಅಭಿವ್ಯಕ್ತಿಯ ಹೊರ ರೂಪವನ್ನು ಅಲ್ಲಗಳೆಯುತ್ತಾನೆಂದು ತೋರಿದರೂ ಕಲೆಯ ಭಾಗವಾಗಿ, ಮನದಲ್ಲಿ ಮೂಡಿದ ಅಭಿವ್ಯಕ್ತಿಯ ಛಾಯೆಯಾಗಿ ಅದನ್ನು ಒಪ್ಪಿಕೊಳ್ಳುತ್ತಾನೆ ಎಂಬುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಕಲೆಯ ತಿರುಳನ್ನು 'ಭಾವ'ವೆಂದು ಸೂಚಿಸಿದ ಕ್ರೋಚೆ ಭಾವಕ್ಕೆ ವಿಶಿಷ್ಟ ಸ್ಥಾನ ನೀಡಿರುವುದು ಗೋಚರಿಸುತ್ತದೆ.

ವಿ.ಕೃ. ಗೋಕಾಕ್ ಅವರು ಮಗು ಜನ್ಮ ತಳೆಯುವ ಮುನ್ನ ಬೆಳೆಯುವ ಹಂತದ ರೂಪಕದಲ್ಲಿ ಅಭಿವ್ಯಕ್ತಿಯ ಕ್ರಮವನ್ನು ವಿವರಿಸಿದ್ದಾರೆ. ವಾಸ್ತವಿಕ ಬದುಕಿನಲ್ಲಿ ಪಡೆದ ಅನುಭವ ಸ್ಥಾಯಿಯಾಗುವುದು ಮೊದಲನೆಯ ಹಂತದ್ದಾದರೆ, ನಂತರ ಆ ಪಿಂಡಕ್ಕೆ ಕೈ ಕಾಲುಗಳು-ಕಣ್ಣು ಮೂಗು ಇತರ ಅಂಗಗಳು ರೂಪಗೊಳ್ಳುವುದು/ವಿಕಾಸಗೊಳ್ಳುವುದು ಮುಂದಿನ ಹಂತ. ಕೊನೆಯ ಹಂತದಲ್ಲಿ ಕವಿಯಿಂದ/ ಕಲಾಕಾರನಿಂದ ಆ ಕೃತಿ ಅವನಿಂದ ಬಿಡುಗಡೆಗೊಳ್ಳಬೇಕು. ತಾಯಿಯ ಗರ್ಭದೊಳಗೆ ನವಮಾಸದ ಅವಧಿಯಲ್ಲಿ ಪಿಂಡವಾಗಿ ನಂತರ ಶಿಶುವಾಗಿ ಭೂಮಿಗೆ ಹೇಗೆ ಬರುತ್ತದೋ ಹಾಗೆಯೇ ಕೃತಿಯೊಂದರ ಸೃಷ್ಟಿಯೂ ಆಗಿದೆ ಎಂದು ವಿವರಿಸುತ್ತಾರೆ. ಅಭಿವ್ಯಕ್ತಿಯ ಮಾರ್ಗವನ್ನು ಕುರಿತು "ಯಾವುದೇ ಒಂದು ಸಾಲು ಮನಸ್ಸಿನ ಕ್ಷಿತಿಜದ ಮೇಲೆ ಮೂಡುತ್ತದೆ. ಕಲಾಕೃತಿಯ ನಾಟಕ ಇಲ್ಲವೆ ಕಾದಂಬರಿಯಾಗುವುದಿದ್ದರೆ ಯಾವುದೋ ಒಂದು ಸನ್ನಿವೇಶ ಮನಸ್ಸಿನಲ್ಲಿ ಅರಳುತ್ತದೆ. ಕವಿಯು ಅದನ್ನು ಬರೆದು ತೆಗೆಯುತ್ತಾನೆ. ಆಮೇಲೆ ಅದರ ಹಿಂದಿನ ಇಲ್ಲವೆ ಮುಂದಿನ ಸಾಲುಗಳಲ್ಲಾಗಲಿ, ಸನ್ನಿವೇಶಗಳಾಗಲಿ ಜೋಡಿಸಿಕೊಂಡು ಬರುತ್ತವೆ. ಕವಿ ಅವುಗಳ ಲಿಪಿಕಾರನಾಗುತ್ತಾನೆ. ಲೇಖನ ಕಾರ್ಯ ವ್ಯವಸ್ಥಿತವಾಗಿ ಹೇಗೆ ಪ್ರಾರಂಭವಾಗಿ ಆರಂಭವಾಗಿ ಬೆಳೆಯುತ್ತಾ ಹೋಗಬೇಕೋ ಹಾಗೆ ಆಗಬಹುದು. ಇಲ್ಲವೆ ಮಧ್ಯಭಾಗದಲ್ಲಿಯೇ ಧುಮುಕಿ ಅಲ್ಲಿಂದ ಹಿಂದೆ ಮುಂದೆ ಸಾಗಬಹುದು. ಅಭಿವ್ಯಕ್ತಿಯ ಮಾರ್ಗ ಸ್ವಚ್ಛಂದವಾದುದು. ಅದಕ್ಕಾವ ನಿರ್ಬಂಧವೂ ಇಲ್ಲ. ಅದು ಸ್ವಾನಂದದ ಮಾರ್ಗ" (ಕಲಾ ಸಿದ್ಧಾಂತ, ಪುಟ-೧೯) ಎಂದಿದ್ದಾರೆ.

ಭಾಷೆಯ ಮೂಲಕ ಕೃತಿಯನ್ನು ಸೃಷ್ಟಿಸುವುದು ಎಷ್ಟು ಮುಖ್ಯವೋ ಅದು, ಸಾಹಿತ್ಯಾಸಕ್ತರನ್ನು ತಲುಪುವುದೂ ಅಷ್ಟೇ ಮುಖ್ಯವಾಗಿದೆ. ಅಭಿವ್ಯಕ್ತಗೊಂಡ ಸಾಹಿತ್ಯವು, ಸಹೃದಯರನ್ನು ತಲುಪುವ

ವಿಧಾನವೇ ಸಂವಹನವಾಗಿದೆ. ಅಭಿವ್ಯಕ್ತಿ ಹಾಗೂ ಸಂವಹನಗಳೆರಡೂ ಒಂದರೊಳಗೊಂದು ಬೆಸೆದುಕೊಂಡಿವೆ. ಇವುಗಳ ಅನ್ಯೋನ್ಯತೆಯನ್ನು ಕುರಿತು ಯಶವಂತ ಚಿತ್ತಾಲರು "ಭಾಷೆಗಿರುವ ಇಬ್ಬಗೆಯ ಸಾಮರ್ಥ್ಯ, ಒಂದು: ಸುಪ್ತ ಪ್ರಜ್ಞೆಯನ್ನು ಪ್ರತಿಮೆಗಳ ಮೂಲಕ ಪ್ರಕಟಿಸುವ ಸಾಮರ್ಥ್ಯ. ಇದನ್ನೇ ನಾನು 'ಅಭಿವ್ಯಕ್ತಿ'ಯೆಂದು ಕರೆಯುತ್ತೇನೆ. ಇನ್ನೊಂದು: ಹೀಗೆ ಪ್ರತಿಮೆಯಾಗಿ ಮೂಡಿದ್ದನ್ನು ಉಳಿದವರೊಂದಿಗೆ ಹಂಚಿಕೊಂಡು, ಹಂಚಿಕೊಳ್ಳುವುದರ ಮೂಲಕವೇ ಅದನ್ನು ಜಾಗೃತ ಪ್ರಜ್ಞೆಯಲ್ಲಿ ಅರಗಿಸಿಕೊಳ್ಳುವ ಸಾಮರ್ಥ್ಯ. ಇದನ್ನೇ ನಾನು 'ಸಂವಹನ' ಎಂದು ಕರೆಯುತ್ತೇನೆ. ಸುಪ್ತ ಪ್ರಜ್ಞೆಯ ಆವಿಷ್ಕಾರಕ್ಕೆ ಭಾಷೆ ನಿರ್ಮಿಸಿದ ಪ್ರತಿಮೆಗಳಲ್ಲಿ ಉಳಿದವರೊಂದಿಗೆ ಹಂಚಿಕೊಳ್ಳುವುದನ್ನು ಸಾಧ್ಯ ಮಾಡುವ ಕೊಂಡಿಗಳಿವೆ. ಈ ಕೊಂಡಿಗಳ ಮೂಲಕ ತನ್ನ ಅಂತರಂಗಕ್ಕೂ, ಪರಿಸರಕ್ಕೂ ನಡುವೆ ಲೇಖಕ ಸಂಬಂಧ ಜೋಡಿಸುತ್ತಾನೆ. ಆ ಸಂಬಂಧವನ್ನು ಜೋಡಿಸುವುದರಲ್ಲೇ ಅಥವ ಜೋಡಿಸುವುದನ್ನು ತಪ್ಪಿಸದೇ ಇರುವುದರಲ್ಲೇ ಸೃಷ್ಟಿ ಕ್ರಿಯೆಯ ನಿಜವಾದ ಆನಂದವಿರುತ್ತದೆ; ತನಗೆ 'ಅಭಿವ್ಯಕ್ತಿ'ಸಲೇಬೇಕಾದ ಭಾವನೆಯಿಂದ ವಿಮೋಚನೆ ಪಡೆಯುವುದೇ ಹೀಗೆ ಹಂಚಿಕೊಳ್ಳುವುದರಿಂದ, ಅದರ 'ಸಂವಹನೆ'ಯಿಂದ. (ಸಾಹಿತ್ಯ ಸೃಜನಶೀಲತೆ ಮತ್ತು ನಾನು, ಪುಟ-೮೩) ಅಭಿವ್ಯಕ್ತಿಯ ಸಂವಹನದ ಕುರಿತು ಮುಂದೆ ಚರ್ಚಿಸಲಾಗುವುದು.

### ೪.೩ ಮಹಿಳೆಯರ ಅಭಿವ್ಯಕ್ತಿ ಕ್ರಮ ಒಳಗೊಂಡ ತಾಂತ್ರಿಕ ಮತ್ತು ತಾತ್ವಿಕ ಅಂಶಗಳು

ಬರಹವು: ಭಾಷೆ, ವಸ್ತು, ಆಶಯ, ಆಕೃತಿ, ಶೈಲಿ, ತಂತ್ರ, ಬರಹಗಾರರು, ಓದುಗ ವರ್ಗ ಮುಂತಾದ ಅಂಶಗಳನ್ನು ಕ್ರೂಢೀಕರಿಸಿಕೊಳ್ಳಲಾಗಿದೆ. ಜತೆಗೆ ಸಣ್ಣಕತೆ, ಕಾದಂಬರಿ, ಕಾವ್ಯ, ನಾಟಕ ಇತ್ಯಾದಿ ಪ್ರಕಾರಗಳನ್ನೂ ಪ್ರಬಂಧದಲ್ಲಿ ಬಳಸಿಕೊಳ್ಳಲಾಗಿದೆ.

### ಅ) ಭಾಷೆ ಮತ್ತು ಶೈಲಿ

ಭಾಷೆ ಒಂದು ಸಾಮಾಜಿಕ ಘಟಕ. ಭಾಷೆಯನ್ನು ಬಳಸಿದ ಬರಹವೆಲ್ಲವೂ ಸಾಹಿತ್ಯವಾಗುವುದಿಲ್ಲ. ಬದಲಿಗೆ, ಸಾಹಿತ್ಯ ಕೃತಿಯೊಂದು ಅರ್ಥಪೂರ್ಣವಾದ, ವಿಶಿಷ್ಟ ಅನುಭವವನ್ನು ಭಾಷೆಯ ಮೂಲಕ ಕಟ್ಟಿಕೊಡುತ್ತದೆ. ಬರಹಗಾರರು ಭಾಷೆಯನ್ನು ತಮ್ಮ ಅನುಭವದ ಅಭಿವ್ಯಕ್ತಿಗೆ ಬಳಸುತ್ತಾರೆ. ಕತೆಯಲ್ಲಿ ಬಳಕೆಯಾಗುವಾಗ; ಕಾದಂಬರಿಯನ್ನು ಬೆಳೆಸುವಾಗ; ಕಾವ್ಯವನ್ನು ಕಟ್ಟುವಾಗ; ನಾಟಕವನ್ನು ರಚಿಸುವಾಗ ಭಾಷೆ ಭಿನ್ನ ರೀತಿಯಲ್ಲಿ ಬಳಕೆಯಾಗುತ್ತದೆ.

ಶೈಲಿಯನ್ನು ಸಾಮಾನ್ಯ ಅರ್ಥದಲ್ಲಿ 'ವಿಶಿಷ್ಟ ಲಕ್ಷಣ'ವಾಗಿ ಗುರುತಿಸಲಾಗಿದೆ. ಕವಿ ಮತ್ತು ಕೃತಿಗಳನ್ನು ಕುರಿತು ಚರ್ಚಿಸುವಾಗ ಆಯಾ ಕವಿಗಳ ಭಾಷಿಕ ವೈಶಿಷ್ಟ್ಯಗಳನ್ನು ಆಯಾ ಕವಿಗಳ ಶೈಲಿ ಎಂದು ಕರೆಯಲಾಗಿದೆ. "ಸಾಹಿತ್ಯ ಕೃತಿಯ ಭೌತಿಕ ಅಸ್ತಿತ್ವವೇ ಭಾಷಿಕ. ಭಾಷೆಯ ಒಂದು ವಿಶಿಷ್ಟ ಉಪಯೋಗಗಳಲ್ಲಿ ಸಾಹಿತ್ಯ ಕೃತಿಗಳಲ್ಲಿ ನಿಯುಕ್ತವಾಗುವುದು ಒಂದು. ಸಾಮಾನ್ಯ ಗ್ರಹಿಕೆಗೂ ನಿಲುಕುವ ವಿಚಾರವೆಂದರೆ ಸಾಹಿತ್ಯ ಕೃತಿಗಳ ಭಾಷೆ ನಿಯಮದ ಭಾಷೆಗಿಂತ ಭಿನ್ನವಾಗಿರುವುದು. ಈ ಭಿನ್ನತೆ

ಎಲ್ಲಿದೆ ಏಕಿದೆ ಎಂಬುದನ್ನು ವಿವರಿಸುವುದಕ್ಕೆ ಸಾಧ್ಯವಿಲ್ಲದವರೂ ಭಿನ್ನತೆ ಇರುವುದನ್ನು ಗುರುತಿಸಬಲ್ಲರು. ಈ ಭಿನ್ನ ಬಳಕೆ ಬಾಹ್ಯ ಒತ್ತಡಗಳಿಂದ ಆದುದಲ್ಲ. ಅಲ್ಲದೆ ಅಲ್ಲಿನ ವ್ಯತ್ಯಾಸಗಳು ಆಕಸ್ಮಿಕವೆಂದೂ ಹೇಳುವಂತಿಲ್ಲ. ಏಕೆಂದರೆ ವ್ಯತ್ಯಾಸಗಳ ಸ್ವರೂಪ ಬಹುಮಟ್ಟಿಗೆ ನಿಯತವಾಗಿದ್ದು ನಿರ್ದಿಷ್ಟ ನಿಯೋಗಗಳನ್ನು ಪಡೆದಿರುತ್ತದೆ. (ಶೈಲಿ ಶಾಸ್ತ್ರ, ಪುಟ-೦೩)

ಎಸ್.ವಿ.ರಂಗಣ್ಣನವರು ಶೈಲಿ ಶಾಸ್ತ್ರದ ಬಗ್ಗೆ ದೀರ್ಘವಾಗಿ ಚರ್ಚಿಸಿದ್ದಾರೆ. 'ಆಲೋಚನೆಯ ಉಡುಗೆ ಶೈಲಿ' ಎಂಬ ವ್ಯಾಖ್ಯಾನದಿಂದ ಹಿಡಿದು ಶೈಲಿ ಎಂಬುದು 'ಲೇಖಕನ ಅಂಗಿಯಲ್ಲ, ತೊಗಲು'; 'ಶೈಲಿ ವದನ ತೇಜಸ್ಸಿನಂತೆ'; 'ಕವಿಯೇ ಶೈಲಿ'; 'ಶೈಲಿ ಮಾನವನ ಆತ್ಮ' ಎಂಬ ಪಾಶ್ಚಾತ್ಯ ವಿದ್ವಾಂಸರ ವ್ಯಾಖ್ಯಾನಗಳನ್ನು ವಿಶ್ಲೇಷಣೆ ಮಾಡಿದ್ದಾರೆ. "ನಾನಾ ಕಾರಣಗಳು ಒಟ್ಟಿಗೆ ಸೇರಿ ಸಹಕರಿಸಿ ತಮ್ಮ ತಮ್ಮ ಪ್ರಮಾಣಗಳಲ್ಲಿ ಪ್ರಭಾವವನ್ನು ಬೀರುವುದರ ಫಲವಾಗಿ ಶೈಲಿ ಉದ್ಭವಿಸುತ್ತದೆ. ಅವೆಲ್ಲವನ್ನೂ ಎಣಿಸಿ ಹೇಳಲು ಅಸಾಧ್ಯ. ಹಾಗೆ ಎಣಿಸಿ ಗುಣಿಸುವುದರಿಂದ ಉಪಯೋಗವೂ ಕಡಿಮೆ. ಅವನ್ನು ಹೀಗೆ ಸ್ಥೂಲವಾಗಿ ಮೂರು ಗುಂಪು ಮಾಡಬಹುದು: ಜನಾಂಗ, ತಲೆಮಾರು, ವ್ಯಕ್ತಿಬಲ. ಶೈಲಿಯನ್ನು ಸೃಷ್ಟಿಸಬಲ್ಲ ಎಲ್ಲ ದ್ರವ್ಯಗಳನ್ನೂ ಈ ಮೂರು ವಿಭಾಗಗಳಲ್ಲಿ ಅಡಕ ಮಾಡುವುದು ಕಷ್ಟವಲ್ಲ" (ಶೈಲಿ ೧, ೨, ೩, ಪುಟ-೧೮) ಎಂದು ಬರಹದ ಶೈಲಿಯನ್ನು ವಿಭಾಗಿಸುವ ರಂಗಣ್ಣನವರು "ಶೈಲಿಗೆ ನೆಲೆಗಟ್ಟು, ಕಂಬ, ಗೋಡೆ ಮಾಡ ಕಳಶ ಗಿಳಶವೆಲ್ಲವೂ ಸಾಹಿತಿಯ ವ್ಯಕ್ತಿತ್ವ, ಕವಿಯಂತೆ ಶೈಲಿ, ಶೈಲಿಯಿಂದ ಕವಿ" ಎಂಬ ತೀರ್ಮಾನಕ್ಕೆ ಬರುತ್ತಾರೆ.

ಡಿ.ಎ.ಶಂಕರ್‌ರವರು ಶೈಲಿಯನ್ನು ಕುರಿತು "ಯಾವ ಬರಹಗಾರ ತನ್ನ ಭಾಷೆಯ ವ್ಯಾಕರಣ, ಶಬ್ದಾರ್ಥ, ರೀತಿ ಮತ್ತು ಜಾಯಮಾನಗಳನ್ನು ಲಕ್ಷ್ಯದಲ್ಲಿಟ್ಟುಕೊಂಡೇ ಅವಕ್ಕೆ ತನ್ನ ವಯಕ್ತಿಕ ಭಾವಗಳ ಒತ್ತಡಕ್ಕೆ ತಕ್ಕಂತೆ ಹೊಸ ವ್ಯಾಪ್ತಿ ಕೊಡುತ್ತಾನೆ. ಅವನಲ್ಲಿ 'ಶೈಲಿ' ಎನ್ನುವುದಿದೆ ಎಂದು ಹೇಳಬಹುದು. ಅಂದರೆ, ಬರಹಗಾರ ಶಬ್ದಾರ್ಥಗಳ ಜೊತೆ ಕಾದಾಡುತ್ತಲೇ ತನ್ನ ಶೈಲಿಯನ್ನು ಸೃಷ್ಟಿಸಿಕೊಳ್ಳಬೇಕು" (ದಶವಾರ್ಷಿಕ ವಿಮರ್ಶೆ ೧೯೭೪-೮೩, ಪುಟ-೧೩೦)

ಕಾವ್ಯಕ್ಕೆ ತನ್ನದೇ ಆದ ವಿಶಿಷ್ಟವಾದ ಭಾಷೆಯಿದೆ ಎಂಬುದನ್ನು ಅನೇಕ ಆಧಾರಗಳಿಂದ ಸಮರ್ಥಿಸಲಾಗಿದೆ. ಕಾವ್ಯವನ್ನು ಕಟ್ಟುವಾಗ ಪದಗಳ ಜೋಡಣೆ, ಅದರ ವಿನ್ಯಾಸ ಹೊಸದೊಂದು ಅರ್ಥವನ್ನು ಕಟ್ಟಿಕೊಡುತ್ತದೆ. ಸಂಗೀತಕ್ಕೆ ಸ್ವರ; ಶಿಲ್ಪಿಗೆ ಕಲ್ಲು; ಚಿತ್ರಕಾರನಿಗೆ ಬಣ್ಣ ಹೇಗೆ ಮಾಧ್ಯಮವಾಗಿದೆಯೋ ಹಾಗೆ ಕವಿಗೆ, ಭಾಷೆಯು ಅಭಿವ್ಯಕ್ತಿಯ ಮಾಧ್ಯಮವಾಗಿದೆ.

### ಆ) ಮಹಿಳೆಯ ಅಭಿವ್ಯಕ್ತಿ ಮತ್ತು ಭಾಷೆ

ಮೇಲೆ ತಿಳಿಸಿದ ಭಾಷೆ-ಶೈಲಿಗಳ ವಿಚಾರಗಳೆಲ್ಲವೂ ಪುರುಷ ನಿರ್ಮಿತ ವ್ಯಾಖ್ಯಾನಗಳಾಗಿವೆ. ಸಾಹಿತ್ಯ ನಿರ್ಮಿತಿಯಲ್ಲಿ ಮಹಿಳೆಯರ ಭಾಷೆ ಮತ್ತು ಶೈಲಿಗಳು ಹೇಗಿರುತ್ತವೆ ಎನ್ನುವುದನ್ನು ವಿಶ್ಲೇಷಿಸುವುದಕ್ಕೂ ಮುನ್ನ ಮಹಿಳೆಯರ ಭಾಷೆಯೊಂದಿದೆಯೆ ಎನ್ನುವ ಪ್ರಶ್ನೆಯನ್ನು ಪರಿಶೀಲಿಸೋಣ.

ಸಮಾಜದ ವ್ಯವಸ್ಥೆಯಲ್ಲಿ ಪುರುಷರ ಮತ್ತು ಮಹಿಳೆಯರಿಬ್ಬರ ಭಾಷಾ ಬಳಕೆಯಲ್ಲಿ ಭಿನ್ನತೆಯಿದೆ. ಮತ್ತು ಆ ಭಿನ್ನತೆ ತಾರತಮ್ಯದಿಂದ ಕೂಡಿದೆ ಎಂಬುದು ವಿದಿತ ಸಂಗತಿ. ಇವರಿಬ್ಬರ ನಡುವಿರುವ ಭಾಷಾ ಲಕ್ಷಣಗಳನ್ನು ಕೆ.ವಿ.ನಾರಾಯಣರು ಹೀಗೆ ಮಂಡಿಸಿದ್ದಾರೆ. ಗಂಡಸರು ಮಾತನಾಡುವ ಲಕ್ಷಣಗಳನ್ನು 'ರಿಪೋರ್ಟ್' ಎಂದು ಕರೆಯಲಾಗಿದೆ. ಕಾರಣ ಅವರು ಯಾರೊಂದಿಗಾದರೂ ಸಂವಹನ ನಡೆಸುತ್ತಿರುವಾಗ, ತಮ್ಮೊಳಗಿನ ವ್ಯಕ್ತಿತ್ವವನ್ನು, ಮನಃಸ್ಥಿತಿಯನ್ನು ಹೊರಗಿಟ್ಟು, ಒಂದು ರೀತಿಯ ವರದಿ ನೀಡುವಂತೆ ಮಾತನಾಡುತ್ತಿರುತ್ತಾರೆ. ಜತೆಗೆ ಅವರ ಮಾತುಗಳೆಲ್ಲವು ನಿರ್ಧಾರದ ನೆಲೆಯಲ್ಲಿರುತ್ತವೆ. ಆದರೆ ಮಹಿಳೆಯರ ಸಂವಹನದ ಲಕ್ಷಣ ಇದಕ್ಕೆ ವ್ಯತಿರಿಕ್ತವಾಗಿದ್ದು, ಅದನ್ನು 'ರ್‍ಯಾಪೋರ್ಟ್' ಎಂದು ವ್ಯಾಖ್ಯಾನಿಸಲಾಗಿದೆ. ಅಂದರೆ, ಮಹಿಳೆಯರ ಸಂವಹನ ಪ್ರಕ್ರಿಯೆಯಲ್ಲಿ ಪರಸ್ಪರ ಸಂಬಂಧವನ್ನು ಕಲ್ಪಿಸಿಕೊಳ್ಳುವ ರೀತಿಯಲ್ಲಿರುತ್ತದೆ. ಯಾರೊಂದಿಗೆ ಮಾತನಾಡುತ್ತಿರುತ್ತಾಳೋ ಅವರ ಅಭಿಪ್ರಾಯವೂ ಮುಖ್ಯವೆಂದು ಪರಿಗಣಿಸುತ್ತಾಳೆ. ತನ್ನ ಮಾತನ್ನು ಮುಂದುವರೆಸಲು ಅವರ ಪ್ರತಿಕ್ರಿಯೆಯ ನಿರೀಕ್ಷೆ ಮುಖ್ಯವಾಗಿರುತ್ತದೆ. (ನೋಡಿ: 'ಹೆಣ್ಣಿನ ಭಾಷಾ ಸಾಮರ್ಥ್ಯ ಕಳೆದು ಹೋಗುವ ಬಗೆ', ಹೆಣ್ಣು ಮತ್ತು ಭಾಷೆ).

ಗಂಡಸರ ಭಾಷೆಯನ್ನು ಶಿಷ್ಟವೆಂದೂ, ಹೆಂಗಸರ ಭಾಷೆಯನ್ನು ಪರಿಶಿಷ್ಟವೆಂದೂ ಗುರುತಿಸುತ್ತ, "ಶಿಷ್ಟವಾಗಿರುವುದು ಗಂಡಿನ ಭಾಷೆ, ಸಾರ್ವತ್ರಿಕವಾದದ್ದು. ಯಾವುದೇ ನಿರೂಪಣೆಯಾದರೂ ಅದು ನೇರವಾಗಿ ಗಂಡಸಿಗೆ ಅನ್ವಯವಾಗುತ್ತದೆ. ಹೆಂಗಸಿಗೆ ಅನ್ವಯವಾಗುವುದಿಲ್ಲ. ಮತ್ತೆ ಹೆಂಗಸಿಗೆ ಅನ್ವಯವಾಗುವಂತೆ ವ್ಯಾಖ್ಯಾನ ಮಾಡಬೇಕಾಗುತ್ತದೆ. ಅದು ಪರಿಶಿಷ್ಟ. ಸೇರ್ಪಡೆ. ಆಮೇಲೆ ಬಂದು ಸೇರಬೇಕಾಗಿರುವಂತಹದು. ಜೋಡಣೆಯಾಗಿರಬೇಕಾದಂತಹದು" (ಅದೇ, ಪುಟ-೧೧) ಎಂದಾಗ ಇಂತಹ ಭಾಷೆಯನ್ನು ತಮ್ಮ ಚಹರೆ ಎಂದು ಭಾವಿಸಿ ಮುನ್ನಡೆಯಬೋಕೋ, ಅಥವಾ ಇಂತಹ ತಾರತಮ್ಯವನ್ನು ನಿವಾರಿಸುವತ್ತ ಹೆಜ್ಜೆಯಿಡಬೇಕೋ ಎಂಬ ಪ್ರಶ್ನೆಯನ್ನು ಮುಂದಿಟ್ಟಿದ್ದಾರೆ.

ಮಹಿಳೆಯರ ಭಾಷೆಯ ಕುರಿತಾಗಿ ಹೇಳುವಾಗ ಮೌನವಾಗುವಿಕೆ, ಮೂಕವಾಗುವಿಕೆ, ಮುಚ್ಚುಮರೆಯಾಗಿರುವಿಕೆ, ಸ್ವಗತವು ಆಕೆಯ ಮುಖ್ಯ ಲಕ್ಷಣವಾಗಿದೆ ಎಂದು ಹೇಳಲಾಗುತ್ತದೆ. ಈ ಮೌನಕ್ಕಿರುವ ಕಾರಣಗಳೇನು ಎಂಬುದನ್ನು ವಿಶ್ಲೇಷಿಸಿಕೊಳ್ಳುವುದು ಸಾಧ್ಯವಾದಲ್ಲಿ ಮಹಿಳೆಯರ ಸಾಹಿತ್ಯದ ಅಭಿವ್ಯಕ್ತಿಯ ಕ್ರಮವನ್ನು ಗುರುತಿಸಿಕೊಳ್ಳಲು ಸಹಾಯವಾಗುತ್ತದೆ. ಗಂಡಸರು ತಮ್ಮ ಉದ್ದೇಶಕ್ಕೆ ಅನುಗುಣವಾಗಿ ರೂಪಿಸಿಕೊಂಡಿರುವ ಭಾಷೆಯ ಮಜಲುಗಳನ್ನು, ಹೆಂಗಸರೂ ಹಾಗೆಯೇ ಬಳಸಬೇಕೆಂಬ ಒತ್ತಾಯ ತಂದಾಗ, ಮೌನವೇ ಆಕೆಯ ಉತ್ತರವಾಗುತ್ತದೆ.

"ಭಾಷೆಯ ಬಳಕೆಯು ಯಾವಾಗ ಆಚರಣೆಯಾಗಿರುತ್ತದೋ ಅಂಥಲ್ಲಿ ಹೆಣ್ಣು ತನ್ನ ಭಾಷಾ ಬಳಕೆಗೆ ನಿರ್ಬಂಧ ಹಾಕಿಕೊಳ್ಳುತ್ತಾಳೆ. ಇದೊಂದು ರೀತಿಯ ನಿರಾಕರಣೆ. ಏಕೆಂದರೆ ಮಾತಾಡಿದರೆ ಅವಕಾಶದ ದುರುಪಯೋಗವಾಗುತ್ತದೆ. ಅಂದರೆ ಆಕೆ ಭಾಷೆಯ ಬಳಕೆಯಲ್ಲಿ, ಮಾತನಾಡುವಲ್ಲಿ ನಿರ್ಬಂಧ ಹಾಕಿಕೊಳ್ಳುತ್ತಾಳೆ. ಆದರೆ ಆಕೆ ಮಾತನ್ನು ಕೇಳುವುದರ ಮೇಲೆ ನಿರ್ಬಂಧ ಹಾಕಿಕೊಳ್ಳುವುದಿಲ್ಲ.

ಭಾಷೆ ಹೊರಗಿನಿಂದ ಆಕೆಯೊಳಗೆ ಪ್ರವೇಶಿಸುತ್ತದೆ. ಆದರೆ ಹೀಗೆ ಕೇಳಿಸಿಕೊಂಡ ಮಾತಿಗೆ ತನ್ನ ಮಾತಿನ ಮುಖಾಂತರ ಪ್ರತಿಕ್ರಿಯೆ ನೀಡುವುದಿಲ್ಲ ಅಷ್ಟೇ. ಅಂದರೆ ಹೆಂಗಸು ತನ್ನ ಒಳಗಡೆ ತಾನು ತನ್ನ ಪಾಡಿಗೆ ತಾನು ಮಾತನಾಡಿಕೊಳ್ಳುವ ಹೊಸ ತಂತ್ರಗಾರಿಕೆ ನಿರ್ಮಾಣವಾಗುತ್ತದೆ. ಅಂದರೆ ಹೆಂಗಸು ಮೌನವಾಗಿದ್ದಾಗ, ಆಕೆಗೆ ಅವಕಾಶ ನಿರ್ಮಿಸಿದಾಗ, ಅಲ್ಲಿ ಹೊಸ ಜಗತ್ತಿನ ನಿರ್ಮಾಣವಾಗುತ್ತದೆ. ಆ ಮೂಲಕ ಅವಳೊಳಗೆ ಒಂದು ಮಾತುಗಾರಿಕೆ ಬೆಳೆಯುತ್ತದೆ" (ಅದೇ, ಪುಟ-೧೭)

**ಇ) ನಿರೂಪಣಾ ಕ್ರಮ**

ಲ್ಯಾಟಿನ್ ಭಾಷೆಯ 'ಹೇಳು' ಎಂಬ ಅರ್ಥದ 'ನರೇಟಿವ್' ಪದದಿಂದ ರೂಪಿತವಾಗಿರುವ ನಿರೂಪಣೆಯ ವಿಧಾನವು: ಕೃತಿಯು ಯಾವ ಸಂಗತಿಯನ್ನು ಹೇಳಲು ಬಯಸುತ್ತದೋ, ಆ ಸಂಗತಿಗಳ ನಡುವೆ ಸಂಬಂಧವನ್ನು ಕಲ್ಪಿಸುತ್ತಿರುತ್ತದೆ. ಓದುಗ ಮತ್ತು ಕೃತಿಯ ನಡುವೆ ಬಾಂಧವ್ಯವನ್ನು ಬೆಳೆಸುವಲ್ಲಿ ನಿರೂಪಕನ ಪಾತ್ರ ಪ್ರಮುಖವಾಗಿದೆ.

ನಿರೂಪಣಾ ಕ್ರಮದಲ್ಲಿ ಕತೆಯೊಂದರ ವಿವಿಧ ಘಟನೆಗಳು ಹೇಗೆ ಒಂದುಗೂಡುತ್ತವೆ ಎಂಬುದಕ್ಕೆ ಗಮನ ನೀಡಲಾಗಿರುತ್ತದೆ. ಕತೆಯ ಚೌಕಟ್ಟು ಮತ್ತು ಅದರೊಳಗೆ ವಿವಿಧ ಪಾತ್ರಗಳು ಹೇಗೆ ಸಂಬಂಧ ಸ್ಥಾಪಿಸಿಕೊಂಡಿವೆ ಎನ್ನುವುದನ್ನು ನಿರೂಪಣೆ ಗಮನಿಸುತ್ತದೆ. ಕ್ರಿಯೆಯ ಕಾಲಾನುಕ್ರಮ ಮತ್ತು ತರ್ಕಬದ್ಧ ನಿರೂಪಣೆ ಇರುತ್ತದೆ. ಕಥೆಗೆ ಅರ್ಥದ ಮತ್ತು ರಚನೆಯ ಎರಡು ಆಯಾಮಗಳಿರುತ್ತವೆ. ಕಥನ ಕ್ರಮವನ್ನು ವಿಳಂಬಗೊಳಿಸಿ ಪರಿಚಿತ ಸಾಮಾನ್ಯ ಗ್ರಹಿಕೆಗೆ ತಡೆಯನ್ನು ಒಡ್ಡುವ ಎಲ್ಲ ಅಂಶಗಳೂ, ಉಪ ಕಥೆಗಳು, ಕಾದಂಬರಿಯ ವಿವಿಧ ಅಂಗಗಳ ಸ್ಥಳಪಲ್ಲಟ, ಓದುಗರನ್ನು ಕುರಿತು ಆಡುವ ಮಾತುಗಳು ಇತ್ಯಾದಿ ಕಥನ ಸಂವಿಧಾನಕ್ಕೆ ಸೇರಿವೆ.

ಲೇಖಕ ತನ್ನದೇ ಧ್ವನಿಯಲ್ಲಿ ತಾನೇ ನಿರೂಪಿಸುತ್ತ ಹೋಗಬಹುದು; ಓದುಗರ ಆತ್ಮೀಯ ಗೆಳೆಯನಂತೆ, ತಮಾಷೆ ಮಾಡುವ ಜೊತೆಗಾರನಂತೆ ಇಲ್ಲವೆ ತಿರಸ್ಕಾರ ತುಂಬಿದ ಶತ್ರುವಿನಂತೆ ಮುಖವಾಡ ಧರಿಸಿದ ಪಾತ್ರವಾಗಬಹುದು; ಇಲ್ಲವೆ ಕಥೆ ಹೇಳಲು ಬರುವ ಪಾತ್ರ ಅಥವ ಪಾತ್ರಗಳಾಗಬಹುದು. ನಿರೂಪಕನ ಈ ಗುಣಗಳಿಂದಾಗಿ ನಿರೂಪಣೆಗೆ ಎರಡು ಬಗೆಯ ಸಂಮಿಶ್ರಿತ ಲಕ್ಷಣಗಳು ದೊರೆಯುತ್ತವೆ. ಒಂದು ಕೃತಿಯ ತಿರುಳಿನ (ಕಂಟೆಂಟ್) ಅಂಶ-ಅಂದರೆ ಕೃತಿಯ ವಿಷಯವಾದ ಘಟನೆ, ಸಂಗತಿಗಳನ್ನು ವ್ಯವಸ್ಥೆಗೊಳಿಸುವ, ಕೂಡಿಸುವ, ಸಂಬಂಧ ಸ್ಥಾಪಿಸುವ ಅಂಶ. ಇನ್ನೊಂದು ಲೇಖನ ತಂತ್ರದ ಅಂಶ. ಅಂದರೆ ಓದುಗರಿಗೆ ಹೇಳುವುದನ್ನು ಹೇಗೆ ಹೇಳಬೇಕೆಂಬ ಅಂಶವನ್ನು ಒಳಗೊಂಡಿದೆ.

ಬರಹಗಾರ ಮತ್ತು ಓದುಗರ ನಡುವಿನ ಸಂಬಂಧವನ್ನು ವಿಶ್ಲೇಷಿಸುವಾಗ ಯಾಕಬ್‌ಸನ್‌ನ ನಕ್ಷೆಯನ್ನು ನಿರೂಪಿಸಲಾಗುತ್ತದೆ.

ಸಂದರ್ಭ

ಸಂದೇಶ

ವಕ್ತೃ ———————————— ಶ್ರೋತೃ

ಸಂಪರ್ಕ

ಸಂಕೇತ

ವಕ್ತೃವಿನ ಸಂದೇಶ ಶ್ರೋತೃವಿಗೆ ತಲುಪುವುದಕ್ಕೆ ಮೌಖಿಕ, ಲಿಖಿತ, ಎಲೆಕ್ಟ್ರಾನಿಕ್ ಇತ್ಯಾದಿ ಯಾವುದೇ ರೀತಿಯ ಒಂದು ಸಂಪರ್ಕ ಇರಬೇಕು. ಅದು ಮಾತು, ಅಂಕಿ, ಬರವಣಿಗೆ ಇತ್ಯಾದಿ ಯಾವುದೇ ಒಂದು ಸಂಕೇತದಲ್ಲಿರಬೇಕು. ವಕ್ತೃ ಮತ್ತು ಶ್ರೋತೃವಿನ ನಡುವೆ ಸಮಾನವಾಗಿ ಅರ್ಥವಾಗುವ ಒಂದು ಸಂದರ್ಭ ಸೃಷ್ಟಿಯಾಗಿರಬೇಕು. ಆಗ ಸಂವಹನ ಪ್ರಕ್ರಿಯೆಯು ಘಟಿಸಿ ಸಂದೇಶದ ಅರ್ಥವು ರವಾನೆಯಾಗುತ್ತದೆ. ಈ ಸೂತ್ರವನ್ನು ಬರಹಗಾರರು ಮತ್ತು ಓದುಗರ ನಡುವೆ ಇರುವ ಸಂಬಂಧಕ್ಕೂ ಬಳಸಲಾಗುತ್ತದೆ.

ಸಂವಹನ ಶಬ್ದ ಮೂಲ ರೂಪವಾದ 'ವಹ್' ಧಾತು, ಭಾವವನ್ನು ಒಬ್ಬರಿಂದ ಮತ್ತೊಬ್ಬರಿಗೆ ತಲುಪಿಸುವದನ್ನು ಸೂಚಿಸುತ್ತದೆ. ಇದು ಸಾಹಿತ್ಯ ಕೃತಿ ಮತ್ತು ಓದುಗರ ನಡುವೆ ಮಾತ್ರವಲ್ಲ. ಮಾತುಗಾರರು–ಕೇಳುಗರು; ಹಡುಗಾರರು–ಶ್ರೋತೃಗಳು; ನಟ ಹಾಗೂ ಪ್ರೇಕ್ಷಕರ ನಡುವಿನ ಭಾವ ವರ್ಗಾವಣೆಯನ್ನು ಕೂಡ ಹೇಳುವ ಅಭಿವ್ಯಕ್ತಿ ಲೋಕದ ಪರಿಭಾಷೆ ಆಗಿದೆ. ಕಾರಣ ಈ ಸಂವಹನ ಪ್ರಕ್ರಿಯೆಯಲ್ಲಿ ಕೃತಿಕಾರ ಹಾಗೂ ಓದುಗರಿಬ್ಬರ ಹೊಣೆಯೂ ಇದೆ. ಸಂವಹನದಲ್ಲಿ ಅಡೆತಡೆ ಉಂಟಾದರೆ, ಅದು ಕೇವಲ ಓದುಗರಲ್ಲಿ ಮಾತ್ರವಲ್ಲದೆ ಕೃತಿಯಲ್ಲೂ ಇದೆ ಎಂದರ್ಥ.

### ಈ) ವಸ್ತು ಮತ್ತು ತಂತ್ರ

ವಸ್ತು ಸಾಹಿತ್ಯ ಕೃತಿಯ ಧೋರಣೆ ಮತ್ತು ವಿಚಾರಗಳನ್ನು ಸೂಚಿಸುತ್ತದೆ. ವಸ್ತು ವಿಷಯದ ಒಂದು ಅಂಗವಾಗಿದು, ಘಟನೆ, ಸಂಕೇತ, ಪ್ರತಿಮೆ, ನುಡಿಗಟ್ಟುಗಳಲ್ಲಿ ಪರೋಕ್ಷವಾಗಿ ಅಭಿವ್ಯಕ್ತವಾಗುತ್ತಿರುತ್ತದೆ. ವಸ್ತು ಕೃತಿಯ ಕಥಾ ಭಾಗವೂ ಆಗಿದೆ. ಸಾಹಿತ್ಯ ಕೃತಿಯಲ್ಲಿ ವಸ್ತುವಿನ ಮೂಲಕ ಸಾಗುವ ಅನುಭವ ಮುಖ್ಯವಾಗುತ್ತದೆ. ಕಥನ ಕ್ರಮದಲ್ಲಿ ಕೆಲವು ಘಟನೆಗಳಿರುತ್ತವೆ. ಇದು ಅದರ ಕತೆ. ಈ ಕಥೆಯನ್ನು ಸುಲಭವಾಗಿ ಸಂಗ್ರಹಿಸಿ ಹೇಳಬಹುದು. ಕಥಾ ವಸ್ತುವಿನ ಹಿಂದೆ ಒಂದು ನಂಬಿಕೆ, ತತ್ವ, ಬದುಕಿನ ಬಗೆಗಿನ ತಿಳುವಳಿಕೆ ಇರುತ್ತದೆ. ಇದನ್ನು ಕತೆಯಿಂದ ಬೇರ್ಪಡಿಸಿ ಅಮೂರ್ತ ರೂಪದಲ್ಲಿ ಸಂಗ್ರಹಿಸಿ ಹೇಳಬಹುದು. ಕೇವಲ ವಸ್ತುವಿದ್ದರೆ ಸಾಲದು. ಕೃತಿಯಲ್ಲಿನ ವಸ್ತುವನ್ನು ಆಂತರಿಕವಾಗಿ ಸಂಘಟಿಸುವ ವಿಧಾನವಾಗಿ ತಂತ್ರ ಬಳಕೆಯಲ್ಲಿದೆ.

ಕೃತಿ ಒಂದು ವಿಶಿಷ್ಟ ರೀತಿಯಲ್ಲಿ ಮುಂದುವರೆಯುತ್ತದೆ. ನಿಜವಾಗಿ ಒಂದು ಸಾಹಿತ್ಯ ಕೃತಿಯನ್ನು ಓದುವುದು ಎಂದರೆ ಒಂದು ಬಗೆಯ ಪ್ರಯಾಣ. ಈ ಪ್ರಯಾಣದಲ್ಲಿ ಒಂದು ನಿಯಂತ್ರಣವಿದೆ. ಈ ನಿಯಂತ್ರಣವೇ ಅದರ 'ತಂತ್ರ' (ದಶವಾರ್ಷಿಕ ವಿಮರ್ಶೆ ೧೯೭೪–೮೩, ಪುಟ–೬೭)ವಾಗಿದೆ.

ಎಂದರೆ, ಕೆಲವು ಘಟನೆಗಳನ್ನು ಅವು ನಡೆದ ಕಾಲಕ್ಕನುಗುಣವಾಗಿ ಸೇರಿಸಿದ ಸರಪಳಿ, ವಸ್ತು, ಘಟನೆಗಳನ್ನು ಕತೆ ಒಳಗೊಳ್ಳುವುದು ಮಾತ್ರವಲ್ಲ, ಅವುಗಳಿಗೆ ಕಾಲದ ಕ್ರಮವಲ್ಲದೆ ಬೇರೊಂದು ಆಂತರಿಕ ಸಂಬಂಧವನ್ನು ಕಲ್ಪಿಸುತ್ತದೆ. ಘಟನೆಗಳಿಗೆ ಒಂದು ಸಂಬಂಧವನ್ನು ಕಲ್ಪಿಸುತ್ತದೆ. ವಸ್ತು ಕಾರ್ಯಕಾರಣ ಸಂಬಂಧವನ್ನು ಕಲ್ಪಿಸುತ್ತದೆ. ಕೃತಿಕಾರರಿಗೆ ಕೃತಿಯ ವಸ್ತುವನ್ನು ನಿರ್ವಹಿಸುವಾಗ ಅದರ 'ಎಲ್ಲಾ' ಸಾಧ್ಯತೆಗಳನ್ನು ಬಳಸಿಕೊಳ್ಳಬೇಕಾಗುತ್ತದೆ. ಕತೆಯ ವಸ್ತುವನ್ನು ಅನಾವರಣಗೊಳಿಸಲು, ಶೋಧಿಸಲು, ವಿಕಾಸಗೊಳಿಸಲು ಇರುವ ಸಾಧನವಾಗಿ ತಂತ್ರ ಬಳಕೆಯಾಗುತ್ತದೆ.

ಕೃತಿಗೆ ತನ್ನದೆ ಆದ ನಿಯಮಗಳನ್ನು ಹಾಕಿಕೊಳ್ಳಲಾಗಿರುತ್ತದೆ. ಕತೆ ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡಲು; ನಮ್ಮ ಆಸಕ್ತಿಯನ್ನು ಕೇಂದ್ರೀಕರಿಸಿಕೊಳ್ಳಲು ಕೆಲವು ರೂಪು-ರೇಷೆಗಳನ್ನು ರಚಿಸಿಕೊಳ್ಳಬೇಕಾಗುತ್ತದೆ. ಗ್ರಹಿಸಿದ ಅನುಭವಗಳ ವಿವರಗಳಲ್ಲಿ ಕೆಲವನ್ನು ಆಯ್ದು, ಕೆಲವನ್ನು ಬಿಟ್ಟು, ಕೆಲವನ್ನು ಮಾರ್ಪಡಿಸಿ ಒಂದು ನಿರ್ಧಿಷ್ಟ ನಕ್ಷೆಗನುಗುಣವಾಗಿ ಜೋಡಿಸಲಾಗಿರುತ್ತದೆ.

ಕತೆಯನ್ನು ಹೇಳುವ ರೀತಿಯೇ ತಂತ್ರವಾಗಿದೆ. ಕತೆ ಹೇಳುವ ಕಲೆಗೆ ಸಂಬಂಧಿಸಿದೆ. ಕತೆಗಾರರು/ ಕಾದಂಬರಿಕಾರರು ಕತೆಯ ಮೂಲಕ ಬೇರೊಂದು ಗುರಿಯನ್ನು ಸಾಧಿಸಬಯಸುತ್ತಿರುತ್ತಾರೆ. ಪಾತ್ರಗಳನ್ನು ಹೇಗೆ ಸೃಷ್ಟಿಸಲಾಗುತ್ತದೆ. ಸನ್ನಿವೇಶಗಳನ್ನು ಹೇಗೆ ನಿರೂಪಿಸಲಾಗಿರುತ್ತದೆ ಎನ್ನುವುದು ಆಕೃತಿಯ ತಂತ್ರವನ್ನು ಅವಲಂಬಿಸಿದೆ.

ಕೃತಿಗಾರರು ತಾವು ಏನನ್ನು ಹೇಳುತ್ತಾರೋ ಅದನ್ನು ಓದುಗರಿಗೆ ಸಂವಹನಗೊಳಿಸಲು, ಅನುಭವವನ್ನು ವ್ಯವಸ್ಥಿತಗೊಳಿಸುವ ವಿಧಾನವೇ ಕೃತಿಯ ತಂತ್ರವಾಗಿದೆ. ನಿರೂಪಣೆ ಒಂದು ಅಥವ ಹೆಚ್ಚು ಘಟನೆ/ಸಂಗತಿಗಳನ್ನು ಹೇಳುತ್ತದೆ. ಮತ್ತು ಅವುಗಳ ನಡುವೆ ಸಂಬಂಧ ಸ್ಥಾಪಿಸುತ್ತದೆ. ಸಾಹಿತ್ಯ ಕೃತಿಯಲ್ಲಿ ಓದುಗರಿಗೂ ಪಠ್ಯಕ್ಕೂ ಇರುವ ಸಂಬಂಧ ಮುಖ್ಯವಾದುದು. ಈ ಸಂಬಂಧವನ್ನು ಏರ್ಪಡಿಸಲು ಕೃತಿಯ ನಿರೂಪಣೆ ಮುಖ್ಯವಾಗುತ್ತದೆ.

### ಉ) ಕಾವ್ಯದ ಅಭಿವ್ಯಕ್ತಿ

ಕಾವ್ಯವು ವಾಸ್ತವ ಜಗತ್ತನ್ನು ಮುಂದಿರಿಸಿಕೊಂಡು ಬೇರೊಂದು ಲೋಕದ ಬಾಗಿಲನ್ನು ತೆರೆಯುತ್ತದೆ. ಹೇಳಬೇಕಾದುದನ್ನು ಕಾವ್ಯವಾಗಿಸುವಾಗ, ಆಲೋಚನೆಗೆ ತಕ್ಕ ಆಕೃತಿಯಲ್ಲಿ, ಲಯ, ಪದಗಳ ಲಾಲಿತ್ಯ, ಪ್ರತಿಮ-ರೂಪಕ, ಸಂಕೇತಗಳನ್ನು ಒಳಗೊಂಡಿರುತ್ತದೆ.

"ಲಯವಿಲ್ಲದೆ ಕಾವ್ಯವಿಲ್ಲ. ಕಾವ್ಯ, ಗದ್ಯ ಎಂದು ಎರಡು ಪ್ರತ್ಯೇಕ ಮಾಧ್ಯಮಗಳನ್ನು ನಾವು ಗುರುತಿಸುವುದಾದರೆ, ಗದ್ಯ ಮಾಡಲಾರದ್ದನ್ನು ಕಾವ್ಯ ಮಾಡಬೇಕು; ಇಲ್ಲವಾದರೆ ಅದರ ಪ್ರತ್ಯೇಕತೆಗೆ ಅರ್ಥವಿಲ್ಲ. ಗದ್ಯ ಸಾಗಲಾರದಷ್ಟು ದೂರ ನಮ್ಮ ಪ್ರಜ್ಞೆಯಲ್ಲಿ ಕಾವ್ಯ ಸಾಗುತ್ತದೆ. ಗದ್ಯ ಮುಟ್ಟಲಾರದ ಬಿಂದುಗಳನ್ನು ಕಾವ್ಯ ಮುಟ್ಟುತ್ತದೆ. ಅದರಿಂದಲೇ ಶ್ರೇಷ್ಠ ಕಾವ್ಯವು ವಿಶಿಷ್ಟವಾದ ಗಾಢವಾದ ಪರಿಣಾಮವನ್ನು ಸಾಧಿಸುತ್ತದೆ ಎಂದು ನನ್ನ ನಂಬಿಕೆ" (ವಜ್ರದೀಪ್ತಿ, ಪುಟ-೧೯೭) ಕಾವ್ಯದಲ್ಲಿ 'ಲಯ' ಪ್ರಮುಖವಾದ ಲಕ್ಷಣವಾಗಿದ್ದು, ಅದು ಮುಕ್ತ ಛಂದಸ್ಸಿನಲ್ಲೂ ಕಾಣಿಸಿಕೊಳ್ಳುತ್ತಿರುತ್ತದೆ.

ಕಾವ್ಯದ ಅಭಿವ್ಯಕ್ತಿಯಲ್ಲಿ ಭಾಷೆಗೆ ಇನ್ನಿಲ್ಲದ ಆದ್ಯತೆಯಿದೆ. ನಿತ್ಯ ಬಳಕೆಯಲ್ಲಿರುವ ಭಾಷೆಗಿಂತ ಭಿನ್ನವಾದ ಸಂಯೋಜನೆಯನ್ನು ಹೊಂದಿರುತ್ತದೆ. "ಕವಿತೆಯ ಭಾಷೆಯಲ್ಲಿ ನಿತ್ಯದ ಭಾಷೆಯಲ್ಲಿ ಸಹಜವಾಗಿ ಬಾರದ ಪದಗಳು, ಪದ ಸಂಯೋಜನೆ, ವಾಕ್ಯ ರಚನೆಗಳು ಬಳಕೆಯಾಗುತ್ತವೆ ಎಂಬುದು. ಈ ವ್ಯತ್ಯಾಸಗಳನ್ನು ವ್ಯತ್ಯಯ ಇಲ್ಲವೆ ಮಾರ್ಗಾಂತರ ಎಂದು (Deviation) ಹೆಸರಿಸಲಾಗಿದೆ. ಶೈಲಿ ಶಾಸ್ತ್ರ ಕೃತಿಯಲ್ಲಿ ಕೆ.ವಿ.ನಾರಾಯಣರು ಮಾರ್ಗಾಂತರ ಕುರಿತು ದೀರ್ಘವಾಗಿ ಚರ್ಚಿಸಿದ್ದಾರೆ. ಮಾರ್ಗಾಂತರಗಳನ್ನು ನಿತ್ಯದ ಭಾಷೆಯ ಸಹಜ ರಚನೆಗಳ ಉಲ್ಲಂಘನೆಗಳೆಂದು ಸರಳವಾಗಿ ವಿವರಿಸಬಹುದು. ಆದರೆ ಇದಕ್ಕೆ ಮತ್ತೊಷ್ಟು ವಿವರಣೆ ಅವಶ್ಯ. ನಿತ್ಯದ ಭಾಷೆಯಲ್ಲಿ ಕಾಣದ ರಚನೆಗಳು ಎಂದ ಮಾತ್ರಕ್ಕೆ ಕವಿತೆಯ ಭಾಷೆಯ ಹಿಂದೆ ಬೇರೆಯವೇ ನಿಯಮಗಳು ಕೆಲಸ ಮಾಡುತ್ತಿವೆ ಎನ್ನಲಾಗದು. ಒಳರಚನೆಯ ಕೆಲವು ಸಾಧ್ಯತೆಗಳು ನಿತ್ಯದ ಭಾಷೆಯಲ್ಲಿ ಕಂಡು ಬಂದರೆ ಮತ್ತೆ ಉಳಿದ ಸಾಧ್ಯೆಗಳು ಕೆಲವು ಕವಿತೆಯ ಭಾಷೆಯಲ್ಲಿ ಕಂಡು ಬರುತ್ತವೆ ಎನ್ನುವುದು ಹೆಚ್ಚು ಸೂಕ್ತ. (ಶೈಲಿ ಶಾಸ್ತ್ರ, ಪುಟ-೧೮)

ಕಾವ್ಯದಲ್ಲಾಗುವ ಮಾರ್ಗಾಂತರಗಳನ್ನು ನಾಲ್ಕು ಭಾಗಗಳಲ್ಲಿ ವಿಂಗಡಿಸಲಾಗಿದೆ.

೧. ಧೃಗ್ ಮಾರ್ಗಾಂತರ

೨. ಧ್ವನಿ ಮಾರ್ಗಾಂತರ

೩. ಪದ-ಅರ್ಥ ಮಾರ್ಗಾಂತರ

೪. ರಾಚನಿಕ ಮಾರ್ಗಾಂತರ

ಧೃಗ್ ಎಂದರೆ, ಕಣ್ಣಿಗೆ ಕಾಣುವ ಹಾಗಿರುವ ಹಂತ. ಮುದ್ರಣ ರಚನೆಯಲ್ಲಿಯೇ ಇದು ಕವಿತೆ ಎಂದು ಗುರುತಿಸಲ್ಪಡುತ್ತದೆ. ಆದರೆ ಹಾಗೆ ಒಡೆದು ಕಟ್ಟಿರುವ ರಚನೆಗಳೆಲ್ಲ ಕವಿತೆ ಎಂದು ಅನಿಸಿಕೊಳ್ಳುವುದಿಲ್ಲ. ಅದಕ್ಕೆ ಇನ್ನಿತರ ಲಕ್ಷಣಗಳೂ ಇರುತ್ತವೆ. ನಿತ್ಯದ ಭಾಷೆಯಲ್ಲಿ ಮಾರ್ಗಾಂತರಗಳು ಆಕಸ್ಮಿಕವಾಗಿರುತ್ತವೆ ಮತ್ತು ಅಯೋಜಿತವಾಗಿರುತ್ತವೆ. ಆದರೆ ಕವಿತೆಯ ಭಾಷೆಯಲ್ಲಿ ಅದು ಯೋಜಿತವಾಗಿ ಮತ್ತು ನಿಯತವಾಗಿರುತ್ತವೆ.

ಎರಡನೆಯ ಹಂತದ ಮಾರ್ಗಾಂತರವು ಕವಿತೆಯ ಸಾಲುಗಳಲ್ಲಿ ಒಂದು ಧ್ವನಿಯು ಹ್ರಸ್ವ-ದೀರ್ಘ ಸ್ವರಗಳನ್ನು; ಸಜಾತೀಯ-ವಿಜಾತೀಯ ವ್ಯಂಜನ ದ್ವಿತ್ವಗಳನ್ನು; ಸರಳ-ಪರುಷ ಧ್ವನಿಗಳನ್ನು; ಅನುನಾಸಿಕ-ನಿರನುನಾಸಿಕಗಳನ್ನು ಆವರ್ತನಗೊಳಿಸುತ್ತಿರುತ್ತದೆ.

ಇಡಿಯಾಗಿ ಕವಿತೆಯ ಭಾಷೆಯನ್ನೇ ಬಳಕೆ ತಪ್ಪಿದ ಭಾಷಾ ಪ್ರಭೇದವೊಂದಕ್ಕೆ ಇಲ್ಲವೇ ಕವಿತೆಯಲ್ಲಿ ಬಳಕೆಯಾಗದ ಭಾಷಾ ಪ್ರಭೇದವೊಂದಕ್ಕೆ ಬದಲಾಯಿಸಿಕೊಳ್ಳುವುದು 'ಪದ-ಅರ್ಥದ ಮಾರ್ಗಾಂತರ'ವಾಗಿರುತ್ತದೆ. ಮಹಿಳೆಯರು ರಚಿಸುವ ಕಾವ್ಯಗಳಲ್ಲಿ ಅಭಿವ್ಯಕ್ತಿಯ ಸಾಧ್ಯತೆಗಳು ಈ ಮಾರ್ಗಾಂತರದಲ್ಲೇ ಅಡಗಿವೆ. ಇದುವರೆಗೂ ಪುರುಷರು ಬಳಸುತ್ತಿದ್ದ ಪದಗಳಿಗೆ ಭಿನ್ನವಾದ ಪದಕೋಶ ಬೆಳೆದಿದೆ. ಯಾವುದನ್ನು ಅಡಿಗೆ ಮನೆಯ ಸಾಹಿತ್ಯವೆಂದು ವ್ಯಂಗ್ಯವಾಡಲಾಗಿದೆಯೋ ಆ ಅಡಿಗೆ

ಮನೆಯ ಸರಂಜಾಮುಗಳು ಕಾವ್ಯದೊಳಗೆ ಹೊಸ ಸಾಧ್ಯತೆಯಾಗಿ, ಹೊಸ ಅರ್ಥ ಪಡೆದುಕೊಂಡಿದೆ. ಪುರುಷ ಲೋಕ ಇದುವರೆಗೂ ಕಾಣಲಾರದ ಜಗತ್ತು ಗೋಚರಿಸುವುದು ಮಹಿಳೆಯರ ಕಾವ್ಯದಲ್ಲಿ.

ಕಾರಣ 'ಪದಕೋಶದ ಮಾರ್ಗಾಂತರ'ದ ಉದ್ದೇಶ ಕೇವಲ ನಾವಿನ್ಯವಷ್ಟೇ ಅಲ್ಲ. ಈ ಮಾರ್ಗಾಂತರದಿಂದ ಕವಿತೆಯ ಭಾಷೆಯ ಸಾಧ್ಯತೆಗಳು ಅಧಿಕಗೊಳ್ಳುತ್ತವೆ. ನಿತ್ಯದ ಭಾಷೆಯ ಪದರೂಪಗಳಿಗೆ ಬಳಕೆಯಿಂದಾಗಿಯೇ ಬಂದೊದಗಿರುವ ಸವೆತವನ್ನು ನಿವಾರಿಸಕೊಳ್ಳಲು ಪದ ಕೋಶದ ಮಾರ್ಗಾಂತರವೊಂದು ಮುಖ್ಯ ತಂತ್ರವಾಗಿ ಕವಿತೆಯ ಭಾಷೆಯಲ್ಲಿ ಪ್ರಯೋಗವಾಗುತ್ತದೆ. ಪದ ರೂಪಗಳ ನಾವೀನ್ಯ ಅನಿವಾರ್ಯವಾಗಿ ಅರ್ಥ ಸಂಬಂಧಿಯೂ ಆಗಿರುತ್ತದಷ್ಟೇ. ಪದಗಳ ಹೊಸ ಬಳಕೆಯಿಂದ ಅರ್ಥದ ಮರು ಹೊಂದಾಣಿಕೆಯೂ ಸಾಧ್ಯವಾಗುತ್ತದೆ. (ಅದೇ, ಪುಟ-೨೮)

'ರಾಚನಿಕ ಮಾರ್ಗಾಂತರ'ದಲ್ಲಿ ಪದಾನುಕ್ರಮಣಿಯ ಪಲ್ಲಟ ನಿತ್ಯದ ಭಾಷೆಯಲ್ಲೂ ಸಾಧ್ಯ. 'ನೋಡ್ತೀನಿ ಅದೇನು ಮಾಡ್ತಿಯೋ ಅಂತ' ಎಂಬಂಥ ವಾಕ್ಯ ಇದಕ್ಕೆ ಉದಾಹರಣೆ. ಈ ಬಗೆಯ ಪಲ್ಲಟಗಳು ಅವಧಾರಣೆಗಾಗಿ ನಡೆಯುತ್ತಲೇ ಇರುತ್ತವೆ. ಕಾವ್ಯದಲ್ಲೂ ಈ ಪಲ್ಲಟದಿಂದ ಅವಧಾರಣೆ ಸಾಧ್ಯವಾಗುತ್ತದೆ. ಹಾಗಂತಲೇ ಕ್ರಿಯಾ ಪದದಿಂದ ವಾಕ್ಯವನ್ನು ಪ್ರಾರಂಭಿಸುವುದು ಬಹಳ ಕಡೆ ಕಾಣುತ್ತದೆ. (ಅದೇ, ಪುಟ-೨೯)

ಸ್ವಾತಂತ್ರ್ಯ ಪೂರ್ವದಲ್ಲಿ ತಿರುಮಲಾಂಬ, ಕಲ್ಯಾಣಮ್ಮ, ಸರಸ್ವತಿಬಾಯಿ ರಾಜವಾಡೆ ಮುಂತಾದವರು ಕಾವ್ಯವನ್ನು ರಚಿಸಿರುವರಾದರೂ, ಆ ಪ್ರಕಾರ ಅವರ ಸಾಹಿತ್ಯ ರಚನೆಯ ಪ್ರಧಾನ ಧ್ಯೇಯವಾಗಿರಲಿಲ್ಲ. ಕಾದಂಬರಿ-ಕಥಾ ಪ್ರಕಾರವನ್ನೇ ತಮ್ಮ ಬರಹಗಳಿಗೆ ಆಯ್ದುಕೊಂಡರು. ಅದೇ ಕಾಲದ ಬೆಳಗೆರೆ ಜಾನಕಮ್ಮ, ತಿರುಮಲೆ ರಾಜಮ್ಮ ('ಭಾರತಿ'), ಜಯದೇವಿ ತಾಯಿ ಲಿಗಾಡೆಯವರು ಕಾವ್ಯ ಮಾಧ್ಯಮವನ್ನು ಕೈಗೆತ್ತಿಕೊಂಡರು. ಜಯದೇವಿಯವರು ಆಧ್ಯಾತ್ಮ-ಭಕ್ತಿಯನ್ನು ಕೇಂದ್ರವಾಗಿಟ್ಟುಕೊಂಡರೆ, ರಾಜಮ್ಮನವರ ಕಾವ್ಯ, ರಾಷ್ಟ್ರಭಕ್ತಿಯೊಂದಿಗೆ ಪೌರಾಣಿಕ ಸಂಗತಿಗಳಿಗೆ ಪ್ರತಿಕ್ರಿಯೆ ನೀಡಿತು. ಬೆಳಗೆರೆ ಜಾನಕಮ್ಮನವರು ತಮಗಿರುವ ಮಿತಿಯಲ್ಲೇ ಸ್ವಂತ ಅಸ್ತಿತ್ವವನ್ನು ಗುರುತಿಸುವ ಪ್ರಯತ್ನದೆಡೆಗೆ ಸಾಗಿದರು. ಮಹಿಳೆಯರ ಅಂತರಾಳದಲ್ಲಿ ಹುದುಗಿ ಹೋಗಿದ್ದ ಏನನ್ನೋ ಹೇಳಬೇಕೆಂಬ ತುಡಿತ, ಬಯಕೆಯನ್ನು ಪೂರೈಸಲು ಸಾಧ್ಯವಾಗಿದ್ದು ಎಪ್ಪತ್ತರ ದಶಕದ ನಂತರದ ಕಾವ್ಯದಲ್ಲಿ. ಮಹಿಳೆಯರು ತಮ್ಮ ಇರುವಿಕೆಯನ್ನು, ಸುತ್ತಲಿನ ಜಗತ್ತನ್ನು ಕಾಣುವ ಕಣ್ಣುಗಳಲ್ಲಿ ಹೊಸ ಎಚ್ಚರವನ್ನು ಮೂಡಿಸುವಲ್ಲಿ ಸ್ತ್ರೀವಾದಿ ಚಳುವಳಿಗಳ ಪ್ರಭಾವ ಗಮನಾರ್ಹವಾಗಿದೆ. 'ಒಪ್ಪಿತ'ವಾಗಿದ್ದ ಕೌಟುಂಬಿಕ ಸಂಬಂಧಗಳನ್ನು, ಸಾಮಾಜಿಕ ಮೌಲ್ಯಗಳನ್ನು ಪುನರ್ ವಿಮರ್ಶೆಗೆ ಒಳಪಡಿಸುವ ಕ್ರಿಯೆ ಸತತವಾಗಿ ನಡೆಯುತ್ತಿದೆ.

ಮಹಿಳೆಯರು, ಅಭಿವ್ಯಕ್ತಿಗೆ ಕಾವ್ಯವನ್ನು ಆಯ್ಕೆ ಮಾಡಿಕೊಳ್ಳಲು ಇರುವ ಕಾರಣಗಳನ್ನು ಶೋಧಿಸುವಾಗ, ಜಿ.ಎಸ್.ಶಿವರುದ್ರಪ್ಪನವರು ಮಹಿಳೆಯರಿಗೆ ಈ ಶಕ್ತಿ ಲಭ್ಯವಾಗಲು ಮುಖ್ಯ ಕಾರಣ, ದಲಿತ ಬಂಡಾಯ ಚಳುವಳಿಯೆಂದು ಪ್ರತಿಪಾದಿಸಿದ್ದಾರೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಯೂ ದಲಿತಳಾಗಿದ್ದರಿಂದ ಆಕೆಯು ಎಚ್ಚೆತ್ತುಕೊಳ್ಳಲು ಕಾವ್ಯ ಮಾಧ್ಯಮವಾಯಿತು ಎಂದು ಗುರುತಿಸಿದ್ದಾರೆ:

"ದಲಿತ-ಬಂಡಾಯ ಚಳುವಳಿ ಎಂಬುದೊಂದು ಚಾರಿತ್ರಿಕ ಅನಿವಾರ್ಯತೆಯಾಗಿದ್ದು, ಇದುವರೆಗಿನ ನಿರ್ಲಕ್ಷಿತ ಹಾಗೂ ಶೋಷಿತ ಸಾಮಾಜಿಕ ಸ್ತರವೊಂದು ತನ್ನ ಮೂಕ ವೇದನೆಗಳಿಗೆ ಬಾಯಿ ಕೊಡಲು ತೊಡಗಿದ್ದು ಇದರ ಲಕ್ಷಣವಾಗಿದೆ" (ಕಾವ್ಯ ಸಂವಾದ, ಪುಟ-೪೩)

ಕತೆ-ಕಾದಂಬರಿಗಳ ಪ್ರಕಾರವನ್ನು ಆಯ್ದುಕೊಳ್ಳುತ್ತಿದ್ದ ಮಹಿಳೆಯರ ಅಭಿವ್ಯಕ್ತಿಯ ದಾರಿ ಭಿನ್ನವಾಗಿ ನಿಂತದ್ದು ೭೦ರ ದಶಕದ ನಂತರವೇ. ಸುಪ್ತ ಮನಸ್ಸಿನ ದುಗುಡ ದುಮ್ಮಾನಗಳಿಗೆ, ವ್ಯವಸ್ಥೆಯು ಕೊಡಮಾಡಲ್ಪಟ್ಟಿರುವ ಸಂಪ್ರದಾಯಗಳ, ಸಾಮಾಜಿಕ ವ್ಯವಸ್ಥೆಗಳ ನಡುವೆ, ತಮ್ಮ ಸ್ಥಾನವನ್ನು ಪ್ರಶ್ನಿಸಿಕೊಳ್ಳತೊಡಗಿದಾಗ, ಕಾವ್ಯ ಪ್ರಕಾರ ಮಹಿಳೆಯರಿಗೆ ಸೂಕ್ತ ಮಾರ್ಗವಾಗಿ ಕಂಡಿದೆ. ಈ ಪ್ರಕಾರ ಮಹಿಳೆಯರಿಗೆ ಪ್ರಿಯವಾಗಲು ಕಾರಣವೇನೆಂಬುದನ್ನು ಕೆ.ವಿ.ನಾರಾಯಣರು ಪ್ರತಿಪಾದಿಸುವ ಪ್ರಮೇಯದಲ್ಲಿ: "ಸಾಮಾಜಿಕವಾಗಿ ಹೆಣ್ಣಿನ ಬಗೆಗೆ ಇರುವ 'ಹಳೆಯ' ಚಿಂತನೆಗಳನ್ನು ನಿರಾಕರಿಸಿ ತನಗೆ ವಹಿಸಲಾದ ವರ್ತನಾ ಮಾದರಿಗಳಿಗೆ ಕಟ್ಟುಬೀಳಲು ಬಯಸದ ಮನೋಭಾವವನ್ನು ಮಂಡಿಸಲು ಹೊರಟವರೆಲ್ಲರೂ ಕವಿತೆಗಳನ್ನು ಬರೆದಿದ್ದಾರೆ. ಆದರೆ ಇಂಥ ದೃಷ್ಟಿಕೋನ ಹೆಂಗಸರು ಬರೆದ ಕಥಾ ಸಾಹಿತ್ಯದಲ್ಲಿ ಢಾಳಾಗಿ ಕಂಡು ಬರುವುದಿಲ್ಲ" (ಮಹಿಳೆಯರ ಮುನ್ನಡೆ, ಪುಟ-೪೭) ಎಂಬುದನ್ನು ವಿವೇಚಿಸಿದಾಗ, ಇತ್ತೀಚಿಗಿನ ಅಧ್ಯಯನಗಳನ್ನು ಗಮನಿಸಿದಾಗ, ಕತೆ-ಕಾದಂಬರಿಗಳನ್ನು ಬರೆದ ಮಹಿಳೆಯರಿಗಿಂತ, ಕವಿತೆಗಳನ್ನು ಬರೆದವರು ಹೆಚ್ಚು 'ಜನಪ್ರಿಯ'ರಾಗಿದ್ದಾರೆ.

ಕಾವ್ಯದ ಅಭಿವ್ಯಕ್ತಿಗೆ ಇರುವ ಮುಖ್ಯ ಕಾರಣಗಳಲ್ಲಿ: ಪುರುಷ ವಿಮರ್ಶೆಯು ನೀಡಿದ ಅನುಭವ ಪ್ರಮಾಣಿಕತೆ ಎಂಬ ಮಾನದಂಡವು, ಕಥೆ-ಕಾದಂಬರಿಗಳಂತಹ ಪ್ರಕಾರಗಳಲ್ಲಿ ತೊಡಗಲು ಬಹು ದೊಡ್ಡ ಅಡ್ಡಿಯಾಗಿತ್ತು. ಯಾಕೆಂದರೆ ಈ ಪ್ರಕಾರಗಳ ಹರಿವು ದೊಡ್ಡದು. ಎಲ್ಲವನ್ನೂ ಬಿಡಿಸಿಯೇ ಹೇಳಬೇಕಾಗುತ್ತದೆ. ಆದರೆ ಬರೆದುದೆಲ್ಲವನ್ನೂ ವಯಕ್ತಿಕ ಅನುಭವಗಳಿಗೆ ಆರೋಪಿಸಿ ಬಿಡುವ ಆತಂಕ ಲೇಖಕಿಯರನ್ನು ಕಾಡುತ್ತಿತ್ತು. ಸಾಮಾಜಿಕವಾಗಿ ಉದ್ಭವಿಸುವ ತೊಂದರೆಗಳಿಗೆ ಹೆದರಿದ ಲೇಖಕಿಯರು ತಮಗೆ ಒಗ್ಗಿದ ಕಥನ ಕ್ರಮಗಳಿಗೇ ರಾಜೀನಾಮೆ ನೀಡಿದರು. ಹೀಗಾಗಿ ಒಂದು ಹಂತದಲ್ಲಿ ಲೇಖಕಿಯರ ಸಾಹಿತ್ಯ ರಚನೆಯೇ ಕುಂಠಿತವಾಯಿತು. ಇಂಥ ಸಂದರ್ಭದಲ್ಲಿ ಎಲ್ಲವನ್ನೂ ಬಿಡಿಸಿ ಹೇಳಬೇಕಾದ ಕಥೆ ಕಾದಂಬರಿಗಳಿಗಿಂತ ಯಾವುದನ್ನೂ ನೇರವಾಗಿ ಹೇಳಬೇಕಾಗಿರದ ಸಂಕೇತ ರೂಪಕಗಳ ಬಳಕೆಗೆ ಧಾರಾಳ ಅವಕಾಶವಿದ್ದ ಕವಿತೆ ಒಂದು ಸುರಕ್ಷಿತ ಪ್ರಕರವಾಗಿ ಕಂಡಿರಬಹುದು. ಸಾಮಾಜಿಕ ವಿಧಿ ನಿಷೇಧಗಳ ಮಧ್ಯೆ ಬಿಚ್ಚಿಕೊಳ್ಳುವಿಕೆಯ ಮೂಲಕ ತಮ್ಮನ್ನು ತಾವು ತೆರೆದುಕೊಳ್ಳಬೇಕಾಗಿದೆ.

ಕವಿತೆ ಬದುಕಿನ ದರ್ಶನದ ಭಾಗವಾಗಿದೆ. ತನ್ನನ್ನು ತಾನು ಕಂಡುಕೊಳ್ಳುವ ಖಾಸಗೀತನದೊಂದಿಗೆ ಸಾರ್ವತ್ರಿಕತೆಯನ್ನು ಕಾಣುವ ಗುಣವನ್ನು ಹೊಂದಿದೆ. ಕಾವ್ಯಕ್ಕೆ ವಿಶಿಷ್ಟವಾದ ಲಕ್ಷಣಗಳಲ್ಲಿ 'ಲಯ'ವೂ ಮುಖ್ಯವಾದ ಸಂಗತಿಯಾಗಿದೆ.

ಮಹಿಳಾ ಕಾವ್ಯದ ಅಭಿವ್ಯಕ್ತಿಯಲ್ಲಿ ಕಂಡು ಬರುವ ಮುಖ್ಯ ಲಕ್ಷಣಗಳಲ್ಲಿ, 'ನಾನು' ಎಂಬುದರ ಹುಡುಕಾಟವಿದೆ. ಸ್ವಗತದ ಮಾದರಿ; ವ್ಯವಸ್ಥೆಯೊಂದಿಗಿನ ಸಂವಾದ; ಗೆಳತಿಯೊಂದಿಗಿನ ಒಳಮಾತು; ಸಾಮಾಜಿಕ ಸಂಪ್ರದಾಯಗಳೊಂದಿಗೆ ಮುಖಾಮುಖಿ; ಪೌರಾಣಿಕ ಪ್ರತಿಮೆಗಳ ಅನಾವರಣ; ಹೆಣ್ಣಿನ ಬಗ್ಗೆ ಕಟ್ಟಿಕೊಡಲಾದ ಸಿದ್ಧ ಮಾದರಿಗಳನ್ನು ಒಡೆಯುವ ಕ್ರಿಯೆಯಲ್ಲಿ ಮಹಿಳೆಯರು ಮುಂದಾಗಿದ್ದಾರೆ. ಶತಮಾನಗಳ ಕಾಲ ಚರಿತ್ರೆಯ ಪುಟಗಳಿಂದ ಕಾಣೆಯಾದ ತಮ್ಮ ಕುರುಹುಗಳನ್ನು ಶೋಧಿಸುವ ಕಾರ್ಯದಲ್ಲಿ ತೊಡಗಿರುವರು.

ಮಹಿಳಾ ಕಾವ್ಯ ಪ್ರಬುದ್ಧತೆ ಪಡೆದದ್ದು ನವ್ಯದ ಆಗಮನದ ನಂತರವೇ. ಆದುದರಿಂದ ಸಹಜವಾಗಿ ಅದು ನವ್ಯ ರಚನಾ ಕ್ರಿಯೆಗಳನ್ನು ಹಾಗೂ ವಿಧಾನಗಳನ್ನು ಸ್ವೀಕರಿಸಿತು. ನವ್ಯ ಕಾವ್ಯದಲ್ಲಿ ಎದ್ದು ಕಾಣುವ ಮುಕ್ತ ಛಂದಸ್ಸು, ಲಯಾನುಸಾರಿ ಆಕೃತಿಗಳು ಹಾಗೂ ಆಡುಮಾತಿನ ಪ್ರಯೋಗ ಮಹಿಳಾ ಕಾವ್ಯದ ಲಕ್ಷಣಗಳಾದವು. ಹಲವಾರು ಕವಯಿತ್ರಿಯರು ಜಾನಪದ ಕಾವ್ಯದ ಮಾದರಿಗಳನ್ನೂ ತಮ್ಮ ಅಭಿವ್ಯಕ್ತಿಗಾಗಿ ಬಳಸಿಕೊಂಡಿದ್ದಾರೆ. (ನೋಡಿ: ಆಮೂರ ಜಿ.ಎಸ್., 'ಮಹಿಳಾ ಕಾವ್ಯ: ಸಾಧನೆ ಹಾಗೂ ಸಮಸ್ಯೆಗಳು', ಕೊರಳು–ಕೊಳಲು, ಪುಟ–೪೦) ಸಾಹಿತ್ಯ ಲೋಕದಲ್ಲಿ ಈಗಾಗಲೇ ಹಲವಾರು ಪಂಥಗಳನ್ನು, ಕಾವ್ಯದ ಲಕ್ಷಣಗಳನ್ನು, ಹುಟ್ಟುಹಾಕಲಾಗಿದೆ. ಇರುವ ಮಾದರಿಗಳನ್ನೇ ಆಯ್ಕೆ ಮಾಡಿಕೊಂಡು ತಮ್ಮ ಅಸ್ಮಿತೆಯನ್ನು, ಕಾವ್ಯದ ಹರಿವನ್ನು ವಿಸ್ತರಿಸಿಕೊಳ್ಳಬೇಕಾಗಿರುವುದು ಅನಿವಾರ್ಯವಾಗಿದೆ. ವ್ಯವಸ್ಥೆಯ ಸಂಪ್ರದಾಯಗಳನ್ನು ಒಡೆದು ಕಟ್ಟಲು ಅವೇ ಮಾದರಿಗಳನ್ನು ಅಸ್ತ್ರವಾಗಿ ಬಳಸಿಕೊಳ್ಳಲಾಗಿದೆ.

ಲೈಂಗಿಕತೆ, ತಾಯ್ತನ ಹಾಗೂ ಹೆಣ್ಣು ನಿಭಾಯಿಸಬೇಕಾದ ಕ್ಷೇತ್ರಗಳಲ್ಲಿ ಈ ಸಾಂಪ್ರದಾಯಿಕ ಪಾತ್ರಗಳನ್ನು ನಾವು ಮತ್ತೆ ಪುನರ್ ವ್ಯಾಖ್ಯಾನಿಸಬೇಕಾಗಿದೆ. ಕಾವ್ಯದಲ್ಲಿ ಮಾತ್ರವಲ್ಲ ವಾಸ್ತವದಲ್ಲೂ ಅನೇಕ ದ್ವಂದ್ವಗಳನ್ನು ನಾವು ನಿಭಾಯಿಸಬೇಕಾಗಿದೆ. ಮಹಿಳೆ ತನಗೆ ನೀಡಲಾದ ಪಾತ್ರಕ್ಕಿಂತ ಬೇರೆಯಾದ ಒಂದು identityಯನ್ನು ಸ್ಥಾಪಿಸಿಕೊಳ್ಳಬೇಕಾಗಿದೆ. ಇದರ ಜೊತೆಗೇ ತನ್ನ ಪರಿಸರವನ್ನು ಪುನರ್ ನಿರ್ಮಿಸಿಕೊಳ್ಳಬೇಕಾಗಿದೆ. ಇದು ಮಹಿಳೆಯರ ಮೇಲೆ ಹೇರುವ ಒತ್ತಡ, ಗೊಂದಲ ಇವುಗಳನ್ನು ನಿಭಾಯಿಸುವುದರ ಜೊತೆಗೇ ತೀರಾ ಖಾಸಗಿ ಅನುಭವಗಳನ್ನು ಸಾರ್ವತ್ರಿಕವಾಗಿ ದಾಖಲಿಸುವಾಗ ಅಭಿವ್ಯಕ್ತಿ ಮಾಧ್ಯಮದ ಮೇಲಿನ ಪ್ರಭುತ್ವವೂ ಮುಖ್ಯವಾಗುತ್ತದೆ. ಕಾವ್ಯ ರಚನೆ ಉಸಿರಾಟದಷ್ಟೇ ಸಹಜವಾಗಿ ಆಗಬೇಕಾಗುತ್ತದೆ. ('ಮಹಿಳೆಯರ ಕಾವ್ಯಾಭಿವ್ಯಕ್ತಿ', ಸಂವೇದನೆ, ಪುಟ–೧೨೬) ಕಾವ್ಯದಲ್ಲಿ ಮುಕ್ತ ಅಭಿವ್ಯಕ್ತಿಗೆ ಅವಕಾಶವಿದೆ ಎಂದಾಗಲೂ ಬೆನ್ನು ಬಿಡದ ಕೌಟುಂಬಿಕ ನಿರ್ಬಂಧಗಳನ್ನು ಮೀರಿ ಬರೆಯಬೇಕಾಗಿರುವುದು ಅನಿವಾರ್ಯ ಸಂಗತಿಯಾಗಿದೆ.

### ಊ) ಕಥನದ ಅಭಿವ್ಯಕ್ತಿ

ಕತೆ ಕಟ್ಟಿ ಹೇಳುವ ಕಥನ ಕಲೆ, ಹೆಣ್ಣುಮಕ್ಕಳಿಗೆ ಪ್ರಾಚೀನ ಕಾಲದಿಂದಲೂ ಒಲಿದು ಬಂದ

ವಿಧಾನ. ಮೊಮ್ಮಕ್ಕಳ ಮೂಲಕ ದೊಡ್ಡವರನ್ನೂ ಸೆಳೆಯುವ, ಅದ್ಭುತ ಲೋಕ ತೆರೆದಿಡುವ ಅಜ್ಜಿಯ ಕತೆಗಳ ದೊಡ್ಡ ಕಂತೆಯೇ ಇದೆ. ಆದರೆ ಅಜ್ಜನ ಕತೆ ಕೇಳಿ ಗೊತ್ತಿಲ್ಲ. ಮಹಿಳೆಯರೇ ಏಕೆ ಕತೆಯನ್ನು ಹೇಳುತ್ತಾರೆ ಎಂಬುದಕ್ಕೆ ಕೆಲವು ಕಾರಣಗಳನ್ನು ಸ್ತ್ರೀವಾದಿಗಳು ಶೋಧಿಸಿದ್ದಾರೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಜಾರಿಯಲ್ಲಿದ್ದ ವಿಧಿ–ನಿಷೇಧಗಳು ನುಂಗಲಾರದ ತುತ್ತಾದಾಗ, ವರ್ತಮಾನದ ಘಟನೆಗಳಿಗೆ ಭೂತಕಾಲದ ಕಥಾಹಂದರವನ್ನು ಹೆಣೆಯುವ ಕಾರ್ಯ ಶುರುವಾಯಿತು. ಬದುಕಿನ ಒಲವು–ನೋವು–ನಲಿವುಗಳನ್ನು ಅಭಿವ್ಯಕ್ತಿಸಲು ಕಥನ ಮಾರ್ಗ ದಾರಿ ಮಾಡಿಕೊಟ್ಟಿರಲಿಕ್ಕೆ ಸಾಕು.

'ಬರಹ' ತನ್ನ ಪ್ರವೇಶದೊಂದಿಗೆ ಸಮಾಜ ವ್ಯವಸ್ಥೆಯ ರಾಜಕಾರಣದಲ್ಲಿ ಒಂದು ಪ್ರಬಲ ಅಸ್ತ್ರವಾಗಿಯೂ ರೂಪು ತಳೆಯಿತು. ಸಹಜವಾಗಿಯೇ ಈ ಸಮಾಜದ ಪ್ರಬಲರು ಈ ನವೀನ ಅಸ್ತ್ರವನ್ನು ತಮ್ಮ ನಿಯಣಂತ್ರಣಕ್ಕೆ ತೆಗೆದುಕೊಂಡರಷ್ಟೇ ಅಲ್ಲದೆ ಯಾವ ಕಾರಣಕ್ಕೂ ಅದು ಇತರ ದುರ್ಬಲ ಸಮುದಾಯಗಳಿಗೆ ದಕ್ಕಬಾರದಂತೆ ಎಚ್ಚರವನ್ನು ವಹಿಸಿದರು. ಮೌಖಿಕ ಪರಂಪರೆಯು ಹಿನ್ನಡೆಯಲ್ಲಿ ಸೇರಿ ಮಹಿಳೆಯರ ಕಥನ ಕಲೆಯೂ ಮಸುಳಿಸುತ್ತಾ ಹೋದದ್ದು ಒಂದು ಸಂಗತಿಯಾದರೆ, ಅಭಿವ್ಯಕ್ತಿಯ ಹೊಸ ಸಾಧನವಾದ 'ಬರಹ' ದುರ್ಬಲ ಸಮುದಾಯದವಳಾದ ಅವಳಿಗೆ ಎಟುಕಲಾರದೆ ಹೋದದ್ದು ಇನ್ನೊಂದು ಸಂಗತಿಯಾಯಿತು. ಆದರೆ, ವ್ಯವಸ್ಥೆಯ ರಾಜಕಾರಣದಲ್ಲಿ, ಗಂಡಸರು ಈಗಾಗಲೇ ತಮ್ಮ ಉದ್ದೇಶಕ್ಕನುಗುಣವಾಗಿ ಸಾಹಿತ್ಯದ ರೂಪರೇಖೆಗಳನ್ನು, ಲಕ್ಷ್ಮಣ ರೇಖೆಗಳನ್ನು ಎಳೆದಿದ್ದಾರೆ. ಅಂಥ ನಿರ್ಬಂಧಗಳಿಗೆ ಆಕೆ ಒಗ್ಗಿಕೊಳ್ಳಬೇಕು. ಇಲ್ಲವಾದರೆ, ಮೇಲೆ ತಿಳಿಸಿದ ಹಾಗೆ ಮೌನವಾಗಿರಬೇಕು. ತನ್ನದಲ್ಲದ ದಾರಿಯಲ್ಲಿ, ಅವರು ಇಟ್ಟ ಹೆಜ್ಜೆಯನ್ನನುಸರಿಸಿ ನಡೆದ ಬರಹಗಾರ್ತಿಯರಿದ್ದಾರೆ. ಹೆದ್ದಾರಿಯ ಮಗ್ಗುಲಲ್ಲೇ ಕಿರುದಾರಿಗಳನ್ನು ಶೋಧಿಸುವ/ಶೋಧಿಸಿದ ಬರಹಗಾರ್ತಿಯರ ಪ್ರಯತ್ನಗಳೂ ನಮ್ಮ ಮುಂದಿವೆ. ಮಹಿಳೆಯನ್ನೇ ಕೇಂದ್ರ ವಸ್ತುವನ್ನಾಗಿಟ್ಟುಕೊಂಡ ಬರೆದ ಪುರುಷ ಕಥನದ ಮಾದರಿ ಒಂದಾದರೆ, ಮಹಿಳಾ ಲೇಖಕಿಯರು ಕಟ್ಟಿಕೊಡುವ ಮಹಿಳಾ ಲೋಕದ ಕಥನ ಇನ್ನೊಂದು ಬಗೆಯದು. ಈ ಎರಡು ಮಾದರಿಗಳಲ್ಲೂ ಸಾಕಷ್ಟು ಭಿನ್ನತೆಗಳು ಎದ್ದು ಕಾಣುತ್ತವೆ.

ಸಂಧ್ಯಾರೆಡ್ಡಿಯವರು ಗುರುತಿಸುವ ಹಾಗೆ "ಪ್ರತಿಯೊಬ್ಬ ಹೆಣ್ಣಿನ ಬದುಕು ಒಂದು ಬರೆದಿಡದ ಕಥೆಯಾಗಿರುತ್ತದೆ. ಬದುಕೇ ಒಂದು ಕಥೆ ಯಾವಾಗ ಆಗುತ್ತದೆಂದರೆ ಅದರಲ್ಲಿ ಅನೇಕ ಅನಿರೀಕ್ಷಿತ ತಿರುವುಗಳು ಇದ್ದಾಗ. ಹೆಣ್ಣಿನ ಬದುಕಿನ ಪ್ರತಿಯೊಂದು ಹಂತವೂ ಇಂತಹ ತಿರುವುಗಳನ್ನು ಪಡೆಯುತ್ತಿರುತ್ತದೆ. ಅವಳು ಯೌವನಕ್ಕೆ ಕಾಲಿರಿಸುವುದರೊಂದಿಗೆ ಇದು ಆರಂಭ. ನಂತರ ಮದುವೆ, ಗಂಡನ ಮನೆಯೆಂಬ ಪರಕೀಯ ಬದುಕಿಗೆ ಪ್ರವೇಶ, ಗಂಡ ಎಂಬ ಹೊಸ ವ್ಯಕ್ತಿಯೊಂದಿಗೆ ಬದುಕು. ಅನಂತರ ಮಕ್ಕಳಾದರೆ ಒಂದು ರೀತಿ, ಆಗದಿದ್ದರೆ ಇನ್ನೊಂದು ರೀತಿ, ಗಂಡ ಅನ್ಯೋನ್ಯವಾಗಿದ್ದರೆ ಒಂದು ರೀತಿ, ಅವನು ಬೇರೊಬ್ಬ ಹೆಣ್ಣಿಗೆ ಮರುಳಾದರೆ ಇನ್ನೊಂದು ರೀತಿ, ಗಂಡ ಅನಿರೀಕ್ಷಿತವಾಗಿ ಮೃತನಾದರೆ, ಅವಳ ಬದುಕು ಇನ್ನೂ ದೊಡ್ಡ ತಿರುವು ಪಡೆಯುತ್ತದೆ.

ಹೀಗೆ ಹೆಣ್ಣೊಬ್ಬಳು ಹೆಂಡತಿಯಾಗುತ್ತಾಳೆ, ತಾಯಿಯಾಗುತ್ತಾಳೆ, ಸೊಸೆಯಾಗುತ್ತಾಳೆ, ವಿಧವೆಯಾಗುತ್ತಾಳೆ, ಪರಿತ್ಯಕ್ತೆಯಾಗುತ್ತಾಳೆ... ಈ ಒಂದೊಂದು ಘಟನೆಯೂ ಅವಳ ಬದುಕಿನಲ್ಲಿ ಬಹುದೊಡ್ಡ ಪಲ್ಲಟವನ್ನು ಉಂಟು ಮಾಡುವಂಥದು. ಹೀಗಾಗಿ ಹೆಣ್ಣಿನ ಕಥೆ ಮುಗಿಯುವುದೇ ಇಲ್ಲ" (ಮಹಿಳಾ ಸಾಹಿತ್ಯ ಚರಿತ್ರೆ, ಪುಟ-೩೯೨)ಬದುಕಿನಲ್ಲಿ ಎದುರಾಗುವ ಭಿನ್ನ ಭಿನ್ನ ಪಾತ್ರಗಳನ್ನು ಅನಿವಾರ್ಯವಾಗಿ ಒಪ್ಪಿಕೊಳ್ಳುವ ಹಂತದಲ್ಲಿ ಅವಳ ಜೀವನವೇ ಅನೇಕ ತಿರುವುಗಳ, ಅನಿರೀಕ್ಷಿತಗಳ ಕಥೆಯಾದಾಗ, ಮಹಿಳೆ ಕತೆಯ ಕೇಂದ್ರ ವಸ್ತುವಾಗುತ್ತಾಳೆ. ಕತೆಯ ಒಡತಿಯೂ ಆಗುತ್ತಾಳೆ.

ಶೇಷಗಿರಿರಾವ್‌ರವರು ಗುರುತಿಸುವಂತೆ, ಕಾದಂಬರಿ ಒಂದು ಕಲೆ ಅಥವಾ ಇನ್ನೂ ಖಚಿತವಾಗಿ ಹೇಳುವುದಾದರೆ, ಅದು ಲಲಿತ ಕಲೆಗಳಲ್ಲಿ ಒಂದಾದ ಸಾಹಿತ್ಯದ ಒಂದು ವಿಭಾಗ. ಆದುದರಿಂದ ಸಾಹಿತ್ಯಕ್ಕೆ ಅನ್ವಯಿಸುವ ಸೂತ್ರಗಳೆಲ್ಲ ಕಾದಂಬರಿಗೆ ಅನ್ವಯಿಸುತ್ತವೆ. ಇವು ಮುಖ್ಯವಾಗಿ ಎರಡು: ಮೊದಲನೆಯದಾಗಿ ಜೀವನದಲ್ಲಿ ಇಲ್ಲದ ಅಥವಾ ನಮ್ಮ ಕಣ್ಣಿಗೆ ಕಾಣದ ಒಂದು ಕ್ರಮವನ್ನು ಒಂದು ಮಾದರಿಯನ್ನು ಕಥೆಗಾರ ಕೃತಿಯಲ್ಲಿ ಸಾಧಿಸಬೇಕಾಗುತ್ತದೆ. ಜೀವನದಲ್ಲಿ ಹಲವಾರು ಘಟನೆಗಳು ನಡೆಯುತ್ತವೆ. ವ್ಯಕ್ತಿಯ ಜೀವನದಲ್ಲಿ ಯಾವ ಒಂದು ಕ್ರಮವೂ ಸಾಮಾನ್ಯವಾಗಿ ನಮಗೆ ಕಂಡು ಬರುವುದಿಲ್ಲ. ಯಾವ ಒಂದು ಪೂರ್ವ ಸಂಕಲ್ಪಿತ ಗುರಿಯೂ ಇಲ್ಲದೆ ಘಟನೆಗಳು ಹೇಗೋ ನಡೆಯುವಂತೆ ಕಂಡು ಬರುತ್ತವೆ. ಆದರೆ ಕಲೆಯಲ್ಲಿ ಒಂದು ನಕ್ಷೆ, ಒಂದು ಗುರಿ ಅತ್ಯಗತ್ಯ. ಕಾವ್ಯದ ಲಕ್ಷಣದಲ್ಲಿ, ಏನನ್ನು ಬಿಂಬಿಸಬೇಕೆಂದು ಹೊರಡಲಾಗುತ್ತದೋ, ಆ ಸಂಗತಿಯನ್ನು ಸಾಧ್ಯವಾದಷ್ಟು ಭಾಷೆಯಲ್ಲಿ ಅಡಗಿಸಿ ಹೇಳಲು ಸಾಕಷ್ಟು ಅವಕಾಶವಿರುತ್ತದೆ. ಆದರೆ, ಕತೆ-ಕಾದಂಬರಿಗಳಲ್ಲಿ ಸಂಗತಿಗಳನ್ನು ಬಿಡಿಸಿ ಹೇಳಬೇಕಾದುದು ಅನಿವಾರ್ಯ. ಕಥನಕ್ಕೆ ತಕ್ಕ ವಿವರಗಳನ್ನು ತರ್ಕಬದ್ಧವಾಗಿ, ಪಾತ್ರಗಳನ್ನು ಸೃಷ್ಟಿಸಿ, ಸಂದರ್ಭಕ್ಕೆ ಅನುಗುಣವಾಗಿ ನಿದರ್ಶನಗಳನ್ನು ನೀಡಿ ಕಥಾ ಹಂದರ ನಿರ್ಮಿಸಬೇಕಾಗುತ್ತದೆ. ಕತೆಗಿಂತ ಕಾದಂಬರಿಯಲ್ಲಿ ಲೇಖಕರಿಗೆ ಹೆಚ್ಚು ಸ್ವಾತಂತ್ರ್ಯವಿರುತ್ತದೆ. ಅಂದರೆ, ಕತೆಯಲ್ಲಿ ಬಳಕೆಯಾಗುವ ಸಂಗತಿಗಳನ್ನು-ಸಾಧನಗಳನ್ನು ಮಿತವಾಗಿ ಬಳಸಬೇಕು. ಕಾದಂಬರಿಯಲ್ಲಿ, ಪಾತ್ರಗಳನ್ನು ವಿಸ್ತರಿಸುವ, ಕತೆಯ ಜಾಡನ್ನು ಬೇರೆ ಬೇರೆ ನಿಟ್ಟಿನಲ್ಲಿ ದೀರ್ಘಗೊಳಿಸುವ ಸಂಭವ ಹೆಚ್ಚಿರುತ್ತದೆ.

ಕಾದಂಬರಿಗಳಲ್ಲಿ ಇರುವ ಹಾಗೆ ಸಣ್ಣ ಕತೆಗಳಲ್ಲಿಯೂ ವಸ್ತು ವೈವಿಧ್ಯ, ರೀತಿ, ನಿರೂಪಣಾವೈವಿಧ್ಯ ಹಾಗೂ ಕೌಶಲಗಳನ್ನು, ಭಾಷೆಯ ಜ್ಞಾನವನ್ನು ಗಮನಿಸಬಹುದು. ಸಾಮಾಜಿಕ ಸಂಗತಿಗಳು, ರಾಜಕಾರಣದ ಹುನ್ನಾರ, ಐತಿಹಾಸಿಕ, ಪೌರಾಣಿಕ, ಕಲ್ಪನಾತ್ಮಕ, ಭಾವನಾತ್ಮಕ ವಸ್ತುಗಳು ಸಣ್ಣ ಕತೆಯ ವಸ್ತುವಾಗಬಹುದು.

ಕಥಾ ಹಂದರವನ್ನು ಹೆಣೆಯುವಾಗ ಅನೇಕ ತಂತ್ರಗಳನ್ನು ಅಳವಡಿಸಿಕೊಳ್ಳಲಾಗಿರುತ್ತದೆ. ಹೊರ ನೋಟಕ್ಕೆ ಸ್ಪಷ್ಟವಾಗಿ ಕಾಣದ ಕತೆಯೊಳಗೆ ಅಂತರ್ಗತವಾಗಿರುವ ಸರಪಣಿಯನ್ನು ಸೂಕ್ಷ್ಮವಾಗಿ ಗಮನಿಸಬಹುದಾಗಿದೆ. ಕತೆಗಾರರು ಅನುಸರಿಸುವ ಕೆಲವು ಮಾದರಿಗಳನ್ನು ಕೊಡುವುದಾದರೆ-

೧. ಆತ್ಮ ಕಥನದ ಮಾದರಿ. ಇಲ್ಲಿ ಕತೆಯನ್ನು ತನ್ನದೆಂದು ಹೇಳಿಕೊಳ್ಳುವ ಅವಕಾಶವಿದ್ದು, ಅದಕ್ಕೆ ತಕ್ಕ ಪಾತ್ರಗಳನ್ನು, ಸಂದರ್ಭಗಳನ್ನು ಸೃಷ್ಟಿಸಲಾಗಿರುತ್ತದೆ.

೨. ಕತೆ ಹೇಳುವವರು, ಕತೆಯ ಹೊರಗಿನಿಂದಲೇ ಪಾತ್ರಗಳನ್ನು, ಘಟನೆಗಳನ್ನು ನಿಯಂತ್ರಿಸುತ್ತಿರಬಹುದು

೩. ಕತೆಯ ಒಂದು ಪಾತ್ರವಾಗಿ ಕತೆಯನ್ನು ನಿರೂಪಿಸುವುದು. ಈ ಮಾದರಿಯು ಕತೆಯೊಳಗೆ ಕತೆಗಾರರು ತನ್ಮಯರಾಗಿ ತೊಡಗಿಸಿಕೊಳ್ಳಲು ಸಹಕಾರಿಯಾಗುತ್ತದೆ. ಬದುಕಿನ ಅಸ್ತಿತ್ವದ ಹುಡುಕಾಟಕ್ಕೆ ಈ ಮಾದರಿ ಉಪಯುಕ್ತಕಾರಿಯಾಗಿದೆ

೪. ಪತ್ರ, ದಿನಚರಿ ರೂಪದ ಮಾದರಿ

೫. ಕಥನದ ಎಲ್ಲ ಪಾತ್ರಗಳೂ ಕತೆಯನ್ನು ನಿರೂಪಿಸುವ ವಿಧಾನ. ಇಂತಹ ಮಾದರಿಯನ್ನು ನಿಭಾಯಿಸುವಾಗ ಬಹು ಎಚ್ಚರಿಕೆಯಿಂದಿರಬೇಕಾಗುತ್ತದೆ. ಕತೆಯಲ್ಲಿ ತಾವು ಒಂದು ಪಾತ್ರವಾಗಿ ಕಾಣಿಸಿಕೊಳ್ಳುವುದಕ್ಕಿಂತ ಭಿನ್ನವಾದ ಈ ತಂತ್ರವನ್ನು ಆಯ್ಕೆ ಮಾಡಿಕೊಳ್ಳಬಹುದು.

೬. ಓದುಗರನ್ನು ಸಂಬೋಧಿಸಿ ಕತೆಗಾರರೇ ನೇರವಾಗಿ ಕತೆಯನ್ನು ನಿರೂಪಿಸುವುದು.

ಹಲವಾರು ಕತೆಗಾರರು ಬಳಸಿಕೊಂಡ ಮೇಲಿನ ಮಾದರಿಗಳನ್ನು ಹೊರತು ಪಡಿಸಿದ, ಇನ್ನೂ ಬೇರೆ ಬೇರೆ ಮಾದರಿಗಳನ್ನು ಕೃತಿಕಾರರು ಪ್ರಯೋಗ ಮಾಡುತ್ತಲೇ ಇರುತ್ತಾರೆ. ಕತೆಯಲ್ಲಿ ಬಳಕೆಯಾಗುವ ಭಾಷೆ ವಾಚ್ಯವಾಗಿರುತ್ತದೆ ಎಂದು ಭಾವಿಸುವ ಅಗತ್ಯವಿಲ್ಲ. ಕತೆಯಲ್ಲಿ ಬಳಸುವ ಭಾಷೆ ಕಾವ್ಯಮಯತೆಯನ್ನೂ, ನಾಟಕೀಯತೆಯನ್ನೂ ಬಳಸಿಕೊಂಡಿರಬಹುದು. ಕತೆಯ ಪರಿಣಾಮಕತೆಗೆ ತಕ್ಕಂತೆ ಪಾತ್ರಗಳ ಸಂಭಾಷಣೆಯೊಂದಿಗೆ, ಭಾವಾಭಿನಯವನ್ನೂ ವಿವರಿಸುವ ಅವಕಾಶಗಳಿರುತ್ತವೆ.

ತಿರುಮಲಾಂಬ, ಶ್ಯಾಮಲಾದೇವಿಯವರಿಂದ ತ್ರಿವೇಣಿ ಮುಂತಾದವರ ಕತೆ–ಕಾದಂಬರಿಗಳ ಕುರಿತು ಇದುವರೆಗೂ ಸರಿಯಾದ ವಿಮರ್ಶೆಗಳು ಮೂಡಿ ಬಂದಿಲ್ಲ. ಕಾರಣ, ಪುರಷರು ರಚಿಸಿದ ಕೃತಿಗಳೊಡನೆ ಹೋಲಿಸಿ ನೋಡುವ ಕ್ರಮದಿಂದಾಗಿ. ಪ್ರಗತಿಪರ ವಿಮರ್ಶಕರೆನಿಸಿಕೊಂಡ ಗಿರಡ್ಡಿ ಗೋವಿಂದರಾಜರು ಮಹಿಳೆಯರ ಕತೆ–ಕಾದಂಬರಿಗಳನ್ನು ನೋಡಿರುವ ದೃಷ್ಟಿಕೋನ ಕಟುವಾಗಿದೆ.

ಮಹಿಳೆಯರ ಕಾದಂಬರಿಗಳನ್ನು ಕುರಿತು ಗಿರಡ್ಡಿ ಗೋವಿಂದರಾಜರವರು "ಕಥೆಗೆ ಕಾಲಿಲ್ಲ ಎನ್ನುತ್ತಾರೆ. ಈ ಕಾದಂಬರಿಗಳ ಕಥೆಗಳಿಗೆ ಕಾಲುಗಳೇನೋ ಇವೆ; ಆದರೆ ಅಡ್ಡಾದಿಡ್ಡಿಯಾಗಿವೆ. ಮುಖ್ಯ ಸಮಸ್ಯೆಯೆಂದರೆ ಈ ಕಥೆಗಳಿಗೆ ತಲೆ ಇಲ್ಲ. ಎರಡನೆಯ ವರ್ಗದ ಕಾದಂಬರಿಕಾರ್ತಿಯರ ಸಮಸ್ಯೆಯೂ ತಲೆಯದೇ. ಆದರೆ ಅವರ ಕಥೆಗಳಿಗೆ ತಲೆ ಇರದಿದ್ದರೂ ಕಾಲು ನೆಟ್ಟಗಿವೆ. ಇವರು ಕಥೆಯನ್ನು ಹೆಚ್ಚು ಸಹಜವಾಗಿ ಆಕರ್ಷಕವಾಗಿ ಹೇಳಿಕೊಂಡು ಹೋಗಬಲ್ಲರು. ಸಂವಿಧಾನದಲ್ಲಿ ಒದು ಬಗೆಯ ಅಚ್ಚುಕಟುತನ ಕಾಣುತ್ತದೆ. ಪಾತ್ರಗಳು ಹೆಚ್ಚು ಸುಸಂಗತವಾಗಿ ವರ್ತಿಸುತ್ತವೆ. ಕೆಲವೊಂದು ಸಲ ಪಾತ್ರಗಳ ಚಿತ್ರಣಕ್ಕಾಗಿಯೇ ಆಕರ್ಷಕ ಘಟನೆಗಳಿಗಾಗಿಯೇ ಇವು ಓದಿಸಿಕೊಂಡು ಹೋಗುತ್ತವೆ" (ಸಮಗ್ರ ವಿಮರ್ಶೆ, ಸಂಪುಟ–೨, ಪುಟ–೧೬೧) ಎಂದಿದ್ದಾರೆ. ವ್ಯಕ್ತಿಯ ದೇಹಾಕೃತಿಯ ರೂಪಕವನ್ನು ನೀಡಿ ಮಹಿಳೆಯರ ಕೃತಿಗಳನ್ನು 'ಮೌಲ್ಯಮಾಪನ' ಮಾಡಿದ್ದಾರೆ. ಗಿರಡ್ಡಿಯವರ ವಿಮರ್ಶೆಗೆ

ಉತ್ತರವೆಂಬಂತೆ, ಕೇಶವ ಶರ್ಮರವರು ವಿವರಣಾತ್ಮಕ ಮತ್ತು ಚಿತ್ರಶಕ್ತಿಯನ್ನುಳ್ಳ ಮಹಿಳೆಯರ ಬರವಣಿಗೆಯ ರೂಪವು ದೋಷವಾಗಿರದೆ, ಅವರ ಅನನ್ಯತೆಯನ್ನು ಸೂಚಿಸುತ್ತದೆ ಎಂದು ತಿಳಿಸುತ್ತಾ "ಹೆಣ್ಣುಮಕ್ಕಳಿಗೆ ತಲೆಯೇ ಇಲ್ಲ ಬೇರೆಲ್ಲಾ ಇದೆ ಎನ್ನುವ ಸಾಂಪ್ರದಾಯಿಕ ತಿಳುವಳಿಕೆಯ ಸಂದರ್ಭದಲ್ಲಿ ಸ್ತ್ರೀಯರು ಬರೆಯಲು ಶುರು ಮಾಡಿದ್ದು ಕನ್ನಡದ ವಾತಾವರಣದಲ್ಲಿ ಒಂದು ಕ್ರಾಂತಿಕಾರಕ ಘಟನೆಯೇ ಆಗಿದೆ. ತಾಯ್ತನದ ಎಲ್ಲಾ ಸೌಖ್ಯವನ್ನು ಅನುಭವಿಸುವ ಸ್ತ್ರೀಯರು ಕತೆಗಳಿಗೆ ತಾಯಂದಿರಾಗುವ ಪ್ರಕರಣವು, ಪುರುಷ ನಿಷ್ಠೆ ಸಮಾಜಕ್ಕೆ ಎತ್ತಿದ ಮೊದಲನೆಯ ಸವಾಲಾಗಿದೆ. ಸ್ತ್ರೀಯರಿಗೆ ಇರುವ ಮೊದಲ ಗುಣಾತ್ಮಕ ಅಂಶವೆಂದರೆ, ಅವರಲ್ಲಿ ಅಂತಸ್ಥವಾಗಿರುವ ಕಲ್ಪನೆಯ ಅಂಶಗಳೂ ಎಂದು ಆಲಿಶಿಯಾ ಬಿಸ್ಟ್ರಕರ್ ವಾದಿಸಿರುವುದು ಗಮನಾರ್ಹ. ಕನ್ನಡದ ಮೊದಲ ಕತೆಗಾರ್ತಿಯರು ಸ್ತ್ರೀಯರ ಸಮಸ್ಯೆಗಳ ಬಗೆಗೆ ಎತ್ತಿದ ಪ್ರಶ್ನೆಗಳು ಮಹಿಳಾ ಸಮಸ್ಯೆಗಳ ಅನನ್ಯತೆಯಿಂದ ಹುಟ್ಟಿಕೊಂಡವುಗಳಾಗಿವೆ. ಇವರ ಕತೆಗಳಲ್ಲಿ ಸ್ವರಕ್ಷಣೆಯ ಮನೋಭಾವವು ಪ್ರಬಲ ಭೂಮಿಕೆಯಾಗಿ ಕೆಲಸ ಮಾಡಿವೆ. (ಸಾಹಿತ್ಯ ವಿಮರ್ಶೆ, ಪುಟ-೯೯)

ಕನ್ನಡ ಸಣ್ಣ ಕತೆಗಳ ಮಹಿಳಾ ಪರಂಪರೆಯಲ್ಲಿ ಆರಂಭದಿಂದ ಹಿಡಿದು ಇಂದಿನವರೆಗೆ ಅನೇಕ ರೂಪಾಂತರಗಳನ್ನು, ಭಿನ್ನ ನಿಲುವುಗಳನ್ನು ಪಡೆದುಕೊಳ್ಳುತ್ತಾ ಸಾಗಿದೆ. ಆರಂಭ, ಮಧ್ಯ, ಅಂತ್ಯ ಎಂದು ಆರಂಭದಲ್ಲಿ ಸುಲಭವಾಗಿ ಗುರುತಿಸಬಹುದಾಗಿತ್ತು. ಎಪ್ಪತ್ತರ ದಶಕದ ನಂತರ ಬರೆಯ ತೊಡಗಿದ ಅನೇಕ ಕತೆಗಾರ್ತಿಯರು, ಮಹಿಳಾ ಕಥನ ಸಾಹಿತ್ಯದ ದಿಕ್ಕನ್ನು ಬೇರೆಡೆ ತಿರುಗಿಸಲು ಹೊಸ ಹೊಸ ಪ್ರಯತ್ನಗಳನ್ನು ಮಾಡುತ್ತಿರುವುದು ಸಂತಸದ ಸಂಗತಿಯಾಗಿದೆ. ಹೆಚ್ಚಿನ ಕತೆಗಾರ್ತಿಯರು ಹೆಣ್ಣಿನ ಸಮಸ್ಯೆಗಳ ಬಗ್ಗೆ ಆಳವಾದ ಅರಿವನ್ನು ಹೊಂದಿದವರು. ಕಥನದ ಮೂಲಕ ತಾವು ಏನನ್ನು ಪ್ರತಿಪಾದಿಸಬೇಕೆಂಬ ತುಡಿತ ಎದ್ದು ಕಾಣುತ್ತದೆ. ಸಾಹಿತ್ಯದ ವಸ್ತು ಹಾಗೂ ಅಭಿವ್ಯಕ್ತಿಯ ಬಗ್ಗೆ ಎಚ್ಚರಿಕೆಯನ್ನು ವಹಿಸಿ, ಹೊಸ ಪ್ರಜ್ಞೆಯನ್ನು ಹುಟ್ಟು ಹಾಕುತ್ತಿದ್ದಾರೆ. ಮಹಿಳೆಯರ ಕತೆ ಮತ್ತು ಕಾದಂಬರಿಯ ಅಭಿವ್ಯಕ್ತಿಯನ್ನು ಪ್ರತ್ಯೇಕ ಅಧ್ಯಾಯಗಳಲ್ಲಿ ಚರ್ಚೆಗೆ ಒಳಗು ಮಾಡಲಾಗಿದೆ.

ಅಭಿವ್ಯಕ್ತಿ ಕ್ರಮದ 'ತಾತ್ವಿಕತೆ' ಎನ್ನುವುದು, ಕೃತಿಯು ಒಳಗೊಂಡಿರುವ ತತ್ವ, ಸಿದ್ಧಾಂತವೆಂದು ಭಾವಿಸಲಾಗಿದೆ. ಯಾವುದೇ ಕೃತಿ ಒಂದು ದೃಷ್ಟಿಕೋನ ಅಥವಾ ಹಲವು ದೃಷ್ಟಿಕೋನಗಳ ಮೊತ್ತವಾಗಿರುತ್ತದೆ. ಕೃತಿಯ ರಚನಾತ್ಮಕ ಚೌಕಟ್ಟಿನಲ್ಲಿ ವ್ಯಕವ್ತವಾಗಿರುವ ಧೋರಣೆ, ದೃಷ್ಟಿಕೋನಗಳನ್ನು ಕೃತಿಯಿಂದ ಬೇರ್ಪಡಿಸಿ ಅಧ್ಯಯನ ಕೈಗೊಳ್ಳಬಹುದಾಗಿದೆ.

ಅಭಿವ್ಯಕ್ತಿ ಕ್ರಮದ ತಾತ್ವಿಕ ಸ್ವರೂಪವನ್ನು ಶೋಧಿಸುವಾಗ ಎರಡು ಕ್ರಮಗಳನ್ನು ಅನುಸರಿಸಿದೆ. ಈಗಾಗಲೇ ರೂಪಗೊಂಡಿರುವ ಅಭಿವ್ಯಕ್ತಿ ಕ್ರಮದ ರೂಪರೇಷೆಗಳು ಮತ್ತೊಂದು ಮಹಿಳೆಯರು ಆಯ್ದುಕೊಳ್ಳುವ/ ಆಯ್ದುಕೊಂಡ ತಾತ್ವಿಕ ಸ್ವರೂಪದ ಬಗ್ಗೆ ವಿಶ್ಲೇಷಿಸಲಾಗಿದೆ. ಅಭಿವ್ಯಕ್ತಿ ಎನ್ನುವುದನ್ನು ಕೆಳಗಿನಂತೆ ಗ್ರಹಿಸಲಾಗಿದೆ. ಅಭಿವ್ಯಕ್ತಿ, ವ್ಯಕ್ತಿಯ ಭಾವಾಭಿವ್ಯಕ್ತಿಗೆ ಸಂಬಂಧಿಸಿದೆ; ಕೃತಿಗಳಲ್ಲಿ ಬರಹಗಾರರು ಬಳಸುವ ಭಾಷೆಗೆ ಸಂಬಂಧಿಸಿದೆ; ಸಮಕಾಲೀನ ಸಂದರ್ಭದಲ್ಲಿ ಕೃತಿ ಕಟ್ಟಿಕೊಡುವ

ವಸ್ತು, ಆಶಯಕ್ಕೆ ಸಂಬಂಧಿಸಿದೆ. ಕೃತಿಯ ಸಂವಿಧಾನವನ್ನು ರೂಪಿಸುವ ತಾಂತ್ರಿಕ ಅಂಶಗಳಾದ ಭಾಷೆ, ಶೈಲಿ, ತಂತ್ರಗಳ ನಿರೂಪಣಾ ಕ್ರಮಕ್ಕೆ ಸಂಬಂಧಿಸಿದೆ. ಕೆಲವು ಬರಹಗಾರರು ಕೃತಿಯ ವಸ್ತುವಿಗೆ ಹೆಚ್ಚು ಒತ್ತುಕೊಟ್ಟಿದ್ದರೆ, ಮತ್ತೆ ಕೆಲವು ಬರಹಗಾರರು ತಾಂತ್ರಿಕ ಅಂಶಗಳಿಗೆ ಒತ್ತು ನೀಡಿರುವುದನ್ನು ಗುರುತಿಸಬಹುದಾಗಿದೆ. ನಿರ್ದಿಷ್ಟ ವಸ್ತು, ಆಶಯಗಳನ್ನು ಕೇಂದ್ರವಾಗಿರಿಸಿಕೊಂಡ ಬರಹಗಳನ್ನು 'ಕನಿಷ್ಟ'ವೆಂತಲೂ; ತಾಂತ್ರಿಕ ಅಂಶಗಳಿಗೆ ಗಮನ ನೀಡಿದ ಕೃತಿಗಳನ್ನು 'ಶ್ರೇಷ್ಠ'ವೆಂತಲೂ ಭಾವಿಸುವ ರಾಜಕಾರಣದ ಅಗತ್ಯ ಅಧ್ಯಯನಕ್ಕಿಲ್ಲ. ಆಯಾ ಕಾಲ–ಪ್ರಾದೇಶಿಕ ಸಂಗತಿಗಳನ್ನು ಅನುಸರಿಸಿ ಗಾಢವಾಗಿ ಸ್ಪಂದಿಸಿದ ಕೃತಿಗಳ ಅಭಿವ್ಯಕ್ತಿ ಕ್ರಮವು ಅಧ್ಯಯನಕ್ಕೆ ಯೋಗ್ಯವಾಗಿವೆ. ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿರುವ ಅಭಿವ್ಯಕ್ತಿ ಕ್ರಮದ ಸ್ವರೂಪವು ಈ ಮಹಾ ಪ್ರಬಂಧದ ಸಿದ್ಧಾಂತವನ್ನು ರೂಪಿಸಿಕೊಳ್ಳಲು, ತಳಪಾಯವನ್ನು ಒದಗಿಸಲು ಪೂರಕವಾಗಿದೆ.

# ಅಧ್ಯಾಯ ಐದು
# ಕಾವ್ಯದ ಅಭಿವ್ಯಕ್ತಿ

## ೫.೧ ಪ್ರವೇಶ

ಕವಿಗಳು ತಮ್ಮ ಚಿಂತನೆಗಳನ್ನು ಕಾವ್ಯದ ಮೂಲಕ ಮಂಡಿಸುವಾಗ, ಅನೇಕ ನಿರೂಪಣಾ ತಂತ್ರಗಳನ್ನು ಅನುಸರಿಸಿದ್ದಾರೆ. ಪ್ರಾರಂಭದ ಕವಿಗಳು ವ್ಯವಸ್ಥೆಯ ಸಂಗತಿಗಳಿಗೆ ಭಾವನಾತ್ಮಕವಾಗಿ ಸ್ಪಂದಿಸಿದ್ದಾರೆ; ಬದುಕಿನ ಅನುಭವಗಳಿಗೆ ಸ್ಪಂದಿಸಿ ಪ್ರಶ್ನೆ, ಸಂವಾದ ರೂಪದಲ್ಲಿ ಕಾವ್ಯ ರಚನೆ ಮಾಡಿದ್ದಾರೆ. ಹಿಂದಿನಿಂದ ಇಂದಿನವರೆಗೆ ಮಹಿಳೆಯರು ಅನುಭವಿಸಿದ ಯಾತನೆಗಳನ್ನು, ಎದುರಿಸಿದ ಸವಾಲುಗಳನ್ನು ಮಂಡಿಸಲು ಪುರಾಣ ಪಾತ್ರಗಳನ್ನು ಮಾನದಂಡವಾಗಿ ಬಳಸಿಕೊಂಡಿದ್ದಾರೆ. ಪ್ರಕೃತಿಯ ಚೇತನಗಳನ್ನು ಬದುಕಿನ ಅನುಭವಗಳೊಂದಿಗೆ ಮಿಳಿತಗೊಳಿಸಿ ಕವಿತೆಯಾಗಿಸಿರುವುದನ್ನು ಗುರುತಿಸಲಾಗಿದೆ. ೫೦-೬೦ರ ದಶಕದಲ್ಲಿ ಕಾವ್ಯ ರಚನೆಯ ಭಾಷೆ, ಶೈಲಿ, ತಂತ್ರಗಳಲ್ಲಿ ಪರಿಣಾಮಕಾರಿ ಬದಲಾವಣೆಗಳಾದವು. ಹರಳುಗಟ್ಟಿದ ಭಾಷೆಯಲ್ಲಿ, ಅಮೂರ್ತ ಪ್ರತಿಮೆಗಳನ್ನು ಮೂರ್ತ ರೂಪಕ್ಕಿಳಿಸುವ ವಿಶಿಷ್ಟ ಶೈಲಿಯನ್ನು ಕೆಲವು ಬರಹಗಾರರು ಸ್ವೀಕರಿಸಿದ್ದಾರೆ. ಪಾಶ್ಚಾತ್ಯ ತತ್ವ-ವಾದಗಳನ್ನು ಬಳಸಿಕೊಂಡು ಕಾವ್ಯದ ನಿರ್ದಿಷ್ಟ ತತ್ವಗಳನ್ನು ಒಡೆದು, ಬಹು ಅರ್ಥದ ಸಾಧ್ಯತೆಗಳನ್ನು ಶೋಧಿಸುವ ಕಾರ್ಯವನ್ನು ಗಮನಿಸಲಾಗಿದೆ.

ಮಹಿಳೆಯರ ಕಾವ್ಯವನ್ನು ಅಧ್ಯಯನ ಮಾಡಲು, ವಸಾಹತುಶಾಹಿ ಕಾಲಘಟ್ಟದಲ್ಲಿ ಬರೆಯಲು ಪ್ರಾರಂಭಿಸಿದ ತಿರುಮಲಾಂಬ, ತಿರುಮಲೆ ರಾಜಮ್ಮ, ಬೆಳಗೆರೆ ಜಾನಕಮ್ಮನವರ ಕಾಲಘಟ್ಟದಿಂದ ಇಂದಿನವರೆಗೆ ಬರೆಯುತ್ತಿರುವ ಮಹಿಳಾ ಕವಿಗಳನ್ನು ಪ್ರಾತಿನಿಧಿಕವಾಗಿ ಆಯ್ದುಕೊಳ್ಳಲಾಗಿದೆ. ಕಾವ್ಯದ ಅಭಿವ್ಯಕ್ತಿ ಕ್ರಮವನ್ನು ಶೋಧಿಸಲು ಕೆಲವು ಮಾದರಿಗಳನ್ನು ಗುರುತಿಸಿಕೊಳ್ಳಲಾಗಿದೆ.

- ಭಾವ ಪ್ರಧಾನ ಮಾದರಿ
- ಪುರಾಣ ಪಾತ್ರಗಳ ಪುನರಾವಲೋಕನ ಮಾದರಿ
- ಪ್ರತಿಮಾತ್ಮಕ ಮಾದರಿ
- ಪ್ರಕೃತಿ ಜನ್ಯ ಮಾದರಿ
- ನಿರಚನಾವಾದಿ ಮಾದರಿ

ಒಬ್ಬ ಕವಿಯ ಇಡಿಯಾದ ಕಾವ್ಯದ ಅಭಿವ್ಯಕ್ತಿಯನ್ನು ಶೋಧಿಸುವುದು ಅಧ್ಯಯನದ ಉದ್ದೇಶವಲ್ಲ. ಗುರುತಿಸಿಕೊಂಡಿರುವ ಕಾಲಘಟ್ಟದಲ್ಲಿ, ಮಹಿಳೆಯರು ಕಾವ್ಯ ರಚನೆಯಲ್ಲಿ ಅನುಸರಿಸುವ ಕೆಲವು ಸಾಮಾನ್ಯ ಮಾದರಿಗಳನ್ನು ಅಧ್ಯಯನ ಮಾಡಲಾಗಿದೆ.

### ೫.೨ ಭಾವಪ್ರಧಾನ ಮಾದರಿ

'Emotion' ಅಥವಾ 'Feeling' ಎಂಬ ಅರ್ಥಕ್ಕೆ ಸಂವಾದಿಯಾಗಿ 'ಭಾವ'ವನ್ನು ಅರ್ಥೈಸಲಾಗಿದೆ. ಮನಸ್ಸಿನಲ್ಲಿ ಉದ್ಭವಿಸಿದ ಭಾವನೆಗಳಲ್ಲಿ ಒಂದು ಅಮೂರ್ತ ದರ್ಶನ ಲಭ್ಯವಾಗುತ್ತದೆ.

"ಜೀವನದಲ್ಲಿಯ ಒಂದು ರಸ ನಿಮಿಷ, ಪ್ರಕೃತಿಯ ಒಂದು ರಮ್ಯ ವಿವರ, ದುರ್ದಮ್ಯವಾಗಿ ಉಕ್ಕಿ ಬರುವ ಒಂದು ಭಾವನೆ, ಅಪೂರ್ಣವಾಗಿ ಮೂಡಿ ಬಂದ ಒಂದು ವಿಚಾರ. ಮನುಷ್ಯ ಜೀವನದಲ್ಲಿಯ ಒಂದು ಸಣ್ಣ ಘಟನೆ, ಇವೇ ಕೇಂದ್ರ ಬಿಂದುವಾಗಿ ತಮಗನುಕೂಲವಾದ ಛಂದಸ್ಸು, ಭಾಷೆ, ಅಲಂಕಾರಗಳಲ್ಲಿ ಉಚಿತವಾಗಿ ಅಭಿವ್ಯಕ್ತಿಯನ್ನು ಪಡೆದು ಗೀತವಾಗಿ ಬರಬಹುದೆಂಬ ಮಾತು ಸಂಪೂರ್ಣವಾಗಿ ಹೊಸದಾಗಿತ್ತು. ಪೂರ್ವಸಿದ್ಧವಾಗಿರುವ ವೃತ್ತ ರೂಪಗಳಲ್ಲಿ ಕವಿ ತನ್ನ ಜೀವನಾನುಭವವನ್ನು ಎರಕ ಹೊಯ್ಯುವುದು ಪ್ರಾಚೀನ ಕಾವ್ಯದ ರೀತಿಯಾಗಿತ್ತು. ಕವಿಯ ಸ್ವಂತ ಜೀವನಾನುಭವವೂ ಕೂಡ ಸಾಮಾನ್ಯ ಜೀವನದ ಒಂದು ಅಂಶವಾಗಿ ಎಲ್ಲರಿಗೂ ಒಪ್ಪಿಗೆಯಾಗುವ ರೀತಿಯಲ್ಲಿಯೇ ಪ್ರಕಟವಾಗಬೇಕಿತ್ತು. ಕವಿಯ ವ್ಯಕ್ತಿತ್ವದ ಪ್ರಕಾಶಕ್ಕೆ ಅಲ್ಲಿ ಸ್ಥಾನವಿರಲಿಲ್ಲ. ಗ್ರಂಥದ ಕೌಶಲವೇ ಕಾವ್ಯದ ತಾರತಮ್ಯವನ್ನು ಅಳೆಯುವ ಮಾನದಂಡವಾಗಿತ್ತು. ಹೊಸ ಮಾದರಿಯ ಭಾವಗೀತ ಮಾತ್ರ ಕವಿಯ ವ್ಯಕ್ತಿತ್ವದ ಕುಲುಮೆಯಲ್ಲಿಯೇ, ಹುಟ್ಟುವಂಥದು. ಮೂಲಭಾವದ ಕಾವು, ವೇಗ, ಬಣ್ಣ, ಬೆಳಕುಗಳ ಮೇಲೆಯೇ ಅಭಿವ್ಯಕ್ತಿಯ ವಿವರಗಳೆಲ್ಲ ಅವಲಂಬಿಸಿರುತ್ತವೆ.." (ಯುಗಧರ್ಮ ಮತ್ತು ಸಾಹಿತ್ಯ ದರ್ಶನ, ಪುಟ–೩೯)

'ನವೋದಯ ಪಂಥ'ದ ಕಾವ್ಯದ ಲಕ್ಷಣವಾಗಿ ಈ ಮಾದರಿಯನ್ನು ಗುರುತಿಸಲಾಗಿದೆ. ಆ ಕಾಲಘಟ್ಟದಲ್ಲಿ ಕಾವ್ಯವನ್ನು ಬರೆದ ತಿರುಮಲಾಂಬ, ತಿರುಮಲೆ ರಾಜಮ್ಮ, ಬೆಳಗೆರೆ ಜಾನಕಮ್ಮನವರ ಮೇಲೆ ಬೇಂದ್ರೆ, ಕುವೆಂಪು ಮುಂತಾದವರ ಪ್ರಭಾವ–ಪ್ರೇರಣೆಗಳಾಗಿವೆ. ಆದರೆ ನಿರ್ದಿಷ್ಟವಾಗಿ ಯಾವ ಪಂಥಕ್ಕೂ ಮಹಿಳಾ ಕವಿಗಳು ಬದ್ಧರಾಗಿಲ್ಲ. ತಮ್ಮನ್ನು ಪ್ರೇರೇಪಿಸಿದ ಸಂಗತಿಗಳೊಂದಿಗೆ ಭಕ್ತಿಗೀತೆ, ಗೀತ ನಾಟಕಗಳು, ರಾಷ್ಟ್ರಭಕ್ತಿ, ದೇಶಭಕ್ತಿ, ನಾಡು ನುಡಿಯ ಅಭಿಮಾನದ ಕವಿತೆಗಳು ಕಾಣಿಸಿಕೊಂಡಿವೆ. ಜತೆಗೆ ಗೃಹಿಣಿಯರ ಸ್ಥಿತ್ಯಂತರ ಬದುಕನ್ನು ಕುರಿತಾದ ನೋಟಗಳೂ ವ್ಯಕ್ತವಾಗಿವೆ.

ನಂಜನಗೂಡಿನ ತಿರುಮಲಾಂಬ, ಕಲ್ಯಾಣಮ್ಮ, ಸರಸ್ವತಿ ಬಾಯಿ ರಾಜವಾಡೆ ಮುಂತಾದವರು ಸಾಹಿತ್ಯದ ಅನೇಕ ಪ್ರಕಾರದ ಬರಹಗಳಲ್ಲಿ ತೊಡಗಿದ್ದರು. ಗದ್ಯ ರೂಪದಲ್ಲಿ ಅವರು ಹೆಚ್ಚಿನ ಆಸಕ್ತಿ ತೋರಿದ್ದರೂ, ಕಾವ್ಯ ಪ್ರಕಾರವೂ ಇವರನ್ನು ಸೆಳೆದಿದೆ. ಮೊದಲ ತಲೆಮಾರಿನ ಕವಿಗಳಲ್ಲಿ 'ಭಾರತಿ' ಎಂದೇ ಖ್ಯಾತರಾದ ತಿರುಮಲೆ ರಾಜಮ್ಮ, ಬೆಳಗೆರೆ ಜಾನಕಮ್ಮ, ಜಯದೇವಿ ತಾಯಿ ಲಿಗಾಡೆಯವರು

ಪ್ರತ್ಯೇಕ ಸಂಕಲನಗಳಲ್ಲಿ ತಮ್ಮ ಕವಿತೆಗಳನ್ನು ಪ್ರಕಟಿಸಿದ್ದಾರೆ. ತಿರುಮಲೆ ರಾಜಮ್ಮ ಮತ್ತು ಬೆಳಗೆರೆ ಜಾನಕಮ್ಮನವರ ಕಾವ್ಯವನ್ನು ಈ ಅಧ್ಯಾಯದಲ್ಲಿ ಪ್ರಾತಿನಿಧಿಕವಾಗಿ ಆಯ್ದು ಅಧ್ಯಯನ ಮಾಡಲಾಗಿದೆ.

### ೫.೨.೧ ರಾಷ್ಟ್ರಭಕ್ತಿ ಭಾವದ ಅಭಿವ್ಯಕ್ತಿ

ತಿರುಮಲೆ ರಾಜಮ್ಮನವರ ಸಂಕಲನಗಳ ಶೀರ್ಷಿಕೆಗಳು ಸೂಚಿಸುವಂತೆ, ಅವರ ಕವನಗಳು ರಾಷ್ಟ್ರಭಕ್ತಿಯ ಭಾವವನ್ನು ವ್ಯಕ್ತಪಡಿಸುವಂತಹುದಾಗಿವೆ. ಇವರು ಆಯ್ದುಕೊಂಡ ರಾಷ್ಟ್ರಭಕ್ತಿಯ ಭಾವದ ಹಿನ್ನೆಲೆಯಲ್ಲಿ ದೈವಭಕ್ತಿಯೂ ಮಿಳಿತವಾಗಿದೆ. ಮಹಾತ್ಮಾಗಾಂಧಿಯವರ ತತ್ವ ಪ್ರಣಾಳಿಕೆಗಳು ಭಾರತಿಯವರನ್ನು ಅಪಾರವಾಗಿ ಪ್ರಭಾವಿಸಿವೆ. ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸದಿದ್ದರೂ ಪತ್ರಿಕೆಯ ಮೂಲಕ, ಕವಿತೆಗಳ ಮೂಲಕ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಭಗಿನಿಯರಿಗೆ ಕರೆಯುತ್ತಿದ್ದಾರೆ. ಸ್ವದೇಶಿ ವಸ್ತ್ರಧಾರಣೆ, ಶಸ್ತ್ರ ಸನ್ಯಾಸ, ಶಾಂತಿಯುತ ಸತ್ಯಾಗ್ರಹಗಳಿಗೆ ಬೆಂಬಲ ನೀಡಿರುವುದು ಅವರ ಕಾವ್ಯದ ಮೂಲಕ ವ್ಯಕ್ತವಾಗುತ್ತದೆ. 'ರಾಷ್ಟ್ರ ಶಕ್ತಿ' ಸಂಕಲನದ ಮೊದಲ ಮಾತಿನಲ್ಲಿ "ಎಲ್ಲಿಯೂ ರಾಷ್ಟ್ರ ಭಾವನೆಯಿಂದ ಭಿನ್ನ ರಚನೆ ಸಾಧ್ಯವಾಗಿಲ್ಲ. ನನ್ನ ಆಪ್ತತೆಗೆಲ್ಲಾ ಜೀವದುಸಿರಿಗೆಲ್ಲಾ ಆ ಭಾವವೇ ಪೂರ್ಣಾಧಿಕಾರ ವಹಿಸಿಕೊಂಡಿರುವಂತೆ ಜೀವನಾನುಭವಗಳಿಂದ ಸ್ಪಷ್ಟವಾಗುತ್ತಿದೆ" (ರಾಷ್ಟ್ರಶಕ್ತಿ, ಪುಟ–೦೭) ಎನ್ನುವುದು ಅವರ ಕಾವ್ಯದ ಉದ್ದೇಶವನ್ನು ಸ್ಪಷ್ಟಪಡಿಸುತ್ತದೆ. ದೇಶ ಭಕ್ತರನ್ನು ಹುರಿದುಂಬಿಸುವಲ್ಲಿ ಇವರ ಗೀತೆಗಳು ಅಂದು ಪ್ರಮುಖ ಪಾತ್ರವಹಿಸಿದ್ದವು.

ತೆರಳುವೆನು ಪೂರ್ಣ ಸ್ವರಾಜ್ಯವನು ತರಲಿಕೇ
ತರದಿರಲು ತೇಲಿಪೆನು ಈ ತನುವ ಸಾಗರದಿ
ಭರತ ವೀರರೆ! ವೀರ ಮಾತೆಯರೇ! ಸತಿಯರೇ!
ತೆರಳಿ ಬನ್ನಿರಿ ಹಂಗನುಳಿದು ಜನುಮದಲಿ ('ವೀರ ಸಂದೇಶ', ಅದೇ, ಪುಟ–೧೪)

'ನಮ್ಮದೀ ಭಾರತ' ಮುಂತಾದ ಕವನಗಳು ಸ್ವಾತಂತ್ರ್ಯ ಹೋರಾಟಕ್ಕೆ ಕರೆ ನೀಡಿದ ಕವಿತೆಗಳಾಗಿವೆ. ಸ್ವಾತಂತ್ರ್ಯ ಹೋರಾಟದ ತಲ್ಲಣಗಳನ್ನು ತಮ್ಮ ಕಲ್ಪನೆಯಲ್ಲಿ ಆವಾಹಿಸಿಕೊಂಡು, ಅದಕ್ಕೆ ಭಾವನಾತ್ಮಕವಾಗಿ ಸ್ಪಂದಿಸಿದ್ದಾರೆ.

ಗಾಂಧಿ, ನೆಹರು, ಲಾಲ್ ಬಹದ್ದೂರ್ ಶಾಸ್ತ್ರಿಯವರನ್ನು ಸ್ತುತಿಸುವ ಗೀತೆಗಳನ್ನು ರಾಜಮ್ಮನವರು ಬರೆದಿರುವರು. 'ದೀನ ಬಂಧು ದಯಾ ಸಿಂಧುವೆನಿಸಿದ ಮಹಾ ಮಾನವ'ನೆಂದು ನೆಹರೂವರನ್ನು ಕರೆದರೆ, ಲಾಲ್‌ಬಹದ್ದೂರ್ ಶಾಸ್ತ್ರಿಯವರನ್ನು 'ಏಕಬಾಣ ಏಕವಚನ ಏಕಪತ್ನೀವ್ರತಸ್ಥನಾದ ರಾಮ'ನನ್ನಾಗಿ ಪರಿಭಾವಿಸಿದ್ದಾರೆ. ರಾಷ್ಟ್ರ ಭಕ್ತಿ ಎನ್ನುವುದು ದೈವ ಭಕ್ತಿಯ ಮೂಲಕ ಹುಟ್ಟಿರುವುದಾಗಿದೆ. 'ರಾಷ್ಟ್ರದೈವ' 'ಸ್ವಾತಂತ್ರ್ಯ ಸೂರ್ಯದೇವ' 'ವೀರ ಜನನಿ' ಮುಂತಾದ ಪ್ರತೀಕಗಳನ್ನು ಸೃಷ್ಟಿಸಿಕೊಂಡಿದ್ದಾರೆ. ಮಹಾತ್ಮರನ್ನು ಕಾಯಲು 'ವೀರ ಜನನಿ' ಅಧಿದೇವತೆಯಾಗಿದ್ದಾಳೆ. ಭಾರತ ಸ್ವಾತಂತ್ರ್ಯ ಪಡೆಯಲು ಇವರು ಆಯ್ದುಕೊಳ್ಳುವುದು–ಶಸ್ತ್ರಾಸ್ತ್ರ ರಹಿತ ಹೋರಾಟ ಮತ್ತು ದೈವತ್ವಕ್ಕೆ ಮೊರೆ ಹೋಗುವ

ದಾರಿಗಳನ್ನು. 'ಸ್ವಾತಂತ್ರ್ಯ ಸೂರ್ಯದೇವ', 'ಶಸ್ತ್ರ ಸನ್ಯಾಸ' ಕವಿತೆಗಳು ರಕ್ತಪಾತ ಉಂಟುಮಾಡುವ ಶಸ್ತ್ರಾಸ್ತ್ರಗಳ ಉಗ್ರ ಹೋರಾಟವನ್ನು ಪ್ರತಿಭಟಿಸಿವೆ. ೧೯೩೪-೩೫ರಲ್ಲಿ ಪ್ರಕೃತಿ ವಿಕೋಪಗಳು ಉಂಟಾದಾಗ ಸ್ವಾತಂತ್ರ್ಯದ ಕನಸಿಗೆ ಕತ್ತಲೆ ಕವಿಯುತ್ತದೆ. ಇದಕ್ಕೆ ಕಾರಣಗಳನ್ನು ಶೋಧಿಸುತ್ತ:

ಅಸ್ತ್ರ ಶಾಸ್ತ್ರಗಳೆಮ್ಮ ಕೈ ಕಳಚಿದಂದೇ
ವಸ್ತು ವಾಹನಗಳನ್ನು ಒತ್ತೆ ಇಟ್ಟಂದೇ
ಶಾಸ್ತ್ರೀಯ ವಿದ್ಯೆಗಳ ಅಲ್ಲಗಳೆದಂದೇ
ನಾಸ್ತಿಕವಾದಕೆ ನಾಲಿಗೆಯ ಚಾಚಿದಂದೇ
ವಸ್ತು ಗುಣವರಿಯದೆ ವಿಜಾತೀಯ ರೂಢಿಗಳ
ಅಸ್ತುಯೆಂದೊಲಿದೊಲಿದು ಅನುಕರಿಸಿದಂದೇ
ವಿಸ್ತಾರ ವಾಙ್ಮಯದ ನಿಜ ಸಂಸ್ಕೃತಿಯ ಸುಪ್ರ
ಶಸ್ತಿಗಾಯ್ತಪಮಾನ ಶಾಸ್ತಿಯದಕೆಂದೇ ('ಸ್ವತಂತ್ರ್ಯ ಸೂರ್ಯದೇವ', ಅದೇ,ಪುಟ-೧೯)

ಎಂದು ಪರಿತಪಿಸಿ ಸ್ವಾತಂತ್ರ್ಯ ಸೂರ್ಯನ ಉದಯವನ್ನು ನಿರೀಕ್ಷಿಸುತ್ತಾರೆ. 'ಇಚ್ಛಾಶಕ್ತಿಯ ನಿರೀಕ್ಷಿಸಿ', 'ಸುಪ್ರಭಾತ' ಕವಿತೆಗಳು ಸ್ವಾತಂತ್ರ್ಯ ಪಡೆದ ಧನ್ಯತಾ ಭಾವವನ್ನು ಸೂಚಿಸಿವೆ. 'ಕಾಲ ನಿಯಾಮಕ', 'ಪರ್ವ ಕಾಲ', 'ವೀರಯುಗರಾರಂಭ', 'ಧ್ವಜಾಭಿಮಾನ', 'ನಲ್ಮೆಯ ಕನ್ನಡ ನಾಡು', 'ಜನನೀ ಜನ್ಮಭೂಮಿಶ್ಚ ಸ್ವರ್ಗಾದಸಿ ಗರೀಯನೇ' ಕವಿತೆಗಳು, ಶಾಲಾ ಮಕ್ಕಳಿಗಾಗಿ ರಚಿಸಲ್ಪಟ್ಟ ರಾಷ್ಟ್ರ ಭಕ್ತಿ ಗೀತೆಗಳಾಗಿವೆ. ಇವು ಸುಂದರವಾಗಿ ಹಾಡಿಕೊಳ್ಳುವ ಭಾವಗೀತೆ, ಪ್ರಾರ್ಥನಾ ಗೀತೆಗಳನ್ನು ಹೋಲುತ್ತವೆ.

ರಾಜಮ್ಮನವರ ಕಾವ್ಯದ ಭಾಷೆಯಲ್ಲಿ, ಸಂಸ್ಕೃತ ಮಿಶ್ರಿತ ಪದಗಳು ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ನಿಯತ ಪ್ರಾಸವನ್ನು ಅನುಸರಿಸುವ ರಾಜಮ್ಮನವರು, ಸಂಗೀತ ಬಲ್ಲವರಾದದ್ದರಿಂದ ತಾವು ರಚಿಸಿದ ಗೀತೆಗಳಿಗೆ ರಾಗ ತಾಳಗಳ ಸಂಯೋಜನೆಯನ್ನು ಮಾಡಿ, ಹಾಡಲು ಅನುಕೂಲ ಕಲ್ಪಿಸಿದ್ದಾರೆ.

ತಿರುಮಲೆ ರಾಜಮ್ಮನವರು ಸ್ವಾತಂತ್ರ್ಯ ಹೋರಾಟಕ್ಕೆ ತಮ್ಮದೇ ಆದ ಭಾವನಾತ್ಮಕ ನೆಲೆಯಲ್ಲಿ ಸ್ಪಂದಿಸಿದ್ದಾರೆ. ಇವರ ಗೀತರೂಪಕವಾದ 'ತಪಸ್ವಿನಿ'ಯಲ್ಲಿ ರಾಮ-ಸೀತೆ-ಲಕ್ಷ್ಮಣರ ಕತೆಗಿಂತ ಊರ್ಮಿಳೆಯ ಒಳತೋಟಿಯನ್ನು ಹಿಡಿಯುವ ಪ್ರಯತ್ನವಿದೆ.

ತಿರುಮಲೆ ರಾಜಮ್ಮನವರ ಸಮಕಾಲೀನರಾದ ಬೆಳಗೆರೆ ಜಾನಕಮ್ಮ ಆ ಕಾಲ ಘಟ್ಟದ ಪ್ರಮುಖ ಕವಿ. ಆ ಕಾಲದ ಇತರೆ ಮಹಿಳಾ ಕವಿಗಳಿಗಿಂತ ಭಿನ್ನವಾಗಿ ನಿಲ್ಲಲು ಕಾರಣ ಜಾನಕಮ್ಮನವರು ಆಯ್ದುಕೊಂಡ ಪರಿವರ್ತಿತಗೊಂಡ ಹೆಣ್ಣಿನ ಅಂತರಾಳದ ಅನಾವರಣದಿಂದಾಗಿ. ದಕ್ಕಿದ ಜಗತ್ತನ್ನು ತಮ್ಮ ಕಲ್ಪನೆಯಲ್ಲಿ ಮುಕ್ತವಾಗಿ ಸೆರೆ ಹಿಡಿವ ತಾಜಾತನದ ಭಾವಗಳು ಕವಿತೆಗಳಲ್ಲಿ ಹಾಸುಹೊಕ್ಕಾಗಿವೆ.

**೫.೨.೨ ಬದುಕಿನ ಭಾವಸ್ಪಂದನದ ಅಭಿವ್ಯಕ್ತಿ**

"ಜಾನಕಮ್ಮ ೧೯೪೦ರ ಸುಮಾರಿಗೆ ಬರೆದಿಡುವ ಹವ್ಯಾಸ ಬೆಳೆಸಿಕೊಂಡರು. ಅವರಿಗೆ ಕ್ಲಿಷ್ಟ

ಪದಗಳ ಬರೆವುದು ಕಷ್ಟವಾಗುತ್ತಿತ್ತು. ಕಾಗುಣಿತದ ತಪ್ಪುಗಳೂ ಉಂಟಾಗುತ್ತಿದ್ದವು. ತೌರಿಗೆ ಬಂದಾಗ ತಮ್ಮ–ಕೃಷ್ಣ ಶಾಸ್ತ್ರಿಯ ಕೈಗೆ ಕೊಟ್ಟು ತಿದ್ದಿಸಿಕೊಳ್ಳುವರು. ಮಗ ಸ್ಕೂಲಿಗೆ ಹೋಗುತ್ತಿದ್ದ ಸಮಯದಲ್ಲಿ "ಈ ಪದ ಬರೆಯೋದು ಹೇಗೆ ನಿನ್ನ ಮೇಷ್ಟ್ರನ್ನು ಕೇಳಿ ಬಾ" ಎಂದು ಕಳುಹಿಸುತ್ತಿದ್ದುದುಂಟು. ಓದು ಬರಹಗಳಿಂದ ಬಾಲ್ಯದಿಂದಲೇ ದೂರಾದ ಜಾನಕಮ್ಮನಿಗೆ ತನ್ನ ಕವಿತೆಗಳ ಬಗ್ಗೆ ಎಲ್ಲಿಲ್ಲದ ಅಳುಕು, ಅಂಜಿಕೆ, ಯಾರಿಗಾದರೂ ತೋರಿಸಿದರೆ ಹಾಸ್ಯಮಾಡಿ ನಗುವರೇನೋ ಎಂಬ ಭಯ. ತಾ ಕಲಿತವಳಲ್ಲ ಎಂಬ ಕೀಳರಿಮೆ. ಆಕೆ ಯಾವ ಪುಸ್ತಕವನ್ನು ಓದಿಕೊಂಡಿರಲಿಲ್ಲ. ಯಾರ ಶೈಲಿ ಪ್ರಭಾವಗಳಿಗೂ ಒಳಗಾದವರಲ್ಲ, ಛಂದಸ್ಸು, ಧ್ವನಿಗಳ ಅರ್ಥ ಬಲ್ಲವರಲ್ಲ, ಹಾಡುವ ಸಹಜ ಧರ್ಮ ಜಾನಕಮ್ಮನವರದು. ಕೇಳಿದ ನಾಲ್ಕು ಜನ ಸಾಹಿತ್ಯ ಪ್ರೇಮಿಗಳು ಆಸ್ವಾದಿಸಿ ಮೆಚ್ಚಿದರೆ ಅದೇ ತೃಪ್ತಿ (ಬೆಳಗೆರೆ ಜಾನಕಮ್ಮ ಬದುಕು ಬರಹ, ಪುಟ–೦೪) ಎನ್ನುವ ವಾತಾವರಣದಲ್ಲಿ ಬೆಳೆದವರು. ಕೌಟುಂಬಿಕ ಪರಿಸರದಲ್ಲಿ ತಮ್ಮೊಳಗೆ ಸ್ಫುರಿಸಿದ ಭಾವಗಳಿಗೆ ಕವಿತೆಯ ರೂಪ ತೊಡಿಸುವಲ್ಲಿ ಯಶಸ್ವಿಯಾಗಿದ್ದಾರೆ. ಹೊರಗಿನ ಜಗತ್ತಿನ ಪರಿಚಯವಿಲ್ಲದಿದ್ದರೂ ಇವರ ಕವಿತೆಗಳು ಸಾಮಾಜಿಕ ಸಮಸ್ಯೆಗಳಿಗೆ ಸಹಜವಾಗಿ ಸ್ಪಂದಿಸಿವೆ. ಮಾಸ್ತಿ, ಬೇಂದ್ರೆ ಮುಂತಾದವರ ಭ್ರಾತೃ ಭಾವದ ಸಾಂಗತ್ಯದಲ್ಲಿ ಪುಳಕಗೊಂಡ ಜಾನಕಮ್ಮನವರ ಕಾವ್ಯದ ಅಭಿವ್ಯಕ್ತಿ ಪ್ರಾಮಾಣಿಕತೆಯಿಂದ ಕೂಡಿದೆ. ಹೆಣ್ಣಾಗಿ ಅನುಭವಿಸಿದ ಸಂವೇದನೆಗಳು ಮೊದಲ ಬಾರಿಗೆ ಸಾರ್ವತ್ರಿಕ ಸಂಗತಿಯಾಗಿ ಪ್ರಕಟವಾದವು.

ಮಹಿಳೆಯರು ಕಾವ್ಯ ಬರೆಯುವ ಹೊತ್ತಿಗೆ ಪುರುಷ ಕವಿಗಳು ಅನೇಕ ಪ್ರಯೋಗಗಳನ್ನು ಕೈಗೊಂಡಿದ್ದರು. ಕಾವ್ಯ ಹೆಣೆಯುವುದು ಮಹಿಳೆಯರಿಗೆ ಹೊಸದಲ್ಲ. ಆದರೆ, ಕಾವ್ಯದ ಬರವಣಿಗೆ ಹೊಸದು. ಜಾನಕಮ್ಮನವರಿಗೆ ಸಾಹಿತ್ಯ ಲೋಕದ ಚಿಂತನೆಗಳನ್ನು ಅರಿಯುವ ವಾತಾವರಣ ಅಷ್ಟಾಗಿ ಇರಲಿಲ್ಲ. ಅವರದು ಭಾವ ಪ್ರಪಂಚ.

ಭಾವಗಳು ಉನ್ನತದ
ವಜ್ರಗಳು ಇದ್ದಂತೆ
ವಾಕ್ಯಗಳು ಚಿನ್ನದಂತೆ
ನಿನ್ನ ನಿಪುಣತೆಯೊಡನೆ
ಕಟ್ಟಡವ ಕಟ್ಟಿರಿಸಿ
ಪೂರ್ಣತೆಯು ಬಹುದೆಂದಿತು ('ರೂಪ', ಅದೇ, ಪುಟ–೩೧)

ಭಾವ, ಕವಿತೆಯ ಒಳರೂಪವಾಗಿದೆ. ಶಬ್ದ ವಾಕ್ಯಗಳನ್ನು ಅಚ್ಚುಕಟ್ಟಾಗಿ ಜೋಡಿಸಿ ಕಟ್ಟುವುದು, ರಾಗ ತಾಳಗಳಿಗೆ ಹೊಂದಿಸಿ ಬರೆಯುವುದು ಕಾವ್ಯದ ಹೊರ ರೂಪವಾಗಿದೆ. ತಮಗೆ ದಕ್ಕಿದ ಬದುಕಿನ ದರ್ಶನಕ್ಕೆ, ಒಳತೋಟಗಳಿಗೆ ಭಾವಪೂರ್ಣವಾಗಿ ಸ್ಪಂದಿಸಿದ್ದಾರೆ. ಜಾನಕಮ್ಮನವರು ಕಂಡ ಸೃಷ್ಟಿಯ ಜಗತ್ತಿನ ಹಿಂದೆ 'ದೇವ'ನ ಕೈವಾಡವಿದೆ.

ಭಾವದೊಳಗಿಹುದು
ದೇವ ಸೃಜಿಸಿದ ಜಗವು
ದೇವನಡಗಿಹನದರ
ಮಧ್ಯದೊಳಗೆ('ಭಾವ', ಅದೇ,ಪುಟ-೧೦೦)

ಎಂದು ಭಾವಿಸುವ ಜಾನಕಮ್ಮನವರು ಹೆಣ್ಣಿನ ಬದುಕಿನ ತೊಳಲಾಟಗಳಿಗೆ ಕಾರಣನಾದ ದೇವನನ್ನೇ 'ಚಂಡ ಶಾಸನ' ಕವಿತೆಯಲ್ಲಿ ತರಾಟೆಗೆ ತೆಗೆದುಕೊಳ್ಳುತ್ತಾರೆ.

ಗಿಡವೆಂದು ಬಗೆದೆಯೋ
ಹೆಣ್ಣು ಜನ್ಮದ ಒಡಲ
ಫಲಗಳನ್ನು ಸೃಜಿಸುವುದಕೆ ('ಚಂಡಶಾಸನ', ಅದೇ, ಪುಟ-೭೮)

ಎಂಬ ಪ್ರಶ್ನೆಯನ್ನು ಮುಂದಿಡುತ್ತಾರೆ. ಮಕ್ಕಳನ್ನು ಹೆರುವುದಷ್ಟೇ ಹೆಣ್ಣಿನ ಕಾರ್ಯವಲ್ಲ ಎನ್ನುವುದು ಕವಿತೆಯ ಪ್ರಶ್ನೆ. ಆದರೆ ಎತ್ತಿದ ಪ್ರಶ್ನೆಗೆ ತಾನೇ ಕಂಡುಕೊಂಡ ಉತ್ತರ-

ಹೆಣ್ತನದಿ ತುಂಬಿರುವ
ಮುಕ್ತಿ ಪಥವೇ ಸಾಕು
ಮತ್ತೊಂದ ಬಯಸಲೇಕೆ? (ಅದೇ, ಪುಟ-೮೦)

ಎಂಬ ಒಪ್ಪಂದಕ್ಕೆ ಬದ್ಧರಾಗಿದ್ದಾರೆ. ಹೆಣ್ಣು, ಸೃಷ್ಟಿಯ ಕಾರ್ಯದಲ್ಲಿ ತೊಡಗಲು ಆ ದೇವನಿಂದಲೇ ಚಂಡ ಶಾಸನ ಜಾರಿಯಾಗಿದೆ. ತಪ್ಪಿಸಿಕೊಳ್ಳುವ ಮಾತಿಲ್ಲ. ಸಾವು ನೋವನ್ನು ಲೆಕ್ಕಿಸದೆ, ಅಭಿಮಾನಗಳನ್ನು ತೊರೆದು ಒಡಲಲ್ಲಿ ಬಿತ್ತಿದ ಬೆಳಸನ್ನು ಹೆತ್ತು, ಪಾಲಿಸುವ ಹೊಣೆ ಹೊರುತ್ತಾರೆ. ಬೇರೆ ಆಯ್ಕೆಗೆ ಅಂದಿನ ಸಂದರ್ಭದಲ್ಲಿ ಅವಕಾಶವಿರಲಿಲ್ಲ. 'ಚಂಡಶಾಸನ'ದಲ್ಲಿ ಎತ್ತಿದ ಪ್ರಶ್ನೆ ಗಾಢವಾಗುವುದು 'ಹೆಣ್ಣಾಟ' ಕವಿತೆಯಲ್ಲಿ

ಕುದಿಯುವುದು ಒಳಗೊಳಗೆ
ಸ್ವಾತಂತ್ರ್ಯವಿಲ್ಲೆನುತ
ದುಡಿಯುವುದು ಹಗಲಿರುಳು
ಉಸಿರಿರುವ ತನಕ ('ಹೆಣ್ಣಾಟ', ಅದೇ, ಪುಟ-೧೨೧)

ಅಸಮಾಧಾನ ನೇರವಾಗಿ ಹೊರಬಿದ್ದಿದೆ. ಹೆಣ್ಣಿನ ಬದುಕನ್ನು ಮದುವೆಯ ನಂತರ ನಿರ್ದೇಶಿಸುವುದು, ನಿಯಂತ್ರಿಸುವುದು ಗಂಡನ ಕೈಲಿದೆ ಎನ್ನುವುದರ ಅರಿವು 'ಗಂಡ' ಕವಿತೆಯಲ್ಲಿ ವ್ಯಕ್ತವಾಗಿದೆ. ಹೆಣ್ಣು ಗಂಡಿಗೆ ವಿಕ್ರಯದ ವಸ್ತುವಾಗಿ ಕಾಣಿಸಿದ್ದು ಜಾನಕಮ್ಮನವರ ಪ್ರಜ್ಞೆ ಜಾಗೃತಗೊಂಡಿರುವದನ್ನು ಸೂಚಿಸುತ್ತದೆ. ಪತಿಯೇ ಪರದೈವವೆಂದು ನಂಬಿದ ಜಾನಕಮ್ಮನವರು

ಗಂಡನ–ಗಂಡಸರ ವಿಚಿತ್ರ ವರ್ತನೆಗೆ ಬೆಚ್ಚಿದ್ದಾರೆ. ಗಂಡಸಿನ ದೌರ್ಜನ್ಯದ ಮುಖವನ್ನು ಪರಿಚಯಿಸಿ ಬಂಡಾಯದ ಮುನ್ಸೂಚನೆಯನ್ನಿತ್ತಿದ್ದಾರೆ.

'ಗುಬ್ಬಿ' ಕವನವನ್ನು ಸಾಂಕೇತಿಕ ಅರ್ಥದಲ್ಲಿ ಗ್ರಹಿಸುವುದಾದರೆ, ಮನಸ್ಸಿನ ಚಂಚಲ ಸ್ವಭಾವವನ್ನು ಸಾಂಕೇತಿಸುತ್ತದೆ. ಮತ್ತೊಂದು ದೃಷ್ಟಿಯಿಂದ, ಕಾವ್ಯ ಕಟ್ಟುವ ಕಾರ್ಯದಲ್ಲಿ ಏಕಾಂತಕ್ಕೆ ಧಕ್ಕೆಯುಂಟಾದಾಗ ನೀಡುವ ಪ್ರತಿಕ್ರಿಯೆಯಾಗಿಯೂ ಕಾಣುತ್ತದೆ. ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರದಂತೆ ಬಳಕೆಯಾಗುವ ಕವಿತೆಯಲ್ಲಿ ಗುಬ್ಬಿಯ ಗಲಾಟೆಯಿಂದ "ಮೂಡಿದ ಭಾವವು ಹಾಳಾಯ್ತು" ಎಂಬುದನ್ನು ಮೂಲಭಾವವಾಗಿ ಗ್ರಹಿಸಬಹುದಾಗಿದೆ. ನಿತ್ಯದ ಚಟುವಟಿಕೆಗಳಲ್ಲಿ ಮಹಿಳೆಯರಿಗೆ ಕಾವ್ಯ ಬರೆಯುವ ಉತ್ಸಾಹವನ್ನು ಬತ್ತಿಸುವ. ಅಡೆತಡೆಗಳನ್ನು ತಂದೊಡ್ಡುವ ಅನೇಕ ಸಂಗತಿಗಳ ರೂಪಕವಾಗಿಯೂ ಗೋಚರಿಸುತ್ತದೆ.

ಜಾನಕಮ್ಮನವರ ಕಾವ್ಯದ ನಿರೂಪಣೆಯಲ್ಲಿ ದೇವರನ್ನು ಒಲಿಸುವ ಸ್ತುತಿಗಳಿವೆ: ಹೆಣ್ಣಿನ ಕುರಿತಾದ ಪ್ರಶ್ನೆಗಳಿವೆ; ತತ್ವಗೀತೆಗಳನ್ನು ಹೋಲುವ ಪದಗಳಿವೆ. (ಉದಾ: 'ಗುಬ್ಬಿ', 'ಸಂತೆ', 'ಜೀವನ ಯಾತ್ರೆ', 'ತಿಳಿಗೇಡಿ', 'ವಿಶ್ವ', 'ಒಲ್ಲೆನೋ ಒಲ್ಲೆನು' ಮುಂತಾದವು) ಸ್ವಾತಂತ್ರ್ಯ ಹೋರಾಟದ ಫಲ, ಗಾಂಧೀಜಿಯ ಕುರಿತಾದ ಭಾವ ಸ್ಪಂದನವಿದೆ; ನೀತಿ ಬೋಧನೆಯಿದೆ ('ಎಚ್ಚರಿಕೆ', 'ನೆಚ್ಚಿನ ಸೋದರಿ'); ಜಾತಿ ಮತಗಳ ಕುರಿತಾದ ಉದಾರ ಮನೋಭಾವವಿದೆ ('ಕುಲ'); ವಿಧವೆಯೊಬ್ಬಳು ಕಾಣುವ ಸುಂದರ ಬದುಕಿನ ನನಸಾಗದ ಕನಸಿನ ಸಂವೇದನೆಯಿದೆ ('ಕೆಚ್ಚೆದೆಯ ತಮ್ಮ')

ಸರಳ ಮಾತಿನ ಭಾಷೆಯಲ್ಲಿ ಕಾವ್ಯ ಹೆಣೆಯುವ ಜಾನಕಮ್ಮನವರು ತಿರುಮಲೆ ರಾಜಮ್ಮನವರಂತೆ ರಾಗ ತಾಳ ಸಂಯೋಜನೆ ಮಾಡಿ ಹಾಡಬಲ್ಲ ಗೀತೆಗಳನ್ನು ರಚಿಸಿದ್ದಾರೆ. ಅಗತ್ಯವಿದ್ದಲ್ಲಿ ನಿಯತ ಪ್ರಾಸವನ್ನು ಅನುಸರಿಸಿದ್ದಾರೆ. 'ಸಂವಾದ' ರೂಪವನ್ನು ಇವರ ಕವಿತೆಗಳು ಅಳವಡಿಸಿಕೊಂಡಿವೆ. ಅಣ್ಣ, ಗೆಳತಿ, ತಂಗಿಯೊಂದಿಗೆ ಭಾವನೆಗಳನ್ನು ಹಂಚಿಕೊಳ್ಳುವ ಶೈಲಿಯು ಮೂಡಿ ಬಂದಿದೆ.

ತಿರುಮಲೆ ರಾಜಮ್ಮ ಮತ್ತು ಬೆಳಗೆರೆ ಜಾನಕಮ್ಮನವರು ಕಾವ್ಯದ ನಿರೂಪಣೆಯಲ್ಲಿ ರಾಗ ತಾಳಗಳನ್ನು ಸಂಯೋಜಿಸಿ ಹಾಡುವ ಗೀತೆಗಳನ್ನು ರಚಿಸುವುದು; ನಿಯತ ಪ್ರಾಸದ ಬಳಕೆ; ಸಂವಾದ ರೂಪದ ಶೈಲಿಯನ್ನು ಅನುಸರಿಸುವ ವಿಧಾನ ಸಮಾನವಾಗಿ ಬಳಕೆಯಾಗಿದೆ. ಆದರೆ ಇವರಿಬ್ಬರ ಭಾವಸ್ಫೂರ್ತಿ ತುಡಿತಗಳ ವಿಚಾರಧಾರೆ ಭಿನ್ನ ನೆಲೆಯನ್ನು ಹೊಂದಿದೆ. ರಾಷ್ಟ್ರಭಕ್ತಿ, ಸ್ವಾತಂತ್ರ್ಯ ಹೋರಾಟದ ಘಟನೆಗಳು ರಾಜಮ್ಮನವರ ಕಾವ್ಯದ ಹಿಂದೆ ಮೇಳೈಸಿದ್ದರೆ. ಜಾನಕಮ್ಮನವರಿಗೆ ನಿತ್ಯ ಬದುಕಿನಲ್ಲಿ ಹೆಣ್ಣು ಅನುಭವಿಸಬೇಕಾದ ಸಂವೇದನೆಗಳನ್ನು ಹೊರಹಾಕುವ ತವಕವಿದೆ.

## ೫.೩ ಪುರಾಣ ಪಾತ್ರಗಳ ಪುನರಾವಲೋಕನ ಮಾದರಿ

ಪುರಾಣ ಮತ್ತು ಪೌರಾಣಿಕ (Myth and Mythical) ಎಂಬ ಪರಿಕಲ್ಪನೆಗಳ, ಸತ್ಯ ಮತ್ತು ವಾಸ್ತವಿಕತೆಗಳಿಗೆ (truth and reality) ವಿರುದ್ಧವಾದವುಗಳು ಎಂಬ ಮನೋಭಾವ ಬಹುಕಾಲ

ಪ್ರಚಲಿತದಲ್ಲಿತ್ತು. ಆದರೆ ಕಾಲ ಕ್ರಮೇಣ ಪುರಾಣದ ವ್ಯಾಖ್ಯಾನಗಳು ಬದಲುಗೊಂಡಿವೆ. ಸಾಹಿತ್ಯಿಕ, ಚಾರಿತ್ರಿಕ, ಮನೋವಿಶ್ಲೇಷಣಾತ್ಮಕ, ರಾಜಕೀಯ ಆಯಾಮಗಳಿಗೆ ಪುರಾಣದ ಸಾಂಕೇತಿಕ ಅಂಶಗಳು ಹೊಸ ಶೋಧನೆಗೆ ಬಳಕೆಯಾಗುತ್ತಿವೆ.

ಪುರಾಣ ಎಂಬ ಪದವನ್ನು ಪುರಾತನವಾದದ್ದು ಎಂದು ಗುರುತಿಸುವುದರೊಂದಿಗೆ ನವೀನವಾದದ್ದು (ಪುರಾ+ನವ) ಎಂಬ ಅರ್ಥವನ್ನು ನೀಡಲಾಗಿದೆ. ಪುರಾಣಗಳು ಒಂದು ಜನ ಸಮುದಾಯದ ಒಳಮನಸ್ಸಿನ ಅಭಿವ್ಯಕ್ತಿಗಳಾಗಿವೆ. ಅವರ ಆದರ್ಶ, ಅಪೇಕ್ಷೆ, ನೀತಿ ಮತ್ತು ಕೆಲವು ಮೌಲ್ಯಗಳನ್ನು ಒಳಗೊಂಡಿರುತ್ತದೆ. ಸಮುದಾಯದಿಂದ ಸಮುದಾಯಕ್ಕೆ ರವಾನೆಯಾದ ಪುರಾಣಗಳನ್ನು, ಬರಹಗಾರರು ವೈಚಾರಿಕ ದೃಷ್ಟಿಕೋನದಿಂದ ಪುನರ್ ಓದಿಗೆ ಒಳಪಡಿಸಿದ್ದಾರೆ. ಕಲ್ಪಿತ ಸಂಗತಿಗಳ ಚೌಕಟ್ಟಿನಿಂದ ಪುರಾಣ ಪಾತ್ರಗಳನ್ನು ಹೊರ ತಂದು, ಹೊಸ ಪ್ರಜ್ಞೆಯಿಂದ ನೋಡುವ ಪ್ರಯತ್ನ ನಡೆದಿದೆ. ಪುರಾಣಗಳನ್ನು ಪುನರ್ ಓದಿಗೆ ಒಳಪಡಿಸುವುದು ಎಂದರೆ ಹಿಂದಿನ ಪರಂಪರೆಯೊಂದಿಗೆ ಸಂಬಂಧ ಕಲ್ಪಿಸಿಕೊಳ್ಳುವುದಾಗಿದೆ. ಈ ಸಂಬಂಧ, ಸ್ವೀಕರಣ ನೆಲೆಯಲ್ಲಿರಬಹುದು. ಮುಖಾಮುಖಿ ನೆಲೆಯಲ್ಲಿರಬಹುದು. ಘಟನೆಗಳ ಹಂತದಲ್ಲಿ, ಪಾತ್ರಗಳ ನೆಲೆಯಲ್ಲಿ ನಿರ್ದಿಷ್ಟ ಉದ್ದೇಶದಿಂದ ಮಾಡಲಾದ ಬದಲಾವಣೆಗಳು ತನ್ನ ಕಾಲದ ಚಾರಿತ್ರಿಕ ದರ್ಶನವನ್ನು ನೀಡುವಲ್ಲಿ ಬಹುಮುಖ್ಯ ಪಾತ್ರ ವಹಿಸಿದವು. ಭೂತ ಕಾಲಕ್ಕೆ ಸೇರಿದ ಘಟನೆಗಳು ಇತಿಹಾಸದ ಭಾಗವಾಗುವಂತೆ, ಚಾರಿತ್ರಿಕ ಘಟನೆಗಳು ಮುಂದೆ ಪುರಾಣವಾಗಿ ಮಾರ್ಪಟ್ಟಿರುವ ಉದಾಹರಣೆಳಿವೆ. ಉದಾ: ಹನ್ನೆರಡನೇ ಶತಮಾನದ ವಚನಕಾರರ ಚರಿತ್ರೆಗಳು ಹದಿನೈದನೇ ಶತಮಾನದಲ್ಲಿ ಪುರಾಣೀಕರಣಗೊಂಡದ್ದು.

ಎಪ್ಪತ್ತರ ದಶಕದ ನಂತರ ಕಾವ್ಯ ಬರೆಯಲು ತೊಡಗಿದ ಮಹಿಳಾ ಕವಿಗಳು ಪುರಾಣ ಪಾತ್ರಗಳ ಪುನರಾವಲೋಕನ ಮಾದರಿಯನ್ನು ಹೆಚ್ಚಾಗಿ ಅಳವಡಿಸಿಕೊಂಡಿದ್ದಾರೆ. ಕಾರಣ, ಶತಮಾನಗಳಿಂದ ಶೋಷಣೆಗೆ ಒಳಗಾದ ಮಹಿಳಾ ವರ್ಗ, ಅದರಿಂದ ಹೊರಬರಲು ಹವಣಿಸಿತು. ಆಗ ವರ್ತಮಾನದ ಬದುಕಿನಲ್ಲಿ ಹೆಣ್ಣಿನ ಸ್ಥಿತಿಗತಿಯುನ್ನು ಹಂಚಿಕೊಳ್ಳಲು ಪುರಾಣ ಪಾತ್ರಗಳನ್ನು ಕೇಂದ್ರವಾಗಿಟ್ಟುಕೊಳ್ಳಲಾಯಿತು. ಎಪ್ಪತ್ತರ ದಶಕದ ನಂತರ ಉಂಟಾದ ಮಹಿಳಾ ಚಳುವಳಿಗಳ ಪ್ರಭಾವ, ಸ್ತ್ರೀವಾದದ ಪ್ರಣಾಳಿಕೆಗಳು, ವಿಶ್ವದಾದ್ಯಂತ ಘೋಷಿಸಿದ ಮಹಿಳಾ ದಿನಾಚರಣೆಯಂತಹ ಆಚರಣೆಗಳು ಮಹಿಳಾ ಕವಿಗಳನ್ನು ಉತ್ತೇಜಿಸಿದವು. ಶೋಷಿತ ಸಮುದಾಯದಿಂದ ಬಂದ ಕೆಳ ವರ್ಗದ ಮಹಿಳೆಯರು ಬರಹಕ್ಕೆ ತೊಡಗಿಕೊಂಡದ್ದು ಅಂದಿನ ವೈಶಿಷ್ಟ್ಯವಾಗಿತ್ತು.

ಪುರುಷ ಪ್ರಣೀತ ನಿಲುವುಗಳಲ್ಲಿ ನಿರ್ಮಾಣಗೊಂಡ ವೇದೋಪನಿಷತ್ತುಗಳು, ರಾಮಾಯಣ, ಮಹಾಭಾರತ ಮುಂತಾದ ಕಾವ್ಯ, ಕತೆಗಳಲ್ಲಿ ನಿರೂಪಿಸಲ್ಪಟ್ಟ ಪಾತ್ರಗಳನ್ನು ಪುನರಾವಲೋಕನಕ್ಕೆ ಒಳಪಡಿಸಲಾಯಿತು. ಪಿತೃಪ್ರಧಾನ ವ್ಯವಸ್ಥೆಯಲ್ಲಿ ದಮನಿತಗೊಂಡ ವರ್ಗ ಜಾಗೃತವಾದಾಗ, ವರ್ತಮಾನವನ್ನು ನಿರ್ಮಿಸಿಕೊಳ್ಳಲು ಚರಿತ್ರೆಗೆ ಮುಖಾಮುಖಿಯಾಗುವ ಒತ್ತಡ ತೀವ್ರವಾಗಿರುತ್ತದೆ. ಮರೆಮಾಚಲ್ಪಟ್ಟ, ಸಂಗತಿಗಳನ್ನು ಪ್ರಧಾನ ನೆಲೆಗೆ ತರುವುದು ಅಗತ್ಯವಾಗಿರುತ್ತದೆ. ಯಾವುದನ್ನು

'ಶ್ರೇಷ್ಠ' ಎಂದು ನಂಬಿಸಲಾಗಿತ್ತೋ, ಆ ಮೌಲ್ಯಗಳನ್ನು ಖಂಡಿಸುವ, ಮರು ವ್ಯಾಖ್ಯಾನಕ್ಕೆ ಒಳಪಡಿಸುವ ಕ್ರಿಯೆಯಲ್ಲಿ ಮಹಿಳಾ ಕವಿಗಳು ಮಹತ್ವದ ಹೆಜ್ಜೆಯನ್ನಿಟ್ಟಿದ್ದಾರೆ.

ಪಾತಿವ್ರತ್ಯ ಪಾಲನೆಯ ಆದರ್ಶ ಪಾತ್ರಗಳೆಂದು ಬಿಂಬಿಸಲಾಗಿದ್ದ ಸೀತೆ, ದ್ರೌಪದಿ, ಅಹಲ್ಯೆ, ರೇಣುಕೆ ಮುಂತಾದವರ ಬದುಕಿನ ಘಟನೆಗಳನ್ನು ಹೆಕ್ಕಿ ತೆಗೆಯಲಾಯಿತು. ಸೀತೆಯ ಬದುಕನ್ನು ನಿಯಂತ್ರಿಸಿದ ಲಕ್ಷ್ಮಣ ರೇಖೆಗಳು, ವನವಾಸ, ಪಾತಿವ್ರತ್ಯ ಸಾಬೀತುಪಡಿಸುವ ಅಗ್ನಿಪರೀಕ್ಷೆಗಳು ಅಂದಿನ ಶ್ರೇಷ್ಠ ಮೌಲ್ಯಗಳೆಂದು ಪ್ರತಿಪಾದಿಸಲಾಗಿತ್ತು. ಇಂತಹ ನಂಬಿಕೆಯನ್ನು ಮಹಿಳಾ ಕವಿಗಳು ಭಂಜಿಸುವ ಕ್ರಿಯೆಯಲ್ಲಿ ತೊಡಗಿದರು. 'ಪ್ರಜಾಪಾಲಕ'ನಾಗಿದ್ದ ರಾಮನ ನಡವಳಿಕೆಗಳನ್ನು ವ್ಯಂಗ್ಯವಾಗಿ ಟೀಕಿಸಲಾಯಿತು. ಪುರಾಣ ಪಾತ್ರದ ಹೆಣ್ಣುಗಳು ಅನುಭವಿಸಿದ ಹಿಂಸೆ, ಅಪಮಾನ, ಅಸಹಾಯಕತೆಗಳನ್ನು ತಮ್ಮಲ್ಲಿ ಆವಾಹಿಸಿಕೊಂಡು ಅಂದಿಗೂ ಇಂದಿಗೂ ಬದಲಾಗದ ಸಾಮಾಜಿಕ ನೀತಿ ಸಂಹಿತೆಗಳನ್ನು ಹೆಣ್ಣಿನ ದೃಷ್ಟಿಕೋನದ ಮೂಲಕ ಪರಾಮರ್ಶಿಸಲಾಯಿತು.

ಪುರಾಣ ಪಾತ್ರಗಳ ಪುನರಾವಲೋಕನ ಕ್ರಮದಲ್ಲಿ ಮಹಿಳಾ ಕವಿಗಳು ಮೂರು ಭಿನ್ನ ನೆಲೆಗಳನ್ನು ಆಯ್ದುಕೊಂಡಿದ್ದಾರೆ.

- ಶೋಷಿತ ಪಾತ್ರಗಳ ಪುನರಾವಲೋಕನ
- ಪ್ರತಿಭಟನಾತ್ಮಕ ಧೋರಣೆಯ ಪಾತ್ರಗಳ ಪುನರಾವಲೋಕನ
- ಆದರ್ಶ ಪಾತ್ರಗಳ ತತ್ವ ಸ್ವೀಕರಣೆ

**೫.೩.೧ ಶೋಷಿತ ಪಾತ್ರಗಳ ಪುನರಾವಲೋಕನ**

ಮೊದಲನೇ ನೆಲೆಯಲ್ಲಿ ವ್ಯವಸ್ಥೆಯನ್ನು ಪ್ರತಿಭಟಿಸಲಾಗದೆ ಬದುಕಿನುದ್ದಕ್ಕೂ ಬವಣೆಯನ್ನು ಅನುಭವಿಸಿದ ಪಾತ್ರಗಳನ್ನು ಪುನರಾವಲೋಕಿಸಲಾಗಿದೆ. ಉದಾ ಸೀತೆ, ದ್ರೌಪದಿ, ಕುಂತಿ, ಶಕುಂತಲೆ, ರೇಣುಕೆ, ಅಹಲ್ಯೆ ಇತ್ಯಾದಿ.

ಮಹಿಳಾ ಕವಿಗಳಿಗೆ ಪುರಾಣ ಪಾತ್ರಗಳನ್ನು, ಚರಿತ್ರೆಯಲ್ಲಿ ತಮ್ಮ ಅಸ್ತಿತ್ವದ ಹುಡುಕಾಟದ ಪ್ರಶ್ನೆಯಾಗಿ ಎತ್ತಿಕೊಳ್ಳುವುದು ಒಂದು ವಿಧಾನವಾದರೆ, ವರ್ತಮಾನದ ಸಂಗತಿಗಳನ್ನು ನಿರೂಪಿಸಲು ಪುರಾಣ ಪ್ರತಿಮೆಗಳನ್ನು ಕಾವ್ಯದ ತಂತ್ರವಾಗಿಯೂ ಮತ್ತೊಂದೆಡೆ ಬಳಸಿಕೊಂಡಿದ್ದಾರೆ. ವಿಜಯಾ ದಬ್ಬೆ, ಮಾಲತಿ ಪಟ್ಟಣ ಶೆಟ್ಟಿ, ಸುಕನ್ಯಾ ಮಾರುತಿ, ಶಶಿಕಲಾ ವೀರಯ್ಯ ಸ್ವಾಮಿ, ಸ.ಉಷಾ, ಮಲ್ಲಿಕಾ ಘಂಟಿಯವರ ಕವಿತೆಗಳನ್ನು ಪ್ರಾತಿನಿಧಿಕವಾಗಿ ಆಯ್ದುಕೊಳ್ಳಲಾಗಿದೆ.

ವಿಜಯಾ ದಬ್ಬೆಯವರು 'ಸ್ತ್ರೀತ್ವ'ದ ಕಲ್ಪನೆಯನ್ನು ನಿರ್ದಿಷ್ಟವಾಗಿ ಗುರುತಿಸಿಕೊಂಡವರು. ಮಹಿಳೆಯರ ಜಗತ್ತನ್ನು ಸೂಕ್ಷ್ಮವಾಗಿ ಗ್ರಹಿಸುವುದು, ಲಿಂಗ ತಾರತಮ್ಯಕ್ಕೆ ಸಂಬಂಧಿಸಿದಂತೆ ಸಮಸ್ಯೆಯ ಮೂಲವನ್ನು ಗುರುತಿಸುವ ವಿಧಾನ, ಇವರ ಕಾವ್ಯದ ಹಿನ್ನೆಲೆಯಲ್ಲಿ ಗೋಚರಿಸುತ್ತದೆ. ಶೋಷಣೆಗೆ ಒಳಗಾದ ಸ್ತ್ರೀ ಪಾತ್ರಗಳ ಅಸಹಾಯಕತೆಗೆ ಕಾರಣಗಳನ್ನು ಶೋಧಿಸುವುದು ಮತ್ತು ಆ ಮೂಲಕ ತಮ್ಮ ಆಶಯ ಧೋರಣೆಗಳನ್ನು ವ್ಯಕ್ತಪಡಿಸುತ್ತಾ ಹೋಗುತ್ತಾರೆ.

'ತಿರುಗಿ ನಿಂತ ಪ್ರಶ್ನೆ' ಕವಿತೆಯಲ್ಲಿ ಸೀತೆ ತನ್ನೊಳಗನ್ನು ಹಂಚಿಕೊಳ್ಳಲು ಇರುವ ಸಾಧ್ಯತೆಗಳನ್ನು ಸೂಚಿಸುತ್ತಾ ಹೋಗುತ್ತಾರೆ. ಅಪ್ಪ ಕಲಿಸಿದ ಅಕ್ಷರಜ್ಞಾನ, ಅನುಭವಿಸಿದ್ದನ್ನು ಹಂಚಿಕೊಳ್ಳುವ ಹಾಡು, ಅಶೋಕ ವನದಲ್ಲಿ ತುಂಬಿದ ಶೋಕ, ಆಶ್ರಮದಲ್ಲಿ ಸಿಕ್ಕ ಬಿಡುವಿನಲ್ಲಿ ವ್ಯಕ್ತಪಡಿಸಬಹುದಾದ ಅವಕಾಶಗಳಿದ್ದರೂ ಸೀತೆ ಯಾಕೆ ಸುಮ್ಮನೆ ಸಹಿಸಿದಳು ಎನ್ನುವ ಪ್ರಶ್ನೆಗೆ-

ಅವಳ ಭೂಮಿ ತೂಕದ ಮೌನ
ಕತ್ತೆತ್ತಿ ನೋಡಿದರೂ
ಅವಳ ಕಣ್ಣ ಭಾವಗಳು
ಶಬ್ದವಾಗದೆ ನನ್ನ ಕಣ್ಣಿಗಿಳಿದು
ತಿರುಗಿ ನಿಂತವು ಕೇಳಿದ್ದ ಪ್ರಶ್ನೆಗಳು ('ತಿರುಗಿ ನಿಂತ ಪ್ರಶ್ನೆ', ಇತಿಗೀತಿಕೆ, ಪುಟ-೫೧)

ಸೀತೆಯ 'ಭೂಮಿ ತೂಕದ ಮೌನ'ದಿಂದಾಗಿ ಕೇಳಿದ ಪ್ರಶ್ನೆಗಳೆಲ್ಲ, ಸ್ವತಃ ಕವಿಗೇ ಎದುರಾದಾಗ, ಸೀತೆಗಿರಬಹುದಾಗಿದ್ದ ಅಸಹಾಯಕತೆಯ ಅರಿವಾಗುತ್ತದೆ. ಅಂತಹ ಅಸಹಾಯಕತೆ ಇಂದಿನ ಮಹಿಳೆಯರನ್ನು ಕಾಡುತ್ತಿದೆ ಎಂಬುದನ್ನು ಸಾಬೀತು ಮಾಡಲಾಗಿದೆ. ಮೌನದ ಪ್ರಶ್ನೆಯನ್ನು ಭೇದಿಸಲು ರಾಮನೊಂದಿಗೆ ಸಂವಾದಕ್ಕೂ ತೊಡಗುತ್ತಾರೆ.

ಕಾದಿರುವೆ, ರಾಮ ಬರುವನೆಂದು
ಶಬರಿಯಾಗಿ ಅಲ್ಲ
ಕಾದಿರುವೆ, ರಾಮ ಬರುವನೆಂದು
ಶಿಲೆಯ ಅಹಲ್ಯೆಯಲ್ಲ
ಕಾದಿರುವೆ, ರಾಮ ಬರುವನೆಂದು
ನಿನ್ನ ಸೀತೆಯಾಗಿ ಕಾಣೊ ('ಪ್ರೇಮನೇಮಿಗೆ', ಅದೇ, ಪುಟ-೪೮)

ಲೋಕದ ಸ್ತುತಿ ನಿಂದೆಗಳನ್ನು ದೂರವಿರಿಸಿ, ರಾಮನಲ್ಲಿ ಅನುರಕ್ತವಾಗಿರುವ ಸೀತೆಯ ಪ್ರೀತಿಯನ್ನು ಸ್ವೀಕರಿಸಿ, ಸಂಗಾತಿಯಾಗಲು ಕೇವಲ ರಾಮನ ಸಂಗಾತಿಯಾಗಿರುವ ಹಂಬಲವನ್ನು ಕವಿತೆ ವ್ಯಕ್ತಪಡಿಸುತ್ತದೆ. ಸೀತೆಯ ಮೂಲಕ ವರ್ತಮಾನದ ಹೆಣ್ಣಿನ ಬದುಕನ್ನು ವಿಶ್ಲೇಷಿಸುತ್ತ, ತಮ್ಮ ಬದುಕು ಸೀತೆಯಂತಾಗಬಾರದೆನ್ನುವ ಆಶಯ ವ್ಯಕ್ತವಾಗುತ್ತದೆ.

ಬಾಯ್ತೆರೆದ ಭೂಮಿಯೊಳಕ್ಕೆ
ಎಲ್ಲ ಸೀತೆಯರ ಹಾಗೆ
ಸರಿಯಬಾರದು
ನಿಮ್ಮೆಲ್ಲರ ನುಂಗಿದ

ಭೂಮಿಯ ಮೇಲೆ ಈ ಹರಲಿಗಳ ಹೊತ್ತು
ತಿರುಗಬೇಕೆಂಬ ಸಂಕಲ್ಪ ('ಪರಂಪರೆ', ಅದೇ, ಪುಟ-೮೫)

ಸೀತೆಯ ನೋವು ಸಂಕಟಗಳನ್ನು ಕಾವ್ಯದ ಮೂಲಕ ಹೊರ ಹಾಕಲಾಗಿದೆ. 'ಹೇಗಾದರೂ ಕರೆಯಿರಿ', 'ನಾರಿ ಮಣಿಗಳಿಗೊಂದು ಕಿವಿಮಾತು' ಕವಿತೆಗಳು, ಸೀತೆ ದ್ರೌಪದಿಯನ್ನು ನಡೆಸಿಕೊಂಡ ವ್ಯವಸ್ಥೆಯನ್ನು ವ್ಯಂಗ್ಯವಾಗಿ ಟೀಕಿಸಲಾಗಿದೆ.

'ಧನ್ಯೆ' ಕವಿತೆಯಲ್ಲಿ ತನ್ನೊಳಗನ್ನು ಬೆತ್ತಲಾಗಿಸಲು ಪ್ರಯತ್ನಿಸಿದ ಅಕ್ಕ, ಮತ್ತೆ ಆಕೆಯನ್ನು ಸುತ್ತುವರಿದ ಕೂದಲ ರಾಶಿಯಲ್ಲಿ ಮುಚ್ಚಿ ಮಾನ ಕಾಯುವುದನ್ನು ವ್ಯಂಗ್ಯ ಧಾಟಿಯಲ್ಲಿ ನಿವೇದಿಸಲಾಗಿದೆ. ಅಸಹಾಯಕ ತಾಯಿಯ ಸಂಕೇತವಾಗಿ ಕುಂತಿ, 'ಕುಂತಿಯ ಬೆಳಗು' ಕವಿತೆಯಲ್ಲಿ ಕಾಣಿಸಿಕೊಂಡಿದ್ದಾಳೆ. 'ಋಷಿ ಪತ್ನಿಯ ಸ್ವಗತ', 'ಕಾಳಿದಾಸನ ಇಕ್ಕಟ್ಟು', 'ಅಭಿಮನ್ಯು': ಒಂದು ಹಿನ್ನೋಟ', 'ಕುರುಕ್ಷೇತ್ರದಂಚಿಗೆ', 'ಗೆರೆಗಳು', 'ಶಂಬುಕ' ಮುಂತಾದ ಕವಿತೆಗಳು ಪೌರಾಣಿಕ ಪಾತ್ರಗಳ ಮರು ವ್ಯಾಖ್ಯಾನಕ್ಕೆ ತೊಡಗಿವೆ.

ವಿಜಯಾ ದಬ್ಬೆಯವರಲ್ಲಿ ಸೀತೆ, ಕುಂತಿ ಮುಂತಾದವರ ಅಸಹಾಯಕತೆಯ ಪ್ರಶ್ನೆಗಳು, ಪ್ರಶ್ನೆಗಳಾಗಿಯೇ ಉಳಿದಿವೆ. ಕಾರ್ಯಕಾರಣ ಶೋಧ ವಿಜಯಾ ದಬ್ಬೆಯವರಿಗೆ ಮುಖ್ಯವಾದರೆ, ಸುಕನ್ಯಾ ಮಾರುತಿಯವರು ಪುರಾಣ ಪಾತ್ರಗಳನ್ನು ಚಿಕಿತ್ಸಕ ದೃಷ್ಟಿಯಿಂದ ನೋಡಿ ತಮ್ಮ ಪ್ರತಿಕ್ರಿಯೆಯನ್ನು ಸ್ಪಷ್ಟಪಡಿಸಿದ್ದಾರೆ. ವಿಜಯಾರವರು 'ಪ್ರೇಮ ನೇಮಿ' ಕವಿತೆಯಲ್ಲಿ ಸೀತೆ ರಾಮನನ್ನು ಗಾಢವಾಗಿ ಪ್ರೀತಿಸಿ, ಅವನ ಆಪ್ತ ಸಂಗಾತಿಯಾಗಿರಲು ಬಯಸಿದರೆ ಸುಕನ್ಯಾರವರು 'ಅಸ್ಮಿತೆ' ಕವಿತೆಯಲ್ಲಿ

ಅನೇಕ ಸಂವತ್ಸರಗಳು
ಕುದಿ ಕುದಿದು
ಹದಗೊಂಡಿದೆ ಪಾಕ,
ಹೊಯ್ಯಬೇಕಾಗಿದೆ ಎರಕ
ಯಾರ ಸುತೆಯಾಗಿ ಸತಿಯಾಗಿ
ಮಾತೆಯಾಗಿ ಅಲ್ಲ,
ಬರಿ ಸೀತೆಯಾಗಿ ('ಅಸ್ಮಿತೆ', ನಾನೆಂಬ ಮಾಯೆ, ಪುಟ-೨೨೩)

ಸೀತೆಯ ಮೂಲಕ ಸ್ವ ವ್ಯಕ್ತಿತ್ವವನ್ನು ಕಟ್ಟಿಕೊಳ್ಳುವ ಬದ್ಧತೆಯನ್ನು ಕವಿ ಪ್ರಕಟಿಸಿದ್ದಾರೆ. ಸುಕನ್ಯಾರವರ ಕವಿತೆಗಳಲ್ಲಿ, ಶೋಷಿತ ಪಾತ್ರಗಳು ತಮ್ಮ ಅಸಹಾಯಕತೆಯನ್ನು ಮೆಟ್ಟಿ ಹೊಸ ಬದುಕಿನತ್ತ ಹೆಜ್ಜೆ ಹಾಕುವ ಆಶಯವನ್ನು ಹೊಂದಿವೆ. ದ್ರೌಪದಿ, ಅಹಲ್ಯೆ, ಗಂಗಾಂಬಿಕೆ ಮುಂತಾದವರು ಸುಕನ್ಯಾರವರ ಕಾವ್ಯದಲ್ಲಿ ವರ್ತಮಾನವನ್ನು ಎದುರಿಸಲು ಸನ್ನದ್ಧರಾಗಿದ್ದಾರೆ. 'ಐವರು ನಾಥರಿದ್ದೂ ಅನಾಥೆ'ಯಾಗಿ ನರಳಿ ಸತ್ತ ದ್ರೌಪದಿ

ದುಃಶಾಸನ ಉಲ್ಲಂಘಿಸಿದ
ನನ್ನನ್ನೇ ಸುಡ ಬಯಸುವ
ಹಸಿ ಹಸಿ ಮನಸ್ಸುಗಳ
ಅಪ್ರಬುದ್ಧ ಯತ್ನಗಳು
ಸೋಜಿಗ ಹುಟ್ಟಿಸುತ್ತವೆ
ಧಗಧಗಿಸುವ ಬದುಕಿನ
ನಿಗಿನಿಗಿ ಕೆಂಡ ನುಂಗಿದವಳು
ಮತ್ತೇನು ಸುಡಬಹುದು ನನ್ನ? ('ಅಗ್ನಿಪುತ್ರಿ', ಅದೇ, ಪುಟ–೨೨೫)

ಪಾಂಡವರೈವರೂ ತಮ್ಮ ತಮ್ಮ ಲೋಕದೊಳಗೆ ಮುಳುಗಿ, ದ್ರೌಪದಿಯ ಮನಸ್ಸನ್ನು ಆವರಿಸದೆ ಹೋದರು. ಕಿಚ್ಚಿನಿಂದೆದ್ದು ಬಂದ ದ್ರೌಪದಿಯ ಒಡಲ ಕಿಚ್ಚು ಪಾಂಡವರ ಮೇಲಿನ ಅಸಮಾಧಾನದ ಕಿಚ್ಚು, ಕರ್ಣನನ್ನು ಕೂಡಲಾಗದ ಕಿಚ್ಚು, ತನ್ನೊಡಲನ್ನು ಸುಡುತ್ತಿರುವಾಗ ದುಃಶ್ಯಾಸನ ದ್ರೌಪದಿಯ ಸೀರೆ ಸೆಳೆಯುವ ಪ್ರಸಂಗ ಅಪ್ರಬುದ್ಧ ಯತ್ನವಾಗಿ ಬಿಡುತ್ತದೆ. 'ಸ್ಥಿತಿಗತಿ' ಕವಿತೆಯಲ್ಲಿ ಕುರುಕ್ಷೇತ್ರದಲ್ಲಿ ನಡೆದ ಯುದ್ಧಕ್ಕೆ ದ್ರೌಪದಿ; ರಾಮ ರಾವಣರ ಯುದ್ಧಕ್ಕೆ ಸೀತೆಯರು ಕಾರಣರೆಂಬುದು ನೆಪ ಮಾತ್ರ ಎಂಬುದನ್ನು ತಿಳಿಸುತ್ತಾ, ಯುದ್ಧಕ್ಕೆ ಕಾರಣವಾದ ಹುನ್ನಾರಗಳನ್ನು ಪ್ರಸ್ತಾಪಿಸುತ್ತಾರೆ. ಯುದ್ಧದ ಪರಿಣಾಮಗಳು ಸೃಷ್ಟಿಸಿದ್ದರಲ್ಲಿ ವೇಶ್ಯಾ ಪದ್ಧತಿಯೂ ಒಂದು ಎಂಬುದನ್ನು ಗಮನಕ್ಕೆ ತರುತ್ತಾರೆ.

ಮಾಡದ ತಪ್ಪಿಗಾಗಿ ಶಿಕ್ಷೆ ಅನುಭವಿಸಿದ ಗೌತಮನ ಋಷಿ ಪತ್ನಿ, ಅಹಲ್ಯೆಯ ಮನದಲ್ಲಿ ಸುಪ್ತವಾಗಿದ್ದ ಧ್ವನಿಗಳು ಸುಕನ್ಯಾರವರ ಕಾವ್ಯದಲ್ಲಿ ಸ್ಫೋಟಗೊಂಡಿದೆ.

ನನಗೆ ಗೊತ್ತು
ಮತ್ತೆ ಗೌತಮನ ಸರ್ಪ
ಹೆಡೆಯೆತ್ತಲಾರದು,
ನನ್ನೊಳಗೆ ಏನನ್ನೂ ಬಿತ್ತಲಾರದು
ರಾಮ ಸ್ಪರ್ಶಕ್ಕೆ
ಶಿಲೆ, ಸ್ಫೋಟವಾಗಿದೆ ಅಷ್ಟೇ
ಹೆಣ್ಣಾಗಲಿಲ್ಲ ('ಅಹಲ್ಯೆ', ಅದೇ, ಪುಟ–೮೮)

ಅಹಲ್ಯೆಯನ್ನು ಕುರಿತಾದ ತೀಕ್ಷ್ಣ ಪ್ರತಿಕ್ರಿಯೆ ಇದಾಗಿದೆ. ಗೌತಮನ ವರ್ತನೆಯಿಂದ ಕಲ್ಲಾದ ಮನಸ್ಸು ಯಾವ ರಾಮನ ಸ್ಪರ್ಷಕ್ಕೂ ಅರಳುವುದಿಲ್ಲ. ರಾಮನ ಆಗಮನದಿಂದ ಶಾಪ ವಿಮುಕ್ತಿಯಾದ ನಂತರ, ಮೊದಲಿನ ಅಹಲ್ಯೆಯ ಕೊಲೆಯಾಗಿ ಹೋಗಿತ್ತು. ತಪ್ಪು ಯಾರದೆಂಬುದನ್ನು ವಿವೇಚಿಸಲಾಗದ ಗೌತಮನ ವರ್ತನೆಯಿಂದ ಬೇಸತ್ತ ಅಹಲ್ಯೆಯ ಅಂತರಂಗವನ್ನು ಸೆರೆ ಹಿಡಿಯುವಲ್ಲಿ ಕವಿ ಯಶಸ್ವಿಯಾಗಿದ್ದಾರೆ.

'ನಮ್ಮನೆತ್ತಬಾರದೆ' 'ಲೋಕ ದಾಟಬೇಕಿದೆ' 'ಗೊಮ್ಮಟನಿಗೆ' 'ತಾಯಿಯಾದ ತಂದೆ' ಕವಿತೆಗಳು ಗೊಮ್ಮಟನನ್ನು ಕುರಿತಾದವುಗಳು.

ಭವದ ಜೂಜಿನಲ್ಲಿ ಗೆದ್ದು
ಎದ್ದು ನಿಲ್ಲಬೇಕಿದೆ,
ನಿನ್ನ ಹಾಗೆ ನಾನು ಕೂಡ
ಲೋಕ ದಾಟಬೇಕಿದೆ ('ಲೋಕ ದಾಟಬೇಕಿದೆ', ಅದೇ, ಪುಟ-೨೮೨)

ಬಾಹುಬಲಿ ಇವರ ಕನಸಿನ ಕೂಸು, ಬದುಕಿನ ಆದರ್ಶವಾಗಿ ಪ್ರತಿಫಲಿಸಿದ್ದಾನೆ.

ವಿಜಯಾ ದಬ್ಬೆ ಮತ್ತು ಸುಕನ್ಯಾ ಮಾರುತಿಯವರು ವರ್ತಮಾನದ ಕಾಲಘಟ್ಟದಲ್ಲಿ ನಿಂತು ಪುರಾಣ ಪಾತ್ರಗಳ ಅಂತರಂಗವನ್ನು ಗ್ರಹಿಸಿ, ತಮ್ಮ ಆಶಯಗಳನ್ನು, ನಿಲುವುಗಳನ್ನು ಅನಾವರಣಗೊಳಿಸಿದ್ದಾರೆ. ಮಾಲತಿ ಪಟ್ಟಣ ಶೆಟ್ಟಿ, ಶಶಿಕಲಾ ವೀರಯ್ಯ ಸ್ವಾಮಿ, ಮಲ್ಲಿಕಾ ಘಂಟಿಯವರು ವರ್ತಮಾನದಲ್ಲಿ ನಡೆಯುವ ಸಂಗತಿಗಳನ್ನು ಪುರಾಣ ಕಾಲದ ಘಟನೆಗಳಿಗೆ, ಪಾತ್ರಗಳಿಗೆ ಪರಸ್ಪರ ಹೋಲಿಸಿ, ಇಂದಿಗೂ ಬದಲಾಗದ ಪರಿಸ್ಥಿತಿಯನ್ನು ಕಾವ್ಯದ ಮೂಲಕ ಚಿತ್ರಿಸುತ್ತಾರೆ.

ಮಾಲತಿ ಪಟ್ಟಣ ಶೆಟ್ಟಿಯವರು, ದೇಶದ ವಿಕ್ಷಿಪ್ತ ಸ್ಥಿತಿಗಳನ್ನು ವಿವರಿಸಲು ಪುರಾಣ ಪಾತ್ರಗಳನ್ನು ಪ್ರತಿಮೆಗಳನ್ನಾಗಿ ಬಳಸಿಕೊಳ್ಳುತ್ತಾರೆ. 'ಬಾ ಪರೀಕ್ಷೆಗೆ' ಕವಿತೆಯಲ್ಲಿ, ಹೆಣ್ಣು ಅನುಭವಿಸಿದ ನರಕ ಯಾತನೆಗಳನ್ನು ಏಪ್ರಿಲ್ ಉರಿಬಿಸಿಲಿನ ಅಗ್ನಿಕಾಂಡಗಳನ್ನಾಗಿ ರೂಪಿಸಿಕೊಂಡು, ಒಡ್ಡುವ ಪರೀಕ್ಷೆಗೆ ಸೀತೆಯಾಗಿ ನಿಲ್ಲುತ್ತಾರೆ. 'ಓ ಅಯೋಧ್ಯೆಯೆ' ಕವಿತೆ ಅಯೋಧ್ಯೆಯಲ್ಲಿ ನಡೆದ ಮತ್ತು ನಡೆಯುತ್ತಿರುವ ದುರ್ಘಟನೆಗಳನ್ನು ಪರಸ್ಪರ ಹೋಲಿಸಲಾಗಿದೆ. ದಶರಥನಿಗೆ ಉಂಟಾದ ಪುತ್ರ ವಿಯೋಗ, ಭರತನಿಗೆ ಭ್ರಾತೃವಿಯೋಗ, ಸೀತೆಯ ವನವಾಸಕ್ಕೆ ಕಾರಣವಾದ ಅಯೋಧ್ಯೆಯಲ್ಲಿ ಇಂದಿಗೂ ಅಶಾಂತಿ ನೆಲೆಸಿರುವುದನ್ನು ಪ್ರಸ್ತಾಪಿಸಲಾಗಿದೆ. 'ತರುವೆ ಯುಗದ ಬೆಳಕು' ಕವಿತೆ ಧೃತರಾಷ್ಟ್ರನಂತಹವರ ಅಂಧತ್ವದಲ್ಲಿ ಬದುಕಿನ, ಭವಿಷ್ಯ-ವರ್ತಮಾನಗಳು ಕಗ್ಗತ್ತಲ ಗೂಡಾಗುವುದನ್ನು ತಡೆಯಲು ಕರೆಯಿತ್ತಿದೆ.

ಯುಗಯುಗಗಳಿಂದ
ಪೌರುಷದ ಪುರುಷ
ಪ್ರಧಾನ ಪಟ್ಟವೇರಿದವ
ನಿನ್ನ ಅಂಧ ಪ್ರಪಂಚದಲ್ಲಿ
ಕಣ್ಣಿಗೆ ಪಟ್ಟಿ ಕಟ್ಟಿ ಕೊಡುವ ಆ
ಗಾಂಧಾರಿ ನಾನೇನಲ್ಲ ('ತರುವೆ ಯುಗದ ಬೆಳಕು', ಹೂದಂಡಿ, ಪುಟ-೧೧೭)

ಅಂಧ ನಂಬಿಕೆ ಮೌಲ್ಯಗಳನ್ನು ಪರೀಕ್ಷಿಸುವ, ತಿರಸ್ಕರಿಸುವ ಮನೋಭಾವ ವ್ಯಕ್ತವಾಗುತ್ತದೆ. 'ಒಂದು ಪ್ರಶ್ನೆ'ಯಲ್ಲಿ ಆದಿ ಶಕ್ತಿಯ ಅವತಾರವಾದ ಚಾಮುಂಡಿಯ ದೈತ್ಯ ಶಕ್ತಿಯನ್ನು ಪ್ರಶ್ನೆ

ಮಾಡಲಾಗಿದೆ. ಶುಂಭ ನಿಶುಂಭರನ್ನು ಚಂಡಾಡಿ, ಅನ್ಯಾಯಗಳನ್ನು ಬಡಿದೆಬ್ಬಿಸುತ್ತಿದ್ದ ಚಾಮುಂಡಿಯ ಕತೆ ಸತ್ಯವೋ ಮಿತ್ಯವೋ ಎಂದು ಕೇಳಲಾಗಿದೆ. ಭೂಮಂಡಲದಲ್ಲಿ ನಡೆಯುತ್ತಿರುವ ಅನ್ಯಾಯಗಳನ್ನು ಬಗ್ಗು ಬಡಿಯಲು ಚಾಮುಂಡಿಯ ಅವತಾರವನ್ನು ಆಹ್ವಾನಿಸಲಾಗಿದೆ. ಮೌನ ಕರಗುವ ಹೊತ್ತು ಕವಿತೆಯಲ್ಲಿ ರಾಮ ಪರುಶುರಾಮ, ಹರಿಶ್ಚಂದ್ರ ಮುಂತಾದವರು ಹೆಣ್ಣಿಗೆ ಮಾಡಿದ ಅಪಚಾರವನ್ನು ಕುರಿತು–

ಒಬ್ಬರಿಬ್ಬರ ಕತೆ ಇದಲ್ಲ
ಮನೆಮನೆಯ ಗತಿಯೇ ಇದೆಲ್ಲ
ನುಗ್ಗಾದೆ ಮುಗ್ಗಾದೆ
ಬಗ್ಗಿ ಬಗ್ಗಿ ಅಗ್ಗವಾದೆ
ಬಾಯಿಲ್ಲದೆ ಕುಗ್ಗಿ ಹೋದೆ
ಕಾಲ ಕಸವಾದ ಜೀವಂತ ಹುಸಿಯಾದೆ!

('ಮೌನ ಕರಗುವ ಹೊತ್ತು', ಅದೇ, ಪುಟ–೧೪೮)

ವೈಯಕ್ತಿಕ ಅನುಭವಗಳು ಸಾರ್ವತ್ರಿಕ ಸಂಗತಿಯಾಗುವ ನಿಟ್ಟಿನಲ್ಲಿ ಕವಿತೆ ಸಾಗಿದೆ. ಹಿಂದಿನವರ ಕತೆಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ವಾಸ್ತವ ಸಂದರ್ಭವನ್ನು ಅನಾವರಣಗೊಳಿಸಿದೆ. ಇಂಥ ಸ್ಥಿತಿಯನ್ನು ಮೀರಿ ಹೂತು ಹೋದ ಧ್ವನಿಗಳನ್ನು ಮುಗಿಲು ಮುಟ್ಟುವ ಹಾಗೆ ತೋಡಿಕೊಳ್ಳಬೇಕು. ಬದುಕನ್ನು ಎದುರಿಸಬೇಕೆಂಬ ಆಶಯ ವ್ಯಕ್ತಪಡಿಸಿದ್ದಾರೆ. 'ಸ್ವಯಂವರ' 'ತರುವೆ ಯುಗದ ಬೆಳಕು' 'ಬದುಕು' ಕವಿತೆಗಳಲ್ಲಿ ದೇಶ ದೇಶಗಳ ಮಧ್ಯೆ ನಡೆಯುವ ದಾಯಾದಿ ವ್ಯಾಜ್ಯದ ಯುದ್ಧಗಳನ್ನು ಕುರುಕ್ಷೇತ್ರಕ್ಕೆ ಹೋಲಿಸಲಾಗಿದೆ.

ಈ ನತದೃಷ್ಟ ರಾಷ್ಟ್ರದ
ಹಣೆ ಬರಹದಲ್ಲಿ ಕೆತ್ತಲಾಗಿದೆ
ಮುಗಿಯದ ಕುರುಕ್ಷೇತ್ರ
ಯಾವ ಶಾಂತಿ ಸಂಧಾನಕ್ಕೂ
ಕರಗದ,
ಯಾವ ಕ್ರೂರ ಬಲಿದಾನಕ್ಕೂ
ಮರುಗದ,
ಮಾನವೀಯತೆಯ ಸೆರಗೆಳೆದು
ನಗ್ನಗೊಳಿಸಬೇಕೆಂಬ ಅಟ್ಟಹಾಸದ
ಪಟ್ಟವೇರಿದ ದುಶ್ಯಾಸನ ('ಸ್ವಯಂವರ', ಅದೇ, ಪುಟ–೧೬೧)

ನಡವಳಿಕೆಗಳನ್ನು ಹಜರತ್ ಬಾಲ್ ನೆನಪು, ಚರಾರ್ ಎ ಶರೀಫ್ ನೆನಪುಗಳನ್ನು ಕವಿತೆಯ ಆವರಣದೊಳಗೆ ತಂದಿದ್ದಾರೆ.

ಶಶಿಕಲಾ ವೀರಯ್ಯಸ್ವಾಮಿಯವರು ಉತ್ತರ ಕರ್ನಾಟಕದ ಧಾರವಾಡ ಭಾಗದ ಆಡು ಮಾತಿನ ಭಾಷಾ ಶೈಲಿಯನ್ನು ಕಾವ್ಯಕ್ಕೆ ಬಳಸಿಕೊಂಡಿದ್ದಾರೆ. ಬಿಚ್ಚು ಮನಸ್ಸಿನ ನೇರ ಮಾತಿನ ಬೀಸು ಇವರ ಕವಿತೆಗಳಿಗೆ ಸೊಗಸನ್ನ ತಂದುಕೊಡುವಲ್ಲಿ ನೆರವಾಗಿದೆ. 'ಧಾರವಾಹಿ' ಕವಿತೆಯಲ್ಲಿ–

ಮಾಡ್ಕೊಂಡ ಹೇಣ್ತಿ
ಮನೀಗಿ ಬಂದ್ರ
ಬಾಗಲ ಹಾಕಿ
ಕಿಡಕಿ ಸಂದ್ಯಾಗ
ಕುತಗಿ ಹಾಯಿಸಿ
"ಯಾರ ನೀ?"
ಅನ್ನೂ ದುಷ್ಯಂತರು
ಈಗಿಲ್ಲಂತೀರಾ? (ಬಟ್ಟಬಯಲಲಿ ನಿಂತು, ಪುಟ–೩೦)

ಎಂದು ಪ್ರಶ್ನಿಸುತ್ತಲೇ ಉಂಗುರದ ನೆಪ ಮಾಡಿಕೊಂಡು ಪ್ರೀತಿಸಿದ ಶಕುಂತಲೆಯನ್ನು ಮರೆಯುವ ದುಷ್ಯಂತರು ಈಗಲೂ ಇದ್ದಾರೆಂಬುದನ್ನು ಪರೋಕ್ಷವಾಗಿ ಹೇಳಿದ್ದಾರೆ. ಚಾಡಿ ಮಾತುಕೇಳಿ ಬಸುರಿ ಹೆಂಡತಿಯನ್ನು ತವರಿಗಟ್ಟುವ 'ರಾಮದೇವರು', ಮಗುವಾದ ಮೇಲೆ ಹೆಂಡತಿಯನ್ನು ಬಿಟ್ಟು ಹೋಗುವ ಕೌಶಿಕ ಋಷಿಗಳು; ಮಾಡಲಾರದ ತಪ್ಪಿಗೆ ಜೀವ ಕಲ್ಲು ಮಾಡುವ ಗೌತಮ ಋಷಿಗಳು ಈಗಲೂ ಇದ್ದಾರೆಂಬುದನ್ನು ಹೇಳುವುದು ಕವಿತೆಯ ಉದ್ದೇಶ. ಸೀತೆಯನ್ನು ಕಾಡಿಗಟ್ಟಿದ ರಾಮ, ಕಲ್ಲಾದ ಅಹಲ್ಯೆಯರಿಗೆ ಜೀವದಾನ ಮಾಡುವುದನ್ನು ಕುರಿತು–

ಈ ರಾಮಣ್ಣರೇ ಹೀಗೆ ಕಣೇ
ನಿಜ ಸತಿಗೆ ಕಲ್ಲಾಗುವ ಇವರು
ಪರ ಸತಿಗೆ ಮಾತ್ರ ಬೆಲ್ಲವಾಗುತ್ತಾರೆ ('ಬೆಲ್ಲ ಮತ್ತು ಕಲ್ಲು', ಅದೇ, ಪುಟ–೮೮)

ಎಂದು ಗೆಳತಿ ಕೇಳುವಾಗ ಉತ್ತರ ಹೇಳಲು ಕವಿತೆಯ ನಿರೂಪಕಿ ಚಡಪಡಿಸುತ್ತಾರೆ. ಕೊನೆಗೆ 'ಗಂಡ–ಭೇರುಂಡ' ಎದುರಿಗಿದ್ದರೂ ಅದು ಸತ್ಯ ಎಂಬುದನ್ನು ಧೀರಳಾಗಿ ಒಪ್ಪಿಕೊಳ್ಳುತ್ತಾಳೆ.

ಅಷ್ಟಾವಂಕ ಮತ್ತು ಅಮೃತ ಮತಿಯರ ಪ್ರಣಯ ಪ್ರಸಂಗವನ್ನು ವಿವರಿಸಲಾಗಿದೆ. ತನ್ನೊಳಗೆ ಏನನ್ನೂ ಬಿತ್ತಲಾರದ ಭಾವನೆಗಳ ಯಶೋಧರ–ಸಾಮ್ರಾಜ್ಯ–ಅರಮನೆಯ ವೈಭವ ವಿಲಾಸಗಳನ್ನು ಬದಿಗಿಟ್ಟು ಅಷ್ಟಾವಂಕನ ಚಾಟಿ ಏಟಿನ ಗುಂಗಿಗೆ ಹಾವಾಗಿ ಹೊರಳಿ, ಅಮೃತಮತಿ ಸುಖಿಸುತ್ತಾಳೆ. ಅಮೃತ ಮತಿಯ ಪ್ರಣಯ ಪ್ರಸಂಗವನ್ನು ಕುರಿತು ಶಶಿಕಲಾರವರು–

ತುರು ತುರುನೆ ತೂರಿದಳು
ದಾಂಪತ್ಯದ ಮೌಲ್ಯವನು ಎಂದು

ಅತ್ತ ಸಂಸ್ಕೃತಿಯ
ಗುತ್ತಿಗೆದಾರರನ್ನು ಧಿಕ್ಕರಿಸಿ
ನಕ್ಕಳಿವಳು ತುಟಿಯ
ಅಂಚಿನಲಿ ಚೂಪಾಗಿ ('ಮದ್ದಾನೆ ಮತ್ತು ಮಾವುತ', ಅದೇ, ಪುಟ-೬೧)

ಎಂಬ ವ್ಯಾಖ್ಯಾನ ನೀಡುತ್ತಾರೆ. ದಾಂಪತ್ಯದ ಚೌಕಟ್ಟನ್ನು ಮುರಿದು, ತನ್ನ ಸುಖವನ್ನು ಬದಗನೊಂದಿಗೆ ಕಂಡುಕೊಂಡ ಅಮೃತ ಮತಿಯ ಬದುಕಿನ ಧೋರಣೆಗಳು ಪ್ರತಿಭಟನಾತ್ಮಕತೆಯಿಂದ ಕೂಡಿದವುಗಳಾಗಿವೆ.

'ಮನುವಿಗೊಂದು ಮಾತು' ಕವಿತೆಯಲ್ಲಿ ಮನು ಹೇಳಿದ 'ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ ಎಂಬ ಹೇಳಿಕೆಯನ್ನು ವಿಡಂಬನಾತ್ಮಕಗೊಳಿಸಲಾಗಿದೆ. ವಾಸ್ತವದಲ್ಲಿ ನಡೆಯುತ್ತಿರುವ ಹೆಣ್ಣಿನ ಮೇಲಿನ ದೌರ್ಜನ್ಯ, ಅತ್ಯಾಚಾರ, ಅವಮಾನ ಹಿಂಸೆಗಳನ್ನು ಪ್ರಸ್ತಾಪಿಸಿ, ಅದರಿಂದ ರೊಚ್ಚಿಗೆದ್ದ ಕವಿ ಹೊಸ ಹೆಜ್ಜೆಯನ್ನು ತುಳಿದು, ಹೆಣ್ಣಿನ ದುರಂತಕ್ಕೆ ಕಾರಣರಾದ ಭಂಡರ ರುಂಡವನ್ನು ಚೆಂಡಾಡಲು ಮುಂದಾಗುತ್ತಾರೆ.

ಭೀಷ್ಮನ ಕಾರಣದಿಂದ ಅತಂತ್ರ ಸ್ಥಿತಿಯನ್ನು ಅನುಭವಿಸಿದ ಅಂಬೆಯ ಅಳಲನ್ನು 'ಅಂಬೆಯ ಅಪಲಾಪ'ದಲ್ಲಿ ಕಾಣಬಹುದು.

'ಭಾಮೆಯ ಭಾವನಾ ಗೀತೆ' ಕವಿತೆಯಲ್ಲಿ ಮಾಧವನ ಪ್ರೀತಿಯಲ್ಲಿ ಪಾಲು ಪಡೆದ ರುಕ್ಮಿಣಿ, ರಾಧೆ, ಶಮಂತಕ, ಶೈಬ್ಯೆಯರಂತೆ ಆಗಲಾರದ ಸತ್ಯಭಾಮೆ ಮಾಧವನ ಕೊಳಲಾಗಿ, ಪ್ರೇಮದ ಉಸಿರು ತುಂಬಿಕೊಳ್ಳುವ ಹಂಬಲವನ್ನು ವ್ಯಕ್ತಪಡಿಸಿದ್ದಾರೆ. 'ಹೇಗೆ ಪ್ರೀತಿಸಲಿ?' ಕವಿತೆಯಲ್ಲಿ ಇತಿಹಾಸದಲ್ಲಿ ಅಮರರಾದ ಲೈಲಾ, ಜೂಲಿಯಟ್, ಶಕುಂತಲೆಯರ ಪ್ರೇಮದ ಉನ್ಮಾದವನ್ನು ನಿರಾಕರಿಸಿ, ವಾಸ್ತವದ ಕಟು ಸತ್ಯಗಳನ್ನು ಎದುರಿಸುವ ಹಾದಿಯನ್ನು ಬಯಸುತ್ತಾರೆ.

ಮಲ್ಲಿಕಾ ಘಂಟಿಯವರು ವರ್ತಮಾನದ ಯಜಮಾನ್ಯ ವ್ಯವಸ್ಥೆಯ ರಾಜಕಾರಣವನ್ನು ಪ್ರಶ್ನಿಸಲು, ತಮ್ಮ ಕಾವ್ಯವನ್ನು ಪುರಾಣ ಪಾತ್ರಗಳೊಂದಿಗೆ ಮುಖಾಮುಖಿಯಾಗಿಸುತ್ತಾರೆ.

ಲೋಕ, ಯಾವುದು ಹೌದೆಂದಿದೆ,
ಅದು ಅಲ್ಲವೆನ್ನುವುದು ಕವಿತೆ
ಯಾವುದು ಅಲ್ಲವೆಂದು ಹೇಳಿದೆಯೋ
ಅದನ್ನು ಹೌದೆನ್ನುವುದು ಕವಿತೆ

('ಅಳುವುದು ಕವಿತೆ', ರೊಟ್ಟಿ ಮತ್ತು ಹುಡುಗಿ, ಪುಟ-೫೫)

ವ್ಯಕ್ತಪಡಿಸಲಾಗಿರುವ ಮೇಲಿನ ಕಾವ್ಯತತ್ವ ಮಹಿಳಾ ಕಾವ್ಯದ ಸೈದ್ಧಾಂತಿಕ ನೆಲೆಯೂ ಆಗಿದೆ. ಇದುವರೆಗೂ ಪಿತೃಪ್ರಧಾನ ಸಮಾಜ ಮಹಿಳೆಯರಿಗಾಗಿ ರೂಪಿಸಿಕೊಟ್ಟ ಸಾಂಪ್ರದಾಯಿಕ ಮೌಲ್ಯಗಳನ್ನು, ನಂಬಿಕೆಗಳನ್ನು ಮುರಿದು, ಹೊಸ ಆಶಯದ ಜಗತ್ತನ್ನು ನಿರ್ಮಿಸಿಕೊಳ್ಳುವ ಹಂಬಲ ಮಲ್ಲಿಕಾ ಘಂಟಿಯವರ ಕಾವ್ಯದಲ್ಲಿ ಒಡಮೂಡಿದೆ. ಸೀತೆಯನ್ನು ಅಡವಿಗಟ್ಟಿದ್ದು; ದ್ರೌಪದಿಯನ್ನು ಪಾಂಡವರು

ಪಣಕ್ಕಿಟ್ಟಿದ್ದು; ಚಂದ್ರಮತಿಯನ್ನು ಮಾರಿದ್ದು; ಬುದ್ಧ ಹೆಂಡತಿಯನ್ನು ಬಿಟ್ಟು ಹೋಗಿದ್ದು–'ಲೋಕ ಕಲ್ಯಾಣಕ್ಕಾಗಿ' ಎಂದು ಒಪ್ಪಿಸಲಾಗಿರುವುದನ್ನು 'ಹೀಗೆಂದವರು' ಕವಿತೆಯಲ್ಲಿ ವ್ಯಂಗ್ಯ ಧಾಟಿಯಲ್ಲಿ ನಿರೂಪಿಸಲಾಗಿದೆ. ಹೆಣ್ಣು ಹೃದಯವನ್ನು ಗೆಲ್ಲಲಾರದ ಗಂಡಸರು ಮೋಸದಿಂದ ಧರಿಸಿ ಬರುವ ನಾನಾ ವೇಷಗಳನ್ನು 'ಎಷ್ಟೊಂದು ವೇಷ ಎಷ್ಟೊಂದು ಮೋಸ' ಕವಿತೆಯಲ್ಲಿ ಬಯಲಿಗೆಳೆಯುತ್ತಾರೆ. ಅರುಂಧತಿಯ ಮೇಲಿನ ಮೊಹದಿಂದ ತ್ರಿಮೂರ್ತಿಗಳು ಧರಿಸಿದ ವೇಷ; ಅಹಲ್ಯೆಯ ಮೇಲಿನ ಮೋಹದಿಂದ ಇಂದ್ರ ಧರಿಸಿದ ಗೌತಮನ ವೇಷ; ಸೀತೆಗಾಗಿ ರಾವಣ ಧರಿಸಿದ ಭಿಕ್ಷುಕನ ವೇಷಗಳನ್ನು ಬಯಲು ಮಾಡಿದ್ದಾರೆ. 'ಯಾಕೆ ವಿಚಲಿತರಾಗುತ್ತೀರಿ' ಕವಿತೆ ಇತ್ತೀಚೆಗೆ ಕುದುರೆಮೋತಿ, ವಣೇನೂರಿನಲ್ಲಿ ನಡೆದ ಹೆಣ್ಣಿನ ಮೇಲಿನ ಅತ್ಯಾಚಾರ; ಚಿಂಚೋಳಿ ತಾಂಡಾದಲ್ಲಿ ಮಕ್ಕಳನ್ನು ಮಾರಿದ ಘಟನೆಗಳನ್ನು ಕವಿತೆಯ ಪೂರ್ವಾರ್ಧದಲ್ಲಿ ದಾಖಲಿಸಿದ್ದಾರೆ. ಕವಿತೆಯ ಉತ್ತರಾರ್ಧದಲ್ಲಿ ಆ ಸನ್ನಿವೇಶಗಳಿಗೆ ಪುರಾಣ ಕಾಲದಲ್ಲಿ ನಡೆದ ದ್ರೌಪದಿಯ ವಸ್ತ್ರಾಪಹರಣ, ಚಿನ್ನದ ಪೆಟ್ಟಿಗೆಯಲ್ಲಿಟ್ಟು ತೇಲಿಬಿಟ್ಟ ಸೀತೆ, ಶಕುಂತಲೆಯರ ಇತಿಹಾಸವನ್ನು ನೆನಪಿಗೆ ತರುವ ತಂತ್ರವನ್ನು ಅನುಸರಿಸುತ್ತಾರೆ. ಅನಾದಿ ಕಾಲದಿಂದಲೂ ಹೆಣ್ಣಿನ ಮೇಲಾಗುವ ಇಂತಹ ಶೋಷಣೆಯನ್ನು 'ವಿಚಲಿತರಾಗಬೇಡಿ' ಎನ್ನುತ್ತಲೇ ಓದುಗ ಸಮುದಾಯವನ್ನು ವಿಚಲಿತಗೊಳಿಸುತ್ತಾರೆ.

'ತೀರದ ಬಯಕೆ' 'ಮುನಿಯದಿರೆ ನಾರಿ' ಕವಿತೆಗಳು ರಾಮಾಯಣ ಮಹಾಭಾರತದ ಪಾತ್ರಗಳನ್ನು ಮರು ಪರಿಶೀಲನೆಗೆ ಒಡ್ಡಿವೆ.

### ೫.೩.೨ ಪ್ರತಿಭಟನಾತ್ಮಕ ಪಾತ್ರಗಳ ಪುನರಾವಲೋಕನ

ವ್ಯವಸ್ಥೆಯ ವಿರುದ್ಧ ಸಿಡಿದೇಳುವ ಹೆಣ್ಣು ಪಾತ್ರಗಳನ್ನು ಅನೇಕ ಕವಿಗಳು ಕಾವ್ಯದ ಮೂಲಕ ಪುನರವಲೋಕನಕ್ಕೆ ಒಳಪಡಿಸಿದ್ದಾರೆ. ಕೆಳಗೆ ಚರ್ಚಿಸಿರುವ ಆದರ್ಶ ಪಾತ್ರಗಳೂ ಪ್ರತಿಭಟನಾತ್ಮಕ ಧೋರಣೆಯುಳ್ಳ ಪಾತ್ರಗಳಾಗಿವೆ. ಈ ಭಾಗದಲ್ಲಿ ಅಕ್ಕಮಹಾದೇವಿಯ ನಿಲುವುಗಳನ್ನು ಕವಿಗಳು ಹೇಗೆ ಸ್ವೀಕರಿಸಿದ್ದಾರೆಂಬುದನ್ನು ಚರ್ಚಿಸಲಾಗಿದೆ. ಉಳಿದ ಪ್ರತಿಭಟನಾತ್ಮಕ ಮನೋಭಾವದ ಪಾತ್ರಗಳನ್ನು ಕೆಳಗಿನ ಭಾಗದಲ್ಲಿ ವಿಶ್ಲೇಷಿಸಲಾಗಿದೆ.

ಹೆಚ್ಚು ಕವಿಗಳಿಗೆ ಅಕ್ಕನ ಜೀವನ ಕ್ರಮ ಹೆಚ್ಚು ಆಕರ್ಷಣೀಯವಾದುದು. ಆದರೆ, ಅನುಕರಣೀಯ ವಾದುದಲ್ಲ ಎಂಬುದು ಗೋಚರಿಸುತ್ತದೆ. ಮಹಿಳೆಯರ ಕಾವ್ಯದಲ್ಲಿ ಪ್ರತಿಭಟನಾತ್ಮಕ ನೆಲೆಯನ್ನು ಗುರುತಿಸುವಾಗ ಅಕ್ಕನ ಹೆಸರು ಮೊದಲು ಪ್ರಸ್ತಾಪವಾಗುತ್ತದೆ. ಜಿ.ಎಸ್.ಶಿವರುದ್ರಪ್ಪನವರು ಮಹಿಳೆಯರ ಕಾವ್ಯವನ್ನು ಅಧ್ಯಯನ ಮಾಡುವಾಗ, ಮುನ್ನುಡಿಯನ್ನು ಬರೆಯುವಾಗ ಹೆಚ್ಚು ಮಹಿಳೆಯರು ಅಕ್ಕನ ಮಾದರಿಯನ್ನು ಅನುಸರಿಸುತ್ತಾರೆಂದು ವಿಶ್ಲೇಷಿಸಿದ್ದಾರೆ. ಅಕ್ಕಮಹಾದೇವಿ ಪ್ರತಿಭಟಿಸಿದ್ದು ಲೋಕದ 'ಸಾಯುವ', 'ಕೆಡುವ' ಗಂಡರನ್ನು. ಅಂದರೆ, ಲೌಕಿಕ ಗಂಡರನ್ನು. ಆದರೆ, ಅಲೌಕಿಕ ಗಂಡನನ್ನು ಒಪ್ಪಿಕೊಂಡು ಆರಾದಿಸುವುದು ಸಂದಿಗ್ಧಕ್ಕೆ ಎಡೆಮಾಡಿಕೊಡುತ್ತದೆ. ಜಿ.ಎಸ್.ಶಿವರುದ್ರಪ್ಪನವರ

ನಿಲುವನ್ನು ಮರುಪರಿಶೀಲಿಸುವ ಜಿ.ಪಿ.ಬಸವರಾಜುರವರು "ಆಧುನಿಕ ಮಹಿಳೆ ಸಮಾನತೆಯನ್ನು ಬಯಸುವವಳು. ತನ್ನ ದಾಸ್ಯದ ವಿರುದ್ಧ ಸೆಟೆದು ನಿಂತವಳು. ಹೆಣ್ಣು ಮತ್ತು ಗಂಡು ಸಮಾನರು, ಅವರ ನಡುವಣ ಪ್ರೀತಿ ಈ ಸಮಾನತೆಯನ್ನು ಗೌರವಿಸಿಯೇ ಕುಡಿಯೊಡೆಯಬೇಕು ಎಂಬುದು ಸಮಾನತೆಯನ್ನು ಅಪೇಕ್ಷಿಸುವ ಆಧುನಿಕ ಮಹಿಳೆಯ ನಿಲುವು. ಆದರೆ ಅಕ್ಕ ಭಕ್ತಿ ಪರಂಪರೆಯಲ್ಲಿ ಬಂದವಳು. ಚೆನ್ನಮಲ್ಲಕಾರ್ಜುನನ ಮೇಲಣ ಅಕ್ಕನ ಪ್ರೀತಿ ಎಷ್ಟೇ ಉತ್ಕಟವಾಗಿದ್ದರೂ ಅದು ಸಮಾನತೆಯ ನೆಲೆಯಿಂದ ಹೊರಟದ್ದಲ್ಲ. ತನ್ನನ್ನು ಒಪ್ಪಿಸಿಕೊಳ್ಳುವ, ಅರ್ಪಿಸಿಕೊಳ್ಳುವ ಮನೋಭಾವದ್ದು. ಭಕ್ತಿಪಂಥದ ನೆಲೆಯೇ ಈ ಶರಣಾಗತಿಯದು... ಈ ಮಾದರಿಯನ್ನು ಆಧುನಿಕ ಸಂಕೀರ್ಣ ಪ್ರಜ್ಞ ಮಹಿಳೆ ಒಪ್ಪಿಕೊಳ್ಳುವುದು ಕಷ್ಟ" ('ಪ್ರಸ್ತಾವನೆ', ಕಾವ್ಯಸಂವಾದ, ಪುಟ-೧೦) ಎಂದಿದ್ದಾರೆ. ಈ ಮಾತುಗಳು ಅಕ್ಕನ ಜೀವನ ಸಿದ್ಧಾಂತಕ್ಕೂ 'ಆಧುನಿಕ', 'ವೈಚಾರಿಕ' ಮನೋಭಾವದ ಮಹಿಳೆಯರ ಸಿದ್ಧಾಂತಕ್ಕೂ ಇರುವ ವ್ಯತ್ಯಾಸವನ್ನು ಮನಗಾಣಬಹುದಾಗಿದೆ. ವಿಜಯಾ ದಬ್ಬೆಯವರೂ ಅಕ್ಕನ ನಿಲುವುಗಳನ್ನು ಒರೆಗೆ ಹಚ್ಚಿದ್ದಾರೆ (ನೋಡಿ: 'ಅಕ್ಕ ಒಂದು ಪರಿಚಯ', ನಾರಿ: ದಾರಿ-ದಿಗಂತ, ಪುಟ-೧೧೨). ೧೨ನೇ ಶತಮಾನದ ಕಾಲಘಟ್ಟದಲ್ಲಿ ಅಕ್ಕನ ದಿಟ್ಟತನ ಎಂತಹವರಿಗೂ ಬೆರಗು ಮೂಡಿಸುವಂಥದು. ಆತ್ಮಸ್ಥೈರ್ಯವನ್ನು ಪ್ರಕಟಿಸುವಂಥದ್ದು. ಅಕ್ಕನ ನಿಲುವುಗಳನ್ನು ಅಧ್ಯಯನ ಮಾಡುವುದು ಯಾವ ಕಾಲಕ್ಕೂ ಕುತೂಹಲಕಾರಿಯಾದುದು. ಅಕ್ಕನ ಕುರಿತಾದ ನಿಲುವುಗಳನ್ನು ನಮ್ಮ ಮಹಿಳೇ ಕವಿಗಳು ಹೇಗೆ ಸ್ವೀಕರಿಸಿದ್ದಾರೆಂಬುದನ್ನು ವಿವೇಚಿಸೋಣ.

ಬೆಟ್ಟದ ಮೇಲೆ ಮನೆ ಮಾಡಿ, ಮೃಗಗಳಿಗಂಜದ ಅಕ್ಕನ ಎದೆಗಾರಿಕೆಯನ್ನು ಮೆಚ್ಚಿಕೊಳ್ಳುವ ಸುಕನ್ಯಾ ಮಾರುತಿಯವರು 'ನಾ ಹೀಗೆ ಮಾಡಬಾರದಿತ್ತು' ಕವಿತೆಯಲ್ಲಿ,

ನೀ ಪಟ್ಟ ಬವಣೆ ಕಂಡ ಮೇಲೂ
ನೀ ಬಿಟ್ಟ ಸೀರೆ ಉಡಬಾರದಿತ್ತು ಸಖೀ (ನಾನೆಂಬ ಮಾಯೆ, ಪುಟ-೨೨೬)

ಎಂದು ಹಲುಬುತ್ತಾರೆ. ಸೀರೆಯ ರೂಪಕ, ಇಹದ ಬದುಕಿನ ಸಂಬಂಧದ ಸಂಕೇತವಾಗಿದೆ. ಒಂದೊಂದು ನಿರಿಗೆಯು ಸೆರೆಯಾದ, ಕೊರಳಿಗೆ ಉರುಳಾದ ಬಗೆಯನ್ನು ವಿವರಿಸುತ್ತಾ, ಆ ಸೀರೆಯ ಹಂಗು ತೊರೆಯಲು ಬಯಸುತ್ತಾರೆ. ಅಕ್ಕನಿಗಿಂತ ಭಿನ್ನ ಧೋರಣೆ ತೋರಿದ ಗಂಗಾಂಬಿಕೆಯ ಪಾತ್ರವನ್ನು ಆದರ್ಶವಾಗಿ ಎತ್ತಿಕೊಂಡಿದ್ದಾರೆ. 'ನಿನ್ನಂತೆ ನಾನಾಗಲಿಲ್ಲ' ಕವಿತೆಯಲ್ಲಿ ಪರಲೋಕದ ವ್ಯಾಮೋಹಕ್ಕಿಂತ ಇಹ ಲೋಕದಲ್ಲಿದ್ದು, ಕಾಯಕ ದಾಸೋಹ ತತ್ವಗಳನ್ನು ಪಾಲಿಸಿದ ಗಂಗಾಂಬಿಕೆಯ ಬದುಕು ಸಾಫಲ್ಯ ಪಡೆದಿದೆಯೆಂಬುದನ್ನು ಪ್ರತಿಪಾದಿಸಲಾಗಿದೆ.

ಶಶಿಕಲಾ ವೀರಯ್ಯಸ್ವಾಮಿಯವರ 'ಮೇಣ ಬತ್ತಿ' 'ಪ್ರೇಮಿ' ಕವಿತೆಗಳು ಅಕ್ಕನ ದಿಟ್ಟ ಬದುಕನ್ನು ಹಿನ್ನೆಲೆಯಾಗಿಟ್ಟುಕೊಂಡು ವರ್ತಮಾನದ ಬದುಕನ್ನು ಎದುರಿಸುವ ನೋಟ ಕಾಣಸಿಗುತ್ತದೆ. ಲೋಕದ ಗಂಡರನ್ನು ಒಲೆಯೊಳಗಿಕ್ಕಿದ ಅಕ್ಕನ ಬದುಕಿಗೆ ವಿರುದ್ಧವಾಗಿ ಲೋಕದ ಗಂಡನ-

ಅರಮನೆಗೆ
ಮೇಣಬತ್ತಿಯಾಗಿ
ಸುಟ್ಟುಕೊಳ್ಳುತ್ತಾ
ಒಳಗೆ ಉರಿಯುತ್ತಾ
ಬಿಸಿಗೆ ಕರಗುತ್ತಾ
ಹೆಪ್ಪುಗಡುತ್ತಿದ್ದೇನೆ (ಬಟ್ಟ ಬಯಲಲಿ ನಿಂತು, ಪುಟ–೨೩)

ಇಲ್ಲಿ ವಾಸ್ತವ ಜಗತ್ತಿನ ಅನಾವರಣವಾಗುತ್ತದೆ. 'ಪ್ರೇಮಿ' ಕವಿತೆಯಲ್ಲಿ ಚೆನ್ನಮಲ್ಲಿಕಾರ್ಜುನನೊಂದಿಗೆ ಸಂವಾದಕ್ಕಿಳಿದು ಹುಡುಗಿಯೊಬ್ಬಳು ಕಾಡಿನಲ್ಲಿ ದಾರಿ ತಪ್ಪಿ ಮೈ ತುಂಬ ಮುಳ್ಳು ತಾಕಿದಾಗ, ಶೀಲ ಹೋಗಿರಬಹುದೆಂದು ಅನುಮಾನ ಪಟ್ಟ ಹುಡುಗ ಆಕೆಯನ್ನು ತಿರಸ್ಕರಿಸುವ ಚಿತ್ರಣ ನೀಡುತ್ತಾರೆ. ಇಂತಹ ಸಂಶಯ ಪಿಶಾಚಿಗಳನ್ನು ಕಂಡೇ ಅಕ್ಕ ಪರಲೋಕದ ಚೆನ್ನಮಲ್ಲಿಕಾರ್ಜುನನ್ನು ಒಲಿದಿರಬೇಕೆಂಬ ಪ್ರಮೇಯವನ್ನು ಮುಂದಿಡಲಾಗಿದೆ.

ಮಲ್ಲಿಕಾ ಘಂಟಿಯವರ 'ಒಂಟಿಹಕ್ಕಿ ಹಾಡು' ಅಕ್ಕ, ಒಂಟಿತನವನ್ನು ಹೇಗೆ ವರವಾಗಿ ಮಾರ್ಪಡಿಸಿಕೊಂಡಿದ್ದಾಳೆಂಬುದನ್ನು ಹೇಳಿದರೆ, 'ಸಂಜೆ ಮಲ್ಲಿಗೆಯ ಜೀವ' ಕವಿತೆಯಲ್ಲಿ–

ಸೂರ್ಯ ಚಂದ್ರರ ಸಾಕ್ಷಿಗಿಟ್ಟು
ಜಗದ ಜನರ ಎದುರಿನಲಿ
ಕೈ ಹಿಡಿದು ಆತ್ಮಸಾಕ್ಷಿಯ ಕೊಂದು
ನಡೆದವನ ಹೆಜ್ಜೆ ಗುರುತಿಲ್ಲ
ಮರುಳಿ ನೆಲದ ಮೇಲೆ
ಮಲ್ಲಿಗೆಯೊಳಗಿನ ಅಕ್ಕ
ಅಕ್ಕನೊಳಗಿನ ಮಲ್ಲಿಗೆ
ಮಲ್ಲಿಗೆ ಅಕ್ಕನೊಳಗಿನ ನಾವುಗಳು
ಹುಡುಕುತ್ತಿರುವೆವು ಕೈಗೆ ಸಿಗದ ಲೋಕ ನ್ಯಾಯವ
(ಬೆಲ್ಲದಚ್ಚು ಮತ್ತು ಇರುವೆ ದಂಡು, ಪುಟ–೪೮)

ಅಕ್ಕನನ್ನು ಮೇಲಿನ ಶೀರ್ಷಿಕೆ ಸೂಚಿಸುವಂತೆ 'ಸಂಜೆ ಮಲ್ಲಿಗೆಯ ಜೀವ'ಕ್ಕೆ ಹೋಲಿಸಲಾಗಿದೆ. ಆತ್ಮಸಾಕ್ಷಿಯಲ್ಲಿ ರೂಪಗೊಂಡ ಚೆನ್ನಮಲ್ಲಿಕಾರ್ಜುನ, ಕವಿತೆಯ ನಿರೂಪಕರಿಗೆ ಹಗಲು ವೇಷಗಾರನಾಗಿ ಕಾಣುತ್ತಾನೆ. ಅಕ್ಕನದು ಭಾವನಾತ್ಮಕ ನೆಲೆಯಾದರೆ, ಕವಿ ವಾಸ್ತವದ ಕಟು ಸತ್ಯಗಳನ್ನು ಬಲ್ಲವರು. ಇವರಿಬ್ಬರೂ ಸಿಗದ ಲೋಕ ನ್ಯಾಯಕ್ಕಾಗಿ ತಡಕಾಡುತ್ತಿದ್ದಾರೆ. ಕವಿತೆಯ ಹಂಬಲ ಪಾತಿವ್ರತ್ಯದ ಹುಸಿ ನಂಬಿಕೆಗಳನ್ನು ಒಡೆದಿದೆ.

ಪತಿಯ ಕುರುಹನ್ನು ಕೆದಕಿ ಕೇಳಿದ ಅಲ್ಲಮ ಮುಂತಾದವರಿಗೆ ಅಕ್ಕನ ಮೂಲಕ ಸ.ಉಷಾರವರು 'ಅಕ್ಕ ಹೇಳಿದ್ದು' ಕವಿತೆಯ ಮೂಲಕ ನೀಡುವ ಪ್ರತಿಕ್ರಿಯೆ

ತೊಟ್ಟು ಕಳಚಿದ ಹಣ್ಣ
ಬೇರನರಸುವ
ನುಡಿಯ ಜಾಣಂಗಳೇ
ನಾನಾದರೆ ನಿಮ್ಮ ಎನ್ನೊಡವುಟ್ಟಿದಣ್ಣಂಗಳೇ
ಎಂದು
ಎಂತು ನಂಬಲಿ ಪ್ರಭುವೇ (ಈ ನೆಲದ ಹಾಡು, ಪುಟ-೦೯)

ಪ್ರಶ್ನೆಗೆ ಮರು ಪ್ರಶ್ನೆಯ ಅಸ್ತ್ರವನ್ನೇ ಉಪಯೋಗಿಸಲಾಗಿದೆ. ಅಂದು ಅಕ್ಕ ಅನುಭವ ಮಂಟಪದಲ್ಲಿ ಎದುರಿಸಿದ ಪರೀಕ್ಷೆಯಲ್ಲಿ ಉತ್ತೀರ್ಣಳಾಗುತ್ತಾಳೆ. ಆದರೆ ಅಕ್ಕನ ಮೂಲಕ ಮಹಿಳಾ ಕವಿಗಳು ಎತ್ತುವ ಮೇಲಿನ ಪ್ರಶ್ನೆಗಳಿಗೆ ಬಹುಶಃ ಇಂದಿನ ಅಲ್ಲಮರು ನಿರುತ್ತರರಾಗಿದ್ದಾರೆ ಎಂಬುದನ್ನು ಚೋದ್ಯವಾಗಿರುವುದನ್ನು ಬಣ್ಣಿಸಲಾಗಿದೆ. ಮೇಲಿನ ಕವಿತೆಗಳನ್ನು ಗಮನಿಸಿದಾಗ ಅಕ್ಕನ ಪ್ರತಿಭಟನೆ ಮೆಚ್ಚುಗೆಯಾದರೂ ಅದನ್ನು ಪಾಲಿಸುವುದು ದುಃಸ್ಸಾಧ್ಯ ಎಂಬುದನ್ನು ಮನಗಾಣಬಹುದಾಗಿದೆ.

### ೫.೩.೩ ಆದರ್ಶ ಪಾತ್ರಗಳ ತತ್ವಸ್ವೀಕರಣ

ಸ.ಉಷಾ ಮತ್ತು ಎಚ್.ಎಲ್.ಪುಷ್ಪಾರವರು ಪುರಾಣದಲ್ಲಿ ಬರುವ ಪ್ರತಿಭಟನಾತ್ಮಕ ಮನೋಭಾವದ ಪಾತ್ರಗಳನ್ನು ಆದರ್ಶ ಪಾತ್ರಗಳನ್ನಾಗಿ ಸ್ವೀಕರಿಸಿದ್ದಾರೆ. ಮಹಿಳೆಯ ಅಸ್ತಿತ್ವವನ್ನು ಶೋಧಿಸುತ್ತ ಹೋದಂತೆ, ಪ್ರಭುತ್ವದ ಮೌಲ್ಯಗಳೊಂದಿಗೆ ರಾಜಿಯಾಗದೆ, ಪ್ರತಿರೋಧಿಸಿದ ಪಾತ್ರಗಳೂ ಎದುರಿರುವುದನ್ನು ಮನಗಾಣಲಾಯಿತು. ಅಂತಹ ಪಾತ್ರಗಳನ್ನು ಕಾವ್ಯದಲ್ಲಿ ತರುವ ಮೂಲಕ ಮಹಿಳಾ ಚಳುವಳಿಗಳಿಗೆ ಸ್ಫೂರ್ತಿ ತುಂಬಲಾಗಿದೆ.

ಸ.ಉಷಾರವರು ಪುರಾಣ-ಇತಿಹಾಸ-ವೈಜ್ಞಾನಿಕ ವಿಚಾರಗಳಲ್ಲಿ ತೀವ್ರ ಆಸಕ್ತಿ ಹೊಂದಿರುವವರು. ಪ್ರಾಚೀನ ಸಾಹಿತ್ಯದಲ್ಲಿ ಆಳವಾಗಿ ಹೊಕ್ಕು ಅಧ್ಯಯನ ಮಾಡಿದ ಫಲಿತಗಳು ಇವರ ಕಾವ್ಯದೊಳಗೆ ಪರೋಕ್ಷವಾಗಿ ಗೋಚರಿಸುತ್ತವೆ. 'ಈ ನೆಲದ ಹಾಡು', 'ಅಕ್ಕ ಹೇಳಿದ್ದು', 'ನೀಲಶೀಲರ ಹಾಡು', 'ಬಾಯಿ ಮುಚ್ಚಿಕೋ ಸೀತಾ', 'ಮಹಾಶ್ವೇತೆಯ ಸ್ವಾಗತ', 'ವಿನತೆ ಮತ್ತು ಗರುಡ', 'ವಾಸಕ ಸಜ್ಜಿಕೆ', 'ನಿರಂತರ', 'ನಚಿಕೇತ ಮತ್ತು ನಾನು' 'ನನ್ನ ಭವ ಭೂತಿಗೆ', 'ಎರಡು ಭೂರ್ಜ ಪತ್ರಗಳು' ಮುಂತಾದ ಕವಿತೆಗಳು ಪುರಾಣ ಪಾತ್ರಗಳ ಪುನರಾವಲೋಕನ ಮಾದರಿಯನ್ನು ಅನುಸರಿಸಿವೆ.

ಪುಂಡರೀಕನಿಗಾಗಿ ಕಾದಿರುವ ಮಹಾಶ್ವೇತೆಯಿದ್ದಾಳೆ. ಕತ್ತಿಯೊಂದಿಗೆ ಮದುವೆಯಾದ ವಾಸಕ ಸಜ್ಜಿಕೆ ಮುಂತಾದವರು ಎದುರಾಗುತ್ತಾರೆ. ಅಕ್ಕ, ಮೋದಾಳಿ ಪ್ರತಿಭಟನಾತ್ಮಕ ಮನೋಧೋರಣೆಯ ಪಾತ್ರಗಳಾಗಿದ್ದಾರೆ. ರುರು ಆದರ್ಶ ಪುರುಷನ ಪ್ರತಿನಿಧಿಯಾಗಿ ಗೋಚರಿಸುತ್ತಾನೆ.

ವಡ್ಡಾರಾಧನೆಯ ಉಪಕತೆಯೊಂದರಲ್ಲಿ ಬರುವ ಮೋದಾಳಿಯು, ನಂದ ಬೋದರಿಬ್ಬರೂ ತನ್ನನ್ನು ತಿರಸ್ಕರಿಸಿದ ಮೇಲೆ ಪಕ್ಕದ ಮನೆಯ ನಾಗಶೂರನೊಂದಿಗೆ ಬೆಳೆಸಿದ ಸ್ನೇಹದ ಕತೆಯನ್ನು 'ನಿರಂತರ' ಕವಿತೆಯ ಬಿಡಿ-ಬಿಡಿ ಭಾಗಗಳು ಪ್ರಸ್ತುತಪಡಿಸುತ್ತವೆ. 'ನಿರಂತರ' ಕವಿತೆ ಕಥಾನಕ ಧಾಟಿಯನ್ನು ಅನುಸರಿಸಿದೆ. ಮೋದಾಳಿಯನ್ನು ತಾಯಿಯ ಗರ್ಭದಲ್ಲಿದ್ದಾಗಲೇ ನಂದನೊಂದಿಗೆ ಮದುವೆಯಾಗುವುದನ್ನು ನಿಶ್ಚಯಿಸಲಾಗುತ್ತದೆ. ವ್ಯಾಪಾರಕ್ಕೆ ಹೊರಟ ನಂದ "ಹನ್ನೆರಡು ವರುಷಕ್ಕೆ ಬಾರದಿರೆ ನಾನು, ಧಾರೆಯರೆಯಿರಿ ಮೋದಾಳಿಯನು ಬೋದನಿಗೆ" ಎಂದು ಹೇಳಿ ಹೋಗಿರುತ್ತಾನೆ. ಹಾಗೆ ಕಾಲದ ಗಡುವು ಮುಗಿದು ಬೋದನೊಂದಿಗೆ ಮೋದಾಳಿಯ ಮದುವೆ ಸಮಾರಂಭ ನಡೆಯುತ್ತಿರುವಾಗ, ಬೋದನ ಆಗಮನವಾಗುತ್ತದೆ. ಅಣ್ಣನ ಹೆಂಡತಿಯೆಂದು ಬೋದ, ತಮ್ಮನ ಹೆಂಡತಿಯಾಗುವವಳೆಂದು ನಂದನರಿಬ್ಬರಿಂದಲೂ ಮೋದಾಳಿ ತಿರಸ್ಕೃತವಾದಾಗ-

> ಕಣ್ಣನೀರನು ತೊಡೆವ
> ತಾಯ ಕೈ ಕಿತ್ತೆಸೆದ
> ಬಿಸಿ ಬೂದಿಯಲಿ ಬೆಂದ ಬದನೆಯ ಹಾಗೆ
> ಚಟ್ಟನೆ ಸಿಡಿದಳು ಮೋದಾಳಿ
> ಬೇಡಮ್ಮ ಬೇಡ
> ಅವರನೊಲಿಸುವುದು ಬೇಡ
> ಕಟ್ಟಿಕೊಳ್ಳಲಿ ಅವರ ಸರ್ವ ಸಂಭಾರ
> ತಾಯಿ ('ನಿರಂತರ', ಅದೇ, ಪುಟ-೪೩)

ಎಂದವಳು ಮನೆಯೆಂಬ ಕೋಟೆಯ ಬಾಗಿಲು, ಬೀಗಗಳನ್ನು ಮುರಿದು, ಹಡಗು ವ್ಯಾಪಾರಿಯಾದ ನಾಗಶೂರನನ್ನು ಪ್ರೇಮಿಸುತ್ತಾಳೆ. ಊರು ಬಿಟ್ಟು ಅವನೊಂದಿಗೆ ಓಡಿ ಹೋಗುತ್ತಾಳೆ. ಆದರೆ ಅವರಿಬ್ಬರಿಗೂ ಗಲ್ಲು ಶಿಕ್ಷೆಯಾಗುವುದರೊಂದಿಗೆ ಕವಿತೆ ದುರಂತ ಕಾಣುತ್ತದೆ. ಬಿಗಿ ಕಾವಲು ಕಣ್ಣುಗಳನ್ನು ತಪ್ಪಿಸಿ ಪ್ರೀತಿಸಿದವನೊಂದಿಗೆ ಓಡಿ ಹೋಗುವ ಮೋದಾಳಿ ಆದರ್ಶ ಪಾತ್ರವಾಗಿ ನಮ್ಮ ಮನಸ್ಸಿನಲ್ಲಿ ನೆಲೆಸುತ್ತಾಳೆ.

ಗಮನ ಸೆಳೆಯುವ ಮತ್ತೊಂದು ಪಾತ್ರ ರುರು. ಪುರಾಣ ಕತೆಗಳಲ್ಲಿ ಬರುವ ಪುರುಷ ಪಾತ್ರಗಳು ಮಹಿಳೆಯರ ಕಾವ್ಯದಲ್ಲಿ ಪಿತೃಪ್ರಧಾನ ವ್ಯವಸ್ಥೆಯ ಪ್ರತಿನಿಧಿಯಾಗಿ ಕಾಣಿಸಿಕೊಳ್ಳುತ್ತಾರೆ. ಕರ್ಣನಂತಹ ವಿರಳ ಪಾತ್ರಗಳನ್ನು ಹೊರತುಪಡಿಸಿದರೆ, ರಾಮ ರಾವಣರಾದಿಯಾಗಿ ದೂಷಣೆಗೆ ಒಳಗಾಗಿದದ್ದಾರೆ. ಆದರೆ ಉಷಾರವರು ಪುರಾಣ ಕತೆಯಿಂದ ಒಬ್ಬ ಸಹೃದಯಿ, ಸೂಕ್ಷ್ಮ ಸಂವೇದಿಯಾದ ಪುರುಷ ಪಾತ್ರವನ್ನು ಓದುಗರಿಗೆ ಪರಿಚಯಿಸಿದ್ದಾರೆ. ಸುಕನ್ಯೆ ಚ್ಯವನರ ಮೊಮ್ಮಗನಾದ ರುರು, ಗಂಧರ್ವರಾಜನಾದ ವಿಶ್ವಾವಸುವಿನ ಮಗಳಾದ ಪ್ರಮದಾಳನ್ನು ಪ್ರೇಮಿಸುತ್ತಾನೆ. ಅಕಸ್ಮತ್ತಾಗಿ ಹಾವು ಕಚ್ಚಿ ಪ್ರಮದಾ ಜೀವ ತ್ಯಜಿಸಿದಾಗ, ರುರು ತನ್ನ ಅರ್ಧಾಯಸ್ಸನ್ನು ಕೊಟ್ಟು ಆಕೆಯನ್ನು ಬದುಕಿಸಿಕೊಳ್ಳುತ್ತಾನೆ.

ಮಿಡಿಯಲಿಲ್ಲ ರುರು
ಜಗದನಂತ ಚೆಲುವಿಗೆ
ಪ್ರಮದೆಯೊಬ್ಬಳೆ ನನ್ನೊಂದಿಗೆ
ಯಾವ ಸಾವಿತ್ರಿಯ ನೆರಳೋ
ಯಾವ ದೇವದೂತನ ಕೊರಳೋ

('ರುರು ಪ್ರಮದಾ ಪ್ರೀತಿ', ಹವಳ ಹಾರಿದ ಹೊತ್ತು, ಪುಟ-೨೧)

ಎನ್ನುವಲ್ಲಿ ಸಾವಿತ್ರಿಯ ನೆರಳಿನೊಂದಿಗೆ ರುರುವಿನ ನೆನಪು ಕಾಡುತ್ತದೆ. ಸತ್ತ ಗಂಡ ಸತ್ಯವಾನನ್ನು ಯಮನ ಪಾಶದಿಂದ ಬಿಡಿಸಿಕೊಂಡು ಬಂದ ಸಾವಿತ್ರಿಯ ಹಾಗೆ, ಸತ್ತ ಪ್ರಮದಳನ್ನು ರುರು ಮತ್ತೆ ಬದುಕಿಸಿಕೊಳ್ಳುತ್ತಾನೆ.

ಎಚ್.ಎಲ್.ಪುಷ್ಪಾರವರು ಪುರಾಣ ಕತೆಯಿಂದ ಅಮೃತಮತಿ, ಕಾಮಲತೆ, ಮಾಧವಿಯರನ್ನು ಪುನರಾವಲೋಕನಕ್ಕೆ ಆಯ್ಕೆ ಮಾಡಿಕೊಂಡಿದ್ದಾರೆ. ಅಮೃತಮತಿ ಅರಮನೆಯ ಮಾವುತ ಬದಗನೊಂದಿಗೆ 'ಅನೈತಿಕ' ಸಂಬಂಧ ಹೊಂದುವುದರ ಮೂಲಕ 'ನೈತಿಕ' ಚೌಕಟ್ಟುಗಳನ್ನು ಮುರಿದು ಹಾಕುತ್ತಾಳೆ. ಮಹಿಳಾ ಲೇಖಕಿಯರನ್ನು ಅಮೃತಮತಿ ತೀವ್ರವಾಗಿ ಕಾಡಿದ್ದಾಳೆ. ಅಮೃತಮತಿಯ ಬಯಕೆಯನ್ನು ಕುರಿತು ಪುಷ್ಪಾರವರು–

ಮೈಯ ವಾಸನೆಗೆ ಜನ್ಮಾಂತರಗಳಿಲ್ಲ
ಬಂಧವಿಲ್ಲ ಈ ಪಾಡುಗಳಿಗೆ
ಹೊರುವ ಪಾಪಗಳಿಲ್ಲ
ಹಸಿವಿನೆದುರು ಏನಿಲ್ಲ, ಏನೆಲ್ಲ ಭೀತಿ
ಕತ್ತಿಯೂ ಕೂಡ ಅಳುಕುತ್ತದೆ
ಕಂಪಿಸುತ್ತದೆ ಧರ್ಮದ ಸೂಕ್ಷ್ಮ ಜಂಜಾಟದಲ್ಲಿ

('ಅಮೃತಮತಿಯ ಸ್ವಗತ', ಅಮೃತಮತಿಯ ಸ್ವಗತ, ಪುಟ-೦೨)

ಎಂದು ನೀಡುವ ವ್ಯಾಖ್ಯಾನ ಸಾಂಪ್ರದಾಯಿಕ ಮನೋಧರ್ಮದ ಪ್ರಭೃತಿಗಳನ್ನು ಬೆಚ್ಚಿ ಬೀಳಿಸುವಂತದ್ದಾಗಿದೆ. ಅಮೃತಮತಿ 'ಜಾರಿ'ದ್ದರಿಂದ ಜನ್ಮಜನ್ಮಾಂತರಗಳಲ್ಲಿ ಅನುಭವಿಸಬೇಕಾದ ಯಾತನೆಯನ್ನು ವರ್ಣಿಸುವುದು ಜನ್ನನ ಮೂಲ ಕಾವ್ಯದಲ್ಲಿ ಬಿಂಬಿತವಾಗಿದ್ದರು. ಅದೇ ಕಾವ್ಯದ ಆಧಾರದಿಂದ ಆಯ್ದುಕೊಂಡ ಅಮೃತಮತಿ ಮಹಿಳಾ ಕಾವ್ಯದಲ್ಲಿ ವ್ಯವಸ್ಥೆಯನ್ನು ಎದುರು ಹಾಕಿಕೊಳ್ಳುವ, ಸಾಧಿಸುವ ದಿಟ್ಟೆಯಾಗಿ ಮರು ವ್ಯಾಖ್ಯಾನಕ್ಕೆ ಒಳಗಾಗಿದ್ದಾಳೆ.

ಶೋಷಣೆಗೊಳಗಾಗಿಯೂ, ಶೋಷಕರನ್ನು ಭಿನ್ನ ರೀತಿಯಲ್ಲಿ ಪ್ರತಿಭಟಿಸಿದ ಮಾಧವಿ ಪುಷ್ಪಾರವರನ್ನು ಸೆಳೆದ ಮತ್ತೊಂದು ಪುರಾಣ ಪಾತ್ರ. ವಿಶ್ವಾಮಿತ್ರನಿಗೆ ಕೊಡಬೇಕಾದ ಗುರುದಕ್ಷಿಣೆಗಾಗಿ ಗಾಲವ ಮಾಧವಿಯನ್ನು ಬಲಿಕೊಟ್ಟದ್ದು ಪ್ರಶ್ನಾರ್ಹವಾಗಿದೆ. ಮಾಧವಿಯ ಮೂಲಕ ನಿರೂಪಕರು ಕೇಳುವ ಪ್ರಶ್ನೆ–

ಭಲೇ ದಾನವೀರ ಯಯಾತಿ
ಭಲೇ ಆದರ್ಶ ಶಿಷ್ಯ ಗಾಲವ
ಮೈಮನಗಳ ನಿಮಗಾಗಿ ಬಲಿಕೊಟ್ಟು
ನನಗ್ಯಾವ ಬಿರುದು ಹೇಳಿ ನನಗ್ಯಾವ ಬಾವಲಿ
ಪ್ರತಿಬಾರಿ, ಬಾರಿಯ ಅನುಷ್ಠಾನದಿಂದ
ಕನ್ಯೆಯಾದರೂ ನನ್ನ ಮಡಿಲ ಮಕ್ಕಳ
ನೀರು, ರಕ್ತ, ಮಾಸು, ಹೊಕ್ಕಳ ಬಳ್ಳಿಯ ಬೇರು
ಹಾಗೇ ಇದೆ ನನ್ನಲ್ಲಿ ಕದಲದೆ ('ಮಾಧವಿಯ ಸ್ವಗತ', ಅದೇ, ಪುಟ-೪೨)

ನಾಲ್ಕು ಚಕ್ರವರ್ತಿ ಪುತ್ರರಿಗೆ ತಾಯಿಯಾದರೂ, ತಾಯಿಯಾಗುಳಿಯದ ಮಾಧವಿ ಗಾಲವನನ್ನು ಮದುವೆಯಾಗಲು ನಿರಾಕರಿಸಿದ್ದೇ ದೊಡ್ಡ ಪ್ರತಿಭಟನೆಯಾಗಿದೆ. 'ಆಡಿಸುವಾಡಿಸುವಾ ಅಲ್ಲಮ' ಕವಿತೆಯಲ್ಲಿ ಕಾಮಲತೆ, ಮನುಷ್ಯ ಸಹಜವಾದ ಇಂದ್ರಿಯಾನುಭವಗಳನ್ನು ಹೊಂದಿರುವವಳು. ಅಲ್ಲಮ ಅವಳಿಂದ ತಪ್ಪಿಸಿಕೊಂಡು ಕೈಲಾಸಕ್ಕೆ ಮುಖ ಮಾಡುವವನಾಗಿದ್ದಾನೆ. ಗೆದ್ದು ಸೋತ ಮಾಯೆ ಮುಂದೆ ಅಕ್ಕನಾಗಿ ಹುಟ್ಟಿ ತಾತ್ವಿಕ ತೇಜದಿಂದ ಅಲ್ಲಮನನ್ನು ಗೆಲ್ಲುತ್ತಾಳೆ.

ಪುರಾಣ ಪಾತ್ರಗಳ ಪುನರಾವಲೋಕನ ಮಾದರಿಯಲ್ಲಿ ಕೆಳಗಿನ ಅಂಶಗಳನ್ನು ಗಮನಿಸಬಹುದು.

* ವಿಜಯಾ ದಬ್ಬೆ, ಸುಕನ್ಯಾ ಮಾರುತಿಯವರು ಪುರಾಣ ಸ್ತ್ರೀ ಪಾತ್ರಗಳ ಅಸಹಾಯಕತೆಗೆ ಕಾರಣವನ್ನು ಗುರುತಿಸುವುದರೊಂದಿಗೆ, ಅಂದು ಅಭಿವ್ಯಕ್ತಗೊಳ್ಳದ ಮಾನಸಿಕ ತೊಳಲಾಟ ತುಮುಲಗಳನ್ನು ಅನಾವರಣಗೊಳಿಸಿದ್ದಾರೆ.
* ಮಾಲತಿ ಪಟ್ಟಣ ಶೆಟ್ಟಿ, ಶಶಿಕಲಾ ವೀರಯ್ಯಸ್ವಾಮಿ, ಮಲ್ಲಿಕಾ ಘಂಟಿಯವರು ವರ್ತಮಾನದ ಸಂಗತಿಗಳೊಂದಿಗೆ ಪುರಾಣ ಪಾತ್ರಗಳನ್ನು ಹೋಲಿಸಿ ಬದಲಾಗದ ವ್ಯವಸ್ಥೆಯ ಚಿತ್ರಣವನ್ನು ಮುಂದಿರಿಸುತ್ತಾರೆ.
* ಸ.ಉಷಾರವರು ಪುರಾಣಗಳಲ್ಲಿ ಅಡಗಿ ಕೂತ ಪಾತ್ರಗಳನ್ನು ಶೋಧಿಸಿ, ಕೆಲವು ಆದರ್ಶ ಪಾತ್ರಗಳನ್ನು ಮರು ವ್ಯಾಖ್ಯಾನಕ್ಕೆ ಒಳಪಡಿಸುತ್ತಾರೆ.
* ಎಚ್.ಎಲ್.ಪುಷ್ಪಾರವರು ವ್ಯವಸ್ಥೆಯನ್ನು ಪ್ರತಿರೋಧಿಸುವ ಸ್ತ್ರೀ ಪಾತ್ರಗಳನ್ನು ಮಾದರಿಯಾಗಿ ಕಾವ್ಯದಲ್ಲಿ ಬಳಸಿಕೊಂಡಿದ್ದಾರೆ.

## ೫.೪ ಪ್ರತಿಮಾತ್ಮಕ ವಿಧಾನ

ಪ್ರತಿಮೆ ಎಂಬ ಪದವನ್ನು ಮೊದಲಿಗೆ ಬಳಸಿದವನು ಎಜ್ರಾಪೌಂಡ್. "ಕಾಲದ ಒಂದು ಕ್ಷಣದಲ್ಲಿ ಬೌದ್ಧಿಕ ಮತ್ತು ಭಾವನೆಗಳ ಸಂಕೀರ್ಣವನ್ನು ಸಮಕ್ಷವಾಗುವಂತೆ ಯಾವುದು ಮಾಡುತ್ತದೋ ಅದೇ ಪ್ರತಿಮೆ." (ವಿಮರ್ಶೆಯ ಪರಿಭಾಷೆ, ಪುಟ-೪೦) ಎಂದಿದ್ದಾನೆ. ಪ್ರತಿಮೆಯ ಮೂಲಕ

ಸಾಧಿಸುವ ಕವನವು ತನ್ನದೇ ಆದ ವಿಶಿಷ್ಟತೆಯಿಂದ ಕೂಡಿರುತ್ತದೆ. ಅನೇಕ ಪ್ರತಿಮೆಗಳ ಸಂಯೋಜನೆಯಿಂದ ರೂಪ ತಳೆಯುವ ಕವನ ತಾನೇ ಒಂದು ಪ್ರತಿಮೆಯಾಗಬಹುದು. ಪ್ರತಿಮೆ ಪರಿಕಲ್ಪನೆಯನ್ನು ಸುಲಭವಾಗಿ ಅರ್ಥೈಸಿಕೊಳ್ಳುವುದಾದರೆ, ಕಣ್ಣಿಗೆ ಕಟ್ಟುವಂತಿರುವ ಶಬ್ದ ಚಿತ್ರಗಳು; ವಸ್ತು; ಕ್ರಿಯೆ ಮತ್ತು ಅಮೂರ್ತ ಆಲೋಚನೆ; ಭಾವನೆಗಳನ್ನು ವಿವರಣಾತ್ಮಕವಾಗಿ, ಮೂರ್ತವಾಗಿ ಭಾಷೆಯಲ್ಲಿ ವಿವರಿಸುವುದಾಗಿದೆ. ಉಪಮೆ, ರೂಪಕ, ಅಲಂಕಾರ, ಸಂಕೇತಗಳನ್ನೂ ಪ್ರತಿಮೆ ಒಳಗೊಂಡಿರುತ್ತದೆ. ಸಾಂಕೇತಿಕ ಪ್ರತಿಮೆಯು ಸ್ವತಂತ್ರವಾದುದು; ಯಾದೃಚ್ಛಿಕ ಅರ್ಥಗಳ ನಿಯಮಕ್ಕೆ ಬದ್ಧವಲ್ಲ; ತನ್ನ 'ಗುಣ'ಗಳಿಗೆ ಮಾತ್ರ ಸಮಾನವಾದದ್ದು. ಕಾವ್ಯದಲ್ಲಿ ಅದಕ್ಕಿರುವ ಕಾರ್ಯದಿಂದಾಗಿ ಸಂಕೇತದ ಅರ್ಥ ಪರಿಮಿತವಾಗುತ್ತದೆಯಾದರೂ ಭಾವ ಸಹಚರ್ಯೆಗಳು ಅದರ ಅರ್ಥಕ್ಕೆ ಮಿತಿಯನ್ನು ಒಡ್ಡುವುದಿಲ್ಲ. ಸಂಕೇತವು ಪ್ರತ್ಯೇಕ ಅಸ್ತಿತ್ವವಾಗಿರುತ್ತದೆ. ಹಾಗೆಂದೇ ಪರಿಗಣಿತವಾಗುತ್ತದೆ ಮತ್ತು ಸಂಕೇತವನ್ನು ಅದರದ್ದೇ ಆದ ಪರಿಭಾಷೆಯಲ್ಲಿ ಅಲ್ಲದೆ ಬೇರೆ ರೀತಿಯಲ್ಲಿ ವಿವರಿಸಲು ಸಾಧ್ಯವಿಲ್ಲ. ಸಂಕೇತ ಪ್ರತಿಮೆಯನ್ನು ವಿಚಾರಗಳು ಸಹಚರ್ಯದ ವರ್ತನೆಯ ವಿನ್ಯಾಸಗಳ ಅಂಗೀಕೃತ ಸಮಭಾವಗಳ ಪರೀಕ್ಷೆಗೆ ಒಡ್ಡುವುದರಿಂದ ಕೆಲವು ಅಂಶಗಳನ್ನು ಗುರುತಿಸಬಹುದು.

ಪ್ರತಿಮಾ ವಿನ್ಯಾಸವೆಂಬುದು ತನ್ನ ಅನುಭವ ವಿಶ್ವವನ್ನು ಕಂಡುಕೊಳ್ಳಲು ಕವಿ ಬಳಸುವ ಚಿಹ್ನೆಗಳಾಗಿರುತ್ತವೆ. ಈ ಚಿಹ್ನೆಗಳು ತಮ್ಮವೇ ನಿಯಮಗಳಿಗನುಸಾರವಾಗಿ ಬೆಳೆದು ಒಂದು ಪ್ರತಿಮೆ ಮತ್ತೊಂದರ ವ್ಯಾಖ್ಯಾನವಾಗಿದೆ. ಮತ್ತೆ ಅವೆಲ್ಲ ಬೆರೆತು ಸ್ವತಂತ್ರ ಅಸ್ತಿತ್ವದ ಕಾವ್ಯ ಪ್ರತಿಮೆ ರೂಪಗೊಳ್ಳುವ ಪ್ರಕ್ರಿಯೆಯಾಗಿರುತ್ತದೆ. ಪ್ರತಿಮೆ (Image) ಪರಿಕಲ್ಪನೆಯ ಬಗ್ಗೆ ಅಸ್ಪಷ್ಟವಾದ ವ್ಯಾಖ್ಯಾನಗಳಿದ್ದರೂ, ಅಮೂರ್ತವಾದದ್ದನ್ನು ಮೂರ್ತಗೊಳಿಸುವಷ್ಟರ ಮಟ್ಟಿಗೆ ಪ್ರತಿಮೆಗಳು ಕಾವ್ಯಕ್ಕೆ ಅನಿವಾರ್ಯ. ದಿನ ಬಳಕೆಯ ಭಾಷೆಯ ಮಿತಿಗಳನ್ನು ಮೀರಲು ಅವು ಸಹಾಯಕಗಳೂ ಆಗುತ್ತವೆ. ಭೌತಿಕ ಪ್ರತಿಮೆಗಳ ಸೂಕ್ತ ಬಳಕೆ ಕಾವ್ಯಕ್ಕೆ ನಿರ್ದಿಷ್ಟ ಸ್ಪಷ್ಟತೆಗಳನ್ನು ಒದಗಿಸಿವೆ. ಒಂದು ಸೂಕ್ತ ನಿರ್ದೇಶನಕ್ಕೊಳಪಟ್ಟಂತೆ ಓದುಗರ ಭಾವನೆಗಳನ್ನು ಉದ್ದೀಪಿಸುತ್ತವೆ. ಪ್ರತಿಮೆಗಳು ಬದುಕಿನ ನೇರ ಪ್ರತಿಫಲನಗಳಾದ್ದರಿಂದ ಕವಿಯು ಬದುಕಿನಿಂದ ಆಯ್ದ ಸಂಗತಿಗಳನ್ನು ಕಾವ್ಯದ ಚೌಕಟ್ಟಿನಲ್ಲಿ ಸಾಮಾನ್ಯೀಕರಣಗೊಳಿಸಿ ಅವುಗಳ ಸತ್ವವನ್ನು ತೆರೆದಿಡುವಂಥವೂ ಆಗುತ್ತವೆ.

ಗದ್ಯ ಬರಹಗಳಿಗಿಂತ ಕಾವ್ಯದ ಬರವಣಿಗೆಯಲ್ಲಿ ಪ್ರತಿಮಾತ್ಮಕ ವಿಧಾನ ಹೆಚ್ಚು ದಟ್ಟವಾಗಬಲ್ಲುದು. ಕವಿಗೆ ದಕ್ಕುವ ಜಗತ್ತಿನ ಸಾಮಾನ್ಯ ದೃಶ್ಯಗಳು, ವಸ್ತುಗಳು, ವ್ಯಕ್ತಿಗಳು, ಮನಸ್ಸಿನಲ್ಲಿ ಹರಳುಗಟ್ಟಿ ವಿಶಿಷ್ಟ ರೂಪವನ್ನು ತಳೆದು ಕಾವ್ಯದೊಳಗೆ ಅಡಗಬಲ್ಲವು, ಕರಗಬಲ್ಲವು. 'ನವ್ಯ' ಕವಿಗಳು ಬಳಸುವ ಪ್ರತಿಮಾತ್ಮಕ ವಿಧಾನದ ಪ್ರಭಾವ ಚ.ಸರ್ವಮಂಗಳಾ ಮುಂತಾದ ಕವಿಗಳ ಮೇಲೆ ಪ್ರಭಾವ ಬೀರಿದ್ದರೂ, ಅದನ್ನು ಮೀರಿ, ಖಾಸಗಿ ಸಂಗತಿಗಳನ್ನೇ ಕಾವ್ಯಕ್ಕೆ ಬಳಸುವ ಮೂಲಕ ಹೊಸ ಪ್ರತಿಮೆಗಳನ್ನು ಹುಟ್ಟು ಹಾಕಿರುವುದು ಮಹಿಳಾ ಕವಿಗಳ ವಿಶಿಷ್ಟ ಲಕ್ಷಣವಾಗಿದೆ.

ಇಂದ್ರಿಯ ಗ್ರಹಿಕೆಗಳ ಭಾವವನ್ನು ಉದ್ದೀಪಿಸುವ ಶಬ್ದಗಳನ್ನು ಪ್ರತಿಮೆಯೆಂದು ಕರೆಯಲಾಗಿದೆ. ಸಂಕೇತವು ಹೋಲಿಕೆಯ ತಂತ್ರವಾಗಿರದೆ, ಸಂಗತಿಯನ್ನು ಅರಿಯುವ ವಿಧಾನವಾಗಿದೆ. ಸಂಕೇತವು ತನ್ನಷ್ಟಕ್ಕೇ ಒಂದು ಅನುಭವ ವಿನ್ಯಾಸವಾಗಿದೆ. ಪ್ರತೀಕಗಳ ಮುಖ್ಯ ಲಕ್ಷಣ ಧ್ವನಿ ಸಾಮರ್ಥ್ಯವಾಗಿರುತ್ತದೆ. ಕಾವ್ಯದಲ್ಲಿ ಬಳಸಿರುವ ಶೈಲಿ, ರಚನೆ, ಘಟನೆಗಳೂ ಪ್ರತಿಕಾತ್ಮಕ ವಾಗಬಹುದಾಗಿದೆ. ಕವಿತೆಯಲ್ಲಿ ಪ್ರತಿಮೆ ಸ್ವತಂತ್ರವಾಗಿ ಬಳಕೆಯಾಗಿದ್ದರೆ, ವಿಶಿಷ್ಟತೆಯನ್ನು ಗುರುತಿಸಲು ಆಗುವಂತಿದ್ದರೆ ಅದು ಸಂಕೇತ ರೂಪವನ್ನು ತಾಳುತ್ತದೆ. ಸಂಕೇತವು ಒಂದು ವಿಚಾರ ಸಂಗತಿಯೊಡನೆ ಬೆರೆತು, ಆ ಸಂಗತಿಯನ್ನು ಅವಲಂಬಿಸಿದಾಗ ಅದು ರೂಪಕವಾಗುತ್ತದೆ, ಹೋಲಿಕೆ ಅಥವಾ ಸಮೀಕರಣಕ್ಕಾಗಿ ಬಳಸಿದ ಪ್ರತಿಮೆಯಾಗುತ್ತದೆ.

ರೂಪಕ ಪ್ರತಿಮೆಗಳು ಕಾವ್ಯದಲ್ಲಿ ತಮ್ಮಷ್ಟಕ್ಕೇ ತಾವು ಸ್ವತಂತ್ರರಲ್ಲ. ಕಾವ್ಯದಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ಪರಿಕಲ್ಪನೆಯೊಂದಿಗೆ ಪೂರಕವಾಗಿ ಕಾರ್ಯ ನಿರ್ವಹಿಸುತ್ತವೆ. ಅವಕ್ಕೆ ಸ್ವತಂತ್ರವಾದ ಅರ್ಥವಿರದೆ ಕಾವ್ಯವು ಯಾವುದನ್ನು ಕುರಿತು ಹೇಳುತ್ತಿದೆಯೋ, ಆ ಸಂಗತಿಗೆ ಮಾತ್ರ ಅನ್ವಯವಾಗುತ್ತದೆ. ಕವಿಗಳು ಭೌತಿಕ ಜಗತ್ತನ್ನು ವೀಕ್ಷಿಸಿ, ಬದುಕಿನ ಅನುಭವಗಳ ವಿನ್ಯಾಸವೊಂದನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಿರುತ್ತಾರೆ.

ಚ.ಸರ್ವಮಂಗಳ, ಪ್ರತಿಭಾ ನಂದಕುಮಾರ್‌ರವರ ಕಾವ್ಯಗಳನ್ನು ಪ್ರತಿಮಾತ್ಮಕ ಮಾದರಿಯಲ್ಲಿಟ್ಟು ಅಧ್ಯಯನ ಮಾಡಲಾಗಿದೆ. ಚ.ಸರ್ವಮಂಗಳಾರವರು ಅನುಭವಗಳನ್ನು ಕ್ರೋಢೀಕರಿಸಿ, ಕೌಟುಂಬಿಕ ಸಂಬಂಧಗಳನ್ನು ಪ್ರತಿಮೆಯಾಗಿಸುವುದರ ಮೂಲಕ ಹೆಣ್ಣಿನ ಅಸ್ತಿತ್ವವನ್ನು ಶೋಧಿಸುತ್ತಾರೆ. ಪ್ರತಿಭಾರವರು ಪುರುಷ ಜಗತ್ತಿನ ಲೈಂಗಿಕ ರಾಜಕಾರಣವನ್ನು ಕೇಂದ್ರ ನೆಲೆಯಲ್ಲಿಟ್ಟು, ಆಧುನಿಕ ಮಹಿಳೆಯ ವರ್ತಮಾನ ಸಂಗತಿಗಳನ್ನು ಪ್ರತಿಮಾತ್ಮಕಗೊಳಿಸುತ್ತಾರೆ.

### ೫.೪.೧ ಬದುಕಿನ ಅನುಭವಗಳ ಪ್ರತಿಮಾತ್ಮಕತೆ

ಹೆಣ್ಣಿನ ಅಸ್ತಿತ್ವವನ್ನು ಕೇಂದ್ರವಾಗಿಟ್ಟುಕೊಂಡ ಚ.ಸರ್ವಮಂಗಳಾರವರ ಕಾವ್ಯ, ಕೌಟುಂಬಿಕ ವ್ಯಕ್ತಿ ಘಟನೆಗಳ ಮೂಲಕ ಪ್ರತಿಮೆಗಳು ಹರಳುಗಟ್ಟುತ್ತಾ ಹೋಗುತ್ತವೆ. ಬದುಕಿನ ಸಂಕೀರ್ಣತೆಯಲ್ಲಿ ಎದುರಾಗುವ ವೈರುಧ್ಯಗಳನ್ನು ಗಮನಿಸುತ್ತಲೇ ತಮ್ಮ ನಿಲುವನ್ನು ಸ್ಪಷ್ಟಪಡಿಸುತ್ತಾರೆ. 'ನಂಟು' ಕವಿತೆಯಲ್ಲಿ ನಂಟು ಎಂದರೆ ಸಂಬಂಧ; ಹೊಕ್ಕಳಬಳ್ಳಿ ಕತ್ತರಿಸಿಕೊಂಡು ಹುಟ್ಟಿದರೂ ಅಂಟಿಕೊಳ್ಳುವ ತಾಯಿ–ಮಕ್ಕಳ ಸಂಬಂಧ; ಬಂಧು ಬಳಗದ ಸಂಬಂಧ; ಗೆಳೆತನದ ಸಂಬಂಧ; ವ್ಯಕ್ತಿ ವ್ಯಕ್ತಿಯ ನಡುವಿನ ಸಂಬಂಧಗಳು ಸ್ವಂತ ವ್ಯಕ್ತಿತ್ವವನ್ನು ಮರೆಸುವ ಸಂಕೇತಗಳಾಗುತ್ತವೆ. ಇಂಥ ಸಂಬಂಧಗಳನ್ನು ಕಡಿದುಕೊಳ್ಳಲಾಗದು ಎಂಬುದರ ಅರಿವಿರುವುದರಿಂದ ಇಡಿಯಾಗಿ ಆವರಿಸಿಕೊಳ್ಳುವ ಆಕ್ಷೇಪಣೆಗೆ ನಂಟನ್ನು ಹೋಲಿಸಿದ್ದಾರೆ. ಸಿಕ್ಕ ಬೇಟೆಯನ್ನು ಇಡಿಯಾಗಿ ಆವರಿಸಿಕೊಳ್ಳುವ 'ಆಕ್ಟೋಪಸ್' ಸಂಬಂಧಗಳನ್ನು ನಿರೂಪಿಸುವ ರೂಪಕವಾಗಿ ಬಳಕೆಯಾಗಿದೆ. 'ಬಿರುಕು' ಕವಿತೆಯಲ್ಲಿ, ಗಂಡು

ಹೆಣ್ಣಿನ ಲೈಂಗಿಕ ಸಂಬಂಧದಲ್ಲಿ ಪರಸ್ಪರ ಪ್ರೀತಿಸಿ ಕಾಡುವ ಕ್ರಿಯೆಯಲ್ಲಿ 'ಈ ಬೆಸುಗೆ ನಮ್ಮಿಬ್ಬರ ನಡುವಿನ ಬಿರುಕಾಗಿ' ಕಾಣುವ ದ್ವಂದ್ವದ ಹಿಂದೆ ಅನಸೂಯೆಯನ್ನು ವಂಚಿಸಿದ ವೇಷಧಾರಿ ತ್ರಿಮೂರ್ತಿಗಳ ದಾಹ; ಅಹಲ್ಯೆಯನ್ನು ಕೂಡಿದ ಗೌತಮ ವೇಷಧಾರಿಯ ಇಂದ್ರನ ಕಾಮದ ಬಯಕೆಗಳ ಪ್ರಸ್ತಾಪವಿದೆ.

'ತಡೆ' ಕವಿತೆಯಲ್ಲಿ ಬಿಡುಗಡೆಯ, ಮುಕ್ತ ಬಯಕೆಯ ಕೂಗಿಗೆ ದನಿಕೊಟ್ಟ ಕವಿ ಇನ್ನೇನು ಸೀಮಿತ ಸಂಬಂಧಗಳ ಚೌಕಟ್ಟು ದಾಟುತ್ತಾರೆಂದು ನಿರೀಕ್ಷಿಸುವಾಗ ಅದೇ ಬದುಕನ್ನು ಕವುಚಿಕೊಳ್ಳುವುದು ಅನಿವಾರ್ಯವಾಗುತ್ತದೆ. ಆದರೆ ಬದುಕು ಬಗೆವಾಟ ಕವಿತೆಯಲ್ಲಿ ಹೊಸ ಬದುಕಿನ ಹಾದಿಗೆ ತಮ್ಮನ್ನು ತೆರೆದುಕೊಳ್ಳುವ ಸೂಚನೆ ಸಿಗುತ್ತದೆ.

'ಬದುಕು ಬಗೆಯಬಾರದು ಮಗಳೇ ಅದರ
ಒಳ ಹೋಗಬೇಕು ಬಗೆದರೇನಲ್ಲಿ ಇಬ್ಭಾಗ ಅಷ್ಟೇ'

ಅನುಭವದ ಮಾತಿನಲ್ಲಿ ಕವಿ ಅಜ್ಜಿಯ ಬದುಕಿನ ತನ್ಮಯತೆ, ವಿಸ್ಮಯಗಳನ್ನು ಕಾಣುತ್ತಾರೆ. ಆದರೆ,

ಅವಳಂತೆ
ಬದುಕ ಹೊಕ್ಕು ಬರಲಾರೆ; ಕೊಂಡಿ
ಕಳಕೊಳ್ಳದ ಅಜ್ಜಿ ನನಗಾಗಲಿಲ್ಲ ಕೊಂಡಿ ('ತಡೆ', ಅಮ್ಮನಗುಡ್ಡ, ಪುಟ–೩೩)

ಯಾವುದನ್ನೂ 'ಗೊಡ್ಡು' ಎಂದುಕೊಳ್ಳದೇ ಬದುಕನ್ನು ಸಂತೃಪ್ತಿಯಿಂದ ನಡೆಸಿದ ಅಜ್ಜಿ; ಹಾಗೆ ಬದುಕಲಾರದ ಮೊಮ್ಮಗಳು ಎರಡು ಪೀಳಿಗೆಗಳ ಮಧ್ಯೆ ಏರ್ಪಡುವ ದ್ವಂದ್ವಗಳಿವೆ.

'ಕಾಮ' ಕವಿತೆಯಲ್ಲಿ ಕಾಮ, ಮನುಷ್ಯ ಬದುಕಿನ ಅನಿವಾರ್ಯ ಭಾಗವಾಗಿದೆ ಎನ್ನುವುದರ ಜತೆಗೆ 'ಕಾಮ', ಕೊಂಡಿಯಾಗಿ ಚುಚ್ಚುವ ಚೇಳಾಗಿ; ಜೊಲ್ಲು ಸುರಿಸುವ ನಾಯಿ; ತೆವಳಿ ಬರುವ ಹಾವಿನ ರೂಪದಲ್ಲಿ ಹುತ್ತಗಟ್ಟುವ ಪ್ರತಿಮೆಯಾಗುತ್ತದೆ. ಜೀವಂತವಾಗಿ ಸಾಯಿಸುವ ಕಾಮದ ಕಾಡುವಿಕೆಯಿಂದ ಬದುಕಿನ ಇರುವು ಸಾರ್ಥಕತೆ ಪಡೆಯುವುದನ್ನು ಕವಿ ಪ್ರತಿಪಾದಿಸಿದ್ದಾರೆ.

'ನನ್ನ ಅಜ್ಜಿ' ಕವಿತೆಯಲ್ಲಿ ತೊಂಬತ್ತು ವರ್ಷದವರೆಗೂ ಬಾಯಿ ಮುಚ್ಚಿಕೊಂಡು ಬದುಕು ಸಾಗಿಸಿದ ಅಜ್ಜಿ ಅಂತ್ಯಕಾಲದಲ್ಲಿ ಗಂಡನ ವಿಚಾರ, ಆತನ ಸೂಳೆಯ ವಿಚಾರ, ಮಗ ಸೊಸೆಯ ಬಗ್ಗೆ ಮನಬಿಚ್ಚಿ ಹೇಳಿ ಹಗುರಾಗುತ್ತಾಳೆ. ಸಾವು ಸಮೀಪಿಸಿದಾಗ ಅಜ್ಜಿಯ ಸುಪ್ತ ಮನಸ್ಸಿನಲ್ಲಿ ಬೇರೂರಿದ್ದ, ಗಂಡನ ಗೆಣೆಕಾರ ಸಾಬನು, ತನ್ನನ್ನು 'ಬೀಬಿ' ಮಾಡಿಕೊಳ್ಳಲು ಕರೆಯುವುದನ್ನು ಹೊರಗೆಡವುತ್ತಾಳೆ. 'ಕಣ್ಣು ಮುಚ್ಚಾಲೆ' ಕವಿತೆಯಲ್ಲಿ

'ಮುಚ್ಚಿದ ಕಣ್ಣು ರೆಪ್ಪೆಯ ಒಳಗೆ
ಕಂಡ ಕನಸು, ತುಳಿಯುತ್ತದೆ ಎಣಿಕೆ ಮಗಾ' (ಅದೇ, ಪುಟ–೨೮)

ಎಂಬ ತತ್ವವನ್ನು ಸಾಧಿಸಲು ಚಿಕ್ಕ ಮಕ್ಕಳ ಕಣ್ಣಾಮುಚ್ಚಾಲೆಯಾಟವನ್ನು ಪ್ರತಿಮಾತ್ಮಕವಾಗಿ ಬಳಸಿಕೊಳ್ಳಲಾಗಿದೆ. ಮಕ್ಕಳು ಕಣ್ಣು ಮುಚ್ಚುವ 'ಅಜ್ಜಿ'ಯಾಗಿ ಹಕ್ಕಿ ಹಿಡಿದ 'ಬೆಕ್ಕಾ'ಗಿ ಹುಡುಕಿಸಿಕೊಳ್ಳುವ 'ಹಕ್ಕಿ'ಯಾಗಿ ಬದಲಿಸುವ ಪಾತ್ರಗಳು ಆಡುವ ಆಟದಲ್ಲಿ, ಎಣಿಕೆ ಸೋಲುತ್ತಲೇ ಹೋಗುತ್ತದೆ.

'ಅಮ್ಮನ ಗುಡ್ಡ' ಕವಿತೆಯಲ್ಲಿ ಕವಿ ಬಾಲ್ಯದಲ್ಲಿ ಕಂಡ ಕುಕ್ಕಡದಮ್ಮನ ದರ್ಶನಕ್ಕೂ, ಇಂದು ಕಾಣುತ್ತಿರುವ ದರ್ಶನಕ್ಕೂ ಆಗಿರುವ ಅಗಾಧ ವ್ಯತ್ಯಾಸವನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಕಡಿದಾದ ಕಾಡು ಮರೆಯಾಗಿ ಡಾಂಬರು ರಸ್ತೆಯಾಗಿದೆ. ಹುತ್ತ ರೂಪದಲ್ಲಿದ್ದ ಕುಕ್ಕಡದಮ್ಮ, ದೇವಸ್ಥಾನದಲ್ಲಿ ಮುಖವಾಡ ಧರಿಸಿದ್ದಾಳೆ. ಬಾಲ್ಯದಲ್ಲಿ ಹೋದಾಗ ಉಟ್ಟ ಲಂಗ ಹರಿಸಿಕೊಂಡು ಬರುತ್ತಿದ್ದ ಕವಿಗೆ ಇಂದು ಉಟ್ಟ ಸೀರೆಯ ನೆರಿಗೆ ಕೊಡ ಸುಕ್ಕಾಗಿಲ್ಲ ಎನ್ನುವ ಹೋಲಿಕೆ ನೀಡುವುದರೊಂದಿಗೆ ಬದಲಾದ ವಾತಾವರಣವನ್ನು ಪರಿಣಾಮಕಾರಿಯಾಗಿ ಮನಗಾಣಿಸುತ್ತಾರೆ.

ಕಾವ್ಯ ನಿರೂಪಣೆಯಲ್ಲಿ ಸರ್ವಮಂಗಳಾರವರು ತಮ್ಮ ಬದುಕಿನ ಅನುಭವಗಳನ್ನು ಆಯ್ದು, ಅದಕ್ಕೊಂದು ಕಲಾತ್ಮಕ ಚೌಕಟ್ಟನ್ನು ನೀಡಿದ್ದಾರೆ. ಹೊಸ ಆಶಯಗಳನ್ನು ಕಟ್ಟಿಕೊಟ್ಟಿದ್ದಾರೆ. 'ನಂಟು', 'ಬಿರುಕು', 'ಕಾಮ', 'ಸೋಲು', 'ತಡೆ' ಮುಂತಾದ ಕವಿತೆಗಳು ಸ್ವಗತದ ಧಾಟಿಯನ್ನು ಅನುಸರಿಸಿವೆ. 'ಭಂಡರು' 'ಮುಂದಾಳು' 'ಅವನು ಬಸವ' ಕವಿತೆಗಳು ವ್ಯಂಗ್ಯದ ನೋಟದಿಂದ ಕೂಡಿವೆ.

### ೫.೪.೨ ಖಾಸಗಿ ಸಂಗತಿಗಳ ಪ್ರತಿಮಾತ್ಮಕತೆ

ಹೊಸ ತಲೆಮಾರಿನ ಕವಿಯಾದ ಪ್ರತಿಭಾ ನಂದಕುಮಾರ್‌ರವರು ಹೆಣ್ಣಿನ ದೃಷ್ಟಿಕೋನದಿಂದ ಜಗತ್ತನ್ನು ಪರಿಗ್ರಹಿಸಿದ್ದಾರೆ. ಕಾವ್ಯದ ಅಭಿವ್ಯಕ್ತಿ ಕ್ರಮದಲ್ಲಿ ಪ್ರತಿಭಾರವರು ಭಾಷೆಯ ಸಾಂಪ್ರದಾಯಿಕ ಗಂಟುಗಳಿಂದ ಬಿಡಿಸಿಕೊಂಡು ಖಾಸಗಿ ನೆಲೆಯಲ್ಲಿ ಕಾವ್ಯ ನಿರ್ಮಿಸುತ್ತಾರೆ. ಇದುವರೆಗೆ ಸಾಹಿತ್ಯದಲ್ಲಿ ಯಾವ ಸಂಗತಿಗಳನ್ನು ಬಿಚ್ಚಿಟ್ಟರೆ, ಕಾವ್ಯದ ಗಾಂಭೀರ್ಯಕ್ಕೆ ಧಕ್ಕೆಯಾಗುತ್ತದೆಯೆಂದು ಭಾವಿಸಿದ್ದರೋ, ಅಂತಹ ವೈರುಧ್ಯ ಪ್ರತಿಮೆಗಳ ಮೂಲಕ ಕಾವ್ಯವನ್ನು ಸೃಷ್ಟಿಸಿದ್ದಾರೆ. ಕಾವ್ಯದ ನಿರೂಪಣಾ ಕ್ರಮದಲ್ಲಿ ಗೆಳತಿ ಗೆಳೆಯನೊಂದಿಗೆ ಸಂವಾದ, ಪ್ರತಿಕ್ರಿಯೆ, ಸ್ವಗತ, ವಚನಗಳ ಅನುಕರಣಾ ಧಾಟಿ, ಜನಪದ ಗೀತೆಗಳ ಮಟ್ಟನ್ನು ವ್ಯಂಗ್ಯಗೊಳಿಸುವ ವಿಧಾನಗಳನ್ನು ಅನುಸರಿಸುತ್ತಾರೆ.

ಪ್ರತಿಭಾರವರ ಕಾವ್ಯದ ಪ್ರತಿಮಾ ವಿನ್ಯಾಸಗಳನ್ನು ಎರಡು ಮುಖ್ಯ ನೆಲೆಗಳಲ್ಲಿ ಗುರುತಿಸಬಹುದು.

ಅ. ವೈಯಕ್ತಿಕ ನೆಲೆಯಲ್ಲಿ ಗ್ರಹಿಸುವ ಅನುಭವಗಳನ್ನು ಪ್ರತಿಮಾತ್ಮಕಗೊಳಿಸುವ ವಿಧಾನ.

ಆ. ಲೈಂಗಿಕ ರಾಜಕಾರಣ ಕೇಂದ್ರಿತವಾದ ಸಂಕೇತಗಳನ್ನು ಪ್ರತಿಮಾತ್ಮಕಗೊಳಿಸುವ ವಿಧಾನ.

ಈ ಎರಡೂ ನೆಲೆಗಳನ್ನು ಒಳಗೊಂಡಿರುವ ಪ್ರಾತಿನಿಧಿಕ ಕವಿತೆಗಳನ್ನು ಆಯ್ದು ಕೆಳಗಿನಂತೆ ಚರ್ಚಿಸಲಾಗಿದೆ.

### ಅ. ವೈಯಕ್ತಿಕ ನೆಲೆಯಲ್ಲಿ ಗ್ರಹಿಸುವ ಅನುಭವಗಳನ್ನು ಪ್ರತಿಮಾತ್ಮಕಗೊಳಿಸುವ ವಿಧಾನ

ಮೊದಲ ಸಂಕಲನದ ಮೊದಲ ಕವಿತೆಯೇ ಪ್ರತಿಭಾರವರ ಖಾಸಗಿ ಅನುಭವವನ್ನು ಗೆಳತಿಯೊಂದಿಗೆ ಹಂಚಿಕೊಳ್ಳುವ ಆಪ್ತ ಕವಿತೆಯಾಗಿದೆ.

ಹೌದು ಕಣೆ ಉಷಾ
ನಾವು ಹುಡುಗಿಯರೇ ಹೀಗೆ...

ಜುಮ್ಮೆನಿಸುವ ಆಲೋಚನೆಗಳನ್ನು
ಹಾಗೇ ಡಬ್ಬಿಯೊಳಗೆ ಹಿಟ್ಟು ಒತ್ತಿದಂತೆ
ಒತ್ತಿ ಒತ್ತಿ ಗಟ್ಟಿ ಮಾಡುತ್ತೇವೆ
... ನಮ್ಮ ಇಂದಿನ ಅವಸ್ಥೆಗೆ ಇವನೇ ಕಾರಣ
ಅಂತ ರೋಷ ತಾಳುತ್ತೇವೆ.
ಆದರೆ ಮೇಲೆ ನಗು ನಗುತ್ತಾ 'ಅವನ'
ಹೆಂಡತಿ ಮಕ್ಕಳ ಯೋಗ ಕ್ಷೇಮ ವಿಚಾರಿಸುತ್ತೇವೆ
ಯಾಕೆಂದರೆ ಅವಳದೂ ಅದೇ ಕಥೆಯಲ್ಲವೆ?
ನಾವು ಹುಡುಗಿಯರೇ ಹೀಗೆ...

(ನಾವು ಹುಡುಗಿಯರೇ ಹೀಗೆ, ಮುನ್ನುಡಿ ಬೆನ್ನುಡಿಗಳ ನಡುವೆ, ಪುಟ-೦೩)

ಉಷಾಳೊಂದಿಗೆ ನಡೆಸಿದ ಮುಕ್ತ ಸಂವಾದದಲ್ಲಿ ತನ್ನಲ್ಲಿ ಸುಪ್ತವಾಗಿದ್ದ ಭಾವನೆಗಳನ್ನು ವ್ಯಕ್ತಪಡಿಸಲಾಗದ್ದಕ್ಕೆ 'ಡಬ್ಬಿಯೊಳಗೆ ಒತ್ತಿಡುವ ಹಿಟ್ಟು' ಸಂಕೇತವಾಗಿ ಬಳಕೆಯಾಗಿದೆ. ಪ್ರೀತಿಯನ್ನು ತಿಳಿಸಲಾಗದ 'ಅವನು' ಮದುವೆಯ ನಂತರ ಭೇಟಿಯಾಗುತ್ತಾನೆ. ತನ್ನ ಅವಸ್ಥೆಗೆ ಕಾರಣನಾದ ಅವನನ್ನು ನೋಡಿದಾಗ ರೋಷ ಉಕ್ಕಿದರೂ ಅವನ ಹೆಂಡತಿ ಮಕ್ಕಳ ಕುಶಲೋಪರಿಯನ್ನು ವಿಚಾರಿಸುವುದಕ್ಕೆ ಕಾರಣ, ತನ್ನ ಅನುಭವ ಇತರ ಹೆಂಗಸರದೂ ಆಗಿರುವುದರಿಂದ 'ನಾನು' ಕವಿತೆ ಮೂರು ಮಕ್ಕಳನ್ನು ಹೆತ್ತ ತಾಯಿಗೆ, ತಾನುಡುವ ಸೀರೆ, ಕುಪ್ಪಸ, ಅಲಂಕಾರದ ಆಯ್ಕೆಯಲ್ಲಿ ತನ್ನ ಪಾತ್ರವಿಲ್ಲ. ಹೆತ್ತ ಮಕ್ಕಳ ಅವಶ್ಯಕತೆಗಳು ಕೂಡ ಆಕೆಯನ್ನು ಮೀರಿದ ವಿಷಯಗಳಾಗಿರುವುದನ್ನು ವ್ಯಂಗ್ಯವಾಗಿ ಚಿತ್ರಿಸಲಾಗಿದೆ. 'ನಾವು' ಕವಿತೆಯಲ್ಲಿ 'ನಾವು ಗಂಡಸರಲ್ಲ' ಎಂಬುದಕ್ಕೆ ಕೊಡುವ ಕಾರಣಗಳಲ್ಲಿ, ಗಂಡಸರು ಹೆಣ್ಣಿನೊಂದಿಗೆ ವರ್ತಿಸುವ ನಡವಳಿಕೆಗಳನ್ನು, ಚಂಚಲತೆಯನ್ನು ಬಯಲು ಮಾಡಲಾಗಿದೆ. ಹಲವು ದೌರ್ಜನ್ಯಗಳನ್ನು ಹೊಂದಿರುವ ಗಂಡಸರನ್ನು ಕಂಡು ಮಿಡುಕುವ ಹೆಂಗಸರು 'ಅಯ್ಯೋ ನಾನು ಗಂಡಾಗಲಿಲ್ಲವಲ್ಲಾ' ಎಂಬ ವ್ಯಂಗ್ಯದ ನಿರೂಪಣೆಯನ್ನು ಕಾಣಬಹುದಾಗಿದೆ. ಗಂಡಸರ ವರ್ತನೆಗಳ ಕೆಟ್ಟತನಗಳನ್ನು ವರ್ಣಿಸಿ, ಅಂತಹ ಗುಣಗಳಿಲ್ಲದ ಹೆಣ್ತನದ ಪ್ರತ್ಯೇಕತೆಯನ್ನು ಎತ್ತಿ ಹಿಡಿದಿದ್ದಾರೆ. ಹೆಣ್ಣನ್ನು ಕಾಡಿನ ಸಾಧು ಮತ್ತು ಕ್ರೂರ ಪ್ರಾಣಿಗಳೊಂದಿಗೆ ಸಮೀಕರಿಸಿದ ಪದ್ಯ 'ಹೆಣ್ಣು-ಕಾಡು',

ಹುಟ್ಟುವಾಗ ನನ್ನ ತಲೆಯೊಳಗೆ
ಹುಲಿಯ ಗರ್ಜನೆ ತುಂಬಿ
ನೆಲಕ್ಕಿಳಿಸಿದಳು ನನ್ನ ತಾಯಿ
ಬೆಳೆಯುವಾಗ ಕರಡಿಯ ನಡೆ ಕಲಿಸಿದ ತಂದೆ
ನನ್ನ ಹೊಟ್ಟೆಯೊಳಗೆ ಘೇಂಡಾಮೃಗ
ಎದೆಯೊಳಗೆ ಕುಣಿಯುವ ಹುಲ್ಲೆ (ಅದೇ, ಪುಟ-೩೭೧)

ಹೆಣ್ಣಿನೊಳಗಿನ ಅಪ್ರತಿಮ ಶಕ್ತಿಯ ದರ್ಶನವನ್ನು ಪ್ರತಿಭಾ ಮಾಡಿಕೊಡುತ್ತಾರೆ. 'ಅರ್ಧನಾರೀಶ್ವರ' ಕವಿತೆಯಲ್ಲಿ ಗಂಡು ಹೆಣ್ಣು ಇಬ್ಬರಲ್ಲೂ ಪರಿಪೂರ್ಣತೆ ಕಾಣದ್ದನ್ನು ವ್ಯಂಗ್ಯವಾಗಿ ಪ್ರಶ್ನಿಸಿದ್ದಾರೆ. 'ಹೆಣ್ಣು ಹುಲಿ', 'ನಾನು', 'ಅಂಕ', 'ಕಾಯಬೇಕು', 'ಬೆಂಕಿ ಬೂದಿ' ಮುಂತಾದ ಕವಿತೆಗಳು, ಹೆಣ್ಣು ಅನುಭವಿಸಬೇಕಾದ ವಾಸ್ತವವನ್ನು, ಅಸಹಾಯಕತೆಯನ್ನು ಮನಗಾಣಿಸುತ್ತವೆ. 'ಹೆಣ್ಣು ಕಾಡು', 'ಛಲ', 'ಅವಳಿಗೆ ಗೊತ್ತು', 'ಎರಡು ಕವನಗಳು', 'ನಾನು ಬ್ರಾಹ್ಮಣ ಕನ್ಯೆ', 'ಬಳೆಗಳ ಸೇಲ್ಸ್‌ಮನ್' ಮುಂತಾದ ಕವಿತೆಗಳಲ್ಲಿ ಹೆಣ್ಣಿನ ಅಸ್ತಿತ್ವದ ಹೊಸ ಹುಡುಕಾಟವಿದೆ. ಬದುಕನ್ನು ಎದುರಿಸುವ, ಆಧುನಿಕ ಆಲೋಚನೆಯ ಹೆಣ್ಣು ಎದುರಾಗುತ್ತಾಳೆ.

ದಾಂಪತ್ಯವನ್ನು ಕುರಿತ ಶಬ್ದ ಚಿತ್ರಗಳಲ್ಲಿ, ದಾಂಪತ್ಯದ ಉಳಿವು, ದಾಂಪತ್ಯ ತಂದೊಡ್ಡುವ ಸಮಸ್ಯೆಗಳನ್ನು ವಿಶ್ಲೇಷಿಸಲಾಗಿದೆ. 'ಕಿರುಗುಡುವ ಮಂಚ', 'ದಾಂಪತ್ಯ', 'ಸಂಗಾತ', 'ದಾಂಪತ್ಯ ೧', 'ದಾಂಪತ್ಯ ೨' ಮುಂತಾದ ಕವಿತೆಗಳು ಹೆಣ್ಣಿನ ಮೂಲಕ ದಾಂಪತ್ಯದ ಬೆಸುಗೆ ಬಿರುಕುಗಳನ್ನು ತೋರಿಸಲಾಗಿದೆ.

ನಮ್ಮ ಮನೆಯಲ್ಲಿ ಇಬ್ಬರಿದ್ದೆವು
ಎರಡು ಕಾಲಗಳಲ್ಲಿ ಬದುಕುತ್ತಿದ್ದೆವು
ನಮ್ಮ ಕೊರಳುಗಳು ಒಂದು ನೊಗಕ್ಕೆ
ಕೂಡಲೇ ಇಲ್ಲ ('ಸಂಗಾತ', ಪುಟ-೪೧೨)

ಇಂಥ ಪ್ರತಿಮಾತ್ಮಕ ಚಿತ್ರಗಳು ಏನನ್ನು ಹೇಳುತ್ತಿವೆಯೆಂದರೆ, ಗಂಡು ಹೆಣ್ಣಿನ ಲೈಂಗಿಕ ಸಂಬಂಧದಲ್ಲಿ ಬದುಕಿನಲ್ಲಿ ಭಿನ್ನ ಅಭಿಪ್ರಾಯಗಳು ತಲೆದೋರಿದಾಗ, ಅದನ್ನು ಬೇರೆಯವರೊಂದಿಗೆ ಹಂಚಿಕೊಳ್ಳಲು ಪಡುತ್ತಿದ್ದ ಮುಜುಗರವನ್ನು ಬದಿಗಿಟ್ಟು, ಪ್ರತಿಭಾರವರ ಕಾವ್ಯ ದಾಂಪತ್ಯದ ಬಿಕ್ಕಟ್ಟುಗಳನ್ನು ಮುಕ್ತ ಮನಸ್ಸಿನಿಂದ ತೆರೆದಿಟ್ಟಿದೆ. ಯಶಸ್ವಿ ಪುರುಷನ ಹಿಂದೆ ಮಹಿಳೆಯಿರುತ್ತಾಳೆ ಎನ್ನುವ ರೂಢಿ ಮಾತಿಗೆ ಪ್ರತಿಯಾಗಿ 'ಯಶಸ್ವಿ ಮಹಿಳೆಯ ಹಿಂದೆ, ಒಬ್ಬ ಅತೃಪ್ತ ಪುರುಷನಿದ್ದಾನೆಂಬ' ವಿಷಾದದ ವ್ಯಾಖ್ಯಾನವನ್ನು ಮಾಡಿದ್ದಾರೆ.

'ಅಮ್ಮ ೩' ಕವಿತೆಯಲ್ಲಿ ತಾಯಿ ಎದುರಿಸಿದ ಬಿಕ್ಕಟ್ಟುಗಳ ಬದುಕಿಗೆ ಪರ್ಯಾಯವಾಗಿ ಮಗಳ ಆಧುನಿಕ ಸವಲತ್ತುಗಳನ್ನು ಒಳಗೊಂಡ, ಬದಲಾವಣೆಯ ಹೊಸ ಗಾಳಿಗೆ ತೆರೆದುಕೊಂಡ ಬದುಕನ್ನು ಸಂಕೇತಿಸುತ್ತದೆ.

ಈಗೆಲ್ಲ ಮೂರುಗಂಟಿಗೆ ಬದಲು
ಕೊಂಡಿ ಬೆಸುಗೆ ಹಾಕಿ ಇಳಿಬಿಡುತ್ತಾರೆ
ತೆಗೆದುಹಾಕಲು ಸುಲಭ.
ಸಿಸೇರಿಯನ್, ಬೇಬಿ ಸಿಟ್ಟಿಂಗ್, ವೆಡ್‌ಗ್ರೈಂಡಿಂಗ್

ಬಾವಿಕಟ್ಟೆಯ ನೆನಪು ಮಾಸಿ
ನೀವೆ ವಾಸಿ ಎಂದು
ಪಿಸುಗುಡುವ ವಿಸ್ಪರು
ಮೂವತ್ತು ದಿನಗಳೂ ಒಳಹೊರಗೆ
ಬಸುರಿಯ ಸ್ಕೂಟರು ಸವಾರಿ
ಬಾಣಂತಿಗೆ ಐಸ್‌ಕ್ರೀಂ (ಅಮ್ಮ ೩, ಅದೇ, ಪುಟ-೩೪೩)

ತಾಂತ್ರಿಕ ಸೌಲಭ್ಯಗಳಲ್ಲಿ ಬದಲಾದ ಮಹಿಳೆಯ ಚಿತ್ರಣ ಲಭ್ಯವಾಗುತ್ತದೆ. 'ಛಲ' ಕವಿತೆಯಲ್ಲಿಯೂ ಮಹಿಳೆಯ ಬದಲಾದ ಬದುಕನ್ನು ದಾಖಲಿಸಲಾಗಿದೆ. ಇಂದ್ರಿಯಗ್ರಾಹ್ಯವಾದ ರುಚಿ, ವಾಸನೆ, ಸ್ಪರ್ಶವನ್ನು, ಖರೀದಿಸಿದ ತಿಂಡಿಗಳಲ್ಲಿ ಪಡೆಯಬಲ್ಲರು. ಒಬ್ಬಟ್ಟು ಮಾಡಲು ಅವನು ಬೇಡಿಕೆಯಿತ್ತಾಗ, ಅದನ್ನು ನಿಕೃಷ್ಟವಾಗಿ ತಿರಸ್ಕರಿಸುವ ನಿರ್ಧಾರ ವ್ಯಕ್ತಗೊಳ್ಳುತ್ತದೆ. 'ಬಳೆಗಳ ಸೇಲ್ಸ್‌ಮನ್' ಜನಪದ ಗೀತೆಯ ಧಾಟಿಯಲ್ಲಿ ಜನಪದ ಗೀತೆಯೊಂದಕ್ಕೆ ನೀಡಿದ ಪ್ರತಿಕ್ರಿಯೆಯಾಗಿದೆ. 'ಬಾಲಕರಿಲ್ಲದ ಬಾಲೆ ಆಯ್ಕೆ ಹೊರತು ಅನಿವಾರ್ಯವಲ್ಲ' ಎಂಬ ಮಾತನ್ನು ಸ್ಪಷ್ಟೀಕರಿಸುತ್ತ, ಹಾಸ್ಯುಂಡು ಬೀಸಿ ಒಗೆದ ಬಾಳು, ಹೆಣ್ಣಿನದಲ್ಲ ಮಕ್ಕಳನ್ನು ಪಡೆಯುವ/ನಿರಾಕರಿಸುವ ಸ್ವತಂತ್ರ್ಯ ಆಯ್ಕೆ ಆಕೆಗಿದೆ ಎಂಬುದನ್ನು ಹೇಳಲಾಗಿದೆ.

ಬದಲಾದ ಆಧುನಿಕ ಯುಗದಲ್ಲಿ ಉದ್ಯೋಗಸ್ಥ ಮಹಿಳೆಯ ದೈನಂದಿನ ಚಟುವಟಿಕೆಗಳ ತಲ್ಲಣಗಳನ್ನು 'ಕೇರ್‌ಫ್ರೀ ಮಹಿಳೆಯರು' ಕವನ ಸಂಕೇತಿಸುತ್ತದೆ. ಬಂಡವಾಳಶಾಹಿ ನಿಯಂತ್ರಿಸುವ ಬದುಕಿನಲ್ಲಿ ಧೈರ್ಯವಾಗಿ ಮುನ್ನುಗ್ಗುತ್ತಿರುವ, ಮಹಿಳೆಯರಿಗೆ 'ಕೇರ್‌ಫ್ರೀ' ಸ್ಯಾನಿಟರಿ ನ್ಯಾಪ್‌ಕಿನ್ ವರವಾಗಿರುವುದನ್ನು, ಕವಿತೆಯ ಶೀರ್ಷಿಕೆ ಸೂಚಿಸುತ್ತದೆ. ಜತೆಗೆ ಹೊರಗಿನ ಮತ್ತು ಒಳಗಿನ ಕರ್ತವ್ಯಗಳನ್ನು ಸಂಭಾಳಿಸಿಕೊಂಡು ಹೋಗುವ ಮಹಿಳೆಯರನ್ನು ಉಪೇಕ್ಷಿಸಲಾಗುತ್ತಿದೆ /ಅಲಕ್ಷಿಸಲಾಗುತ್ತಿದೆ ಎಂಬ ಸಂಗತಿಯ ಕಡೆಗೂ ನಮ್ಮ ಗಮನವನ್ನು ಕೇಂದ್ರೀಕರಿಸುತ್ತದೆ. ಬದುಕನ್ನು ದಿಟ್ಟವಾಗಿ ಎದುರಿಸುವ ಉತ್ಸಾಹದಲ್ಲೂ, ಬಂಡವಾಳಶಾಹಿ ಸರಕುಗಳ ಮಧ್ಯೆ ಕಳೆದುಹೋಗುವ ವಿಷಾದವನ್ನು ಕವಿತೆ ಕಟ್ಟಿಕೊಡುತ್ತದೆ.

ಪ್ರತಿಭಾರವರು ವೈಯಕ್ತಿಕ ನೆಲೆಯಲ್ಲಿ ಹೆಣ್ಣಿನ ಬದುಕಿನ ವಿವಿಧ ವಿಭಿನ್ನ ಆಯಾಮಗಳನ್ನು ತೆರೆದಿಡುವುದರೊಂದಿಗೆ, ವ್ಯಕ್ತಿಬದುಕಿನ ವಿಸ್ತೃತ ರೂಪವಾಗಿ ಪ್ರಾಣಿಗಳ ರೋಚಕ ಬದುಕನ್ನು ಪ್ರತಿಮೆಯನ್ನಾಗಿ ಬಳಸಿಕೊಂಡಿದ್ದಾರೆ.

ಜಲರಾಶಿಯಲ್ಲಿ ತನ್ನನ್ನು ಕಳಿಸುವ ತಿಮಂಗಿಲಗಳ ನಡುವೆ, ಅಲೆಗಳ ಮೇಲೆ ಬೀಸುವ ಬೆಸ್ತನ ಬಲೆಯ ಆತಂಕದ ನಡುವೆ ಮೀನಿನ ಹಠಯೋಗವಿದೆ, ಮುಟ್ಟಿಸಿಕೊಳ್ಳದೇ, ಸತಾಯಿಸಿ, ಔಟಾಗದೇ ಉಳಿದು ಬಚ್ಚಿಟ್ಟುಕೊಳ್ಳುವಾಟ ಆಡುತ್ತದೆ. ಬೆದೆಗೆ ಬಂದಾಗ ಬೇಕಾದವನೊಂದಿಗೆ ಕೊಡಲು ನದೀ ಮೂಲಕ್ಕೂ ಪ್ರಯಾಣ ಬೆಳೆಸುತ್ತದೆ. ಮೊಟ್ಟೆಗಳನ್ನು ತಟ್ಟೆಯೊಳಿಟ್ಟು ಮರಿಗಳನ್ನು ಕಾಯುತ್ತದೆ. ಮೀನಿನ ದಾರುಣ ಸಾವಿಗೆ ಕಾರಣವನ್ನು ಕವಿ ಗುರುತಿಸಿದ್ದಾರೆ.

ವಿಷ, ಕೊಟ್ಟೆ, ಬಗ್ಗಡ, ಅನಿಲ
ಆಮ್ಲ, ಮುಳುಗಾದ ಹಡಗು
ಯುದ್ಧ, ರಾಸಾಯನಿಕ ರಹಸ್ಯ
ಏನಿಲ್ಲದಿದ್ದರೆ ಕೊನೆಗೆ ಅರೆದಿಟ್ಟ ಮಸಾಲೆ (ಅದೇ, ಪುಟ- ೨೭೩)

ಮೀನಿನ ಬದುಕಿನೊಂದಿಗೆ ಅವರ ಸಾವಿನ ಶೋಧ ನಡೆಸುವ ಸೂಕ್ಷ್ಮ ದೃಷ್ಟಿ ನಮಗೆ ಲಭ್ಯವಾಗುತ್ತದೆ. ಬದುಕಿನ ಸಂಘರ್ಷದಲ್ಲಿ, ಅಳಿವು, ಉಳುವಿನ ಹೋರಾಟದ ಮಧ್ಯೆ ಒಂದು ಮೀನಿನ ಕನಸಿಗೆ ಎಷ್ಟೆಲ್ಲಾ ರೆಕ್ಕೆಗಳಿವೆ. ಒಂದು ಮೀನಿನ ಮೌನಕ್ಕೆ ಎಷ್ಟೆಲ್ಲ ಧ್ವನಿಗಳಿರುತ್ತವೆ ಎಂಬ ಆಶಯಗಳು ಬದುಕನ್ನು ಸಹನೀಯಾಗಿಸುತ್ತವೆ.

'ಹುಲಿ ಮತ್ತು ಸ್ವಾತಂತ್ರ್ಯ', 'ಹುಲಿಗಳ ಸಾವು', 'ಹೆಣ್ಣುಹುಲಿ', 'ಹೆಣ್ಣು-ಕಾಡು' ಮುಂತಾದ ಕವಿತೆಗಳು ಗಂಡಿನ ದಾರ್ಷ್ಟ್ಯ, ಹೆಣ್ಣಿನ ಅಸಹಾಯಕತೆಯೊಂದಿಗೆ ಎದುರಿಸುವ ಛಲಗಳು ವ್ಯಕ್ತವಾಗುತ್ತದೆ. ಹಕ್ಕಿ, ಬೆಕ್ಕು, ನಾಯಿ, ಕಾಗೆ, ಇಲಿ, ಗಿಳಿ ಮುಂತಾದ ಪ್ರಾಣಿರೂಪಕಗಳು ಹಳೆಯ ಚಾಳಿಗಳನ್ನು ಬಿಡದ ಗುಣಗಳಿಗೆ ಸಂಕೇತವಾಗಿವೆ.

ಮಹಿಳೆಯ ಅಸ್ತಿತ್ವದ ಶೋಧನೆಗಿರುವ ತಡಕಾಟಗಳು, ಕನಸುಗಳನ್ನು ಪ್ರಾಣಿಗಳ ಜೀವನದಲ್ಲಿಯೂ ಗುರುತಿಸುವ ವಿಸ್ತೃತ ದೃಷ್ಟಿಕೋನ ಕವಿಯ ಮೂಲಕ ಲಭ್ಯವಾಗುತ್ತದೆ.

**ಆ. ಲೈಂಗಿಕ ರಾಜಕಾರಣ ಕೇಂದ್ರಿತವಾದ ಸಂಕೇತಗಳನ್ನು ಪ್ರತಿಮಾತ್ಮಕಗೊಳಿಸುವ ವಿಧಾನ**

ಲೈಂಗಿಕ ರಾಜಕಾರಣ ಕೇಂದ್ರಿತವಾದ ಪ್ರತಿಮಾತ್ಮಕ ವಿಧಾನದಲ್ಲಿ, ಲೈಂಗಿಕ ಪಾತಳಿಯ ಮೇಲೆ ಪುರುಷ ನಡೆಸುತ್ತಿರುವ ಯಜಮಾನ್ಯವನ್ನು ಪ್ರತಿಭಾರವರು ಪ್ರಶ್ನಿಸುತ್ತಾರೆ. ಪುರುಷ ದೇಹ ರಚನೆಗಿಂತ ಭಿನ್ನವಾಗಿರುವ ಹೆಣ್ಣಿನ ದೇಹ ರಚನೆಯ ಸಂಕೇತಗಳನ್ನು ಬಳಸಿಕೊಂಡು ಪುರುಷ ರಾಜಕಾರಣವನ್ನು ಬಯಲುಗೊಳಿಸುತ್ತಾರೆ. ಹೆಣ್ಣಿನ 'ಶೀಲ', 'ಪಾತಿವ್ರತ್ಯ' ಕಲ್ಪನೆಗಳನ್ನು ಒಡೆಯುವ ಕ್ರಿಯೆಯಿಂದ ಲೈಂಗಿಕ ರಾಜಕಾರಣದ ಪ್ರಶ್ನೆಯನ್ನು ಪ್ರಾರಂಭಿಸಬಹುದು.

ಅವರು ನನ್ನ ಕವನದ ಮಾನಭಂಗ ಮಾಡಿದರು
ಸೆರಗೆಳೆದು ಮುಡಿ ಕೆದರಿ ಹಾಳುಗೆಡವಿದರು
ಪುಟದ ಗಲ್ಲಿಗಲ್ಲಿಗಳಲ್ಲಿ ಎಳೆದು ವಿರೂಪಗೊಳಿಸಿದರು
ಕಣ್ಣಲ್ಲಿ ಹನಿ ತುಂಬಿ ಬಿಕ್ಕಳಿಕೆ ನುಂಗುತ್ತ ಸೌಖ್ಯವೇ (ಕವಿತೆ, ಅದೇ, ಪುಟ-೩೩೦)

ಎಂದು ಕೇಳಿದ ಕಾಶ್ಮೀರಿ ಕವಿ ಶಫಿ ಶೇಖ್‌ಗೆ ಕೊಟ್ಟ ಉತ್ತರ.

...ನನ್ನ ಕವಿತೆಗೆ ಮುಸುಕು ತಿಳಿಯದು
ಇನ್ನು
ಗೋಪ್ಯವೆಂದರೇನು

ಮಾನವೆಂದರೇನು ಭಂಗವೆಂದರೇನು
...ನನ್ನ ಗುಬ್ಬಿ ಬೆಳೆ ಕಟಾವಿಗೆ
ಕೊಡಲಿ ಹಿಡಿದು ಬಂದವರು ಹೇಳಿ
ಕವನವೆಂದರೆ ಏನು
ಹೇಳಿದರೆ ಇವನಿಗೆ ಅರ್ಥವಾಗುವುದೇನು? (ಅದೇ)

ಹೆಣ್ಣನ್ನು ದರ್ಪದಿಂದ ಭೋಗದ ವಸ್ತುವಾಗಿಸಿದವನ ಅಪರಾಧವನ್ನು ಬದಿಗಿರಿಸಿ, ಅದರ ಪರಿಣಾಮವನ್ನು ಅನುಭವಿಸಿದ ಹೆಣ್ಣಿನ ಮೇಲೆ 'ಮಾನಭಂಗ'ದ ಗೂಬೆಯನ್ನು ಕೂರಿಸುವುದನ್ನು ಕವಿ ಖಾರವಾಗಿ ಪ್ರತಿರೋಧಿಸಿದ್ದಾರೆ. ಹೆಣ್ಣಿನ ಲೈಂಗಿಕ ದಬ್ಬಾಳಿಕೆಗೆ ಕಾರಣನಾದವನು ವ್ಯವಸ್ಥೆಯ ಕಣ್ಣಿನಿಂದ ಮರೆಮಾಚಲ್ಪಡುತ್ತಾನೆ. ಆದರೆ ಅದರ ಪರಿಣಾಮವನ್ನು ಅನುಭವಿಸುವ ಹೆಣ್ಣಿಗೆ 'ಶೀಲಭಂಗ', 'ಮಾನಭಂಗ'ದಂತಹ ಅರ್ಥವಿಲ್ಲದ ಆರೋಪಗಳನ್ನು ಆರೋಪಿಸುವುದನ್ನು ಕವಿ ವಿರೋಧಿಸುತ್ತಾರೆ.

'ಆಹಾ, ಪುರುಷಾಕರಂ!' ಕವಿತೆಯಲ್ಲಿ ಗಂಡು ತನ್ನ ದೇಹ ರಚನೆಯಿಂದಾಗಿ ಹೊಂದಿದ ಸೂಪರ್ ಇಗೊಯಿಸಂ ಅನ್ನು ಮುರಿಯುತ್ತಾರೆ.

ಪರಮೋಚ್ಚ ಸೌಂದರ್ಯ
ಜೊತೆಗೆ ಗರ್ವಕಾರಣ ವೀರ್ಯ
ಉಪಾಸನೆಯ ಸಂತ
ಕಾಮವಿಕಾರ ರೂಪಹಂತ
ರಜನೀಶ ಸ್ವಂತ
ತಿಳಿಯದ ತಿಳಿ
ತಿಳಿದ ರಾಡಿ (ಅದೇ, ಪುಟ-೩೬೧)

ಪುರುಷನ ಸೌಂದರ್ಯದ ಎದುರು ಹೆಣ್ಣಿನ ಪ್ರಣಯಮತ್ತ ಸ್ತ್ರೀರೂಪವನ್ನು ಮುಂದಿಟ್ಟು, ಹೆಮ್ಮೆಪಡುತ್ತಾರೆ. ಹೆಣ್ಣನ್ನು ಲೈಂಗಿಕ ನೆಲೆಯ ಪರಿಕಲ್ಪನೆಗಳಲ್ಲಿ ಕಟ್ಟಿಕೊಡುವ ಮೂಲಕ ಪುರುಷನ ಅಹಮ್ಮಿಕೆಗೆ ಪೆಟ್ಟು ನೀಡುತ್ತಾರೆ.

'ಕಿರುಗುಡುವ ಮಂಚ', 'ದಾಂಪತ್ಯ ೨', ಕವಿತೆಗಳು ಹೆಣ್ಣಿನ ಲೈಂಗಿಕ ಬಯಕೆಗಳನ್ನು ಹಂಚಿಕೊಳ್ಳಲು ಇರದ ಅವಕಾಶಗಳೆಡೆ ಬೆರಳು ಮಾಡಿ ತೋರಿಸುತ್ತವೆ.

ಈಗ ಕತೆ ಮುಗಿಯುತ್ತಾ ಬಂದಿದೆ
ಈಗ ತನ್ನ ಪ್ರತ್ಯೇಕ ಕೋಣೆಗೆ
ರಾತ್ರಿ ಚಿಲಕ ಹಾಕಬೇಕಾಗಿಲ್ಲ
ಹೆಣ್ಣಿನ ಲೈಂಗಿಕತೆಯ ಬಗ್ಗೆ
ಯಾರೋ ಪ್ರಶ್ನೆ ಕೇಳಿದರು
ಅರ್ಥವಾಗದೆ ಪಿಳಿಪಿಳಿ ನೋಡಿದೆ. (ಅದೇ, ಪುಟ-೩೮೪)

ಲೈಂಗಿಕ ಕಲ್ಪನೆಯ ಬಗ್ಗೆ ಗಂಡಿಗಿರಬಹುದಾದ ಆಸಕ್ತಿಗಳು, ಬೇರೆಯವರೊಂದಿಗೆ ಮುಕ್ತವಾಗಿ ಹಂಚಿಕೊಳ್ಳಬಹುದಾದಂಥವು. ಆದರೆ ಹೆಣ್ಣು ಲೈಂಗಿಕತೆಯ ಬಗ್ಗೆ ಮಾತೆತ್ತುವುದೇ ಅಪರಾಧವಾಗಿ ಬಿಡುವ ಪರಿಸ್ಥಿತಿಯನ್ನು ನಿರ್ಮಿಸಲಾಗಿದೆ. ಇಂಥ ವಾಸ್ತವವನ್ನು ಬಯಲಿಗಿಡುತ್ತಲೇ ಹೆಣ್ಣು, ಗಂಡಿನ ಲೈಂಗಿಕತೆಯನ್ನು ಗ್ರಹಿಸಿ, ಅದಕ್ಕೆ ಪ್ರತಿಕ್ರಿಯೆ ನೀಡುವ ಮನೋಭಾವ ಪ್ರತಿಭಾರವರ ಕಾವ್ಯದಲ್ಲಿ ಗೋಚರಿಸುತ್ತದೆ. 'ಕಥಾನಕ' ಕವಿತೆಯು ಲೈಂಗಿಕ ಸಂಬಂಧದಲ್ಲಿ ಹೆಣ್ಣಿನ ಮೇಲುಗೈ ಸಾಧ್ಯವಾಗುವ ಬಗೆಯನ್ನು ಚಿತ್ರಿಸಲಾಗಿದೆ. 'ಬಿಸಿಲ ಮಚ್ಚಿನ ಬದುಕು' ಕವಿತೆಯಲ್ಲಿ

ಹುಲಿಯಾಗಿ ಇಲಿಯಾಗಿ
ಹಾವಾಗಿ ಮತ್ತೆ ತ್ರಿಯಾಳೂ
ನಲಿಯುವ ನನ್ನ
ಪ್ರಣಯ ಲೀಲೆಗಳು
ತಾಳಲಾರದೆ ಸೋಲುವ ಇನಿಯ
ಬಿಸಿಲು ಮಚ್ಚಿನ ಕ್ಷಣಗಳು
ನನ್ನ ಜೀವನ ರಹಸ್ಯಗಳು, (ಅದೇ, ಪುಟ-೩೮)

ಹೆಣ್ಣಿನ ಲೈಂಗಿಕ ಕಾಮನೆಗಳಿಗೆ ಸ್ಪಂದಿಸಲಾರದ ಗಂಡು ಸೋಲುವ ಚಿತ್ರಣ ನೀಡಲಾಗಿದೆ. 'ಚಕ್ರ', 'ಯೋನಿಚಕ್ರ ಭವ ಬಂದು ಇತ್ಯಾದಿ' ಕವಿತೆಗಳು ಹೆಣ್ಣಿನ ದೇಹ ರಚನೆಯನ್ನು ಬಿಡಿಸಿರುವ ಕವಿತೆಗಳಾಗಿವೆ.

'ರಾಸಕ್ರೀಡೆ ಮತ್ತು ನಂತರ' ಕವಿತೆಯಲ್ಲಿ ಲೈಂಗಿಕ ಕಾಮನೆಗಳನ್ನು ಕೇಂದ್ರೀಕರಿಸಿ ಕೊಂಡಿರುವಂತಹುದು. ಪುರುಷನು, ವ್ಯವಸ್ಥೆಯಲ್ಲಿ ಹೊಂದಿರುವ ಅಧಿಕಾರಕ್ಕೆ ಲೈಂಗಿಕ ರಾಜಕಾರಣವೇ ಮುಖ್ಯ ಎಂಬುದನ್ನು ಪ್ರತಿಪಾದಿಸಲಾಗಿದೆ. ಜತೆಗೆ ಹೆಣ್ಣಿನ ಮನೋಭಾವಗಳನ್ನು ಮುಖಾಮುಖಿಯಾಗಿಸಲಾಗಿದೆ.

ಶಾಶ್ವತ ಗುರುತುಗಳು ಅವನ ಏರಿಳಿದ ಎದೆಯಲ್ಲಿ
ಅವಳ ಒಡಲಲ್ಲಿ ಬಿರಿದ ತುಟಿ ತೊಡೆಯ ಸ್ನಾಯುಗಳಲ್ಲಿ
ಹಿತದ ನೋವು, ಇದು ಲಕ್ಷಾಗೃಹಕ್ಕಿದು ಮತ್ತೊಂದಕ್ಕೆ ಎಂದು
ಎಣಿಸೆಣಿಸಿ ಬೀಸಿದ ಗದೆಪೆಟ್ಟಿಗೆ ಕುಸಿದವನಂತೆ ತನ್ನ
ದಾಳಿಗೆ ಹೈರಾಣಾಗಿ ಪವಡಿಸಿದ್ದ ಅವನು ಅವಳ ಪುಷ್ಪಕ್ಕೊಂದು
ಕೈಕೊಟ್ಟು ಸೆಳೆಯುವನಂತೆ ಈಗಲೇ ಇನ್ನೆರಡು ಕ್ಷಣಗಳಲ್ಲಿ
ಮತ್ತೆ ತೊಡಗುವವನಂತೆ ರಾಸಕ್ರೀಡೆಗೆ

('ರಾಸಕ್ರೀಡೆ ಮತ್ತು ಅನಂತರ', ಅದೇ, ಪುಟ-೪೫೩)

ಲೈಂಗಿಕ ಕ್ರಿಯೆಯಲ್ಲಿ ಗಂಡಿನ ಮೇಲುಗೈ ಮತ್ತು ಹೆಣ್ಣಿನ ಅಸಹಾಯಕತೆಯನ್ನು ಅಲ್ಲಗಳೆವ

ಈ ಕವಿತೆಯಲ್ಲಿ ಗಂಡಿನ ಅಹಮ್ಮಿಕೆಯನ್ನು ತಗ್ಗಿಸಿ, ಅವನು ಪ್ರಣಯದಾಟದಲ್ಲಿ ಹೈರಾಣಾಗಿ ಕುಸಿದ ಚಿತ್ರವನ್ನು ನೀಡಿದ್ದಾರೆ.

ಲೈಂಗಿಕ ಸಂಕೇತಗಳನ್ನು ಬಳಸಿಕೊಂಡ ಕಾವ್ಯಗಳನ್ನು ಕುರಿತು, ಕೆಲವು ವಿಮರ್ಶಕರಿಗೆ ಅಸಮಾಧಾನವಿದೆ. ಬರಹಗಳ ಮೂಲಕ ಇದನ್ನು ವಿವಾದವನ್ನಾಗಿಯೂ ಮಾಡಲಾಗಿದೆ. ಆದರೆ ಇದನ್ನು ಒಪ್ಪದ ಕವಿ ಮಿತ್ರನೊಬ್ಬ "ನಾನು ಪದಗಳ 'ಸಂವೇದನಾ ಶಕ್ತಿ'ಯನ್ನು ತೆಗೆದುಹಾಕಿ ತುಂಬಾ ಕ್ಲಿನಿಕಲ್ ಆಗಿ ಬರೆಯುತ್ತೇನೆ ಅಂತ ದೂರಿದ್ದ. ಹೆಂಗಸರು ಮೊಲೆ ಸಂಭೋಗ ಇಂತಹ ಪದಗಳನ್ನು 'ಲೀಲಾಜಾಲವಾಗಿ' ಬಳಸಬಾರದಂತೆ. ಇದರಿಂದ ಆ ಪದಗಳ ರೋಚಕತೆ ಕಳೆದುಹೋಗುವುದಂತೆ, 'ನನ್ನ ಉದ್ದೇಶ ಅದೇ' ಅಂದೆ. ಅಂದರೆ ಹಳೆಯ ಪುರಾತನ ರೋಲ್ ಮಾಡೆಲ್‌ನಿಂದ ಹೊರಬಂದು ಅಭಿವ್ಯಕ್ತಿಗೆ ಹೊಸ ಆಯಾಮ ನೀಡುವುದು" (ಮೊದಲ ಮಾತು, ಅಹಾಪುರುಷಾಕಾರಂ) ಎಂದಿದ್ದಾರೆ. ಕಾವ್ಯದ ಅಭಿವ್ಯಕ್ತಿ ವಿಧಾನವನ್ನು ರೂಪಿಸಿಕೊಳ್ಳುವವರು ಬರಹಗಾರರೇ ಆಗಿರುವುದರಿಂದ, ತಾಂತ್ರಿಕ ತಾತ್ವಿಕ ಸಂಗತಿಗಳ ಆಯ್ಕೆ ಮತ್ತು ನಿರಾಕರಣೆಯ ಅಂಶಗಳನ್ನು ಬದಿಗಿಟ್ಟು ಪ್ರತಿಭಾರವರ ಕವಿತೆಗಳನ್ನು ವಿವಿಧ ಆಯಾಮಗಳಲ್ಲಿ ಗುರುತಿಸುವ ಕಡೆ ಗಮನ ನೀಡಲಾಗಿದೆ.

ಖಾಸಗಿ ನೆಲೆಯಲ್ಲಿ ಪ್ರತಿಕ್ರಿಯಿಸಿದ ಭಾವಗಳಲ್ಲಿ, ಪ್ರತಿಭಾರವರ ಮೂಲಕ ಅಂತಹ ಮನೋಭಾವವುಳ್ಳ ಇತರ ಮಹಿಳೆಯರ ಭಾವಗಳು ಕವಿತೆಗಳ ಮೂಲಕ ವ್ಯಕ್ತವಾಗಿವೆ.

### ೫.೫ ಪ್ರಕೃತಿಜನ್ಯ ಮಾದರಿ

ಮಲೆನಾಡಿನ ಪ್ರಕೃತಿ ಸಿರಿಯಲ್ಲಿ ತನ್ಮಯರಾಗಿ ಬೆಳೆದ ಸವಿತಾ ನಾಗಭೂಷಣರವರು ಪ್ರಕೃತಿಜನ್ಯ ವಸ್ತುಗಳನ್ನು ಕಾವ್ಯದ ಜೀವಿನಾಡಿಯಾಗಿಸಿಕೊಂಡಿದ್ದಾರೆ. ಭೂಮಿ–ಬಾನು–ಗಾಳಿ–ನೀರು–ಮೋಡ–ತಾರೆ–ಸೂರ್ಯ–ಚಂದ್ರ ಮುಂತಾದ ವಸ್ತುಗಳ ಸಂವೇದನೆಯ ಮೂಲಕ ವ್ಯಕ್ತಿ ವ್ಯಕ್ತಿತ್ವದ ಸಂಬಂಧಗಳನ್ನು ಗುರುತಿಸುವುದು ಸವಿತಾರವರ ಕಾವ್ಯದ ಪರಿಮಿತಿಯಾಗಿದೆ. ನಿರ್ದಿಷ್ಟ ಪಂಥ, ಸಿದ್ಧಾಂತಗಳಿಗೆ ಸಿಲುಕದೆ, ತಮ್ಮ ನವಿರಾದ, ಮೃದುವಾದ ಭಾವ–ಭಾಷೆಯಿಂದ ಕಾವ್ಯವನ್ನು ನಿರ್ಮಿಸಿದ್ದಾರೆ.

ನನ್ನೆಲ್ಲಾ ಪದ್ಯಗಳಲ್ಲಿರುವಂತೆ
ಇಲ್ಲೂ ತಾರೆ, ಮೋಡ, ಗಾಳಿ
ಕಡಲು, ಸೂರ್ಯರಿದ್ದಾರೆ.
ನಿನಗಿಷ್ಟವಾದರೆ ಓದು ಒತ್ತಾಯವಿಲ್ಲ.
ಇಷ್ಟವಾಗದಿದ್ದರೆ ಬೇಡ
ಕಿಂಚಿತ್ತೂ ಕೋಪವಿಲ್ಲ ('ಈ ಗೆಳೆತನ', ಆಕಾಶ ಮಲ್ಲಿಗೆ, ಪುಟ–೨೦)

ಇದು ಸವಿತಾರವರ ಕಾವ್ಯದ ನಿಲುವೂ ಆಗಿದೆ. ಇವರ ಎಲ್ಲ ಕವಿತೆಗಳಲ್ಲಿ ಪ್ರಕೃತಿನಿರ್ಮಿತ

ವಸ್ತುಗಳು ಚೈತನ್ಯದ ಚಲನಶೀಲತೆಯ ನೆಲೆಯನ್ನು ಪಡೆದುಕೊಂಡಿವೆ. ಸವಿತಾರವರ ಕಾವ್ಯವನ್ನು ಮೂರು ಭಿನ್ನ ನಿರೂಪಣ ವಿಧಾನಗಳಿಂದ ಗುರುತಿಸಬಹುದು.

೧. ಸ್ವಗತ

೨. ಸಂವಾದ

೩. ಶಬ್ದ ಚಿತ್ರ

ಕವಿಗೆ ಪ್ರಕೃತಿ ಸಹಜವಾದ ವಸ್ತುಗಳಲ್ಲಿ ಯಾವುದು ಇಷ್ಟ? ಎಂದು ಪ್ರಶ್ನಿಸಿದರೆ, ಅವರು ಹುಲ್ಲುಕಡ್ಡಿಯನ್ನು ಮೊದಲು ಮಾಡಿ ಪ್ರೀತಿಸಬಲ್ಲವರು ಎಂಬುದು 'ಯಾವುದು ಇಷ್ಟ' ಕವಿತೆಯಲ್ಲಿ ವ್ಯಕ್ತವಾಗುತ್ತದೆ. ಪ್ರಕೃತಿಯಲ್ಲಿರುವ ಹೂವು ಬಣ್ಣ, ಪ್ರಾಣಿಪಕ್ಷಿಗಳ ವಿವಿಧ ಗುಣಗಳಂತೆ ಮನುಷ್ಯ ಸಹಜ ಗುಣಗಳಲ್ಲಿ ತುಂಬಿರುವ ಕೋಪತಾಪ, ಮದಮತ್ಸರ, ದಾಹ-ದುಃಖಗಳಿಂದ ಕೂಡಿರುವುದನ್ನು ಕವಿತೆ ಬಿಂಬಿಸುತ್ತದೆ. ಕವಿ ತನ್ನನ್ನು ತಾನೇ ಪ್ರಶ್ನಿಸಿಕೊಳ್ಳುತ್ತಾ, ಸ್ವಗತದಲ್ಲಿ ಉತ್ತರ ಕಂಡುಕೊಂಡಿದ್ದಾರೆ. 'ಯಾಕೆ' ಕವಿತೆಯೂ ಇಂತಹ ಪ್ರಶ್ನೆಯನ್ನೇ ಒಳಗೊಂಡಿದೆ.

ನೀನು ಪ್ರೀತಿಯ ದಂಡೆಯಾಗಿದ್ದರೆ
ನಾನು ನಡೆದು ಬರುತ್ತಿದ್ದೆ
ಆದರದು ಮಹಾಪೂರ
ಕಾಲಡಿಯ ಮಣ್ಣು ಕುಸಿಯುತ್ತಿದೆ
ಕೊಚ್ಚಿ ಹೋಗುತ್ತಿದ್ದೇನೆ (ಅದೇ, ಪುಟ-೪೦)

ಗೆಳೆಯನ ಕಣ್ಣಿನ ದುಃಖವನ್ನು ಗೆಲ್ಲಲಾರದ ತನ್ನ ಪ್ರೀತಿ ಹೇಗೆ ಮಹಾಪೂರದಲ್ಲಿ ಕೊಚ್ಚಿಹೋಗುತ್ತಿರುವುದು ಯಾಕೆ ಎಂಬ ಪ್ರಶ್ನೆಯನ್ನು ಕೇಳಲಾಗಿ.

.....ತನ್ನೊಳಗೇ ತಾನು ಮಾತಾಡಿಕೊಳ್ಳುವುದು, ಪ್ರಶ್ನಿಸಿಕೊಳ್ಳುವುದು. ಉತ್ತರಿಸಿಕೊಳ್ಳುವುದು ಸವಿತಾರವರ ಕಾವ್ಯದ ಸ್ವಗತದ ಲಕ್ಷಣಗಳಾಗಿವೆ.

'ಪದ್ಯವಾಗಲಿಲ್ಲ' ಕವಿತೆಯಲ್ಲಿ ಪ್ರಕೃತಿಯ ಚೈತನ್ಯಗಳೆಲ್ಲ ಒಂದರೊಳಗೊಂದು ಬೆಸೆದುಕೊಂಡು ಪದ್ಯಗಳಾಗಿವೆ. ಹಳ್ಳಕೊಳ್ಳಗಳು ಕಡಲನ್ನು ಹೆಣೆದು ಕಡಲು ಮತ್ತೆ ಹೊಳೆಯಾಗಿ ಹರಿದು ಬಂದು ಕವಿಯ ಹಾಳೆಯಲ್ಲಿ ಪದ್ಯವಾಗಿದೆ. ಕಡಲಿನ ಕಣ್ಣುಗಳಾಗಿ ನಕ್ಷತ್ರಗಳು ಮುಂಗುರುಳಾಗಿ ಮೋಡಗಳು ತುಟಿಯಂಚಿನ ನಗೆಯಾಗಿ ಬೆಳದಿಂಗಳು ಮೂಡಿ, ಕಡಲು ಕವಿಯ ಕಲ್ಪನೆಯಲ್ಲಿ ಒಂದು ಅಪ್ರತಿಮ ರೂಪವನ್ನು ಪಡೆದು ಪದ್ಯವಾಗಿದೆ. ಕವಿ ತಾವೂ ಪದ್ಯವಾಗ ಬಯಸಿ

ಕಡಲ ಕನ್ನಡಿಯೊಳಗೆ ಇಣುಕಿದೆ
ಬಿಂಬ ಕಾಣಲಿಲ್ಲ
ಕಣ್ಣ ಕನ್ನಡಿಯೊಳಗೆ ಇಣುಕಿದೆ

ನನ್ನ ಬಿಂಬವಾಗಿರಲಿಲ್ಲ
ನಾನು ಪದ್ಯವಾಗಲಿಲ್ಲ (ಅದೇ, ಪುಟ-೧೫)

ಎಂಬ ಕೊರಗು 'ನಾನು ಮತ್ತು ಅವನು' ಕವಿತೆಯಲ್ಲಿ ಈಡೇರಿದೆ

ಒಬ್ಬರೊಳಗೊಬ್ಬರು ಕರಗುವ, ಲೀನವಾಗುವ ಪ್ರೀತಿಯ ಉತ್ಕಟತೆಯಿದೆ. ಗೆಳೆಯನ ಕಣ್ಣಲ್ಲಿ ಪ್ರಕೃತಿಯ ವಿಸ್ಮಯಗಳೆಲ್ಲ ಗೋಚರಿಸತೊಡಗುತ್ತಿವೆ. ಅವನ ಕಣ್ಣಲ್ಲಿ ಕಂಡ ಬೆಟ್ಟದೊಂದಿಗೆ ಏರಿ, ಮೋಡಗಳೊಂದಿಗೆ ಮಾತನಾಡಿ, ಬಣ್ಣ, ಮಳೆಯಲ್ಲಿ ಮಿಂದು ಖುಷಿ ಪಟ್ಟ ಕವಿ ಪದ್ಯದ ಕೊನೆಯಲ್ಲಿ

ಈಗ ನಾನೆ ಮೋಡವಾಗಿದ್ದೇನೆ
ನಾನೆ ಬೆಟ್ಟವಾಗಿದ್ದೇನೆ
ನಾನೆ ಬಣ್ಣವಾಗಿದ್ದೇನೆ
...
ಅವನ ಕಣ್ಣಲ್ಲೆ ಕರಗುತ್ತ
ಅವನೊಳಗೆ ಇಳಿದಿದ್ದೇನೆ.
ಲಯವಾಗಿದ್ದೇನೆ (ಅದೇ, ಪುಟ-೧೯)

ತನ್ನನ್ನು ತಾನು ಇಲ್ಲವಾಗಿಸಿಕೊಂಡು, ಅವನ ಕಣ್ಣೊಳಗೆ ಕರಗುವ ಕ್ರಿಯೆ ಪ್ರೀತಿಗಿರುವ ತನ್ಮಯತೆಯನ್ನು ಸೂಚಿಸುತ್ತದೆ. ಅವನ ಕಣ್ಣ ಹೊಳಪಲ್ಲಿ ಕವಿ ಪಠ್ಯವಾಗಿ ನಿಂತಿದ್ದಾರೆ.

ಕವಿ ತನ್ನ ವ್ಯಕ್ತಿತ್ವವನ್ನು ತಾನೆ ಕಂಡುಕೊಳ್ಳುವ ಪ್ರತಿಮೆ 'ಕನ್ನಡಿ ನನ್ನನ್ನು ನೋಡಿತು' ಕವಿತೆಯಲ್ಲಿ ಬಿಂಬಿತವಾಗಿದೆ. ಕವಿಯ ಒಳಗಿನ ವ್ಯಕ್ತಿತ್ವವನ್ನು ಹೊರಗೆಳೆದು ತೋರಿಸಿದ ಕನ್ನಡಿ ಬಾಹ್ಯ ಚರ್ಯೆಯನ್ನು ಮನಸ್ಸಿನ ಒಳಗಿನ ದುಃಖ, ಲಜ್ಜೆ, ಅಕ್ಕರೆ, ಕ್ರೌರ್ಯ, ಪ್ರೀತಿ, ಆಸೆ ಅಹಂಕಾರಗಳನ್ನು ಬಿಂಬಿಸುತ್ತದೆ.

'ಸ್ವಗತ' ಕವಿತೆ ಅಪರಿಚಿತ ಹುಡುಗಿಯ ದುಃಖ ಮತ್ತು ಕವಿ ಮನಸ್ಸಿನಲ್ಲೇ ನೀಡುವ ಸಾಂತತ್ವಾನದ ಸ್ವಗತವಾಗಿದೆ. ರಸ್ತೆಯ ಅಂಚಿನಲ್ಲಿ ನಿಂತಿರುವ ಆ ಹುಡುಗಿ ಯಾವುದೋ ಸಂದಿಗ್ಧದಲ್ಲಿ ಸಿಲುಕಿದ್ದಾಳೆ. ಆಕೆಯ ದುಃಖವನ್ನು ಹೋಗಲಾಡಿಸಲು ತಾರೆಗಳು, ಮರಗಳಿಗೆ, ಮೊರೆ ಹೋಗಲು ಹೇಳಬೇಕೆಂದು ಕವಿ ಅಂದುಕೊಳ್ಳುತ್ತಾರೆ. ಆಗ ಕವಿಯ ಭಾವ ಅರ್ಥವಾಯಿತೆನ್ನುವಂತೆ

ಹುಡುಗಿ ಮರದಲ್ಲಿ
ಹೂವಾಗಿ ತೂಗುತ್ತಿದ್ದಾಳೆ
ತಾರೆಯರು, ಚಂದಿರ,
ಮೋಡಗಳ ಮರೆಯಲ್ಲಿ
ಕುಳಿತು ಬಿಕ್ಕಳಿಸುತ್ತಿದ್ದಾರೆ.
ದಳ ದಳ ಉರುಳುತ್ತಿರುವ
ಕಣ್ಣೀರಿನಿಂದ ನೆಲ ಒದ್ದೆಯಾಗಿದೆ.
ಹೀಗಾಗಬಾರದಿತ್ತು. (ಅದೇ, ಪುಟ-೦೮)

ಮರುಗುವ ದನಿಯೊಂದು ಕಾವ್ಯದಿಂದ ಹೊರಡುತ್ತದೆ. 'ಇರುಳಿನಲ್ಲಿ ಬೆಳಗು' ಕವಿತೆಯಲ್ಲಿ ಹುಡುಗಿಗೆ ಕಾಣದ ಕೇಳದ/ಮಾತನಾಡಲಾಗದ ಹಗಲಿನ ಚಿತ್ರ ರಾತ್ರಿಯ ಕನಸಿನಲ್ಲಿ ಒಡಮೂಡಿದೆ. ಕವಿ 'ನಾನು ಸೂರ್ಯ' ಕವಿತೆಯಲ್ಲಿ ಸೂರ್ಯನ ಸ್ವಗತವನ್ನು ಭಿನ್ನವಿಸಲಾಗಿದೆ. ಹಕ್ಕಿಗಳ ಚಿಲಿಪಿಲಿಯ ಸದ್ದಿನಿಂದ ಎಚ್ಚರಗೊಳ್ಳುವ ಸೂರ್ಯಾಸ್ತಮಾನ ಮೂಡಿಸುವ ಚಿತ್ರದಲ್ಲಿ ಉತ್ಕೃಷ್ಟ ಕಲಾಕೃತಿಯಾಗಿದ್ದಾನೆ. ಹಳ್ಳ-ಹೊಳೆ ಕಡಲುಗಳು ಅವನ ಕವನಗಳಾಗಿವೆ. ಇವೆಲ್ಲಕ್ಕಿಂತ ಹೆಚ್ಚಾಗಿ, ಸೂರ್ಯನೂ ಒಬ್ಬ 'ಬೆಂಕಿ ಕಾರ್ಖಾನೆಯ ಬಡ ಕಾರ್ಮಿಕ'ನಾದಾಗ ಉರಿವ ಸೂರ್ಯನ ಬಗ್ಗೆ ಆಪ್ತ ಭಾವವನ್ನು ಮೂಡಿಸುತ್ತದೆ. 'ನಾದಿನಿ ಬಂದು ಹೋದಳು', 'ಮಹಮದನ ಪ್ರೇಮ ಪತ್ರ', 'ಬಾಳ ಸಂಜೆ' ಇತ್ಯಾದಿ ಕವಿತೆಗಳು ಸ್ವಗತ ರೂಪವನ್ನು ಒಳಗೊಂಡವುಗಳಾಗಿವೆ.

ಸವಿತಾ ನಾಗಭೂಷಣರವರ ಕಾವ್ಯದಲ್ಲಿ ಸ್ವಗತ ಧಾಟಿಗಿಂತ ಸಂವಾದ ರೂಪ ಹೆಚ್ಚಾಗಿ ಕಾಣಿಸಿಕೊಂಡಿದೆ. 'ಕಿಟಕಿಯಲ್ಲಿ ಚಂದ್ರ' 'ಹೇಗೆ ಪ್ರೀತಿಸದೆ ಇರಲಿ ಚಂದ್ರನನ್ನು' ಕವಿತೆಯಲ್ಲಿ ಚಂದ್ರನೊಂದಿಗೆ ತಮ್ಮ ಅಂತರಂಗವನ್ನು ಬಿಚ್ಚಿಡುತ್ತಾ ಹೋಗಿದ್ದಾರೆ. ಕವಿಯ ಆಶೋತ್ತರಗಳ ಪ್ರತೀಕವಾದ ಚಂದ್ರ ಬಾಲ್ಯದಿಂದಲೂ ಕವಿಯೊಂದಿಗೆ ಜೊತೆಗಿರುವನು. ಬದುಕಿನ ಬಂಧಗಳಿಂದ ಬಿಡುಗಡೆ ಪಡೆಯಲು ಕರೆ ನೀಡುವ ಚಂದ್ರ ಆಪ್ತ ಗೆಳೆಯನಾಗಿದ್ದಾನೆ. 'ಸಿದ್ಧಾರ್ಥನ ಪ್ರಿಯಮಿತ್ರ, ಮೈತ್ರಿಯೇ ಮಹಾಸೂತ್ರ'ನಾದ ಚಂದ್ರನ ಸಾಂಗತ್ಯದಲ್ಲಿ ಬುದ್ಧನ ಛಾಯೆಯೂ ಗೋಚರಿಸಿದೆ. ಬುದ್ಧ ಮತ್ತು ಬುದ್ಧನ ತತ್ವಗಳು ಕವಿಯನ್ನು ತೀವ್ರವಾಗಿ ಆಕರ್ಷಿಸಿದ ಸಂಗತಿಗಳು. 'ಬುದ್ಧ ಕವಿತೆ', 'ಬುದ್ಧ ಮತ್ತು ಹೂವು', 'ಮೌನದ ಗಂಟೆ' ಮುಂತಾದ ಕವಿತೆಗಳು ಸಾಕ್ಷಿಯಾಗಿವೆ. ಆದ್ದರಿಂದ ಕರುಣೆ, ದಯೆ, ಕ್ಷಮೆ, ಪ್ರೀತಿ ಭಾವಗಳು ಸವಿತಾರವರ ಕಾವ್ಯದ ಸ್ಥಾಯಿ ಭಾವಗಳಾಗಿವೆ.

'ಯಾಕೆ ಬರಲಿಲ್ಲ?', 'ನಾ ಬರುತ್ತೇನೆ ಕೇಳು', 'ಈ ಗೆಳೆತನ', 'ಈ ಒಂದು ಕ್ಷಣದ ಹಿಂದೆ', 'ನೋಡಬೇಡ ತಿರುಗಿ' ಮುಂತಾದ ಕವಿತೆಗಳು ಗೆಳೆಯನೊಂದಿಗೆ ನಡೆಸಿದ ಸಂವಾದಗಳಾಗಿವೆ. ಪ್ರೀತಿಯ ಅದಮ್ಯ ಲೋಕವನ್ನು ಹೊಕ್ಕ ಕವಿಗೆ, ಗೆಳೆಯನಿಂದ ಉಂಟಾದ ನಿರಾಶೆ, ದುಃಖ, ವಿಷಾದಗಳು ಮೇಲೆ ಪ್ರಸ್ತಾಪಿಸಿದ ಕವಿತೆಗಳ ಮೂಲಕ ಗೋಚರಿಸುತ್ತದೆ. 'ಒಂದು ಕ್ಷಣದ ಹಿಂದೆ' ಕವಿತೆಯಲ್ಲಿ ಗೆಳೆಯನ ಚಾಂಚಲ್ಯ, ಧೃಡತೆಯಿಲ್ಲದ ಪ್ರೀತಿಯ ಪರಿಚಯವಾಗುತ್ತದೆ. 'ನೋಡಬೇಡ ತಿರುಗಿ' ಕವಿತೆಯಲ್ಲಿ ಕಾಯಿಸಿ ಬೇಸರ ತರಿಸಿದ ಗೆಳೆಯ ಅವಳನ್ನು ಸೇರಲು ಬಂದಿರುತ್ತಾನೆ. ಆದರೆ ಆಕೆ ಅವನಿಗಾಗಿ ಬರೆದ ಕವಿತೆಗಳು ಬೆಂದು ಬೂದಿಯಾಗಿರುವ ಸೂಚನೆ ಕೊಡುವುದರೊಂದಿಗೆ ತಿರಸ್ಕಾರದ ಮುಕ್ತಾಯವಿದೆ. 'ನಾ ಬರುತ್ತೇನೆ ಕೇಳು' ಕವಿತೆಯಲ್ಲಿ ಗೆಳೆಯನ ಹೃದಯದೊಳಗೆ, ಗುಲಾಬಿ ಮೃದು ಪಾದಗಳನ್ನು, ಅಲ್ಲಿ ಹಸಿರ ಬೆಳೆಸಲು ಹವಣಿಸುತ್ತಾ, ತಾವು ಝುಣಗುಟ್ಟಿಸಿದ ಗೆಜ್ಜೆಯ ದನಿ ದೂರವಾದ ಮೇಲೆ ಬಂದ ಸ್ವೀಕರಿಸಲು ತಾನಲ್ಲಿರುವುದಿಲ್ಲ ಎಂಬ ಎಚ್ಚರಿಕೆಯನ್ನು ನೀಡಿದ್ದಾರೆ. ಗೆಳೆಯನ ಮೇಲೆ ಎಷ್ಟೇ ಮುನಿಸು ತೋರಿದರೂ

'ಪ್ರೀತಿಯ ಯುದ್ಧದಲ್ಲಿ ಗೆಳೆಯಾ
ಎಲ್ಲಾ ಕ್ಷಮ್ಯ ಚುಕ್ಕಿಗಳು ಹೊಳೆಯಲಿ
ನಿನ್ನ ಪಾಲಿಗೆ ನಗಲಿ ಚಂದಿರ ನಿರಂತರ
ಈ ರಸ್ತೆಗಳು ಮಾತ್ರ
ತಡೆದು ನಿಲ್ಲಿಸಲಿ ತಿಳಿಸದೆ
ನನ್ನ ಗೋರಿಯ ಹಾದಿಯ ('ಯಾಕೆ ಬರಲಿಲ್ಲ?', ಅದೇ, ಪುಟ- ೧೧)

ಎಂಬ ಹಾರೈಕೆಯ ಒಲುಮೆಯನ್ನು ತೋರುತ್ತಾರೆ. ಗೆಳೆಯನ ಪ್ರೀತಿಯನ್ನು ನಿರಂತರ ಕಾಪಿಡುತ್ತಾರೆ. ಗೆಳೆಯನ ಅನುಪಸ್ಥಿತಿಯಲ್ಲಿ ತಾರೆ, ಸೂರ್ಯ, ಮೋಡ, ಗಾಳಿ, ಕಡಲು, ಆ ಸ್ಥಾನವನ್ನು ತುಂಬಿದೆ. ಜಗತ್ತಿನ ಪಂಚಭೂತಗಳೊಂದಿಗೆ ಹೊಂದಿದ ತಾದಾತ್ಮ್ಯವನ್ನು 'ಪ್ರೀತಿ' ಕವಿತೆಯಲ್ಲಿ ಕಾಣಬಹುದು. ಕಡಲಿನ ವಿಸ್ತಾರಕ್ಕೆ, ಆಕಾಶದ ಅಗಲಕ್ಕೆ ಹೋಲಿಸುವ ಪ್ರೀತಿ ಪ್ರಕೃತಿಯ ಮೂಲ ರೂಪವಾಗುತ್ತದೆ. ಹೂವಾಗಿ, ಹಣ್ಣಾಗಿ ಮತ್ತೆ ಪ್ರೀತಿಯನ್ನು ಹೆರುವ ಬೀಜವಾಗುತ್ತದೆ. 'ಬೇಡ' ಕವಿತೆಯಲ್ಲಿ ಕವಿ, ಪ್ರೀತಿಯ ಕಡಲೊಳಗೆ ಧುಮುಕಲು ಹೊರಟಾಗ, ಬಿಸಿಲುಗುದುರೆಯನ್ನೇರಿ ಹೋಗುವಾಗ ತಡೆಯಬೇಡಿರೆಂದು ನಿವೇದಿಸಿಕೊಳ್ಳುತ್ತಾರೆ.

ಕವಿ ಪ್ರಾಕೃತಿಕ ಪ್ರಪಂಚದಲ್ಲಿ 'ಹೊಳೆ ಮಗಳಾ'ಗಿದ್ದಾರೆ. ಜೀವಗಳ ನುಂಗದೆ ಜೀವದ ಚೈತನ್ಯ ಹರಿಸುವ ಆಶಯವನ್ನು ವ್ಯಕ್ತಪಡಿಸುತ್ತಾರೆ. 'ಕಾಗೆ ಮತ್ತು ಕೋಗಿಲೆ' ಕವಿತೆಯಲ್ಲಿ ಕವಿ ಕಾಗೆಯ ಹಂಚಿ ತಿನ್ನುವ ಗುಣವನ್ನು ಕೋಗಿಲೆಯು ಹಾಡುವ ಕೊರಳನ್ನು ಬಯಸುತ್ತಾರೆ. ತಾವು ಕಾವ್ಯ ಮಾರ್ಗದಲ್ಲಿ ಆಯ್ದುಕೊಂಡಿರುವ ಮಾರ್ಗವನ್ನು 'ವಿಮರ್ಶೆ' ಮತ್ತು 'ಸೋಲೇ ಇಲ್ಲ' ಕವಿತೆಯೂ ಚಾಲ್ತಿಯಲ್ಲಿರುವ ಬೇರೆ ಬೇರೆ ಸಾಹಿತ್ಯ ಮಾರ್ಗಗಳ ಕಣದಲ್ಲಿ ಇಲ್ಲವೆಂಬುದನ್ನು ಪರೋಕ್ಷವಾಗಿ ಮನಗಾಣಿಸುತ್ತದೆ. ವ್ಯಾವಹಾರಿಕ ಪ್ರಪಂಚದಿಂದ ದೂರವಿರುವ ಭಾವನಾತ್ಮಕತೆಯನ್ನು ಹೊಂದಿರುವ ನಿಲುವನ್ನು 'ಸಮಯವಿದೆಯೆ ಪಪ್ಪಾ' 'ಹುಡುಗಿ ಮತ್ತು ದಾಸವಾಳ' 'ದಿನಚರಿ' ಕವಿತೆಗಳು ಸಮರ್ಥಿಸುತ್ತವೆ. ಲಾಟರಿ ಮಾರುವ ಹುಡುಗರ ಕನಸುಗಳನ್ನು ತಿಳಿಸುವ 'ಪ್ರಾರ್ಥನೆ' ಮುಂತಾದ ಕವಿತೆಗಳು ಸಂವಾದ ರೂಪದಲ್ಲಿವೆ.

ಜಾತ್ರೆಯಲ್ಲಿ ಶಿವ 'ಮಳೆ', 'ಮಳೆ ಬರಲಿ', 'ಚಂದ್ರನನ್ನು ಕರೆಯಿರಿ ಭೂಮಿಗೆ', 'ಹಳ್ಳಿಯ ದಾರಿ', 'ಮಗು ಚಿತ್ರ ಬರೆಯಿತು', 'ಮೃತ್ಯು', 'ಯುದ್ಧ', 'ಪ್ರೇಮ ಮತ್ತು ದುಃಖ' ಮುಂತಾದ ಕವಿತೆಗಳು ಶಬ್ದಚಿತ್ರಗಳ ಗುಂಪಿಗೆ ಸೇರಿವೆ. ಕವಿತೆ ಕಟ್ಟಿಕೊಡುವ ಚಿತ್ರಗಳು ಅನುಭವದ ಪ್ರತೀಕಗಳಾಗಿ ಕಾಣಿಸಿಕೊಳ್ಳುತ್ತವೆ. ಹೊಸ ಅನುಭವವನ್ನು ಮನಸ್ಸಿನಲ್ಲಿ ಗಟ್ಟಿಗೊಳಿಸುತ್ತದೆ. ಜಾತ್ರೆಯಲ್ಲಿ ಶಿವ ಕವಿತೆಯಲ್ಲಿ ಕಾಣಿಸಿಕೊಳ್ಳುವ ಶಿವ, ಅಲೌಕಿಕ ಪ್ರಪಂಚವನ್ನು ತೋರುವ ಭವಿಯಾಗದೆ, ಲೌಕಿಕ ಪ್ರಪಂಚದಲ್ಲಿ ಹೊಟ್ಟೆ ತುಂಬಿಸಿಕೊಳ್ಳುವ ಜಂಗಮನಾಗಿ ಕಾಣಿಸಿಕೊಂಡಿದ್ದಾನೆ.

ಮೋಡದ ಮೈ ಬಣ್ಣ, ಮಿಂಚಿನ ನಗು
ಮುಡಿಗೆ ತಗಡಿನ ಚಂದ್ರನನು ಮುಡಿದಿದ್ದ
ತೋಳಿಗೆ ಕಣಗಿಲೆಯ ಹೂವು
ಕೊರಳಲ್ಲಿ ಪ್ಲಾಸ್ಟಿಕ್ ಹಾವು
ಹುಲಿ ಚರ್ಮದ ಚಿತ್ರವಿರುವ
ಮಾಸಿದ ಹಳದಿ ಬಣ್ಣದ ಅರ್ಧಲುಂಗಿ
ಹವಾಯಿ ಚಪ್ಪಲಿ ಧರಿಸಿದ್ದ (ಜಾತ್ರೆಯಲ್ಲಿ ಶಿವ, ಪುಟ–೩೯)

ಶಿವ, ಕವಿಯೊಂದಿಗೆ ಜಾತ್ರೆಯಲ್ಲಿ ಕಾಣಿಸಿಕೊಳ್ಳುತ್ತಾನೆ. ಶಿವನ ಚಲನ ವಲನಗಳೊಂದಿಗೆ, ಜಾತ್ರೆಯ ವಾತಾವರಣವನ್ನು ಕವಿತೆಗೆ ಪೂರಕವಾಗಿ ಬಳಸಿಕೊಳ್ಳಲಾಗಿದೆ. ಶಿವನನ್ನು ವರ್ಣಿಸುವ ಎಲ್ಲ ಕಲ್ಪನೆಗಳನ್ನು, ತಗಡಿನ ಚಂದ್ರನನ್ನು ಮುಡಿದ ಈ ಶಿವನೊಂದಿಗೆ ಕವಿ ಸಾಮಾನ್ಯೀಕರಿಸಿದ್ದಾರೆ. ಜಾತ್ರೆಯಲ್ಲಿ ಚೌಕಾಸಿ ಮಾಡಿಕೊಂಡ, ಭಿಕ್ಷೆ ಬೇಡಿ ಗಿಟ್ಟಿಸಿದ ಸಾಮಾನುಗಳೊಂದಿಗೆ ಹೆಂಡತಿ ಮಕ್ಕಳ ತಾಪತ್ರಯವನ್ನು ನಿವೇದಿಸುವ ಶಿವ ಕವಿಯ ಕಾವ್ಯದಲ್ಲಿ ಶಬ್ದ ಚಿತ್ರವಾಗಿದ್ದಾನೆ.

'ಮಗು ಚಿತ್ರ ಬರೆಯಿತು' ಕವಿತೆ ಮಗು ಬಿಡಿಸಿದ ಚಿತ್ರದ ದಾರಿಯಲ್ಲಿ ನಡೆದು ಹೋದ ಮಗು ಮತ್ತು ತಾಯಿಯ ವಿಷಾದ ಚಿತ್ರವನ್ನು ಮೂಡಿಸಿದೆ.

ಅವ್ವ....
ತಮ್ಮೊಂದಿಗೆ ಹೂ ಮೂಸಿ ನೋಡು
ಸಸಿಯಾಗಿದೆ ಮಾವು ಕಿತ್ತುಕೊಡು
ಝುಳಝುಳ ನದಿಯದೆ ಹಾಡು
ಸುಡುವುದಿಲ್ಲ ಈ ಸೂರ್ಯ ಮುಟ್ಟಿಬಿಡು (ಅದೇ, ಪುಟ–೧೧೬)

ಜೀವಂತ ಚೈತನ್ಯ ಪಡೆಯುತ್ತಾ ಹೋಗುವ ಚಿತ್ರದಲ್ಲಿ ಮಗು ಕಾಣೆಯಾಗುತ್ತದೆ. ಕಳೆದುಹೋದ ಮಗುವಿನ ದಾರಿ ಕಾದ ತಾಯಿಯೂ ಮಗುವಿನ ದಾರಿಯನ್ನು ಹಿಡಿಯುವುದರೊಂದಿಗೆ ಕವಿತೆ ಮುಗಿಯುತ್ತದೆ.

'ಕೋವಿಯಲಿ', 'ಯುದ್ಧ', 'ಧಿಕ್ಕರಿಸುತ್ತೇನೆ' ಕವಿತೆಗಳು ಬಂದೂಕಿನ ಬದುಕನ್ನು ವಿರೋಧಿಸಿ ಬುದ್ಧನ ಶಾಂತಿಯನ್ನು, ಪ್ರೇಮವನ್ನು ಬಯಸುತ್ತವೆ.

'ಕೊಡು ನಿನ್ನ ದುಃಖ' ಮತ್ತು 'ಸ್ಥಿತಿ' ಕವಿತೆಗಳು ಜಗತ್ತಿನ ದುಃಖ ಕ್ರೌರ್ಯವನ್ನು ಮರೆಸುವ ಹಾದಿಯಲ್ಲಿ ತಮ್ಮ ತಮ್ಮ ಹೊಣೆಯನ್ನು ಹೊರಲು ಕರೆನೀಡಿವೆ.

ಪ್ರಕೃತಿ ಎಲ್ಲ ಕವಿಗಳಿಗೆ ಚೈತನ್ಯ ತುಂಬುವ ಪ್ರತೀಕ ಪ್ರಕೃತಿಯಲ್ಲಿನ ವಸ್ತುಗಳನ್ನು ಕಾವ್ಯದಲ್ಲಿ ಬಳಸಿಕೊಳ್ಳುವ ವಿಧಾನ ಮಾತ್ರ ಭಿನ್ನವಾಗಿರುತ್ತದೆ. ಸ.ಉಷ, ಚ.ಸರ್ವಮಂಗಳ, ಪ್ರತಿಭಾ ನಂದಕುಮಾರ್, ಮಮತಾ ಜಿ.ಸಾಗರ ಮುಂತಾದ ಮಹಿಳಾ ಕವಿಗಳು ಪ್ರಾಕೃತಿಕ ಚರಾಚರ ವಸ್ತುಗಳನ್ನು ತಮ್ಮ

ಕಾವ್ಯದ ಸಂಕೇತಗಳಾಗಿ ಬಳಸಿದ್ದಾರೆ. ಆದರೆ ಈ ವಿಧಾನದಲ್ಲಿ ಪ್ರತ್ಯೇಕವಾಗಿ ಸವಿತಾ ನಾಗಭೂಷಣ ರವರನ್ನು ಅಧ್ಯಯನ ಮಾಡಲು ಕಾರಣವಿದೆ. ಪ್ರಕೃತಿಯೊಂದಿಗಿನ ಸಂಬಂಧಗಳನ್ನು ವ್ಯಕ್ತಿ ಬದುಕಿನ ಸಂಬಂಧಗಳಿಗೆ ವಿಸ್ತರಿಸುವ ಸವಿತಾರವರ ಕಾವ್ಯ ಯಾವ ಸಾಹಿತ್ಯಿಕ ಪಂಥಗಳಿಗೂ ಅಂಟಿಕೊಂಡಿಲ್ಲ. ಹೊಸ ಬದಲಾವಣೆಗಳ ಮಧ್ಯೆ ಸವಿತಾವರ ಕಾವ್ಯವು ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳುತ್ತಿರುವುದನ್ನು ಪ್ರಸ್ತಾಪಿಸಲು ಆಯ್ದುಕೊಳ್ಳಲಾಗಿದೆ.

### ೫.೬ ನಿರಚನವಾದಿ ಮಾದರಿ

ನಿರಚನಾವಾದಿ (Deconstruction) ಪರಿಕಲ್ಪನೆಯನ್ನು ಫ್ರಾನ್ಸ್‌ನ ಚಿಂತಕ ಜಾಕ್ವೆಸ್ ಡೆರೀಡಾ ಮಂಡಿಸಿದ್ದಾನೆ. 'ಆಫ್ ಗ್ರಮಟಾಲಜಿ', 'ರೈಟಿಂಗ್ ಅಂಡ್ ಢಿಪರೆನ್ಸ್', 'ಸ್ಪೀಚ್ ಅಂಡ್ ಫೆನಾಮಿನಾ' ಎಂಬ ಕೃತಿಗಳಲ್ಲಿ ನಿರಚನಾವಾದದ ತತ್ವಗಳನ್ನು ಡೆರಿಡಾ ವಿವರಿಸಿದ್ದಾನೆ. ಭಾಷಿಕ ಸಂಜ್ಞೆಯನ್ನು ಕುರಿತಾದ ಫರ್ಡಿನಾಂಡ್ ಡಿ ಸಸ್ಯೂರ್‌ನ ಪರಿಕಲ್ಪನೆಗಳನ್ನು ಬಳಸಿಕೊಂಡು 'ರಾಚನಿಕ ಸಿದ್ಧಾಂತ'ವನ್ನು ಡೆರಿಡಾ ಖಂಡಿಸಿದ್ದಾನೆ. ನಾವು ಮಾತನಾಡುವ ಅಥವಾ ಬರವಣಿಗೆಯ ಭಾಷೆಯಲ್ಲಿ 'ಸೂಚಕ'ಗಳಿರುತ್ತವೆ. ಪದಗಳು 'ಸೂಚಕ'ಗಳಾದರೆ (ಸಿಗ್ನಿಫೈಯರ್) ಆ ಸೂಚಕಗಳು ಏನನ್ನು ಸೂಚಿಸುತ್ತವೋ ಅವು 'ಸೂಚಿತ' (ಸಿಗ್ನಿಫೈಡ್)ಗಳಾಗಿವೆ. ಸಸ್ಯೂರ್ ಭಾಷಾರಚನೆಯ ಬಗ್ಗೆ ಕೊಡುವ ಒಂದು ಮುಖ್ಯ ಒಳನೋಟವೆಂದರೆ, ಈ ರಚನೆ ಕೇವಲ ಭಿನ್ನತೆಗಳನ್ನು ಆಧರಿಸಿದೆ ಎಂಬುದು. ಶಾಬ್ದಿಕ ನೆಲೆಯಲ್ಲಿ 'ಅ' ಎಂಬ ಸ್ವರ ಸಿದ್ಧವಾಗುವುದು ಅದು 'ಆ' ಅಲ್ಲ 'ಬ' ಅಲ್ಲ ಎಂಬುದರಿಂದ. ಈ ಚಿಂತನೆಯನ್ನು ಡೆರಿಡಾ ಮುಂದುವರೆಸುತ್ತಾನೆ. ಭಾಷೆಯ ಪ್ರತಿಯೊಂದು ಘಟಕವೂ ಅಸ್ತಿತ್ವಕ್ಕೆ ಬರುವುದು ಅದು ಇತರ ಘಟಕಗಳಿಂದ ಭಿನ್ನವಾಗಿರುವುದರಿಂದ ಮಾತ್ರ, ಪದದ ಅರ್ಥವನ್ನು ಗ್ರಹಿಸಲಾಗುತ್ತದೆ. ಒಂದು ಸೂಚಕದ ಅರ್ಥವೆಂದರೆ, ಮತ್ತೊಂದು ಸೂಚಕವೇ ಹೊರತು ಅದೇ ಅಂತಿಮವಲ್ಲ. 'ಅರ್ಥ'ವನ್ನು ಕೊಡುವ ಭಾಷಿಕ ಸಂಜ್ಞೆಯಾಗಲೀ, 'ಅಂತಿಮ ಸಂಜ್ಞೆ'ಯಾಗಲೀ ಸಾಧ್ಯವಿಲ್ಲ. ಸೂಚಕಗಳಂತೆ ಸೂಚಿತಗಳೂ ಪರಸ್ಪರ ಭಿನ್ನತೆಗಳನ್ನು ಆಧರಿಸಿವೆ. 'ಮನೆ'ಯೆಂಬುದರ ಅರ್ಥ ಅದು ಶಾಲೆಯಲ್ಲ, ರಸ್ತೆಯಲ್ಲ, ಮರವಲ್ಲ ಎಂಬ ವ್ಯತ್ಯಾಸವನ್ನು ಅವಲಂಬಿಸಿವೆ. 'ಅಂತಿಮ ಸತ್ಯ'ವನ್ನು ನಿರ್ದೇಶಿಸುವ ಸೂಚಕವೂ ಇಲ್ಲ. ಸೂಚಿತವೂ ಇಲ್ಲ. ಇರುವುದು ಕೇವಲ ಸೂಚನಾ ಪ್ರಕ್ರಿಯೆಯ ಅನಂತಲೀಲೆ.

'Differance' ಎಂಬ ಸ್ವಯಂ ಕಲ್ಪಿತ ಶಬ್ದವನ್ನು ಡೆರಿಡಾ ಉಪಯೋಗಿಸುತ್ತಾನೆ. 'Differ' ಎಂಬ ಕ್ರಿಯಾರೂಪವು 'ಭಿನ್ನವಾಗಿರುವುದು' ಮತ್ತು 'ಮುಂದೂಡುವುದು' ಎಂಬ ಎರಡು ಅರ್ಥಗಳನ್ನು ಹೊಂದಿದೆ. ಒಂದು ಕೃತಿಯನ್ನು ಅರ್ಥೈಸುವಾಗ, ಅದಕ್ಕೆ ಖಚಿತ/ನಿರ್ದಿಷ್ಟ ಅರ್ಥ ಲಭ್ಯವಾಗದೆ, ಅದಕ್ಕಿರುವ 'ಮೂಲ ಅರ್ಥ'ವನ್ನು ಮುಂದೂಡುತ್ತಾ ಹೋಗುತ್ತದೆ. ಭಿನ್ನತೆ ಮತ್ತು ಮಂದೂಡುವಿಕೆಯ ಸಂಯುಕ್ತ ಪದವಾಗಿ 'Differance' ಪದ ಪ್ರಯೋಗಗೊಂಡಿದೆ. ಭಾಷೆಯ ಅರ್ಥೈಸುವಿಕೆಯಲ್ಲಿ 'Differace' ಭಿನ್ನತೆಗಳ ವಿನ್ಯಾಸದ 'ಆಟ'ವಾಗಿದೆ.

ಸಾಂಪ್ರದಾಯಿಕ ಭಾಷಾ ಬಳಕೆಯ ಚೌಕಟ್ಟನ್ನು ಮುರಿದು, ಹೊಸ ಪದ ಅರ್ಥಗಳನ್ನು ಸೃಷ್ಟಿಸುವ ಮೂಲಕ ಕಾವ್ಯದ ಹರಿವನ್ನು ವಿಸ್ತರಿಸಲು ಮಮತಾ ಜಿ ಸಾಗರವರು ಮುಂದಾಗಿದ್ದಾರೆ. ಇವರು ಭಾಷಾತಜ್ಞರಾದ ಫರ್ಡಿನಾಂಡ್ ಸಸ್ಯೂರ್ ಮತ್ತು ಡೆರಿಡಾನ ಭಾಷಾವಿಜ್ಞಾನ ತತ್ವಗಳಿಂದ ಪ್ರಭಾವಿತರಾಗಿರುವುದು ಕಾವ್ಯದ ಹಿನ್ನೆಲೆಯಲ್ಲಿ ಗೋಚರಿಸುತ್ತದೆ. ಒಂದು ಶಬ್ದ ಒಂದು ಖಚಿತವಾದ ವಸ್ತುವನ್ನು ನಿರ್ದೇಶಿಸುವುದಿಲ್ಲ. ಒಂದು ಶಬ್ದ ಹಾಗೂ ಅದು ಸೂಚಿಸುವ ವಸ್ತುಗಳ ನಡುವೆ ಯಾವುದೇ ಬಗೆಯ ತಾರ್ಕಿಕ ಸಂಬಂಧವಿರುವುದಿಲ್ಲ. ಅವುಗಳಿಗಿರುವ ಪರಸ್ಪರ ಸಂಬಂಧ ಯಾದೃಚ್ಛಿಕವಾದುದು ಎಂಬುದು ಸಸ್ಯೂರ್‌ನ ಸಿದ್ಧಾಂತವಾಗಿದೆ. ಭಾಷೆಯೊಂದಿಗಿನ ನಿರ್ದಿಷ್ಟ ಸಂಬಂಧಗಳು ಕಳಚಿದಾಗ, ಹೊಸ ಅರ್ಥಗಳು ಹುಟ್ಟಿಕೊಳ್ಳತೊಡಗಿದವು. ಇಂತಹ ಭಾಷಾ ತತ್ವಗಳನ್ನು ಮಮತಾರವರು ತಮ್ಮ ಕಾವ್ಯದಲ್ಲಿ ಪ್ರಯೋಗಿಸಿದ್ದಾರೆ.

'ಶೈಲಿ ಶಾಸ್ತ್ರ' ಕೃತಿಯಲ್ಲಿ ಕೆ.ವಿ.ನಾರಾಯಣರು ಪ್ರಸ್ತಾಪಿಸುವ ಮಾರ್ಗಾಂತರಗಳ ಹಿನ್ನೆಲೆಯಲ್ಲಿಯೂ ಮಮತಾರವರ ಕವನಗಳನ್ನು ಚರ್ಚಿಸಬಹುದಾಗಿದೆ. ಪ್ರತಿನಿತ್ಯ ಬಳಸುವ ಭಾಷೆಯ ಸಹಜ ರಚನೆಗಳ ಉಲ್ಲಂಘನೆಗಳನ್ನು ಮಾರ್ಗಾಂತರವೆಂದು ಗುರುತಿಸಿರುವರು. ಕವಿತೆಯ ಭಾಷೆ, ಭಾಷೆಯ ಇತರ ಭಾಷೆಗಳಿಗಿಂತ ಭಿನ್ನವಾಗಿ ಕಾಣುವುದು ಅದು ನಮ್ಮ ಕಣ್ಣಿಗೆ ಬೀಳುವ ಹಂತದಿಂದಲೇ ಮೊದಲಾಗುತ್ತವೆ. ಸಾಲುಗಳನ್ನು ಕೆಲವೊಮ್ಮೆ ನಿಯತವಾಗಿ ಕೆಲವೊಮ್ಮೆ ಅನಿಯತವಾಗಿ ಒಡೆಯುವ ಮೂಲಕ ಕವಿತೆಯ ಭಾಷೆ 'ಕಾಣದ' ಹಾಗೆಯೇ ಮಾರ್ಗಾಂತರವನ್ನು ಸಾಧಿಸುತ್ತದೆ. .......ಕಣ್ಣಿಗೆ ಕಾಣುವ ಈ ಮಾರ್ಗಾಂತರವನ್ನು 'ಧೃಗ್ ಮಾರ್ಗಾಂತರ' ಎಂದು ಕರೆಯಲಾಗಿದೆ. ಮಮತಾರವರು 'ಧೃಗ್ ಮಾರ್ಗಾಂತರ'ದ ಬಳಕೆಯಲ್ಲಿ ದೃಶ್ಯಚಿತ್ರಗಳನ್ನು ಬಳಸಿಕೊಂಡಿದ್ದಾರೆ. ಚಿತ್ರಗಳು ಕವಿತೆಗೆ ಪೂರಕವಾಗಿ ಮಾತ್ರ ಬಳಕೆಯಾಗದೆ, ಪದಗಳು ಚಿತ್ರಗಳೆರಡರ ಸಮ್ಮಿಶ್ರಣದಿಂದ ಹೊಸದೊಂದು ಅರ್ಥವನ್ನು ಕಾವ್ಯದಿಂದ ಹೊರಹೊಮ್ಮುವಂತೆ ಮಾಡಲಾಗಿದೆ. ಕೆಲವು ಕವಿತೆಗಳ ಉದಾಹರಣೆಯ ಮೂಲಕ ಇದನ್ನು ವಿಸ್ತರಿಸಬಹುದಾಗಿದೆ.

ಕಪ್ಪು ಕಾಫಿಯನ್ನು ಸಂಗ್ರಹಿಸಿರುವ ಜಗ್‌ನಿಂದ ಒಂದು ಕಪ್ಪಿಗೆ ಅದನ್ನು ಸುರಿಯುವ ಚಿತ್ರದೊಂದಿಗೆ "ಕವಿತೆ ಕತ್ತು ಕಾಫಿಯ ಹಾಗೆ" ಎಂಬ ಪದಗಳನ್ನು ಸಂಯೋಜಿಸಲಾಗಿದೆ. ಕವಿತೆಯ ಇರವು ಸುರಿಯುತ್ತಿರುವ ಜಗ್‌ನಲ್ಲಿದೆಯೋ? ಕಪ್‌ನಲ್ಲಿದೆಯೋ? ಕಪ್ಪು ಬಣ್ಣದಲ್ಲಿದೆಯೋ? ಸುರಿಯುತ್ತಿರುವ ಪಾನೀಯದಲ್ಲಿದೆಯೋ? ಎಂಬ ವಿವಿಧ ಆಲೋಚನೆಗೆ ಎಡೆ ಮಾಡಿಕೊಡುತ್ತದೆ. ಜತೆಗೆ ಕವಿತೆಯ ಪ್ರಶ್ನೆಯನ್ನು ಎತ್ತುತ್ತದೆ. ಕವಿತೆ ಅಡಗಿಕೊಂಡಿರುವುದು ಅಕ್ಷರಗಳಲ್ಲಿಯೆ, ಶಬ್ದಗಳಲ್ಲಿಯೆ, ಅರ್ಥಗಳಲ್ಲಿಯೆ, ಓದುಗರಲ್ಲಿಯೆ, ಮುದ್ರಿಸುವ ವಿಧಾನದಲ್ಲಿದೆಯೆ ಎಂಬ ಪ್ರಶ್ನೆಗೆ ಪ್ರಶ್ನೆಯೆ ಉತ್ತರವಾಗುತ್ತದೆ.

ಗಡಿಯಾರದಲ್ಲಿ ತಿರುಗುವ ಮುಳ್ಳುಗಳು ಕೊಡುವ ಸಮಯದ ಕಲ್ಪನೆಗೂ, ಡಿಜಿಟಲ್ ಗಡಿಯಾರದಲ್ಲಿ ಸಂಖ್ಯೆಗಳ ಮೂಲಕ ತೋರಿಸುವ ಕಲ್ಪನೆಗೂ ಇರುವ ವ್ಯತ್ಯಾಸವನ್ನು ಗಮನಿಸಿದ್ದಾರೆ. ಪಂಚಭೂತಗಳ ಸಂಕೇತಗಳಾಗಿರುವ ನೀರನ್ನು- ಬಿಸಿಲೆರಿ ಬಾಟಲಿಗೆ; ಗಾಳಿಯನ್ನು ತಿರುಗುವ ಫ್ಯಾನಿಗೆ; ಅಗ್ನಿಯನ್ನು

ಹೀಟರ್‌ಗೆ; ಭೂಮಿಯನ್ನು ಗ್ಲೋಬ್‌ಗೆ; ಆಕಾಶವನ್ನು ಕಂಪ್ಯೂಟರ್‌ಗೆ ಹೋಲಿಸುವ ಮೂಲಕ ತಾಂತ್ರಿಕ ಪಂಚಭೂತಗಳನ್ನು ಯಾಂತ್ರಿಕ ಜೀವನದ ಸಂಕೇತವಾಗಿ ಉಪಯೋಗಿಸಲಾಗಿದೆ.

ದೃಶ್ಯಚಿತ್ರ ಸಂಯೋಜನೆಯಾಚೆಯ ಕವಿತೆಗಳೇ, ತಮ್ಮ ಅರ್ಥಸಾಧ್ಯತೆಯನ್ನು ಹಿಗ್ಗಿಸಿವೆ. 'ಪಾಠ-ಒಂದು, ಎರಡು... ಮೂರು...', 'ರಂಗೋಲಿ' 'ಸಸ್ಯೂರ್‌ನಿಗಾಗಿ ಬರೆದ ಕಿರುಗೀತೆ ಎಂದಲ್ಲ', ಪುಟ-೫೪ರ ಕವಿತೆಗಳು ಭಾಷೆಯ ಪಲ್ಲಟಗಳನ್ನು ಹೇಳುವ ಮೂಲಕ, ಹೆಣ್ಣನ್ನು ನಿರ್ವಚಿಸುವ ಬಗೆಯನ್ನು ಆಲೋಚಿಸುತ್ತವೆ.

ಹುಡುಗಿಯರಿಗೆ
ಸುಮ್ಮನೆ ಅವಳು ಎಂದು
ಏನೇನೋ ಬೇಕಾದ್ದು ಹೇಳದೆ
ಸರಿಯಾಗಿ ಬೇರೇನೋ ಕರೆದಿದ್ದರೆ
ಹುಡುಗರು,
ಎಂದೂ ಹೀಗೆ...
ಈಗಿರುವ ಹಾಗೆ ಇರುತ್ತಿರಲಿಲ್ಲ (ನದಿಯ ನೀರಿನ ತೇವ, ಪುಟ-೫೧)

ವ್ಯವಸ್ಥೆಯಲ್ಲಿ ಹೆಣ್ಣುಗಂಡಿನ ಲಿಂಗಭೇದದ ತಾರತಮ್ಯವನ್ನು ಹುಟ್ಟುಹಾಕಲು ಇರುವ ಕಾರಣವನ್ನು ಶೋಧಿಸಿದ್ದಾರೆ. ಜತೆಗೆ ಹೆಣ್ಣನ್ನು ಹೊಸದಾಗಿ ವ್ಯಾಖ್ಯಾನಿಸುವ ಆಲೋಚನೆಗೂ ಹಚ್ಚಿದ್ದಾರೆ. 'ಖಾಲಿ ಹಾಳೆಯ ಮೇಲೆ ಹರಿದಿತ್ತು ನದಿ' ಕವಿತೆ, ಕಾವ್ಯ ಪಡೆಯುವ ಚಲನಶೀಲತೆಯನ್ನು ಸಂಕೇತಿಸುತ್ತದೆ. ಹಾಳೆಯ ಮೇಲೆ ಹರಿವ ನದಿ, ನದಿಯೊಳಗೆ ಈಜುವ ಮುಳುಗುವ ಕವಿ, ನದಿಯ ಹಾಡನ್ನು ನುಂಗುವ ಹಾಳೆಯ ಕಲ್ಪನೆಯಲ್ಲಿ ತೇಲಿ ಹೋಗುವ ನಾವು ಹೊಸ ಅನುಭವ ಎದೆಗೆ ತಾಗುತ್ತದೆ.

'ಸಿಗರೇಟು ಮತ್ತು ನೀನು', 'ಕವಿತೆಯೆಂದರೆ', 'ನಲ್ಲರ ಪ್ರೀತಿ' ಕವಿತೆಗಳಲ್ಲಿ 'ಇದು' ಗಂಡಸನ್ನು, 'ಅದು' ಹೆಂಗಸನ್ನು ಸಂಕೇತಿಸುತ್ತದೆ ಎಂಬ ಸಂಕೇತಗಳನ್ನು ತಿರುಗುಮುರುಗಾಗಿಸುವ ತಂತ್ರವನ್ನು ಒಳಗೊಂಡಿವೆ.

ನಲ್ಲರ ಪ್ರೀತಿ ಹೂವಿನಂತೆ
ಆದರೆಸಳಷ್ಟೇ ಮೃದುವಾಗಿ ಆಕರ್ಷಿಸುತ್ತದೆ
ಪರಿಮಳ ಮತ್ತೇರಿಸುತ್ತದೆ
ಹೆಚ್ಚು ಹೊತ್ತಾದಂತೆ ಬಣ್ಣ ಬದಲಾಗುತ್ತದೆ.
ಇದನ್ನು
ಹೂವಿನಂತೆ ಮುಡಿದು ಮರೆಯಬೇಕು
ಮುದುಡಿದಾಗ ಎತ್ತಿ ಅತ್ತ ಬಿಸಾಡಬೇಕು (ಕಾಡ ನವಿಲಿನ ಹೆಜ್ಜೆ, ಪುಟ-೩೭)

ಲೋಕರೂಢಿಯಲ್ಲಿ ಹೆಣ್ಣಿನ ಮನಸ್ಸನ್ನು, ಪ್ರೀತಿಯನ್ನು ಹೂವಿಗೆ ಹೋಲಿಸಲಾಗುತ್ತದೆ. ಅಂತಹ

ರೂಢಿಗತ ಸಂಕೇತಗಳನ್ನು ಒಡೆದು, ಅದೇ ಹೂವಿನ ಬದಲಾದ ಬಣ್ಣವನ್ನು, ಬಾಡುವ ಗುಣವನ್ನು ಪ್ರಿಯತಮನ ಬದಲಾಗುವ ಗುಣಕ್ಕೆ ಹೋಲಿಸಲಾಗಿದೆ. ನದಿ ಇವರ ಕಾವ್ಯಗಳಲ್ಲಿ ಆಗಾಗ ಕಾಣಿಸಿಕೊಳ್ಳುತ್ತದೆ. ನದಿ ಹಾಳೆಯ ಮೇಲೆ ಹರಿಯುತ್ತದೆ. ಬೊಗಸೆಯಲ್ಲಿ ನಿಲ್ಲುತ್ತದೆ.

ಆಕಾಶ ಮೋಡ ತಣ್ಣಗಿನ ಸೂರ್ಯ
ನನ್ನ ಬೊಗಸೆಯಲ್ಲೊಂದು ನದಿ.
...
ಬೊಗಸೆ ನೀರು ಕುಡಿದರೆ, ಕುಡಿದಂತೆ
ನದಿ, ಆಕಾಶ, ಮೋಡ, ಸೂರ್ಯರನ್ನು
ಅಡಕ ಯಾರು ಯಾರೊಳಗೆ (ಹೀಗೆ ಹಾಳೆಯ ಮೇಲೆ ಹಾಡು, ಪುಟ–೧೫)

ಕಣ್ಣಿಗೆ ಕಾಣುವ ಕೈಗೆ ಸಿಗದ ನಿಸರ್ಗದ ಪ್ರತಿರೂಪಗಳನ್ನು ತಮ್ಮೊಳಗೆ ಆಹ್ವಾನಿಸುವ, ಪ್ರೀತಿಸುವ ಮನೋಭಾವ ವ್ಯಕ್ತವಾಗುತ್ತದೆ. 'ಹಗಲು ನುಂಗುವ ಚಂಡಿ', 'ಮಳೆ', 'ಮತ್ತೆ ಮಳೆ', 'ಲಹರಿ' ಮುಂತಾದ ಕವಿತೆಗಳು ನಿಸರ್ಗ ಮತ್ತು ಕವಿಗಿರುವ ಗಾಢ ಸಂಬಂಧವನ್ನು, ಬದುಕಿನ ಸಂಕೀರ್ಣತೆಯನ್ನು ಜತೆಜತೆಯಾಗಿ ಮನಗಾಣಿಸುತ್ತಾ ಹೋಗುತ್ತದೆ. 'ಕನಸುಗಳು' ಕವಿತೆ–

ನಾವು ಮಲಗುವುದು ಹಾಸಿಗೆಯ ಮೇಲಲ್ಲಿ
ಕನಸುಗಳ ಮೇಲೆ
ನಿದ್ದೆಯಿಂದೇಳುವುದು ಕನಸ ಕೊಡವಿಕೊಂಡು (ಅದೇ, ಪುಟ–೧೬)

ಕಾವ್ಯದ ಹಳೆಯ ಜಾಡನ್ನು ಬದಲಿಸಿ, ಹೊಸ ಸಾಧ್ಯತೆಯ ನೋಟಗಳನ್ನು ಮಮತಾರವರ ಕಾವ್ಯದ ಮೂಲಕ ಗ್ರಹಿಸಬಹುದಾಗಿದೆ.

ಮಹಿಳೆಯರ ಒಟ್ಟು ಕಾವ್ಯವನ್ನು ಗಮನಿಸಿದಾಗ, ಆಯಾ ಕಾಲಘಟ್ಟದಲ್ಲಿ ನಡೆದ ಸಾಮಾಜಿಕ ಸಂಗತಿಗಳಿಗೆ ಸ್ಪಂದಿಸುವ, ಪ್ರತಿಕ್ರಿಯಿಸುವ ಧೋರಣೆಗಳು ಕಾಣಿಸಿಕೊಂಡಿವೆ. ಹೀಗೆ ತಮ್ಮ ಚಿಂತನೆಗಳಿಗೆ ಕಾವ್ಯ ರೂಪ ನೀಡುವಾಗ ಅನುಸರಿಸಿದ ನಿರೂಪಣಾ ತಂತ್ರಗಳು ಭಿನ್ನ ರೂಪವನ್ನು ಪಡೆದಿವೆ. ಮಹಿಳಾ ಪರಂಪರೆಯನ್ನು ಶೋಧಿಸುವುದು ಕೆಲವರಿಗೆ ಮುಖ್ಯವಾಗಿದೆ. ಮತ್ತೆ ಕೆಲವರಿಗೆ ವಾಸ್ತವ ಸಂಗತಿಗಳನ್ನು ಪ್ರತಿಮಾತ್ಮಕಗೊಳಿಸಿ ಓದುಗರ ಮುಂದಿಡುವ ಉದ್ದೇಶ ಮುಖ್ಯವಾಗಿದೆ. ಅಸ್ತಿತ್ವದ ಪ್ರಶ್ನೆ, ಅಂತರಂಗದ ಅನಾವಣ, ಮುಕ್ತ ಬದುಕಿನ ಹಂಬಲ ಎಲ್ಲ ಕವಿಗಳ ಕಾವ್ಯದ ಸ್ಥಾಯಿಭಾವವಾಗಿದೆ.

# ಅಧ್ಯಾಯ ಆರು

# ಕತೆಯ ಅಭಿವ್ಯಕ್ತಿ

## ೬.೧ ಪ್ರವೇಶ

ಪ್ರಾರಂಭದಲ್ಲಿ ಬರೆಯುತ್ತಿದ್ದ ಕತೆಗಾರರ ಕತೆಗಳನ್ನು ಮತ್ತು ಇಂದಿಗೂ ಬರೆಯುತ್ತಿರುವ ಪ್ರಾತಿನಿಧಿಕ ಕತೆಗಾರರ ಕತೆಗಳನ್ನು ಅಧ್ಯಯನ ಮಾಡಿ, ಕೆಲವು ಸಾಮಾನ್ಯವಾಗಿ ಕಂಡು ಬರುವ ತಾತ್ವಿಕ ಮಾದರಿಗಳನ್ನು ಗುರುತಿಸಿಕೊಳ್ಳಲಾಗಿದೆ. ನಿರೂಪಣಾ ಕ್ರಮಗಳನ್ನು ಅನುಸರಿಸಿದ ಮಾದರಿಗಳನ್ನು ಮತ್ತು ಕೆಲವು ತತ್ವ-ವಾದಗಳನ್ನು ಅನುಸರಿಸಿದ ಮಾದರಿಗಳನ್ನು ಕತೆಗಳ ಅಭಿವ್ಯಕ್ತಿಯಲ್ಲಿ ಗುರುತಿಸಲಾಗಿದೆ.

ಕತೆಗಾರರು ಆಯ್ದುಕೊಂಡ ವಸ್ತು ಎಷ್ಟು ಮುಖ್ಯವಾಗಿರುತ್ತದೋ, ಆ ವಸ್ತುವನ್ನು ಮಂಡಿಸುವಾಗ ಭಾಷೆ, ಶೈಲಿ, ಆಶಯ, ನಿರೂಪಣಾ ತಂತ್ರಗಳೂ ಮುಖ್ಯವಾಗಿರುತ್ತವೆ. ಕತೆಗಾರರೇ ನೇರವಾಗಿ ಕತೆಯನ್ನು ಮಂಡಿಸುವ 'ವೃತ್ತಾಂತ' ವಿಧಾನವನ್ನು ಹೆಚ್ಚು ಕತೆಗಾರರು ಅನುಸರಿಸುತ್ತಾರೆ. ಆದರೆ, ಪ್ರಾರಂಭದ ಕತೆಗಾರರ ಮುಖ್ಯ ನಿರೂಪಣಾ ಕ್ರಮವಾಗಿರುವುದನ್ನು ಈ ಅಧ್ಯಾಯದಲ್ಲಿ ಗುರುತಿಸಲಾಗಿದೆ. ಸಂಪರ್ಕ ಮಾಧ್ಯಮವಾದ ಪತ್ರ ಮತ್ತು ದಿನಚರಿನ್ನು ವಿಶಿಷ್ಟ ಶೈಲಿಯ ನಿರೂಪಣಾ ಕ್ರಮವಾಗಿ ಬಳಸಿಕೊಂಡ ಕೊಡಗಿನ ಗೌರಮ್ಮನವರ ಕತೆಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ವಿರಳವಾಗಿ ಬಳಕೆಯಾಗಿರುವ ಸರ್ವಸಾಕ್ಷಿ ಪ್ರಜ್ಞಾ ಮಾದರಿಯನ್ನು ಎಚ್.ಎಸ್.ಕಾತ್ಯಾಯಿನಿಯವರ ಕತೆಗಳಲ್ಲಿ ಶೋಧಿಸಲಾಗಿದೆ.

ಪುರಾಣ ಪಾತ್ರಗಳನ್ನು ಕೇಂದ್ರದಲ್ಲಿಟ್ಟುಕೊಂಡು, ಹೆಣ್ಣಿನ ಬದುಕನ್ನು ಶೋಧಿಸುವ ಕಾರ್ಯವನ್ನು ಹಲವು ಕತೆಗಾರರು ಮಾಡಿದ್ದಾರೆ. ಶೋಷಣೆ, ಅನ್ಯಾಯಗಳನ್ನು ಬಯಲಿಗೆಳಯುತ್ತಲೇ, ಪುರಾಣ ಪಾತ್ರದ ಹೆಣ್ಣುಗಳು ಬದುಕನ್ನು ಆತ್ಮವಿಶ್ವಾಸದಿಂದ ಎದುರಿಸಿದ, ಪ್ರತಿಭಟಿಸಿದ ಮಾರ್ಗಗಳತ್ತ ಹೆಚ್ಚು ಬೆಳಕು ಚೆಲ್ಲಲಾಗಿರುವುದನ್ನು ಗುರುತಿಸಲಾಗಿದೆ.

ತ್ರಿವೇಣಿಯವರು ತಮ್ಮ ಕತೆಗಳಲ್ಲಿ ಮಕ್ಕಳ ಮನಸ್ಸನ್ನು ಮನಃಶಾಸ್ತ್ರೀಯವಾಗಿ ವಿಶ್ಲೇಷಿಸಿರುವುದನ್ನು ಚರ್ಚಿಸಲಾಗಿದೆ. ಅಸ್ತಿತ್ವದ ಪ್ರಶ್ನೆಯನ್ನು ನಿಭಾಯಿಸುವಾಗ ಹಲವು ಕತೆಗಾರರು, ಸ್ವಗತ ಮಾದರಿಯನ್ನು, ಪ್ರತಿಮಾತ್ಮಕ ಮಾದರಿಯನ್ನು ಅಳವಡಿಸಿಕೊಂಡಿದ್ದಾರೆ. ವೈದೇಹಿ ಮತ್ತು ಬಾನು ಮುಷ್ತಾಕ್‌ರವರ ಕತೆಗಳನ್ನು ವಾಸ್ತವವಾದಿ ಮಾದರಿಯಲ್ಲಿಟ್ಟು ವಿಶ್ಲೇಷಣೆಗೊಳಪಡಿಸಲಾಗಿದೆ. ಕತೆಗಳ ಅಭಿವ್ಯಕ್ತಿಯಲ್ಲಿ ಬಳಕೆಯಾಗಿರುವ ಭಾಷೆ, ಶೈಲಿ, ನಿರೂಪಣಾ ತಂತ್ರಗಳನ್ನು ಸಾಂದರ್ಭಿಕವಾಗಿ ವಿವರಿಸಿಕೊಳ್ಳಲಾಗಿದೆ.

## ೬.೨ ವೃತ್ತಾಂತ ಮಾದರಿ

ಸಾಮಾನ್ಯ ಅರ್ಥದಲ್ಲಿ ವೃತ್ತಾಂತ ಎಂದರೆ, ಘಟಿಸಿದ ಸಂಗತಿಗಳನ್ನು ವರದಿ ಮಾಡುವುದಾಗಿದೆ. ಕತೆಯ ನಿರೂಪಣಾ ತಂತ್ರಕ್ಕೆ ಸಂಬಂಧಿಸಿದಂತೆ, ವೃತ್ತಾಂತ ಮಾದರಿ ಎಂದರೆ, ಕತೆಯಲ್ಲಿ ಸಂಭವಿಸಿದ/ ಸಂಭವಿಸುವ ಘಟನೆಗಳನ್ನು ಸ್ವತಃ ಕತೆಗಾರರೇ ನೇರವಾಗಿ ಮಂಡಿಸುವ ವಿಧಾನವಾಗಿದೆ. ಒಂದು ಸಾಂದರ್ಭಿಕ ಘಟನೆ, ಪಾತ್ರಗಳು, ಸಂಭಾಷಣೆ, ವಿವರಣೆಯನ್ನು ಕತೆಯ ಆವರಣ ಹೊಂದಿರುತ್ತದೆ. ಕತೆಗಾರರೇ ನೇರವಾಗಿ ಕತೆಯನ್ನು ನಿರೂಪಿಸುವಾಗ, ಸೂಚಿತ ಲೇಖಕರನ್ನು ಆಶ್ರಯಿಸುವ ವಿಧಾನವನ್ನು ಅಳವಡಿಸಿಕೊಳ್ಳಬಹುದಾಗಿದೆ.

ಸಾಮಾನ್ಯವಾಗಿ ಎಲ್ಲ ಕತೆಗಾರರ ಕತೆಗಳಲ್ಲಿ, ಈ ವಿಧಾನ ಸಂದರ್ಭಕ್ಕೆ ತಕ್ಕಂತೆ ರೂಪಾಂತರಗೊಂಡು ಬಳಕೆಯಾಗುತ್ತಿರುತ್ತದೆ. ಕತೆಯ ಕೇಂದ್ರ ವಸ್ತುವನ್ನು ಓದುಗರಿಗೆ ಅರ್ಥ ಮಾಡಿಸುವ ಸಲುವಾಗಿ ಕತೆಗಾರರು ಹಿಂದಿನ–ಮುಂದಿನ ಘಟನೆಗಳ ಕೊಂಡಿಯನ್ನು ಜೋಡಿಸಲು ಮಧ್ಯ ಪ್ರವೇಶಿಸುತ್ತಾರೆ. ವೃತ್ತಾಂತ ಮಾದರಿಯ ಕೆಲವು ಲಕ್ಷಣಗಳನ್ನು ಕೆಳಗೆ ವಿವರಿಸಲಾಗಿದೆ.

- ವಸ್ತುವಿನ ಆಯ್ಕೆ, ಪಾತ್ರ, ಸನ್ನಿವೇಶಗಳ ಆವರಣವನ್ನು ನಿರ್ಮಿಸಿಕೊಳ್ಳಲು ಕತೆಗಾರರು ಹೆಚ್ಚು ಸ್ವಾತಂತ್ರ್ಯವುಳ್ಳವರಾಗಿರುತ್ತಾರೆ.
- ಈ ಮಾದರಿಯಲ್ಲಿ ಆಯಾ ಕಾಲದ ಸಾಮಾಜಿಕ ಸಮಸ್ಯೆಗಳನ್ನು ನಿಭಾಯಿಸಲಾಗಿರುತ್ತದೆ.
- ಕತೆಯ ಆಶಯಗಳ ಮೂಲಕ, ಕತೆಗಾರರು ತಾಳುವ ನಿಲುವುಗಳು ಪ್ರಾಮುಖ್ಯತೆ ಹೊಂದಿರುತ್ತವೆ.
- ಪಾತ್ರಗಳ ಸಂಬಂಧವನ್ನು, ಘಟನೆಯ ಸನ್ನಿವೇಶವನ್ನು ವಿವರಿಸಲಾಗಿರುತ್ತದೆ.
- ಕತೆಗೆ ಪೂರಕವಾಗಿ ಸಂಭಾಷಣೆ, ದೃಶ್ಯಗಳನ್ನು ನಿರ್ಮಿಸಿಕೊಳ್ಳಲಾಗಿರುತ್ತದೆ.
- ಓದುಗರ ಮಾರ್ಗದರ್ಶಿಯಾಗಿ ಕತೆಗಾರರು ಕಾರ್ಯನಿರ್ವಹಿಸುತ್ತಾರೆ.

ವೃತ್ತಾಂತ ಮಾದರಿಯಲ್ಲಿರುವ ಕತೆ/ಕಾದಂಬರಿಗಳಲ್ಲಿ ಹೇಳುವ ವಸ್ತುವಿಗೆ ಪ್ರಾಧ್ಯಾನತೆ ದೊರೆಯುತ್ತದೆ. ಕತೆಯನ್ನು ನಿರೂಪಿಸುವ ತಾಂತ್ರಿಕ ಸಂಗತಿಗಳು ಪೂರಕವಾಗಿ ನಿಲ್ಲುತ್ತವೆ. ಮೊದಲ ಪೀಳಿಗೆಯ ಮಹಿಳಾ ಕತೆಗಾರರಾದ ಶ್ಯಾಮಲಾದೇವಿ ಬೆಳಗಾಂವ್‌ಕರ್ ಮತ್ತು ಸರಸ್ವತಿಬಾಯಿ ರಾಜವಾಡೆಯವರ ಕತೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

### ೬.೨.೧ ಸುಧಾರಣಾ ನಿಲುವನ್ನು ಬದಿಗಿರಿಸಿದ ಕೆಳವರ್ಗದ ವೃತ್ತಾಂತ

ಶ್ಯಾಮಲಾದೇವಿ ಬೆಳಗಾಂವ್‌ಕರ್‌ರವರು ಕನ್ನಡ ಮಹಿಳಾ ಸಾಹಿತ್ಯದ ಚರಿತ್ರೆಯಲ್ಲಿ ಮರೆಯಲಾಗದ ಮಹತ್ವದ ಲೇಖಕರು. ಮೇಲ್ಜಾತಿಯ ಮಹಿಳಾ ಬರಹಗಾರರಿಗಿಂತ ಭಿನ್ನವಾದ ಆಲೋಚನೆಗಳು, ಕೆಳವರ್ಗದಿಂದ ಬಂದ ಶ್ಯಾಮಲಾದೇವಿಯವರ ಕತೆಗಳಲ್ಲಿವೆ. ಅಂದಿನ ಸಮಕಾಲೀನ ಚರ್ಚೆಗಳಲ್ಲಿ ಪ್ರಮುಖವಾಗಿದ್ದ ವಿಧವಾ ಪದ್ಧತಿ, ಪುನರ್ವಿವಾಹದ ಪ್ರಸ್ತಾಪ, ಕೇಶಮುಂಡನದಂತಹ ಸಮಸ್ಯೆಗಳು ಶ್ಯಾಮಲಾದೇವಿಯವರನ್ನು ಕಾಡಿಲ್ಲವೆಂಬುದು ಅವರ ಕತೆಗಳ ಮೂಲಕ ವ್ಯಕ್ತವಾಗುತ್ತದೆ. ವೇಶ್ಯಾಬದುಕಿನ

ಸಮಸ್ಯೆ, ವರದಕ್ಷಿಣೆ–ವಿಷಮ ವಿವಾಹ ಸಮಸ್ಯೆಯನ್ನು, ಇವರ ಕತೆಗಳು ಕೇಂದ್ರವಾಗಿಟ್ಟುಕೊಂಡಿವೆ. ಶ್ಯಾಮಲಾದೇವಿಯವರ ಕತೆಗಳ ನಿರೂಪಣೆಯನ್ನು ಎರಡು ವಿಧಾನಗಳಲ್ಲಿ ಗುರುತಿಸಬಹುದಾಗಿದೆ.

೧. ಕತೆಗಾರರು, ಕತೆಯ ಹೊರಗಿದ್ದು ಪ್ರೇಕ್ಷಕ ಸ್ಥಾನದಲ್ಲಿ ನಿಂತು ಕತೆಯನ್ನು ನಿರೂಪಿಸುವುದು.

೨. ಕತೆಗಾರರೂ ಒಂದು ಸೂಚಿತ ಪಾತ್ರವಾಗಿ ಕತೆಯಲ್ಲಿ ತೊಡಗಿಸಿಕೊಳ್ಳುವುದು.

ಕಥನದ ಬೇರೆ ಬೇರೆ ತಂತ್ರಗಳನ್ನು ಶ್ಯಾಮಲಾದೇವಿಯವರು ಅಳವಡಿಸಿಕೊಳ್ಳದಿದ್ದರೂ ಲವಲವಿಕೆಯ ತಾಜಾ ನಿರೂಪಣೆ ಕತೆಯ ಕುತೂಹಲವನ್ನು ಕಾಯ್ದಿರಿಸುತ್ತದೆ. 'ಕರುಳ ಕತ್ತರಿ' 'ನಡೆದು ಬಂದ ಲಕ್ಷ್ಮಿ', 'ನೀಲೆಯ ಸಂಸಾರ', 'ತಾಯಿ ಮಾತಾಯಿ', 'ಸ್ನೇಹದರ್ಶನ', 'ದೊಡ್ಡಮ್ಮ ನೋಡಿದ ವರ', 'ಮೂವರು ನಾಗರೀಕರು' ಮುಂತಾದ ಕತೆಗಳಲ್ಲಿ ನೇರವಾಗಿ ಕತೆಗಾರರೇ ಕತೆಯನ್ನು ನಿರೂಪಿಸುತ್ತಾ ಹೋಗಿದ್ದಾರೆ. ಶ್ಯಾಮಲಾದೇವಿಯವರ ಪ್ರಮುಖ ಕತೆಗಳಲ್ಲಿ ವೃತ್ತಾಂತ ಮಾದರಿಯನ್ನು ಅನುಸರಿಸಿವೆ.

ವೇಶ್ಯಾ ಬದುಕನ್ನು ಆಯ್ಕೆ ಮಾಡಿಕೊಳ್ಳದೆ, ಆ ಪದ್ಧತಿಯಿಂದ ಹೊರಬರಲು ಹವಣಿಸುವ ಸುಸಂಸ್ಕೃತ ಮನಸ್ಸಿನ ಪ್ರೇಮಾ ಮತ್ತು ಸುಧಾರಣ ಮನೋಭಾವ ಹೊಂದಿದ ಶಶಿಧರ–ಇವರಿಬ್ಬರ ಸ್ನೇಹ ದರ್ಶನವಾಗುವುದು 'ಸ್ನೇಹದರ್ಶನ' ಕತೆಯಲ್ಲಿ. ರಂಗರಾಯರಂತಹ ಮುದಿ ಕಾಮುಕರ ಕಾಟದಲ್ಲಿ ಪ್ರೇಮಾ ನರಳುತ್ತಿದ್ದಾಳೆ. ತನ್ನ ಮನಸ್ಸಿನ ಅಳಲನ್ನು ಹಂಚಿಕೊಳ್ಳಲು ಅನಾಥನಾದ ಶಶಿಧರ ಮುಂದೆ ಬರುತ್ತಾನೆ. ಮೊದಮೊದಲು ವೇಶ್ಯೆ ಕಲಾವತಿಬಾಯಿಯ ಮಗಳಾದ ಪ್ರೇಮಾಳ ಮನೆಗೆ ಹೋಗಲು ಹಿಂಜರಿಯುತ್ತಿದ್ದ ಶಶಿಧರ, ಮುಂದೆ ಸಮಾಜದ ಬಾಯಿಗೆ ಹೆದರದೆ ಪ್ರೇಮಾಳನ್ನು ಕಷ್ಟದಿಂದ ಪಾರು ಮಾಡಲು ನಿರ್ಧರಿಸುತ್ತಾನೆ. ತನ್ನನ್ನು ಸಾಕಿದ ಮಾವನ ಹೆಂಡತಿ ಶಾರದಾಬಾಯಿ ಘಟನೆಯನ್ನು ನೆನಪು ಮಾಡಿಕೊಳ್ಳುತ್ತಾನೆ. ಶಾರದಾಬಾಯಿಯ ದಾರುಣ ಘಟನೆಯ ದರ್ಶನವನ್ನು 'ಸ್ನೇಹದರ್ಶನ' ಕತೆ ಮಾಡಿಸುತ್ತದೆ. ಶಶಿಧರನ ಮಾವನಾದ ಬದಾಮಿಯ ಸಾಹುಕಾರರ ನಾಲ್ಕನೆಯ ಹೆಂಡತಿಯಾಗಿ ಬಂದ ಶಾರದಾಬಾಯಿ ಎರಡು ಮಕ್ಕಳ ತಾಯಿ. ಮದುವೆಯಾಗಿ ಹತ್ತು ವರ್ಷಗಳ ನಂತರ, ಮನೆಯಲ್ಲಿ ತಂಗುತ್ತಿದ್ದ ಹೈದ್ರಾಬಾದಿನ ಮುತ್ತಿನ ವ್ಯಾಪಾರಿ ಹಮೀದ್ ಖಾನರೊಂದಿಗೆ ಓಡಿ ಹೋಗುತ್ತಾಳೆ. ಅದಕ್ಕೆ ಕಾರಣ "ಹೊಸ ಹುರುಪಿಲೆ ಚಿಕ್ಕ ಗಂಡನ ಸಂಗತಿ, ಹೊಸ ಸಂಸಾರ ಹೂಡಿ ಉಲ್ಲಾಸದಿಂದ ದಿನಾ ಹಾಕಬೇಕು ಅಂಬೋ ನಮ್ಮಂಥಾ ಹುಡಿಗೇರ್ನ ಒಯ್ದು ಮುದಿ ಹದ್ದುಗಳ ಕೊರಳೊಳಗ ಕಟ್ಟಲಿಕ್ಕೆ ಮುಕ್ತ ಮಾರ್ಗ ಮಾಡಿಕೊಟ್ಟ ಕುರುಡು ಬ್ರಾಹ್ಮಣ ಸಮಾಜ, ನಿನಗೆ ಧಿಕ್ಕಾರ ಇರಲಿ!! ದೇವರ್‍ರ, ನಮ್ಮಪ್ಪಾ, ಇದೆಲ್ಲಾ ನಿನಗೆ ಗೊತ್ತಿರಲಿ, ಭಗವಂತಾ!" (ಶ್ಯಾಮಲಾ ಸಂಚಯ, ಪುಟ–೧೧೩) ಶಾರದಾಬಾಯಿ ಮೂಲಕ ಹೊರಟ ಮಾತುಗಳು ಅಸಮ ವಿವಾಹದ ಪರಿಣಾಮವನ್ನು ಸೂಚಿಸುತ್ತವೆ. ಮುದಿ ಗಂಡನಿಂದ ಬಿಡುಗಡೆಗೊಂಡು, ಹೊಸ ಬದುಕನ್ನು ಅರಸಿ, ಹಮೀದಖಾನರ ಬೀಬಿಯಾಗಲು ಹೊರಟ ಶಾರದಾಬಾಯಿ ಮಗಳು ವತ್ಸಲೆಯನ್ನು ಗೋವಾ ವೇಶ್ಯೆಯ ವಶಕ್ಕೆ ಒಪ್ಪಿಸುವುದು ದುರಂತ ಸಂಗತಿಯಾಗಿದೆ.

ಈ ಘಟನೆಯಿಂದ "ನಮ್ಮೂರೊಳಗ ಕಾಲಿಡದಷ್ಟು ನಮ್ಮ ಮನೆತನಕ್ಕೆ ಈಗಾಗಳೇ ಎಂದೋ ಮಶಿ ಬೆಳೆದು ಹೋಗೆದ.. ಅಂದ ಮ್ಯಾಲೆ ಆಕೀ ಸಂಗತಿ ತಿರಗ್ಯಾಡಿದ್ರ ಹೊಸದಾಗಿ ಹತ್ತಬೇಕಾದ ಕಲಂಕ ಎಲ್ಲೀದು...? (ಅದೇ, ಪುಟ-೧೧೭) ಎಂಬ ಪ್ರಶ್ನೆಯನ್ನು ಹಾಕಿಕೊಂಡ ಶಶಿಧರ ಮುಂದೆ ಪ್ರೇಮಾಳನ್ನು ಮದುವೆಯಾಗುತ್ತಾನೆ.

ವೇಶ್ಯಾ ಸಮಸ್ಯೆಯ ಮತ್ತೊಂದು ಮಗ್ಗಲನ್ನು 'ತಾಯಿ ಮಾತಾಯಿ' ಕತೆ ಬಿಚ್ಚಿಡುತ್ತದೆ. 'ಸ್ನೇಹ ದರ್ಶನ'ದಲ್ಲಿ ತಾಯಿ ಕಲಾವತಿಬಾಯಿ, ಪ್ರೇಮಳು ಆಯ್ದುಕೊಂಡ ಬದುಕಿಗೆ ಬೆಂಬಲವಾಗಿ ನಿಂತು, ಶಶಿಧರನೊಂದಿಗೆ ಆಕೆಯ ಮದುವೆ ಮಾಡುತ್ತಾಳೆ. ಆದರೆ 'ತಾಯಿ ಮಾತಾಯಿ' ಕತೆಯಲ್ಲಿ ಸ್ವತಃ ಲೀಲೆಯ ತಾಯಿಯೇ ಅವಳನ್ನು ವೇಶ್ಯೆಯಾಗಿಸಲು ಪ್ರಯತ್ನ ಪಡುತ್ತಾಳೆ. ಅದರ ಫಲವಾಗಿ ಗರ್ಭಿಣಿಯೂ ಆಗುತ್ತಾಳೆ. ಅದನ್ನು ತೆಗೆಸಲು ಡಾಕ್ಟರ್ ಚೌಧರಿಯವರ ಮನೆಗೆ ಬಂದಾಗ, ಲೀಲೆ ಉಪಾಯದಿಂದ ತಾಯಿಯ ರಾಕ್ಷಸೀ ಕೃತ್ಯದಿಂದ ತಪ್ಪಿಸಿಕೊಂಡು, ಚೌಧರಿಯವರ ಆಶ್ರಯ ಪಡೆಯುತ್ತಾಳೆ. ಕತೆಯ ತಿರುಳಿನಲ್ಲಿ ಡಾಕ್ಟರ್ ಚೌಧರಿಯವರ ಪತ್ನಿಯ ತಮ್ಮ, ಸುಧಾರಣ ಮನೋಭಾವದವನಿದ್ದು, ಲೀಲೆಯನ್ನು ಮದುವೆಯಾಗುತ್ತಾನೆ.

ವೇಶ್ಯಾ ಬದುಕಿನಲ್ಲಿ ಸುಖ ಜೀವನವನ್ನು ಸಾಗಿಸುತ್ತಿದ್ದ ಚಂದ್ರಿಯ ದುರಂತ ಬದುಕನ್ನು 'ಕರುಳ ಕತ್ತರಿ' ಕತೆ ಪರಿಚಯಿಸುತ್ತದೆ. 'ತಾಯಿ ಮಾತಾಯಿ' ಕತೆಯ ತಾಯಿಯಂತೆ, ಈ ಕತೆಯ ತಾಯಿಯೂ, ಹೆತ್ತ ಮಗಳು ಚಂದ್ರಿಯನ್ನು ಹಣದ ದುರಾಸೆಗೆ ವೇಶ್ಯೆಯನ್ನಾಗಿ ಮಾಡುತ್ತಾಳೆ. ತಾಯಿ ಮತ್ತು ತನ್ನನ್ನು ಸುತ್ತುವರಿದ ಪುಂಡರಿಂದ ಬೇಸತ್ತ ಚಂದ್ರಿ ಊರು ಬಿಟ್ಟು, ವೆಂಕಣ್ಣ ನಾಯಕರೊಂದಿಗೆ ಸುಖವಾಗಿದ್ದಳು. ಅಲ್ಲಿಯೂ ಆಕೆಯ ಸುಖವನ್ನು ತಂದೆಯೆ ಕಸಿಯುತ್ತಾನೆ. ಹಣ ಮತ್ತು ಒಡವೆಗಳ ಆಸೆಗೆ ಚಂದ್ರಿಯನ್ನು ಮರಳಿ ಊರಿಗೆ ಕರೆತಂದು, ಧೋತ್ರದಕಾಯಿ ಪುಡಿ ತಿನ್ನಿಸಿ, ಹುಚ್ಚಿಯಾಗಿ ಅಲೆಯುವಂತೆ ತಂದೆ-ತಾಯಿ ದ್ರೋಹವೆಸಗುತ್ತಾರೆ.

ಚಂದ್ರಿಯನ್ನು ಕರೆತಂದು ಬೇರೆ ಮನೆಯಲ್ಲಿಟ್ಟಿರುವ ವೆಂಕಣ್ಣ ನಾಯಕರ ಕುರಿತು ಅವರ ಹೆಂಡತಿಯ ಆಕ್ಷೇಪಣೆಯಿಲ್ಲ. ಗಾಯನ-ವಾದನವನ್ನು ಬಲ್ಲ ವೇಶ್ಯಯರನ್ನು ತಂದಿಟ್ಟುಕೊಳ್ಳುವುದು ಅಂದಿನ ಸಾಹುಕಾರರ ಪ್ರತಿಷ್ಠೆಯನ್ನು ಹೆಚ್ಚಿಸುತ್ತದೆಯೆನ್ನುವುದು 'ಕರುಳ ಕತ್ತರಿ' ಕತೆಯ ಮೂಲಕ ಗೋಚರಿಸುತ್ತದೆ. ವೆಂಕಣ್ಣನವರ ಉದಾರತೆಯನ್ನು ಚಂದ್ರಿ ಹೊಗಳುತ್ತಾಳೆ. ವೆಂಕಣ್ಣ ನಾಯಕರ ಹೆಂಡತಿಯೂ ಅಷ್ಟೇ ಔದಾರ್ಯವಂತರೆನ್ನುವುದಕ್ಕೆ, ಮನೆಯಲ್ಲಿ ನಡೆಯುವ ಕಾರ್ಯದಲ್ಲಿ ಚಂದ್ರಿಗೆ ಜರಿಸೀರೆಯೊಂದಿಗೆ ಉಡಿ ತುಂಬುವುದು; ಚಂದ್ರಿ ಮಾನಸಿಕ ಅಸ್ವಸ್ಥೆಗೆ ಒಳಗಾದಾಗ, ಮರಳಿ ತಮ್ಮ ಊರಿಗೆ ಕರೆದು ತರಲು ಯೋಚಿಸುವುದು ಸಾಕ್ಷಿಯಾಗಿದೆ.

'ನಡೆದು ಬಂದ ಲಕ್ಷ್ಮಿ' ಕತೆಯಲ್ಲಿ ಗಂಡಿನ ದರ್ಪದ ಮುಂದೆ ಒಂಟಿಯಾಗಿ ದುಡಿದು ಸಾರ್ಥಕ ಬದುಕನ್ನು ಬದುಕಿದ ದ್ಯಾಂವಕ್ಕ ಜೀವಂತ ಪಾತ್ರವಾಗಿದ್ದಾಳೆ. ಬಸವಿಯಾಗಬೇಕಿದ್ದ ದ್ಯಾಂವಕ್ಕ ಗೌಡರ ರೈತನಾದ ನಿಂಗನೊಂದಿಗೆ ನಿಷ್ಠೆಯಿಂದ ಬಾಳಿ ಮಗಳನ್ನು ಪಡೆದಾಕಿ. ಬದುಕಿನ ಹಾದಿ ಬಿಟ್ಟು,

ಕುಡಿತದ ಬೆನ್ನು ಬಿದ್ದ ನಿಂಗ, "ಗಂಡ್ಸಿನಾದಾರ ಇಲ್ದ ಯಾವ ಹೆಂಗಸು ಬಾಳೇವ ಮಾಡಿ ಮುಂದಕ ಬರ್ತಾಳ?" (ಅದೇ, ಪುಟ-೫೮) ಎಂದು ಹಂಗಿಸಿದಾಗ "ಚೀ ಬಿಡ ಮೂಳಾ, ಗಂಡ ಸತ್ತ ರಂಡೀ ಮುಂಡೀ ಹಾಂಗ ಕಾಲ ಕಳ್ಯಾಕ ನಾ ಗಟ್ಟದೀನಿ... ಇಟ್ ದಿನಾ, ನಾಕಾರ ವರ್ಸದ್ದಿನಾ ನಿನ್ನ ಚಾಕ್ರಿ ಮಾಡಿ ಗರ್ತೀ ಹಾಂಗ ಬಾಳೇವ ಮಾಡಿದರೂ ಮಂದಿ ನನಗ ಬಸವೀನ ಅನ್ಲಿಲ್ಲ? ಇನ್ನ ಮ್ಯಾಗ ಹಾಂಘ ಇದ್ದಕ್ಯಾರಾ ಗರತಿ ಗಂಗವ್ವ ಅನ್ನಿಸಿಗೊಂಡು ಸಾಯ್ತೇನಿ" (ಅದೇ) ಎಂದು ಶಪಥ ತೊಟ್ಟು, ನಿಂಗನನ್ನು ಮನೆಯಿಂದ ಹೊರದಬ್ಬುತ್ತಾಳೆ. ರಟ್ಟೆ ಬಲದಿಂದ ದುಡಿದು ಮಗ ಸಾದೇವನನ್ನು ಸಾಕುತ್ತಾಳೆ.

ಕತೆಯ ನಿರೂಪಕರು, ದ್ಯಾಂವಕ್ಕನ ಮಗ ಸಾದೇವನ ಕತೆಯನ್ನು ಹೇಳಲು ಹೊರಟಿರುವುದಾಗಿ ಹೇಳುತ್ತಾರಾದರೂ, ಕತೆಯ ಓದಿನ ಕೊನೆಗೆ ದ್ಯಾಂವಕ್ಕಳ ಚಿತ್ರವೇ ಮನಸ್ಸಿನಲ್ಲಿ ಕಾಡತೊಡಗುತ್ತದೆ. ಹತ್ತು ವರ್ಷದ ಸಾದೇವನೊಂದಿಗೆ, ಅಣ್ಣನ ಮಗಳಾದ ಮೂರ್ನಾಲ್ಕು ವರ್ಷದ ನೀಲಿಯೊಂದಿಗೆ ಮದುವೆ ಮಾಡಿದ ದ್ಯಾಂವಕ್ಕನ ಸಾಹಸ ಕತೆ ಒಂದೆಡೆಯಾದರೆ, ಮುಂದೆ ಇಪ್ಪತ್ತೆರಡು ವರ್ಷದ ಸಾದೇವ, ಗಡ್ಯಾನ ಹೆಂಡತಿ ದ್ರೌಪದಿಯನ್ನು ಪ್ರೀತಿಸಿ ಮುಂಬೈಗೆ ಓಡಿ ಹೋಗಿ ಪೋಲೀಸರ ಕೈಗೆ ಸಿಕ್ಕಿ ಊರಿಗೆ ಮರಳಿದ್ದೊಂದು ಕತೆ. ದ್ಯಾಂವಕ್ಕ ಬೋರಾಡಿ ಅತ್ತರೂ, ಆ ಸಂದರ್ಭವನ್ನು ಸಮರ್ಥವಾಗಿ ನಿಭಾಯಿಸುತ್ತಾಳೆ. ದ್ರೌಪದಿ 'ಶರೆಬಡಕ' ಗಂಡನೊಂದಿಗೆ ಇರಲು ಒಪ್ಪದೆ ಸೋಡಾ ಚೀಟಿ ಕೋರಿ, ಕೋರ್ಟಿಗೆ ಮನವಿ ಸಲ್ಲಿಸುತ್ತಾಳೆ. ಮೇಲ್ಜಾತಿ ಹೆಣ್ಣುಮಕ್ಕಳಲ್ಲಿ ಡೈವೋರ್ಸ್‌ನಂತಹ ವಿಚಾರ ಅಂದಿನ ಕಾಲಕ್ಕೆ ತಲ್ಲಣ ಹುಟ್ಟಿಸಿರಲಿಕ್ಕೆ ಸಾಕು. ದ್ರೌಪದಿಯ ಸೋಡಾ ಚೀಟಿಗಾಗಿ ಇನ್ನೂರು ರೂಪಾಯಿಗಳನ್ನು ದ್ಯಾಂವಕ್ಕನೇ ತೆತ್ತು ಸಾದೇವನೊಂದಿಗೆ ಮದುವೆ ಮಾಡಿಬಿಡುತ್ತಾಳೆ. ಕತೆಯ ನಿರೂಪಕರು ದ್ಯಾಂವಕ್ಕನ ನಿರ್ಧಾರಕ್ಕೆ ತಕರಾರು ಎತ್ತಿದಾಗ "ಅವನಾರ ನಾ ಕರೇವ ಹೇಳ್ರ್ಯಾ?-ಈ ಜಲುಮದಾಗಂಕಾ ನಾ ಮದವೀ ಕಂಡಿಲ್ಲಾ, ಗಂಡ, ಗಂಡನ ಸುಕಾ, ಪಿರೀತಿ ಅನ್ನೋದ ಗೊತ್ತಿಲ್ಲಾ. ಹ್ವಾದ ಜಲುಮದಾಗಿನ ಪಾಪದ ಪಲಾ ಈ ಜಲ್ಮದಾಗ ಉಣ್ಣಾಕ್ಹತ್ತೇನಿ. ಯಾವಾಗ ಅವಂದೂ ಆಕೀದು ಪಿರೀತಿ ಕೂಡೇತಿ ಅಂದ ಬಳಿಕ, ಹಿಂತಾ ಯಾಳೇದಾಗ ನಾ ಹುಡುಗೂರ್ನ ಅಗಲಿಸಿದ್ರ, ಮತ್ತ ಮುಂದಿನ ಜಲ್ಮಕ್ಕನೂ ಇದ ಎಡೀ ನನಗೆ ಬಂದೀತೋ ಬರಾಕಿಲ್ಯ್ರೋ?" (ಅದೇ, ಪುಟ-೭೧) ಎಂಬ ಪ್ರಶ್ನೆಗೆ ಉತ್ತರವನ್ನು ದ್ಯಾಂವಕ್ಕ ನೀಡುತ್ತಾಳೆ. 'ಸ್ನೇಹದರ್ಶನ' ಕತೆಯಲ್ಲಿ ಶಾರದಾಬಾಯಿಯ ಉಪಕತೆ ಹಾದು ಹೋದಂತೆ, 'ನಡೆದು ಬಂದ ಲಕ್ಷ್ಮಿ' ಕತೆಯಲ್ಲಿ ಸಾದೇವನ ಮದುವೆ-ಕತೆಯಲ್ಲಿ, ದ್ಯಾಂವಕ್ಕನ ಜೀವನ ದರ್ಶನದ ಉಪಕತೆಯು ದಟ್ಟತೆಯನ್ನು ಹೆಚ್ಚಿಸಿದೆ.

ಮೇಲಿನ ಕತೆಗಳಲ್ಲಿ ವೇಶ್ಯಾ ಬದುಕಿನ ವಿವಿಧ ಮಗ್ಗಲುಗಳನ್ನು ಕತೆಗಾರರು ಪರಿಚಯಿಸಿದ್ದರೆ, 'ಕಂತಿಯ ದೇಶಾಂತರ' ಕತೆಯಲ್ಲಿ ಕೆಳವರ್ಗದವರಲ್ಲಿ ರೂಢಿಯಲ್ಲಿದ್ದ ಉಡಿಕೆ ಪದ್ಧತಿಯನ್ನು ಪರಿಚಯಿಸಿದ್ದಾರೆ. 'ಶೆರೆಬಡಕ' ಗಂಡನೊಂದಿಗೆ ಬೇಸತ್ತು ಹೋದ ಕಂತೆವ್ವ, ಎರಡು ಮಕ್ಕಳನ್ನು ಕಟ್ಟಿಕೊಂಡು ಊರುಬಿಟ್ಟು ಹೋಗುತ್ತಾಳೆ. ಪರ ಊರಿನ ಗೌಡರ ಮನೆಗೆಲಸದಲ್ಲಿ ಸೈ ಎನಿಸಿಕೊಂಡು

ಅಚ್ಚು ಮೆಚ್ಚಿನವಳಾಗುತ್ತಾಳೆ. ಗೌಡರ ಮತ್ತೊಬ್ಬ ಆಳು ವಿದುರ ಮಾದೇಶನೊಂದಿಗೆ ಕಂತೆವ್ವನ ಉಡಿಕೆಯನ್ನು ಗೌಡ ಗೌಡತಿಯರು ನಿರ್ಧಾರಿಸಿದಾಗ, ಅದಕ್ಕೆ ಇಬ್ಬರ ಒಪ್ಪಿಗೆಯೂ ಸಿಗುತ್ತದೆ.

ಮೇಲಿನ ಕತೆಗಳಲ್ಲಿ 'ಸ್ನೇಹ ದರ್ಶನ', 'ತಾಯಿ ಮಾತಾಯಿ' ಕತೆಗಳನ್ನು ಕತೆಯ ಹೊರಗಿನಿಂದ ನಿರೂಪಿಸುವ ವಿನ್ಯಾಸವಿದ್ದರೆ ಉಳಿದ ಕತೆಗಳಲ್ಲಿ ಕತೆಯ ನಿರೂಪಕರು ತಮ್ಮ ಒಡನಾಟದಲ್ಲಿರುವ ಪಾತ್ರಗಳಿಂದ ಕತೆಯನ್ನು ಕೇಳುವ, ಕೇಳಿದ್ದನ್ನು ಉತ್ತಮ ಪುರುಷದಲ್ಲಿ ಓದುಗರಿಗೆ ಹೇಳುತ್ತಿರುವ ತಂತ್ರದ ವಿನ್ಯಾಸವನ್ನು ರೂಪಿಸಿಕೊಂಡಿದ್ದಾರೆ. ಆದರೆ ಎರಡೂ ವಿಧಾನದಲ್ಲಿಯೂ ನಿರೂಪಕರು ಪ್ರೇಕ್ಷಕ ಸ್ಥಾನದಲ್ಲಿ ನಿಂತಿರುವುದು ವ್ಯಕ್ತವಾಗುತ್ತದೆ. 'ಮೂವರು ನಾಗರೀಕರು' ಮಕ್ಕಳ ಲೋಕದ ಗ್ರಹಿಕೆಯನ್ನು ನವಿರಾಗಿ ನಿರೂಪಿಸಿದ ಕತೆಯಾಗಿದೆ. 'ಕುಲಪುತ್ರ ಅಥವಾ ಗುಪ್ತದಾನ' ಕತೆಯಲ್ಲಿ ಷಂಡನಾದ ಕೇಶವನ ವಂಶೋದ್ಧಾರ ಬೆಳೆಯಲು, ಅವನ ಹೆಂಡತಿ ರಮಾಬಾಯಿಯನ್ನು ಗುಪ್ತದಾನ ಪಡೆಯಲು ಕೇಶವನ ತಾಯಿ ಗಂಗಾಬಾಯಿ ಸಂಚು ಹೂಡುತ್ತಾಳೆ. ಶ್ಯಾಮಾಚಾರಿಯಿಂದ ಆ ಕೆಲಸವನ್ನು ಪೂರೈಸಿಕೊಂಡ ಮೇಲೆ ರಾಮಾಚಾರಿಯ ಹೆಂಡತಿ ಗೋದಮ್ಮನು ಮೂರನೇ ಬಸುರಿಯದಾಗ, ಮುಂದೆ ಮಕ್ಕಳಾಗದಂತಹ ಮದ್ದನ್ನು ಹಕೀಮರಿಂದ ಕೊಡಿಸುವ ವಂಚನೆಗೂ ತೊಡಗುತ್ತಾಳೆ.

'ದೊಡ್ಡಮ್ಮ ನೋಡಿದ ವರ', 'ಸವತಿಯರು' ಕತೆಗಳು ವರದಕ್ಷಿಣೆ ಸಮಸ್ಯೆಯನ್ನು ಕೇಂದ್ರವಾಗಿರಿಸಿಕೊಂಡಿವೆ. 'ದೊಡ್ಡಮ್ಮ ನೋಡಿದ ವರ' ಕತೆಯಲ್ಲಿ ಸರೋಜಳಿಗೆ, ಯುವಕ ಭಾಸ್ಕರನ ಫೋಟೋ ತೋರಿಸಿ, ಅವನ ಮುದುಕ ತಂದೆಯೊಂದಿಗೆ ಮೂರನೇ ಮದುವೆ ಮಾಡಿಸುತ್ತಾಳೆ. 'ಸವತಿಯರು' ಕತೆಯಲ್ಲಿ ಬರುವ ಕಾವೇರಿ ತನಗಿಷ್ಟವಿಲ್ಲದಿದ್ದರೂ ತಂದೆ ತಾಯಿಯ ಕಷ್ಟವನ್ನು ಪರಿಹರಿಸಲು ಕೃಷ್ಣಮೂರ್ತಿಯ ಎರಡನೇ ಮದುವೆಗೆ ಒಪ್ಪಿಕೊಳ್ಳುತ್ತಾಳೆ. ಅನಿವಾರ್ಯ ಸಂದರ್ಭಗಳಲ್ಲಿ ಸಿಲುಕಿಕೊಳ್ಳುವ ಇಂಥ ಸಂದರ್ಭಗಳಿಗೆ ಕತೆಗಾರರು ಪರ್ಯಾಯ ಮಾರ್ಗಗಳನ್ನು ಕಟ್ಟಿಕೊಟ್ಟಿದ್ದಾರೆ. ದೊಡ್ಡಮ್ಮ ಸರೋಜಳನ್ನು ವಂಚಿಸಿದರೆ ಮುದುಕ, ಮಗ ಭಾಸ್ಕರನನ್ನು ವಂಚಿಸುತ್ತಾನೆ.

"ಭಾಸ್ಕರನಿನ್ನೂ ಅಭ್ಯಾಸದ ಮೂಲಕ ಅವಿವಾಹಿತನು, ಸರೋಜಳಂತು ರಂಗರಾಯರ ಪತ್ನಿಯಾಗಿದ್ದು ಬಿಟ್ಟಳು. ಆದರೂ ರಂಗರಾಯರು ಬಡ್ಡಿಯ ವ್ಯವಹಾರದಲ್ಲಿ ತಲ್ಲೀನರಾಗಿ ದಿವಾಣಖಾನೆಯಲ್ಲಿ ಕುಳಿತಾಗ ಒಮ್ಮೊಮ್ಮೆ ಭಾಸ್ಕರನು ಅಳುತ್ತಿದ್ದು ಸರೋಜಳು ಸಂತೈಸುತ್ತಿರುವುದನ್ನು ಪರಮಾತ್ಮನೇನೋ ಎಷ್ಟೋ ಸಾರಿ ಕಂಡಿರುವನೆಂದು ಜನರು ಆಡಿಕೊಳ್ಳುತ್ತಾರೆ. ಅದು ಸಟೆಯೋ ದಿಟವೋ ಆ ಪರಮಾತ್ಮನಿಗೇ ಗೊತ್ತು" (ಅದೇ, ಪುಟ–೩೫) ಎಂಬ ಜಾಣತನದ ಅಂತ್ಯವನ್ನು ಕತೆಗೆ ನೀಡಿದ್ದಾರೆ. 'ನೀಲೆಯ ಸಂಸಾರ' ಕತೆಯಲ್ಲಿಯೂ ಇಂತಹ ಸಂದರ್ಭದಿಂದ ಕತೆಯ ಅಂತ್ಯವನ್ನು ಬರೆಯಲಾಗಿದೆ. ಲೀಲೆ ಮತ್ತು ಸೋದರತ್ತೆಯ ಮಗನಾದ ಶಂಕರ ಪರಸ್ಪರ ಪ್ರೀತಿಸುತ್ತಿದ್ದಾಗ, ಲೀಲೆಯ ಅಪ್ಪ, ಬೇರೊಬ್ಬನೊಂದಿಗೆ ಮದುವೆ ಮಾಡಿಬಿಡುತ್ತಾನೆ. ಲೀಲೆ ಆ ಗಂಡನ ಮನೆಯವರನ್ನು ತನ್ನ ಗುಣ ನಡತೆಗಳಿಂದ ಗೆದ್ದು ನಿಲ್ಲುತ್ತಾಳೆ. ತಿಂಗಳಿಗೊಮ್ಮೆ ಶಂಕರವರ್ಮನನ್ನು ಭೇಟಿಯಾಗಿ

ಹೋಗುವ ಕ್ರಿಯೆಯನ್ನು 'ದೇವರ ಮೇಲಿನ ಹೂ ತಪ್ಪೀತು. ಅವಳ ಈ ಪರಪಾಠ ಎಂದಿಗೂ ತಪ್ಪಲಿಲ್ಲ' ಎಂಬುದನ್ನು ಉಲ್ಲೇಖಿಸಿದ್ದಾರೆ. ಸವತಿಯರು ಕತೆಯಲ್ಲಿ ಮನೆಯವರ ಕೈಗೊಂಬೆಯಾಗಿದ್ದ ಕೃಷ್ಣಮೂರ್ತಿಯಲ್ಲಿ ಸಮಸ್ಯೆಯನ್ನು ಎದುರಿಸುವ ಧೈರ್ಯ ತುಂಬಿ, ಸವತಿ ರುಕ್ಮಿಣಿಯು ಅನುಭವಿಸುತ್ತಿದ್ದ ಕಷ್ಟಗಳಿಗೆ ತೆರೆ ಎಳೆದು, ತನ್ನ ಮತ್ತು ತನ್ನ ಜತೆಗಿರುವವರ ಬದುಕನ್ನು ನಿರಾಳಗೊಳಿಸುವಲ್ಲಿ ಕಾವೇರಿ ಸಫಲವಾಗುತ್ತಾಳೆ. 'ದೊಡ್ಡಮ್ಮ ನೋಡಿದ ವರ' ಕತೆಯ ಸರೋಜ; 'ನೀಲೆಯ ಸಂಸಾರ' ಕತೆಯ ಲೀಲೆ; 'ಸವತಿಯರು' ಕತೆಯ ಕಾವೇರಿ ತಮ್ಮ ಸಂಗಾತಿಯ ಆಯ್ಕೆ ಪ್ರಶ್ನೆ ಬಂದಾಗ, ತಮ್ಮಲ್ಲೇ ಮಾತಾಡಿಕೊಳ್ಳುವ ಸ್ವಗತ ಧಾಟಿಯನ್ನು ಕತೆಗಳು ಬಳಸಿಕೊಂಡಿವೆ. 'ದಾಜೀಬಾನ ಬ್ಯಾಂಕು', 'ನನ್ನನ್ನು ನೋಡಲಿಕ್ಕೆ ಬಂದಾಗ', 'ಬಕ ಪಕ್ಷಿ', 'ಕಾಳ ರಾತ್ರಿ', 'ಬ್ರಹ್ಮಚಾರಿ ರಾಮಮೂರ್ತಿ' ಕತೆಗಳಲ್ಲಿ ನಿರೂಪಕರು ತಾವೂ ಒಂದು ಪಾತ್ರವಾಗುವ ಮೂಲಕ ಉತ್ತಮ ಪುರುಷ ಉವಾಚದೊಂದಿಗೆ ಕತೆಯನ್ನು ವಿನ್ಯಾಸಗೊಳಿಸಿದ್ದಾರೆ. 'ಕಾಳ ರಾತ್ರಿ' ಕತೆಯನ್ನು ಹೊರತುಪಡಿಸಿದರೆ, ಉಳಿದ ಕತೆಗಳು ನವಿರು ಹಾಸ್ಯದ ಲೇಪನದಲ್ಲಿ ನಿರೂಪಿತಗೊಂಡಿವೆ.

'ದಾಜೀಬಾನ ಬ್ಯಾಂಕು' ಕತೆಯಲ್ಲಿ ವಾರದ ಸಂಬಳವನ್ನು ದಾಜೀಬಾನು ಅರ್ಬನ್ ಬ್ಯಾಂಕಿನಲ್ಲಿ ಠೇವಣಿ ಇಟ್ಟಿದ್ದಾಗಿ ಹೇಳುತ್ತಿರುತ್ತಾನೆ. ಅವನ ಹೆಂಡತಿಯಿಂದ ದಾಜೀಬಾನ ಬ್ಯಾಂಕು ಸೆರೆ ಅಂಗಡಿಯಾಗಿರುವ ವಿಷಯ ಹೊರ ಬೀಳುತ್ತದೆ. 'ನನ್ನನ್ನು ನೋಡಲಿಕ್ಕೆ ಬಂದಾಗ' ಕತೆ ವಧುವನ್ನು ನೋಡಲು ಬಂದಾಗ ಆಗುವ ಪುಟ್ಟ ಅವಾಂತರವನ್ನು, ಉತ್ತಮ ಪುರುಷದಲ್ಲಿ ನಿರೂಪಿಸಲಾಗಿದೆ. ಮದುವೆಯಾದ ವಿಷಯವನ್ನು ಬಚ್ಚಿಟ್ಟಿದ್ದ ರಾಮಮೂರ್ತಿ ಹೆಂಡತಿಯೊಂದಿಗೆ ಸಿಕ್ಕಿಹಾಕಿಕೊಂಡ ಕತೆಯನ್ನು 'ಬ್ರಹ್ಮಚಾರಿ ರಾಮಮೂರ್ತಿ' ಕತೆ ಬಯಲು ಮಾಡುತ್ತಿದೆ. 'ವಸಂತರಾಯನ ಮದುವೆ' ಕತೆಯಲ್ಲಿ ವಸಂತ ವಿವಾಹ ಪೂರ್ವದಲ್ಲಿ ಶಾಲಿನಿಯೊಂದಿಗೆ ಹೊಂದಿದ್ದ ಸಂಬಂಧವನ್ನು ಮತ್ತು ಪ್ರೊಫೆಸರನಾಗಿ ಬಂದ ವಸಂತರಾಯ ಆಕೆಯನ್ನು ಮದುವೆಯಾಗಿ ಪಂಡರಾಪುರದ ಅನಾಥಾಲಯದಲ್ಲಿ ಬಿಟ್ಟಿದ್ದ ಮಗುವನ್ನು ಮರಳಿ ಪಡೆಯುತ್ತಾನೆ.

ಶ್ಯಾಮಲಾದೇವಿಯವರ ಒಟ್ಟು ಕತೆಗಳು ವಸ್ತುವಿನ ದೃಷ್ಟಿಯಿಂದ ಭಿನ್ನ ಭಿನ್ನ ದೃಷ್ಟಿಕೋನಗಳನ್ನು ಒಳಗೊಂಡಿವೆ. ಕತೆಯ ನಿರೂಪಣೆಯಲ್ಲಿ ಧಾರವಾಡ ಭಾಗದ ಪ್ರಾದೇಶಿಕ ಭಾಷೆಯ ಆಡು ಮಾತು ಹೆಚ್ಚು ಜೀವಂತಿಕೆಯನ್ನು ಪಡೆದಿದೆ. ಕತೆಯ ಪಾತ್ರಗಳು ಹೆಚ್ಚು ಆಳಕ್ಕಿಳಿಯದಿದ್ದರೂ, ಅವು ತಮ್ಮ ಬದುಕನ್ನು ಆಯ್ದುಕೊಳ್ಳುವಲ್ಲಿ ಹೆಚ್ಚು ಸ್ವತಂತ್ರ ವ್ಯಕ್ತಿತ್ವವನ್ನು ಹೊಂದಿವೆ.

### ೬.೨.೨ ವೇಶ್ಯಾ ವಿವಾಹದ ಪ್ರತಿಪಾದನೆಯ ವೃತ್ತಾಂತ

'ಸಣ್ಣ ಕಥೆಗಳ ರಾಣಿ' ಎಂದು ಹೆಸರಾದ ಸರಸ್ವತಿ ಬಾಯಿ ರಾಜವಾಡೆಯವರ ಕೆಲವು ಕತೆಗಳನ್ನು ಅಧ್ಯಯನಕ್ಕೊಳಪಡಿಸಲಾಗಿದೆ. ರಾಜವಾಡೆಯವರ ಅಂದಿನ ಸಮಕಾಲೀನ ಸಮಸ್ಯೆಗಳನ್ನು ತಮ್ಮ ಕತೆಗಾಗಿ ಆಯ್ಕೆ ಮಾಡಿಕೊಂಡಿದ್ದಾರೆ.

"ವಸ್ತುವಿನ ಆಯ್ಕೆಯನ್ನು ಗಮನಿಸಿದಾಗ ಇವರ ಕೆಲವು ಕಥೆಗಳು ನವೋದಯ ನಿಲುವನ್ನು ತಳೆದರೆ, ಮತ್ತೆ ಕೆಲವು ಪ್ರಗತಿಶೀಲತೆಯತ್ತ ವಾಲಿರುವುದನ್ನು ಗಮನಿಸಬಹುದು. ಹೀಗಾಗಲು ಮುಖ್ಯ ಕಾರಣ ಲೇಖಕಿ ಬಂದ ಸಾಹಿತ್ಯಿಕ, ಚಾರಿತ್ರಿಕ ಹಿನ್ನೆಲೆ. ಸರಸ್ವತಿಬಾಯಿಯವರು ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದಾಗ ನವೋದಯ ಸಾಹಿತ್ಯ ಬೇರೂರಿತ್ತು. ಪ್ರಗತಿಶೀಲ ಸಾಹಿತ್ಯ ಕನ್ನಡ ಸಾಹಿತ್ಯವನ್ನು ಇನ್ನೂ ಪ್ರವೇಶಿಸಿರಲಿಲ್ಲ. ಪ್ರಗತಿಶೀಲ ಚಳುವಳಿ ಆರಂಭವಾದ ನಂತರ ಅದರ ಪ್ರಭಾವ, ಸ್ವಾತಂತ್ರ್ಯ ಚಳುವಳಿಯ ಪ್ರಭಾವ ಲೇಖಕಿಯ ಮೇಲೆ ಸಹಜವಾಗಿ ಆಗಿದೆ. ಪ್ರಗತಿಶೀಲರು ಅನುಸರಿಸಿದ ಉದಾರವಾದಿ ಸ್ತ್ರೀ ಚಳುವಳಿಯ ಮೌಲ್ಯಗಳಾದ ವಿಧವಾ ಸಮಸ್ಯೆ, ವಿಧವಾ ಪುನರ್ ವಿವಾಹ, ವರದಕ್ಷಿಣೆ, ವೇಶ್ಯಾ ಸಮಸ್ಯೆ ಮೊದಲಾದವುಗಳು ಮತ್ತು ಸ್ವಾತಂತ್ರ್ಯ ಚಳುವಳಿಯ ಹಿನ್ನೆಲೆಯಲ್ಲಿ ಬಂದ ಜಾತಿಭೇದ, ಜೀತಪದ್ಧತಿಯ ಅನಿಷ್ಟಗಳೂ ಇವರ ಕಥಾವಸ್ತುಗಳಾದವು" ('ಪ್ರಸ್ತಾವನೆ', ಗಿರಿಬಾಲೆ, ಪುಟ– XV)

'ಅವಳ ಉದ್ಧಾರ', 'ಪಶ್ಚಾತ್ತಾಪ', 'ಆ ಭಿಕ್ಷುಕಿ', 'ಆಹ, ಪ್ರಪಂಚ!' ಕತೆಗಳು ವಿಧವಾ ಸಮಸ್ಯೆಯನ್ನು ಕುರಿತಾದವುಗಳು. ರಾಜವಾಡೆಯವರು ವಿಧವೆಯರ ಮನದಾಳದ ನೋವುಗಳನ್ನು ಬಲ್ಲವರು. ತರುಣ ವಿಧವೆಯರು ಅನುಭವಿಸಬೇಕಾದ ತಳಮಳಗಳು, ವಿರಹ–ವೇದನೆ, ಇನ್ನಿತರ ಬಯಕೆಗಳ ಅರಿವಿದೆ. 'ಆ ಭಿಕ್ಷುಕಿ' ಕತೆಯಲ್ಲಿ "ನಿಷೇಕ ಪ್ರಸ್ತವಾಗುವ ಮೊದಲೇ ಅವರು ನನ್ನನ್ನು ಏಕಾಂಗಿಯಾಗಿ ಬಿಟ್ಟು ಹೋದರು. ನಾನು ಅವರು ವಾಸಿಸುತ್ತಿದ್ದ ಮನೆಯೇ ನನ್ನ ಪವಿತ್ರ ಕ್ಷೇತ್ರವೆಂದು ಬಗೆದು ಅಲ್ಲೇ ವಾಸಿಸುತ್ತಿದ್ದೆ. ವೈಧವ್ಯದಿಂದ ದೇಹದ ಬೆಳವಣಿಗೆ, ಸೌಂದರ್ಯ ಕುಂದುತ್ತವೆಯೇ ಧೂರೆ? ಇಲ್ಲ. ಅದಕ್ಕೆ ವಿಪರೀತವಾಗಿ, ಬ್ರಹ್ಮಚರ್ಯೆಯ ತಪಸ್ಸಿನಿಂದ ಅಪೂರ್ವ ತೇಜಸ್ಸೊಂದು ಮುಖದಲ್ಲಿ ಮೂಡುತ್ತದೆ. ನಮ್ಮ ಪಕ್ಕದ ಮನೆಯಲ್ಲೊಬ್ಬ ಯುವಕನಿದ್ದ. ಸೂಜಿಕಲ್ಲು ಸೂಜಿಯನ್ನೆಳೆಯಿತು. ಅದರ ಫಲದಿಂದ ನಾನು ಗರ್ಭಿಣಿಯಾದೆ. ಅತ್ತೆಯವರದನ್ನು ಕಂಡುಕೊಂಡರು. ಸಮಾಜ ಭಯದಿಂದ ನನ್ನನ್ನು ಹೊರದಬ್ಬಿತು. ತೌರು ಮನೆಯೂ ನನ್ನ ಪಾಲಿಗೆ ವೈರಿಯಾಯಿತು. ಆ ಯುವಕನೂ ತೀರಾ ಅಪರಿಚಿತಳಂತೆ ನನ್ನನ್ನು ನಿರಾಕರಿಸಿ ಬಿಟ್ಟ, ನನ್ನ ಬಾಳ್ವೆಯು ಮುಗಿಯಿತು" ('ಆ ಭಿಕ್ಷುಕಿ', ಆಯ್ದ ಕತೆಗಳು, ಪುಟ–೧೦೭) ಎಂದು ಹೇಳುವ ಭಿಕ್ಷುಕಿಯ ಮಾತುಗಳಲ್ಲಿ ವಿಧವೆಯರು 'ದಾರಿ ತಪ್ಪಿದರೆ' ಆಗುವ ಪರಿಣಾಮಗಳೇನು ಎಂಬುದರ ಕಡೆಗೆ ಹೆಚ್ಚು ಗಮನವಿದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣಿಗೆ ವಿಧಿಸಿರುವ ಕಟ್ಟುಪಾಡುಗಳನ್ನು ಮುರಿದರೆ ಆಗುವ ಪರಿಣಾಮಗಳ ಕಡೆಗೆ ಕತೆಗಾರರ ಲಕ್ಷ್ಯವಿದೆ. ವಿಧವೆಯೊಬ್ಬಳು ತಾರುಣ್ಯದ ಬಯಕೆಯಲ್ಲಿ ಪರಪುರುಷನನ್ನು ಸೇರಿದರೆ, ಕುಟುಂಬದಿಂದ–ಸಮಾಜದಿಂದ ಬಹಿಷ್ಕೃತಗೊಳ್ಳಬೇಕಾದ ಸಂದರ್ಭದ ಬಗ್ಗೆ ಎಚ್ಚರಿಕೆಯನ್ನು ನೀಡಿದ್ದಾರೆ. 'ಆ ಭಿಕ್ಷುಕಿ' ಕತೆಯಲ್ಲಿ ಕುಲೀನ ಮನೆತನದ ವಿಧವೆ 'ಅನೈತಿಕ' ಸಂಬಂಧ ಹೊಂದಿದ್ದಕ್ಕೆ ಭಿಕ್ಷುಕಿಯಾಗಬೇಕಾದ ಸ್ಥಿತಿಯೊದಗಿದರೆ, 'ಅವಳ ಉದ್ಧಾರ', 'ಪಶ್ಚಾತ್ತಪ', ಕತೆಗಳು ವಿಧವಾ ವಿವಾಹದಿಂದಾಗುವ ಪರಿಣಾಮಗಳನ್ನು ಮನಗಾಣಿಸುತ್ತವೆ. 'ಅವಳ ಉದ್ಧಾರ' ಕತೆಯಲ್ಲಿ, ವಿಧವೆಯರಿಗೆ ಆಶ್ರಯ ಕೊಡುವ

ನೆಪದಲ್ಲಿ ವಿಧವಾಶ್ರಮಗಳು ಎಸಗುವ ಕುಕೃತ್ಯಗಳನ್ನು ಬಯಲು ಮಾಡಿದೆ. ವಿಧವೆ ಗೋಪಿ, ತನ್ನ ಗಂಡನ ಅಣ್ಣನಿಂದ ಬಲಾತ್ಕರಿಸಲ್ಪಟ್ಟು, ಗರ್ಭಿಣಿಯಾಗಿ ವಿಧವಾಶ್ರಮದ ಮೊರೆ ಹೋಗುತ್ತಾಳೆ. ಆದರೆ, ಆಶ್ರಮದ ವ್ಯವಸ್ಥಾಪಕ ದುಡ್ಡಿನ ಆಸೆಗಾಗಿ ಮುದಕನೋರ್ವನೊಂದಿಗೆ ಗೋಪಿಯ ಮದುವೆ ಏರ್ಪಡಿಸುತ್ತಾನೆ. ಮುಂದೆ ಆ ಮದುಕನಿಂದಲೂ ತಿರಸ್ಕೃತಗೊಂಡು, ವೇಶ್ಯೆಯ ಮನೆ ಸೇರುವ ದುರಂತವನ್ನು ಕತೆಗಾರರು ವ್ಯಂಗ್ಯಮಿಶ್ರಿತ ದನಿಯಲ್ಲಿ ನಿರೂಪಿಸಿದ್ದಾರೆ. 'ಪಶ್ಚಾತ್ತಾಪ' ಕತೆಯಲ್ಲಿ ಬಾಲವಿಧವೆ ಕುಮುದಿನಿಯನ್ನು ಪುನರ್ ವಿವಾಹವಾಗಲು ಮನೋಹರ ಪ್ರಯತ್ನಿಸುತ್ತಾನೆ. ಆದರೆ, ಕುಮುದಿನಿ ನಿರಾಕರಿಸುತ್ತಾಳೆ. ಕುಮುದಿನಿಯ ಮಾತುಗಳಿಂದ ಪ್ರೇರಿತನಾದ ಮನೋಹರ, ಆಕೆಯೊಂದಿಗೆ ದೇಶಸೇವೆ ಮಾಡಲು ಮುಂದಾಗುತ್ತಾನೆ. ಇಬ್ಬರೂ ಬ್ರಹ್ಮಚಾರಿಗಳಾಗಿ ಉಳಿಯುತ್ತಾರೆ. ಕಲ್ಯಾಣಮ್ಮನವರನ್ನು ಹೊರತುಪಡಿಸಿದರೆ, ತಿರುಮಲಾಂಬ, ಸರಸ್ವತಿಬಾಯಿ ರಾಜವಾಡೆ ಮುಂತಾದ ಬರಹಗಾರರು ವಿಧವಾ ವಿವಾಹವನ್ನು ಸಮ್ಮತಿಸುವುದಿಲ್ಲ. ಪೂರ್ವಜನ್ಮದ ಕರ್ಮಫಲವಾಗಿ ವಿಧವೆಯಾದ ಹೆಣ್ಣುಮಕ್ಕಳು ಮರುಮದುವೆಯಾಗದೆ, ದೇಶ ಸೇವೆಯಲ್ಲಿ ತೊಡಗಿಸಿಕೊಳ್ಳಬೇಕೆಂಬ ಕರೆ ನೀಡುತ್ತಾರೆ.

ವೇಶ್ಯಾ ಸಮಸ್ಯೆಯನ್ನು ಕುರಿತಂತೆ, ರಾಜವಾಡೆಯವರು 'ಪ್ರವಾಹ ಪತಿತೆ', 'ಕುಲವಧು' 'ಆಹ, ಪ್ರಪಂಚವೆ!' ಮುಂತಾದ ಕತೆಗಳನ್ನು ಬರೆದಿದ್ದಾರೆ. ಸಮಾಜದಲ್ಲಿ ವೇಶ್ಯಾಪದ್ಧತಿಯು ಹುಟ್ಟಿಕೊಳ್ಳಲು ಕಾರಣವನ್ನು ಕತೆಗಾರರು ಶೋಧಿಸುವ ಪ್ರಯತ್ನ ಮಾಡಿದ್ದಾರೆ. ವೇಶ್ಯಾಪದ್ಧತಿಯಿಂದ ಹೆಣ್ಣುಮಕ್ಕಳು ಮುಕ್ತರಾಗಿ, ಮದುವೆಯೆಂಬ ಸಂಸ್ಥೆಯ ಪ್ರಧಾನವಾಹಿನಿಗೆ ಸೇರಬೇಕೆಂಬುದು ಕತೆಗಾರರ ಹಂಬಲವಾಗಿದೆ. 'ಪ್ರವಾಹ ಪತಿತೆ' ಕತೆಯಲ್ಲಿ ಮೂರ್ಛೆ ರೋಗದಿಂದ ಬಳಲುವ ಅಶಕ್ತ ತಾಯಿಯನ್ನು ಸಾಕುವ ಹೊಣೆಯಿಂದಾಗಿ ಜಯಾ ವೇಶ್ಯೆಯಾಗುತ್ತಾಳೆ. ಈ ಕತೆ ಸಂಭಾಷಣೆಗಳಿಂದ ಕೂಡಿದ ವಿನ್ಯಾಸವನ್ನು ಹೊಂದಿದೆ. ಜಯಾಳ ಮೂಲಕ ಹೊರಡುವ ಅಭಿಪ್ರಾಯಗಳು ಕತೆಗಾರರ ನಿಲುವುಗಳಾಗಿಯೂ ಗೋಚರವಾಗುತ್ತದೆ. ಜಯಾ ತನ್ನ ತಾಯಿಯನ್ನು ಕುರಿತು "ವ್ಯಭಿಚಾರವೆಂದರೆ, ಪರಸ್ತ್ರೀ-ಪುರುಷ ಸಂಸರ್ಗವೆಂಬರ್ಥವು ರೂಢಿಯಲ್ಲಿರುವುದರಿಂದಲೇ ನೀನಿಷ್ಟು ಉತ್ತೇಜಿತಳಾದೆ. ಆಚಾರ-ಧರ್ಮವನ್ನು ಬಿಟ್ಟವರೆಲ್ಲರೂ ವ್ಯಭಿಚಾರಿಗಳೆಂಬರ್ಥದಲ್ಲಿ ನಾನು ಹಾಗೆಂದೆ. 'ಧರ್ಮಂ ಚರ' ಎಂದಿದೆ ಸೂತ್ರ. ಎಲ್ಲರೂ ಅದನ್ನು ಪಾಲಿಸುತ್ತಾರೆಯೇ? .... ನಮ್ಮ ಆಚಾರ್ಯರಿರುವರಲ್ಲಾ, ಮಕ್ಕಳು ಮರಿಗಳಿಲ್ಲದ ಅವರು, ಪ್ರಕೃತ ಇಡೀ ಊರಲ್ಲಿರುವ ಬಡವರಿಗೆ ವರ್ಷದತನಕ ಕೂಳು ಹಾಕಿ ಸಾಕುವಷ್ಟು ಕೊಬ್ಬಿದ ಶ್ರೀಮಂತರಿರುತ್ತ, ಮುಡಿಗೆ ಐವತ್ತು ರೂಪಾಯಿಗಳವರೆಗೂ ಪಡೆದು ಅಕ್ಕಿಯನ್ನು ಮಾರುತ್ತಿರುವರಲ್ಲಾ ಅದು ಧರ್ಮವೆ? ಅವರನ್ನು ವ್ಯಭಿಚಾರಿಗಳೆಂದರೆ ಅತಿಶಯವೇನಮ್ಮಾ?" (ಗಿರಿಬಾಲೆ, ಪುಟ-೧೪೩) ಎಂಬ ಪ್ರಶ್ನೆಯನ್ನು ಕೇಳಲಾಗಿದೆ. ವ್ಯಭಿಚಾರ ಎಂಬ ಪರಿಕಲ್ಪನೆಯನ್ನು, ಅಧರ್ಮವನ್ನು ಪಾಲಿಸುತ್ತಿರುವ ಸಮಾಜದ 'ಗಣ್ಯ'ರನ್ನು ಟೀಕೆಗೆ ಒಳಪಡಿಸಲಾಗಿದೆ. ಜಯಾಳ ನಡತೆಯನ್ನು ಮೆಚ್ಚಿಕೊಂಡ ಶ್ರೀಧರ, ಅವಳನ್ನು ಮದುವೆಯಾಗುತ್ತಾನೆ. 'ಆಹ, ಪ್ರಪಂಚವೆ!' ಕತೆಯಲ್ಲಿಯೂ ವೇಶ್ಯೆಯಾದ ಲಲಿತಾಳನ್ನು ರಾಮಮೂರ್ತಿ ಮದುವೆಯಾಗಿದ್ದಾನೆ. ಆದರೆ, ನಿತ್ಯವೂ

ಹೊಸ ವಧುವಾಗಬೇಕಾಗಿದ್ದ ಲಲಿತಾಳಿಗೆ, ರಾಮಮೂರ್ತಿಯ ಪ್ರೇಮ ಪಡೆಯಲು ತಾನು ಯೋಗ್ಯಳಾಗಿಲ್ಲವೆಂಬ ಕೊರಗು ಕಾಡುತ್ತದೆ. ಇದರೊಂದಿಗೆ ಕತೆಗಾರರು ವೇಶ್ಯೆಯರ ಸಂಗ ಮಾಡುತ್ತಿದ್ದ ರಾಮಮೂರ್ತಿಯ ಪಶ್ಚಾತ್ತಾಪವನ್ನು ದಾಖಲಿಸಿದ್ದಾರೆ. "ನಿಜವಾಗಿಯೂ ಲಲಿತಳು ಅಯೋಗ್ಯಳೆ? ಅವಳಿಗೆ ಹಾಗೆಂದು ತಿಳಿಯುವ ಜ್ಞಾನವಾದರೂ ಇದೆ. ಆದರೆ ನಾನು! ಹಿಂದೆಷ್ಟು ಸ್ತ್ರೀಯರನ್ನು ಹೃದಯಕ್ಕೆ ಬಿಗಿದಿಲ್ಲ! ಎಷ್ಟು ಸ್ತ್ರೀಯರಲ್ಲಿ, 'ನೀನೆನ್ನ ಸರ್ವಸ್ವ'ವೆಂದು ಹೇಳಲಿಲ್ಲ. ಆದರೂ ಲಲಿತೆಯನ್ನು ಪ್ರೀತಿಸುವೆನೆಂದು ತಿಳಿದಿರುವೆನಲ್ಲ! ನನ್ನ ಪ್ರೀತಿಯು ಅಷ್ಟು ಪವಿತ್ರವೆ? ಹಾಗೆಂದು ತಿಳಿದು ಲಲಿತೆಯು ನನ್ನಿಂದ ದೂರವಿರುವುದು ಸರಿಯೆ? ನ್ಯಾಯವೆ? ಅಹ, ಪ್ರಪಂಚವೇ!" (ಅದೇ, ಪುಟ-೧೧೮) ಎಂದು ರಾಮಮೂರ್ತಿ ತನ್ನನ್ನು ತಾನು ಪ್ರಶ್ನಿಸಿಕೊಳ್ಳುತ್ತಾನೆ. ಲಲಿತ ಮತ್ತು ರಾಮಮೂರ್ತಿಯರಿಬ್ಬರ ಆತ್ಮಾವಲೋಕನದ ಪ್ರಶ್ನೆಗಳು ಪ್ರಶ್ನೆಯಾಗುಳಿಯುತ್ತವೆ.

'ಕುಲವಧು' ಮೊದಲಿನ ಎರಡು ಕತೆಗಳಿಗಿಂತ ಭಿನ್ನವಾದ ಕತೆಯಾಗಿದೆ. ತಾಯಿ-ಅಣ್ಣ-ತಮ್ಮಂದಿರನ್ನು ಕಳೆದುಕೊಂಡಿದ್ದ ಗಂಗಾಳನ್ನು ಮದುವೆಯಾಗಲು ಯಾರೂ ಒಪ್ಪದೆ ಆಕೆಯ ನಡತೆಯ ಬಗ್ಗೆಯೂ ಶಂಕಿಸುತ್ತಾರೆ. ಇದನ್ನರಿತ ಗಂಗಾಳ ತಂದೆ ಪದ್ಮನಾಭಯ್ಯ, ಸಮಾಜದ ಮೇಲಿನ ಪ್ರತೀಕಾರಕ್ಕಾಗಿ, ಗಂಗಾಳ ಬದುಕಿನ ಭವಿಷ್ಯಕ್ಕಾಗಿ ಆಕೆಯನ್ನು ಮುಂಬೈಗೆ ಕರೆದೊಯ್ದು ವೇಶ್ಯೆಯನ್ನಾಗಿಸುತ್ತಾನೆ. ದುಡ್ಡು ಕೂಡಿಸಿ, ಕಾರಿನಲ್ಲಿ ಮರಳಿ ಊರಿಗೆ ಬಂದಾಗ, ಮೊದಲು ಈ ಸಂಬಂಧ ಬೇಡವೆಂದು ದೂರ ಸರಿದವರು, ಈಗ ಗಂಗಾಳನ್ನು ಮನೆ ತುಂಬಿಸಿಕೊಳ್ಳಲು ಹಾತೊರೆಯುತ್ತಾರೆ. ಭಿಕಾರಿಯೆಂದು ಹಂಗಿಸಿದ ಕುಲಶೇಖರದವರ ಮನೆಯ ಶಿವಶಂಕರನೊಂದಿಗೆ ಗಂಗಾಳ ಮದುವೆ ನೆರವೇರುತ್ತದೆ. ಈ ಕತೆಯಲ್ಲಿ ಕತೆಗಾರರು ವಿಚಿತ್ರ ತಿರುವನ್ನು ನೀಡಿದ್ದಾರೆ. ಜತೆಗೆ ತಂದೆ-ಮಗಳು, ಹಿಂದೆ ನಡೆದ ವಿಷಯವನ್ನು ಮದುಮಗನ ಮುಂದೆ ಬಹಿರಂಗ ಪಡಿಸುವ ಧೈರ್ಯವನ್ನು ಪ್ರಕಟಿಸುತ್ತಾರೆ. 'ಕುಲವಧು' ಮತ್ತು 'ಪ್ರವಾಹ ಪತಿತೆ' ಕತೆಗಳ ಗಂಗಾ ಮತ್ತು ಜಯಾ ಬಂದೊದಗಿದ ದುಃಸ್ಥಿತಿಗೆ ಅಂಜದೆ ಬದುಕುವ ಛಲವನ್ನು ಪ್ರಕಟಿಸುತ್ತಾರೆ.

'ಕುಲವಧು' ಮತ್ತು 'ಪ್ರತೀಕಾರ' ಕತೆಗಳು ವರದಕ್ಷಿಣೆ ಸಮಸ್ಯೆಯನ್ನು ಮುಂದಿಡುತ್ತವೆ. 'ಕುಲವಧು' ಕತೆಯಲ್ಲಿ ಗಂಗಾಳನ್ನು ವರನ ಕಡೆಯವರು ಒಪ್ಪದಿರಲು ಆಕೆಯ ಮೇಲಿನ ಶಂಕೆಯೊಂದೇ ಕಾರಣವಲ್ಲ. ವರದಕ್ಷಿಣೆಯ ದಾಹವೂ ಕಾರಣವಾಗಿದೆ. ಕತೆಗಾರರು ಅದನ್ನು ನಿಭಾಯಿಸಿದ ರೀತಿಯನ್ನು ಮೇಲೆ ತಿಳಿಸಲಾಗಿದೆ. 'ಪ್ರತೀಕಾರ' ಕತೆಯಲ್ಲಿ ಅನಾಥಳಾದ ವತ್ಸಲೆಯ ದುರಂತ ಬದುಕನ್ನು ಕತೆಗಾರರೇ ನೇರವಾಗಿ ನಿರೂಪಿಸುತ್ತಾ ಹೋಗಿದ್ದಾರೆ. ಜೋಡಿದಾರರಾದ ಉಮಾಶಂಕರ ಮತ್ತು ಅವರ ಪತ್ನಿಯ ಕುಕೃತ್ಯಕ್ಕಾಗಿ, ಹಣದ ದಾಹಕ್ಕಾಗಿ ವತ್ಸಲೆ ಬಲಿಯಾಗುತ್ತಾಳೆ. ಸಾಕು ತಂದೆ ಗೌರೀಚರಣ ಜೋಡಿದಾರ ದಂಪತಿಗಳನ್ನು ಚಿತೆಗೇರಿಸುವ ಮೂಲಕ ತನ್ನ ಸೇಡನ್ನು ತೀರಿಸಿಕೊಂಡು, ವತ್ಸಲಾಳ ಹೆಸರಿನಲ್ಲಿ ಅನಾಥಾಲಯ ತೆರೆಯುತ್ತಾನೆ. 'ಪ್ರತೀಕಾರ' ಕತೆ ನೇರವಾಗಿ ವರದಕ್ಷಿಣೆಗೆ ಸಂಬಂಧಿಸಿರದೆ, ಜಮೀನ್ದಾರಿ ಪದ್ಧತಿಯ ದರ್ಪ, ದೌರ್ಜನ್ಯಗಳನ್ನು ಚಿತ್ರಿಸುತ್ತಾ ಹೋಗಿದೆ. 'ಪ್ರತೀಕಾರ' ಕತೆಯಲ್ಲಿ ಜೋಡಿದಾರರ

ಹಣದ ದಾಹಕ್ಕೆ ವತ್ಸಲೆ ಬಲಿಯಾದರೆ 'ಆಹುತಿ' ಕತೆಯಲ್ಲಿ ಬಂಜೆತನದ ಕಾರಣಕ್ಕೆ ಲಕ್ಷ್ಮಿ ಬಲಿಯಾಗುತ್ತಾಳೆ. ಲಕ್ಷ್ಮಿಯ ಕೊರಗಿನಲ್ಲಿ ಗಂಡ ನಾರಾಯಣ, ಎರಡನೇ ಹೆಂಡತಿ ರಮೆಯರೂ ಆತ್ಮಹತ್ಯೆ ಮಾಡಿಕೊಳ್ಳುವ ಸನ್ನಿವೇಶವಿದೆ.

ಸರಸ್ವತಿಬಾಯಿ ರಾಜವಾಡೆಯವರ ಕತೆಗಳಲ್ಲಿ, ಬದುಕನ್ನು ಎದುರಿಸುವ ಛಲಗಾತಿಯರಿರುವಂತೆ, ಅನಿವಾರ್ಯ ಪರಿಸ್ಥಿತಿಯಲ್ಲಿ ವ್ಯವಸ್ಥೆಯ ದುಃಸ್ಥಿತಿಗೆ ಬಲಿಯಾಗುವ ಮಹಿಳೆಯರ ದುರಂತ ಚಿತ್ರಣವಿದೆ. 'ಆಹತ ಹೃದಯ' ಕತೆಯು ಮಠಮಾನ್ಯಗಳಲ್ಲಿ, ಧರ್ಮದ ಹೆಸರಿನಲ್ಲಿ ಆಡಳಿತ ನಡೆಸುವ ಸನ್ಯಾಸಿಗಳ ಕಾಮುಕ ಪ್ರವೃತ್ತಿಯನ್ನು ಅನಾವರಣಗೊಳಿಸಲಾಗಿದೆ. ಬಾಲ ಬ್ರಹ್ಮಚಾರಿ ಬ್ರಹ್ಮಾನಂದ ಬಾಲಯೋಗಿಗಳ ಕುಕೃತ್ಯಗಳಿಗೆ ತಡೆಯೊಡ್ಡುವ ಸಲುವಾಗಿ, ಅವರೊಂದಿಗಿದ್ದು, ಐದು ವರ್ಷಗಳಿಂದ ಸಂಸಾರ ಹೂಡಿದ್ದ ಸೀತಾ, ಅವರನ್ನು ಕೊಲೆ ಮಾಡುತ್ತಾಳೆ. ಸನ್ಯಾಸಿಯ ದಾಹಕ್ಕೆ ಬಲಿಯಾದ ಅಬಲೆಯರನ್ನು, ಮಠದಲ್ಲಿ ನಡೆಯುತ್ತಿದ್ದ ಕಾಮಕೇಳಿಗಳನ್ನು ಪೋಲೀಸರಿಗೆ ಮನವರಿಕೆ ಮಾಡಿಕೊಟ್ಟು, ತಾನೂ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. 'ತಾಯೆ! ಶಾಂತಿ!' ಕತೆಯಲ್ಲಿ ಬಡತನ, ಕುಡುಕ ಗಂಡನ ಹಿಂಸೆಯಲ್ಲಿ ನಾಗಿಯ ಮಗು ಹಾಲಿಲ್ಲದೆ ಅಸುನೀಗುತ್ತದೆ. ಆ ಮಗುವಿನೊಂದಿಗೆ ನಾಗಿಯೂ ಮಧ್ವ ಸರೋವರಕ್ಕೆ ಹಾರಿ ಪ್ರಾಣ ಕಳೆದುಕೊಳ್ಳುತ್ತಾಳೆ. ಕತೆಗಾರರು, ಕತೆಯಲ್ಲಿ ಎರಡು ಸನ್ನಿವೇಶಗಳನ್ನು ಮುಖಾಮುಖಿಯಾಗಿಸಿದ್ದಾರೆ. ಊರಿನಲ್ಲಿ ಸಂಭ್ರಮದಿಂದ ನಡೆಯುತ್ತಿರುವ ಜಾತ್ರೆ ಒಂದು ಕಡೆ. ತೊಟ್ಟು ಹಾಲು ಗತಿಯಿಲ್ಲದೆ, ಅಸುನೀಗಿದ ನಾಗಿಯ ಮಗುವೊಂದು ಕಡೆ.

'ಕಾಳಿ' ಕತೆಯಲ್ಲಿ ಪ್ರಭುತ್ವದ ಬಲೆಯಲ್ಲಿ ಸಿಕ್ಕು, ಕಾಳಿ ವಿಷಪ್ರಾಶನದಿಂದ ಕೊನೆಯುಸಿರೆಳೆಯುತ್ತಾಳೆ. 'ಕಾಳಿ' ಒಂದು ವಿಶಿಷ್ಟ ಕತೆಯಾಗಿದೆ. ಕತೆಗಾರರು, ಓದುಗರನ್ನು ಸಂಬೋಧಿಸಿ ಕತೆಯನ್ನು ಚಿತ್ರಿಸುತ್ತಾ ಸಾಗಿದ್ದಾರೆ. "ಕಾಳಿಯು ನಮ್ಮ ಕಥಾ ನಾಯಕಿ. ಕಥಾ ನಾಯಕಿಯಾಗತಕ್ಕವಳಿಗೆ ಕಿವಿಗೆ ಮಧುರವಾದ ಬೇರಾವ ಹೆಸರೂ ಇರಲಿಲ್ಲವೇ ಎಂಬ ಪ್ರಶ್ನೆ ಬರಬಹುದು. ಆದರೆ ಪ್ರತಿಯೊಬ್ಬ ಕಥಾನಾಯಕಿದೂ ಕರ್ಣಾನಂದಕರವಾದ ಒಂದು ಹೆಸರು, ದೈವದುರ್ಲಭವಾದ ಸೌಂದರ್ಯ.... ಇನ್ನೂ ಪ್ರಪಂಚದಲ್ಲಿಲ್ಲದ ವೈಚಿತ್ರ್ಯ. ಇವೆಲ್ಲ ಇದ್ದೇ ತೀರಬೇಕೆಂಬ ನಿಯಮವಿಲ್ಲವಷ್ಟೆ?" (ಅದೇ, ಪುಟ-೪೧) ಎಂಬ ಪೀಠಿಕೆಯೊಂದಿಗೆ ಓದುಗರ ಆಸಕ್ತಿಯನ್ನು ಕತೆಯೆಡೆಗೆ ಸೆಳೆದಿದ್ದಾರೆ. ಕಾಳಿಯ ಜೀವನದಲ್ಲಾಗುವ ವಿಶಿಷ್ಟ ತಿರುವುಗಳನ್ನು ಮನಗಾಣಿಸಿದ್ದಾರೆ. ಹಾಗೆ ನೋಡಿದರೆ, ಹೆಚ್ಚು ಕತೆಗಳಲ್ಲಿ, ರಾಜವಾಡೆಯವರು ಭಿನ್ನ ರೀತಿಯ, ನಾಟಕೀಯತೆಯ ತಿರುವನ್ನು ಕೊಟ್ಟು, ಕತೆಯ ಓಟವನ್ನು ಬದಲಿಸುತ್ತಾರೆ. ಕುರೂಪಿಯಾದ ಕಾಳಿ, ರಾಜಕುಮಾರ ತೇಜಸಿಂಹನನ್ನು ಹುಲಿಯ ಬಾಯಿಂದ ರಕ್ಷಿಸುತ್ತಾಳೆ. ಅಂತ್ಯಜಳಾದ ಆಕೆಯನ್ನು ಕರೆದೊಯ್ದು ಅರಮನೆಯ ಪ್ರತ್ಯೇಕ ಶಿಲಾಗೃಹದಲ್ಲಿರಿಸಲಾಗಿದೆ. ಆಕೆಯನ್ನು ಪ್ರೀತಿಸತೊಡಗಿರುವ ವಿಷಯ ತಿಳಿದ ಮೇಲೆ ರಾಜಮಾತೆ ತೇಜಸಿಂಹನ ಕಣ್ಣುಗಳನ್ನು ಕೀಳಿಸಿ, ರಾಜಪತ್ನಿಯನ್ನು ಕಾಳಿ ಎಂದು ನಂಬಿಸಲಾಗುತ್ತದೆ. ಕಾಳಿಯನ್ನು ವಿಷಪ್ರಾಸನದಿಂದ ಕೊಲ್ಲಲಾಗುತ್ತದೆ.

‘ – X – = + !’ ಕತೆ ಮತ್ತು ‘ಚಾವಡಿ ಕೂಟ’ ಕತೆ ನವಿರಾದ ಹಾಸ್ಯಲೇಪನದಿಂದ ನಿರೂಪಿತವಾಗಿವೆ. ಮೊದಲ ಕತೆಯಲ್ಲಿ ಶ್ರೀಪತಿರಾಯರ ಮಗಳು ಕುಮುದೆಯ ಭಾವಚಿತ್ರ ಕಳೆದು ಲಲಿತ ಮತ್ತು ಆಕೆಯ ಗಂಡನ ಕಲಹಕ್ಕೆ ಕಾರಣವಾಗಿದೆ. ಗಂಡ ಹೆಂಡತಿಯ ಹುಸಿಮುನಿಸು, ಅಗಲಿಕೆಯಲ್ಲಿ ಉಂಟಾಗುವ ತಳಮಳಗಳನ್ನು ನವಿರಾಗಿ ಚಿತ್ರಿಸಿದ್ದಾರೆ. ‘ಚಾವಡಿ ಕೂಟ’ ಕತೆ ಗೃಹಿಣಿಯರ ಹರಟೆಯನ್ನು ಬಳಸಿಕೊಂಡು ನಿರೂಪಿತವಾದ ಕತೆ. ಕತೆಯ ಆರಂಭಕ್ಕೆ ಪೀಠಿಕೆ ಹಾಕುವುದನ್ನು ಮತ್ತು ಕೊನೆಯ ಮೂರು ಸಾಲುಗಳ ಮುಕ್ತಾಯವನ್ನು ಬಿಟ್ಟರೆ, ಕತೆಗಾರರು ಎಲ್ಲೂ ಕಾಣಿಸಿಕೊಳ್ಳುವುದಿಲ್ಲ. ಹರಟೆಯಲ್ಲಿ ಪಾಲುಗೊಂಡ ಸುಶೀಲಮ್ಮ ಸುಧಾರಣಾ ಮನೋಭಾವವನ್ನು ಹೊಂದಿದವರ ಪರವಾಗಿ ನಿಂತರೆ ಗಂಗಜ್ಜಿ, ಸುಬ್ಬಕ್ಕ, ನಾಗತ್ತೆ ಸಂಪ್ರದಾಯ–ಆಚರಣೆ ಮೌಲ್ಯಗಳ ಪರ ನಿಂತು ವಾದಿಸುತ್ತಾರೆ. ಯಾರ ಪರವಾಗಿಯೂ ತಮ್ಮ ನಿಲುವನ್ನು ಬದ್ಧಗೊಳಿಸದ ಕತೆಗಾರರು ನಡೆಯುವ ಸಂಗತಿಯನ್ನು ಸಂಭಾಷಣೆಗಳ ಮೂಲಕ ಮುಂದಿಟ್ಟಿದ್ದಾರೆ.

ಸರಸ್ವತಿಬಾಯಿ ರಾಜವಾಡೆಯವರು ದಕ್ಷಿಣ ಕನ್ನಡ ಜಿಲ್ಲೆಯ ಆಡುಮಾತನ್ನು ಕೆಲವು ಕತೆಗಳಲ್ಲಿ ಬಳಸಿಕೊಂಡಿದ್ದಾರೆ. ಉಳಿದಂತೆ ಶಿಷ್ಟ–ಗಂಭೀರ ಭಾಷೆಯನ್ನು ಅಳವಡಿಸಿಕೊಂಡಿದ್ದಾರೆ. ಸಾಧ್ಯವಾದಷ್ಟೂ ಕತೆಯ ಹೊರಗೆ ನಿಂತು ನಿರೂಪಿಸುವ ವಿಧಾನವನ್ನು ಕಾಣಬಹುದು. ಕತೆಗಾರರು ತಾಳುವ ಧೋರಣೆಗಳು ಅಲ್ಲಲ್ಲಿ ಸ್ಪಷ್ಟವಾಗಿ ಗೋಚರಿಸುತ್ತವೆ.

### ೬.೩ ಪತ್ರ /ದಿನಚರಿ ಮಾದರಿ

ಪತ್ರಗಳ ಬರವಣಿಗೆ ಮುಖ್ಯ ಸಂಗತಿಗಳನ್ನು ಸಂವಹನ ಮಾಡುವ ಮಾಧ್ಯಮವಾಗಿರುವಂತೆ ಖಾಸಗಿಯಾದ ಸಂಗತಿಗಳನ್ನು ಆಪ್ತರೊಂದಿಗೆ ಹಂಚಿಕೊಳ್ಳುವ ಮಾದರಿಯಾಗಿ ಬಳಕೆಗೊಳ್ಳುತ್ತದೆ. ಆರಂಭ ಕಾಲದ ಮಹಿಳಾ ಬರಹಗಾರ್ತಿಯರು ಪ್ರಮುಖವಾಗಿ ಕೊಡಗಿನ ಗೌರಮ್ಮನವರು ಪತ್ರ ರೂಪವನ್ನು ತಮ್ಮ ಕತೆಗಳ ಆಕೃತಿಗೆ ಬಳಸಿಕೊಂಡದ್ದು ವಿಶೇಷ. ಪತ್ರರೂಪ ಯಾಕೆ ಮುಖ್ಯವಾಗುತ್ತದೆ ಎನ್ನುವ ಪ್ರಶ್ನೆ ಎದುರಾಗುತ್ತದೆ. ಹೆಣ್ಣಿನ ಅಂತರಾಳದ ವೇದನೆಗಳನ್ನು ಹೊರಹಾಕಲು, ಸಾಮಾಜಿಕ ಕಟ್ಟುಪಾಡುಗಳು, ಸಾಂಪ್ರದಾಯಿಕ ನಿಲುವುಗಳು ತಡೆಯನ್ನು ಒಡ್ಡುತ್ತಿರುತ್ತವೆ. ಕತೆಯೊಳಗೆ ನೇರವಾಗಿ ನಿರೂಪಿಸುವ ವಿಧಾನಕ್ಕಿಂತ, ಭಿನ್ನ ತಂತ್ರಗಳ ರಹದಾರಿಯನ್ನು ಶೋಧಿಸುವುದು ಮುಖ್ಯವಾಗುತ್ತದೆ. ಆಗ ಪತ್ರ, ದಿನಚರಿಯಂತಹ ಮಾದರಿಗಳು ಕತೆಯ ತಂತ್ರಗಳಾಗಿ ರೂಪಗೊಳ್ಳುತ್ತವೆ. ಈ ತಾಂತ್ರಿಕ ವಿಧಾನದಲ್ಲಿ ಯಾವ ಯಾವ ಆಶಯಗಳು ವ್ಯಕ್ತವಾಗಿವೆ ಎಂಬುದನ್ನು ಕೆಳಗಿನಂತೆ ವಿಸ್ತರಿಸಲಾಗಿದೆ.

ಮೊದಲ ಪೀಳಿಗೆಯ ಮಹಿಳಾ ಕತೆಗಾರರಾದ ಶ್ಯಾಮಲಾದೇವಿ ಬೆಳಗಾಂವ್‌ಕರ್‌ರವರು ಪತ್ರ ಮಾದರಿಯನ್ನು ಬಳಸಿಕೊಂಡು ‘ಮೂರುನೂರಾ ಅರವತ್ತೈದು’ ಕತೆಯನ್ನು ರಚಿಸಿದ್ದಾನೆ. ಕತೆಯ ವಸ್ತು ವರದಕ್ಷಿಣೆಯ ಸಮಸ್ಯೆಯನ್ನೊಳಗೊಂಡಿದೆ. ವೈದ್ಯನಾಗಿರುವ ವಿದುರನೊಬ್ಬನ ಕನ್ಯಾಶೋಧವನ್ನು, ಆತ ಹೊಂದಿರುವ ವರದಕ್ಷಿಣೆಯ ದಾಹವನ್ನು ತಂಗಿಯ ಪತ್ರ, ಚಿಕಿತ್ಸಕ ದೃಷ್ಟಿಕೋನದಿಂದ ನೋಡಿದೆ.

ಸಾವಿರಾರು ರೋಗಿಗಳನ್ನು ಒಂದಿಲ್ಲೊಂದು ಔಷಧಿ ಕೊಟ್ಟು ಗುಣ ಮಾಡುವಿ. ಆದರೆ ಅಣ್ಣಾ, ನಿನ್ನ ಸ್ವಭಾವ ಗುಣಕ್ಕೆ ನಿನ್ನ ಬಳಿ ಯಾವ ಔಷಧ-ಶಸ್ತ್ರಕ್ರಿಯೆಯೂ ಇಲ್ಲವೆ?. (ಶ್ಯಾಮಲಾ ಸಂಚಯ, ಪುಟ-೧೦೨) ಎಂಬ ಪ್ರಶ್ನೆಯನ್ನು ವೈದ್ಯನ ತಂಗಿಯ ಮೂಲಕ ಶ್ಯಾಮಲಾದೇವಿಯವರು ಎತ್ತಿದ್ದಾರೆ. 'ಮೂರು ನೂರಾ ಅರವತ್ತೈದು' ಕತೆಯ ಶೀರ್ಷಿಕೆ, ವೈದ್ಯ ನೋಡಿದ ಕನ್ಯೆಗಳ ಸಂಖ್ಯೆಯನ್ನು ವ್ಯಂಗ್ಯವಾಗಿ ಸೂಚಿಸಿದೆ.

ಪತ್ರರೂಪದ ಮಾದರಿಯನ್ನು ಸಮರ್ಥವಾಗಿ ಬಳಸಿಕೊಂಡವರೆಂದರೆ ಕೊಡಗಿನ ಗೌರಮ್ಮನವರು. 'ಒಂದು ಪುಟ್ಟ ಚಿತ್ರ', 'ನಾಲ್ಕು ಘಟನೆಗಳು' 'ಅಪರಾಧಿ ಯಾರು?' 'ಯಾರು?' 'ಕೆಲವು ಕಾಗದಗಳು' 'ಅದೃಷ್ಟದ ಆಟ' ಕತೆಗಳು ಪತ್ರ ಮಾದರಿಯನ್ನು ಸಂಪೂರ್ಣವಾಗಿ ಬಳಸಿಕೊಂಡಿವೆ. 'ವಾಣಿಯ ಸಮಸ್ಯೆ' 'ಪ್ರಾಯಶ್ಚಿತ್ತ' 'ಸುಳ್ಳು ಸ್ವಪ್ನ' ಮುಂತಾದ ಕತೆಗಳಲ್ಲಿ ಕತೆಯ ತಿರುವಿಗೆ ಪತ್ರಗಳು ಕಾರಣವಾಗಿವೆ.

'ಒಂದು ಪುಟ್ಟ ಚಿತ್ರ' 'ನಾಲ್ಕು ಘಟನೆಗಳು' 'ಅಪರಾಧಿ ಯಾರು?' ಕತೆಗಳು ವಿಧವಾ ಸಮಸ್ಯೆಯ ವಸ್ತುವನ್ನು ಒಳಗೊಂಡಿರುವಂತಹವು. 'ಒಂದು ಪುಟ್ಟ ಚಿತ್ರ'ದಲ್ಲಿ ಅತ್ತಿಗೆಯ ಅಣ್ಣ ರಘುನೊಂದಿಗೆ ಬೆಳೆಸಿದ ಸ್ನೇಹದಿಂದಾಗಿ ವಿಧವೆ ಶಾಂತಾ ಬಸಿರಾಗುತ್ತಾಳೆ. ರಘು ವಿಷಯ ತಿಳಿದು, ಆಕೆಯನ್ನು ತಿರಸ್ಕರಿಸಿದಾಗ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಶಾಂತಾ, ರಘು, ಶಾಂತಳ ಅಣ್ಣ ರಾಜ, ರಾಜನ ಗೆಳೆಯ ನಾನಾ ಇವರೊಂದಿಗೆ ನಡೆದ ಪತ್ರಸಂವಾದವು ಶಾಂತಾಳ ಜೀವನ ದುರಂತದಲ್ಲಿ ಕೊನೆಗೊಂಡುದನ್ನು ತಿಳಿಸುತ್ತವೆ. ಸುಮಾರು ಒಂದೂವರೆ ತಿಂಗಳ ಅವಧಿಯಲ್ಲಿ ನಡೆದ ಪತ್ರ ಸಂವಾದ ಶಾಂತಳಿಗಾಗುವ ಅನ್ಯಾಯವನ್ನು, ಆಕೆ ಕೊನೆಗೆ ಕಂಡುಕೊಂಡ ಪರಿಹಾರದ ನಿರ್ಧಾರವನ್ನು ಮುಂದಿಡುತ್ತವೆ.

ವಿಧವೆಯರ ದುರಂತಕ್ಕೆ ಕಾರಣವಾಗುವ ಗಂಡಸರನ್ನು ಕುರಿತು ಕತೆಗಾರರು, ಶಾಂತಾಳ ಮೂಲಕ ತಮ್ಮ ಧ್ವನಿ ಎತ್ತಿದ್ದಾರೆ. "ಅವಳನ್ನು ಕೆಡಿಸಿದವನಿಗೆ ಶಿಕ್ಷೆಯೇ ಇಲ್ಲವೇ ಇರಲಾರದು. ಏಕೆಂದರೆ ಅವನು ಗಂಡಸು, ಅಪರಾಧವು ಹೆಂಗಸರದೇ, ಅವಳನ್ನು ಕೆಟ್ಟ ದಾರಿಯಲ್ಲಿ ಕರೆದುಕೊಂಡು ಹೋದಾತನೀಗ ಇನ್ನೊಬ್ಬಳನ್ನು ಅದೇ ಹಾದಿಯಲ್ಲಿ ಕರೆದೊಯ್ಯಲು ಯತ್ನಿಸುತ್ತಿರಬಹುದು. ಆದರೆ ಗಂಡಸಾದುದರಿಂದ ಅವನಿಗೆ ಶಿಕ್ಷೆಯಿಲ್ಲ. ಆಚಾರದ ಅಧಿಕಾರ ಅಬಲೆಯರ ಮೇಲೆಯೇ" ('ಒಂದು ಪುಟ್ಟ ಚಿತ್ರ', ಜೀವನ ಪ್ರೀತಿ, ಪುಟ-೨೮) ವ್ಯವಸ್ಥೆಯ ಕಂದಾಚಾರಗಳನ್ನು ನೇರವಾಗಿ ಪ್ರಶ್ನಿಸಲು ಸಾಧ್ಯವಿಲ್ಲದಾಗ ಹೀಗೆ ಬೇರೊಬ್ಬರ ಮೂಲಕ ಪ್ರಶ್ನೆಯನ್ನು ಎತ್ತುವ ವಿಧಾನ ಬಳಸಿಕೊಂಡಿದ್ದಾರೆ.

'ನಾಲ್ಕು ಘಟನೆಗಳು' ಕತೆಯಲ್ಲಿ ನಾಗೇಶರಾಯರ ಅತ್ಯಾಚಾರಕ್ಕೆ ಬಲಿಯಾದ ಹೆಣ್ಣನ್ನು, ಹೊರ ಹಾಕಿದ ಘಟನೆಯಿದ್ದರೆ, 'ಅಪರಾಧಿ ಯಾರು' ಕತೆಯಲ್ಲಿ ವಿಧವೆ ಪಾರ್ವತಿ, ಅತಂತ್ರ ಸ್ಥಿತಿಯಲ್ಲಿ ಇಸ್ಲಾಂ ಧರ್ಮಕ್ಕೆ ಮತಾಂತರವಾಗುವ ವಸ್ತುವಿದೆ. ಪುರೋಹಿತಶಾಹಿ ಪ್ರತಿನಿಧಿಯಂತಿರುವ ನಾಗೇಶರಾಯರ ಅತ್ಯಾಚಾರವನ್ನು ಸಹಿಸಿಕೊಂಡು ಅವರ ಮನೆಯಲ್ಲಿಯೇ ಅಡುಗೆ ಕೆಲಸ ಮಾಡಿಕೊಂಡಿದ್ದ ಪಾರ್ವತಿಯನ್ನು ಸಲ್ಲದ ಅಪವಾದಕ್ಕೆ ಗುರಿಪಡಿಸಿ, ಜಾತಿಯಿಂದ ಬಹಿಷ್ಕಾರ

ಹಾಕಿಸಲಾಗುತ್ತದೆ. ಬಾವಿ ಪಾಲಾಗಲು ಹೊರಟಿದ್ದ ಪಾರ್ವತಿಯನ್ನು, ಗೆಳತಿ ಉನ್ನೀಸಾ ಉಳಿಸುತ್ತಾಳೆ. ಆಕೆಯ ಆಶ್ರಯ ಪಡೆಯಲು ಪಾರ್ವತಿ 'ರಜಿಯಾ' ಆಗುವುದು ಅನಿವಾರ್ಯವಾಗಿತ್ತು. ಸಾಮಾಜಿಕ ವ್ಯವಸ್ಥೆಯು ಹೆಣ್ಣುಮಕ್ಕಳ ಮೇಲೆ ಹೇರುವ ಸಾಂಪ್ರದಾಯಿಕ ನಿಯಮಗಳಿಗೆ ಗೌರಮ್ಮನವರು ಖಾರವಾಗಿಯೇ ಪ್ರತಿಕ್ರಿಯಿಸುತ್ತಾರೆ. "ಜಾತಿ ನಿಯಮಗಳು ಹೆಂಗಸರಿಗೆ ಮಾತ್ರ, ಗಂಡಸರು ಆ ನಿಯಮಕ್ಕೆ ಒಳಪಡಬೇಕಾಗಿಲ್ಲ. ಇದೇ ನೋಡು, ನಮ್ಮ ಜಾತಿಯ ದೊಡ್ಡತನದ ಕುರುಹು" ('ಅಪರಾಧಿ ಯಾರು?', ಅದೇ, ಪುಟ-೭೩) ಪಾರ್ವತಿ ರಜಿಯಾ ಆಗಲು ಕಾರಣಕರ್ತರು ನಾಗೇಶರಾಯರಂಥ ಗಂಡಸರೇ ಆಗಿದ್ದಾರೆಂಬುದನ್ನು ಕತೆ ಸೂಚ್ಯವಾಗಿ ತಿಳಿಸತ್ತದೆ.

'ಕೆಲವು ಕಾಗದಗಳು' ಕತೆ ವಸಂತರಾಯರು ಪ್ರಭೆಯೊಂದಿಗೆ ಹೊಂದಿರುವ ನಿಷ್ಕಾಮ ಪ್ರೀತಿಯನ್ನು ನಿರೂಪಿಸುತ್ತದೆ. ಘಟನೆಯ ತಿರುವಿಗೆ ಕಾರಣವಾದ 'ವಾಣಿಯ ಸಮಸ್ಯೆ' ಕತೆಯಲ್ಲಿ ರತ್ನನು ಇಂದುವಿಗೆ ಬರೆದ ಪತ್ರವಿದೆ. ಒಂಟಿಯಾಗಿ ಬಾಳುತ್ತಿದ್ದ ಇಂದುವಿನ ದಿನಚರಿಯಲ್ಲಿ, ನೆರೆಮನೆಯ ವಾಣಿ-ರತ್ನರ ದಾಂಪತ್ಯವು, ಯಾವುದೋ ಸುಪ್ತ ಬಯಕೆಗಳ ತರಂಗಗಳನ್ನು ಸೂಕ್ಷ್ಮವಾಗಿ ಬಡಿದೆಬ್ಬಿಸುತ್ತದೆ. ಇಂದುವಿನ ಶಿಸ್ತಿನ ಬಗ್ಗೆ ಅಪಾರ ಮೆಚ್ಚುಗೆ ಹೊಂದಿದ ರತ್ನ, ಇಂದುವಿನ ಸಾಂಗತ್ಯವನ್ನು ಪರೋಕ್ಷವಾಗಿ ಬಯಸುತ್ತಾನೆ. ವಾಣಿ ಊರಿಗೆ ಹೋದ ಸಂದರ್ಭದಲ್ಲಿ ರತ್ನ ಇಂದುವಿಗೆ ಪತ್ರ ಬರೆದು ತಲುಪಿಸುತ್ತಾನೆ. ಆದರೆ ಸಾಮಾಜಿಕ ನಿರ್ಬಂಧಗಳನ್ನು ನೆನೆದ ಇಂದು ಪತ್ರವನ್ನು ಒಡೆಯದೆ ಸುಟ್ಟು ಹಾಕುತ್ತಾಳೆ. ಕೊನೆಗೆ ವಾಣಿ ರತ್ನರಿಂದ ದೂರಾಗಲು ಮನೆ ಬಿಟ್ಟು ಹೋಗುತ್ತಾಳೆ. 'ಪ್ರಾಯಶ್ಚಿತ್ತ' ಕತೆಯಲ್ಲಿ ನಳಿನಿಯನ್ನು ಮದುವೆಯಾಗಲು ಮೂರ್ತಿಯ ತಂದೆ ಒಪ್ಪಿಗೆ ನೀಡದಾದಾಗ, ಮೂರ್ತಿ ಪತ್ರ ಬರೆದಿಟ್ಟು ನಳಿನಿಯನ್ನು ಮದುವೆಯಾಗುವ ನಿರ್ಧಾರಕ್ಕೆ ಬದ್ಧನಾಗಿದ್ದಾನೆ. ಮಾತುಕತೆ ಒಪ್ಪಂದಗಳಲ್ಲಿ ಬಗೆಹರಿಯದ ಸಮಸ್ಯೆಯನ್ನು ಮೂರ್ತಿ ಪತ್ರ ಬರೆದಿಡುವ ಮೂಲಕ ಪರಿಹರಿಸಿಕೊಳ್ಳುತ್ತಾನೆ. ಇಲ್ಲಿ ನಿಜದ ಪಶ್ಚಾತ್ತಾಪವಿರುವುದು ಮೂರ್ತಿಯ ನಿರ್ಧಾರಕ್ಕಲ್ಲ. ನಳಿನಿಯ ವಿಧವೆ ತಾಯಿಯನ್ನು ಮೂರ್ತಿಯ ತಂದೆ, ಲೈಂಗಿಕ ಸಂಪರ್ಕಕ್ಕೆ ಬಳಸಿಕೊಂಡಿದ್ದಕ್ಕಾಗಿ, ಆಕೆಯ ಆತ್ಮಹತ್ಯೆಗೆ ಕಾರಣವಾಗಿದ್ದಕ್ಕಾಗಿ ಎಂಬುದು ಕತೆಯ ಕೊನೆಗೆ ಗೊತ್ತಾಗುತ್ತದೆ. 'ಸುಳ್ಳು ಸ್ವಪ್ನ' ಕತೆಯಲ್ಲಿ ಜೀವದಷ್ಟು ಪ್ರೀತಿಸುವ ಗೆಳೆಯ, ಬೇರೆಯವನೊಂದಿಗೆ ತನ್ನ ಮದುವೆಯಾಗುವುದನ್ನು ತಿಳಿದೂ "ಮುಂದಿನ ಜೀವನವು ಸುಖ ಸಂತೋಷಪೂರ್ಣವಾಗಿರಲೆಂದು" ಹಾರೈಸುವ ಪತ್ರ ಮನಸ್ಸಿನ ವಿಹ್ವಲತೆಗೆ ಕಾರಣವಾಗುತ್ತದೆ. 'ಯಾರು?' ಕತೆಯು ವಸಂತ ಮತ್ತು ಮಹೇಶರ ನಡುವೆ ನಡೆದ ಪತ್ರ ಸಂವಾದದಲ್ಲಿದೆ. ಮಹೇಶ ಕತೆಯ ಮುಖ್ಯ ನಿರೂಪಕನಾಗಿದ್ದಾನೆ. ಮಹೇಶನ ಮೂಲಕ ಗಂಡನಿಂದ ಪರಿತ್ಯಕ್ತೆಯಾದ ಅವನ ತಂಗಿ ಪಾಪಳ ಕತೆಯನ್ನು ವಸಂತನಿಗೆ ನಿರೂಪಿಸಲಾಗಿದೆ. ಮಹೇಶನ ಪತ್ರ ನಾಲ್ಕು ವರ್ಷದ ಹಿಂದಿನ ಘಟನೆಯನ್ನು ಹೊಂದಿದೆ.

ವಿದೇಶಕ್ಕೆ ಓದಲು ಭರಿಸುವ ಖರ್ಚಿನ ಸಲುವಾಗಿ ಮದುವೆಯಾದ ಪಾಪಳ ಗಂಡ ಇಂಗ್ಲೆಂಡಿನಿಂದ ಬಂದ ಮೇಲೆ ಆಕೆಯನ್ನು ತಿರಸ್ಕರಿಸಿ ಬೇರೊಬ್ಬಳನ್ನು ಮದುವೆಯಾಗುತ್ತಾನೆ. ಮುಂದಿನ

ಅವಘಡಗಳಿಂದಾದ ಪರಿಣಾಮ, ಪಾಪ ಸಿನಿಮಾನಟಿ 'ಮಿಸ್ ಅರುಣಾದೇವಿ'ಯಾಗಿ ಪ್ರಸಿದ್ಧಿ ಹೊಂದುತ್ತಾಳೆ. ಗೌರಮ್ಮನವರ ಕತೆಗಳಲ್ಲಿ ಈ ಕತೆ ಭಿನ್ನ ತಿರುವನ್ನು ಪಡೆದಿದೆ. ಸಿನಿಮಾ ನಟಿಯಾಗುವುದೆಂದರೆ ಚರಿತ್ರಹೀನ ಸಂಗತಿಯಾಗಿದೆಯೆಂಬುದು "ಜನರ ದೃಷ್ಟಿಯಲ್ಲಿ ಮೊದಲೇ ಪತಿಯಿಂದ ಪರಿತ್ಯಕ್ತೆಯಾಗಿದ್ದ ಪಾಪ, ಈಗ ಸಿನಿಮಾ ನಟಿ! ಸಿನಿಮಾ ನಟಿ!! ನಮ್ಮವರಿಗೆ ಪತಿತರು, ಚರಿತ್ರಹೀನರು ಎನ್ನುವುದಕ್ಕೆ ಇದಕ್ಕಿಂತಲೂ ಹೆಚ್ಚಿಗಿನ್ನೇನು ಬೇಕು ವಸಂತ?" ('ಯಾರು?', ಅದೇ, ಪುಟ-೧೦೪) ಎಂಬ ಮಾತುಗಳಲ್ಲಿ ವ್ಯಕ್ತವಾಗಿದೆ.

'ಆಹುತಿ' ಕತೆಯಲ್ಲಿ, ವಿಜಯಳ ಅಣ್ಣ ಶಾಂತಿಯನ್ನು ಮದುವೆಯಾಗಲು ಒಪ್ಪದಿರುವುದಕ್ಕೆ ಕಾರಣ ತಾನು ಲಂಡನ್ನಿಗೆ ಹೋಗಿ ಕಲಿಯಲು ಶಾಂತಿಯ ಮನೆಯವರು ವರದಕ್ಷಿಣೆ ಹಣವನ್ನು ಕೊಡಲು ಅಸಮರ್ಥರಾಗಿರುವುದು. ಮುಂದೆ ಆಕಸ್ಮಿಕ ತಿರುವುಗಳಲ್ಲಿ ವಿಜಯಳ ಅಣ್ಣ ಶಾಂತಿಯನ್ನು ಮದುವೆಯಾಗಲು ನಿರ್ಧರಿಸುವ ಹೊತ್ತಿಗೆ, ಶಾಂತಿಯ ಆತ್ಮಹತ್ಯೆಯ ಮುನ್ಸೂಚನೆಯ ಪತ್ರ ತಲುಪುತ್ತದೆ. ಮುದುಕನೋರ್ವನೊಂದಿಗೆ ಮದುವೆ ಮಾಡುವ ತಯಾರಿ ನಡೆದಾಗ ಶಾಂತಿ ಆತ್ಮಹತ್ಯೆಗೆ ಶರಣಾಗುತ್ತಾಳೆ.

'ಮನುವಿನ ರಾಣಿ'ಯಲ್ಲಿ ವೇಶ್ಯೆಯಾದ ರಾಜಮ್ಮ ಕತೆಯ ಉತ್ತರಾರ್ಧದಲ್ಲಿ ಪತ್ರದ ಮೂಲಕ ತನ್ನ ಹಿಂದಿನ ಮೂರು ವರ್ಷಗಳ ಕತೆಯನ್ನು ಬಿಚ್ಚಿಡುತ್ತಾಳೆ. ಈ ಕತೆಯ ರಾಜಮ್ಮನಾಗಲೀ; 'ಒಂದು ಪುಟ್ಟ ಚಿತ್ರ'ದ ಶಾಂತಾಳಾಗಲೀ; 'ಯಾರು' ಕತೆಯ ಮಹೇಶನಾಗಲೀ-ಇವರಾರೂ ನೇರವಾಗಿ ತಮ್ಮ ಸಂಕಷ್ಟಗಳನ್ನು ಹೇಳಿಕೊಳ್ಳಲಾರದವರು. ಅವರ ನೆರವಿಗೆ ಬಂದದ್ದು ಪತ್ರಗಳು ಮಾತ್ರ. ಶಾಂತಾಳ ಆತ್ಮಹತ್ಯೆಗೆ ರಘು ಕಾರಣ; ಮಹೇಶನ ತಂಗಿ ಪಾಪ ಸಿನಿಮಾ ನಟಿಯಾಗಲು ಆಕೆಯ ಗಂಡನ ವರದಕ್ಷಿಣೆ ಕಾರಣ; ರಾಜಮ್ಮನ ಪ್ರೀತಿಗೆ ಕಾರಣನಾಗಿದ್ದ ಮನುವಿನ ಅಸ್ವಸ್ಥತೆಗೆ ರಾಜಮ್ಮನ ತಾಯಿ ಕಾರಣರೆಂಬುದು ತಿಳಿಯುವುದು ಅವರು ಬರೆದಿಡುವ ಪತ್ರಗಳಿಂದ.

ವ್ಯಕ್ತಿ ವ್ಯಕ್ತಿಗಳ ನಡುವಿನ ವಿಷಯ ಹಂಚಿಕೆಗೆ ಸೀಮಿತವಾಗಿದ್ದ ಪತ್ರರೂಪವನ್ನು ಕೊಡಗಿನ ಗೌರಮ್ಮನವರು ಸೃಜನಶೀಲ ಕ್ರಿಯೆಗೆ ಅಳವಡಿಸಿಕೊಂಡದ್ದು ಕತೆಗಳ ಚಲನೆಗೆ ಹೊಸ ರೂಪ ಕೊಟ್ಟಂತಾಗಿದೆ. ಸಾಮಾಜಿಕ ಅಸಮಾನತೆಯ ಪ್ರಶ್ನೆಗಳನ್ನು, ಸಾಂಪ್ರದಾಯಿಕ ಕಂದಾಚಾರಗಳನ್ನು ಪ್ರಶ್ನಿಸಲು, ವಿಶ್ಲೇಷಿಸಲು ಪತ್ರರೂಪಗಳನ್ನು ಸಮರ್ಥವಾಗಿ ದುಡಿಸಿಕೊಂಡಿದ್ದಾರೆ. ಪತ್ರಗಳು ನಿರೂಪಿಸುತ್ತಿರುವುದು, ಬದುಕಿನಲ್ಲಿ ಹೆಣ್ಣು ಅನುಭವಿಸಬೇಕಾದ ಅಸಹಾಯಕತೆಯನ್ನು ಮತ್ತು ಕಾಡುವ ವಿಷಾದವನ್ನು.

ಕೊಡಗಿನ ಗೌರಮ್ಮನವರ ಸಮಕಾಲೀನ ಬರಹಗಾರರಾದ ಲೀಲಾಬಾಯಿ ಕಾಮತ್, ಭಾರತಿದೇವಿ ಫಣಿಯಾಡಿ ಸೇರಿದಂತೆ ಹಲವಾರು ಲೇಖಕಿಯರು ಈ ಪತ್ರರೂಪದ ಮಾದರಿಯಲ್ಲಿ ಕೆಲವು ಕತೆಗಳನ್ನು ಬರೆದಿದ್ದಾರೆ. ಸಾಮಾಜಿಕ ಸಮಸ್ಯೆಗಳನ್ನು ಕತೆಗಳ ಮೂಲಕ ಕೈಗೆತ್ತಿಕೊಂಡಾಗ, ಅದನ್ನು ನಿರ್ವಹಿಸಲು ಪತ್ರ ಮಾದರಿ ಮುಖ್ಯ ತಂತ್ರವಾಗಿ ಬಳಕೆಯಾಗಿರುವುದನ್ನು ಗೌರಮ್ಮನವರ ಕತೆಗಳು ಸಮರ್ಥಿಸುತ್ತವೆ.

ಒಬ್ಬರಿಂದ ಮತ್ತೊಬ್ಬರಿಗೆ ಸಂವಹನ ಏರ್ಪಡಿಸುವಲ್ಲಿ ಪತ್ರ ಪ್ರಮುಖ ಮಾಧ್ಯಮವಾಗಿದ್ದರೆ, ದಿನಚರಿಯ ಬರಹ ಯಾರೊಂದಿಗೂ ಹೇಳಲಾರದ ಭಾವನೆಗಳನ್ನು, ತನ್ನೊಳಗನ್ನು ತೆರೆದಿಡುವ ಗುಣ ಹೊಂದಿದೆ. ಕತೆಗಳಲ್ಲಿ ದಿನಚರಿ ರೂಪವನ್ನು ಬಳಸಿಕೊಳ್ಳುವ ಧಾರಾಳ ಉದಾಹರಣೆಗಳಿವೆ. ದಿನಚರಿಗಳು ಕತೆಗಳಲ್ಲಿ ಬಳಕೆಯಾಗುವ ಸ್ವಗತ ರೂಪವನ್ನು ತಾಳುತ್ತವೆ. ಒಂದೆರಡು ಕತೆಗಳ ಉದಾಹರಣೆಗಳನ್ನು ಇಲ್ಲಿ ಪರಿಶೀಲಿಸಲಾಗಿದೆ. ಗೌರಮ್ಮನವರ 'ಸುಳ್ಳು ಸ್ವಪ್ನ', ವೀಣಾ ಶಾಂತೇಶ್ವರ್ ಅವರ 'ಕೊನೆಯ ದಾರಿ', ವೈದೇಹಿಯವರ 'ಓಲೆಕಾರನ ಡೈರಿಯಿಂದ' ಕತೆಗಳಲ್ಲಿ ದಿನಚರಿ ಮಾದರಿಯನ್ನು ಕಾಣಬಹುದಾಗಿದೆ.

'ಸುಳ್ಳು ಸ್ವಪ್ನ' ಕತೆಯಲ್ಲಿ ೨೬.೦೫.೨೮ ರಿಂದ ೨೨.೦೩.೩೪ ರವರೆಗೆ ಬರೆದ ದಿನಚರಿಗಳಿವೆ. ಸುಮಾರು ಆರು ವರ್ಷಗಳಲ್ಲಿ ಸರಸ ಅನುಭವಿಸಿದ ಪ್ರೀತಿಯ ಉನ್ಮಾದ, ಸೋಲು, ತಳಮಳಗಳು ವ್ಯಕ್ತವಾಗಿವೆ. ಸರಳ ಮನೋವ್ಯಾಪಾರಗಳನ್ನು ಗೌರಮ್ಮನವರು ಎಳೆ ಎಳೆಯಾಗಿ ಬಿಡಿಸಿ ತೋರುವಲ್ಲಿ ಯಶಸ್ವಿಯಾಗಿದ್ದಾರೆ. ಜೀವದ ಜೀವದಷ್ಟು ಪ್ರೀತಿಯನ್ನು ನೀಡಿದ "ಅವನು ವರನಾಗದ ಮದುವೆಯಲ್ಲಿ ನಾನು ವಧುವಾಗುವುದು ಹೇಗೆ? ಅವನೇನು ತಿಳಿದುಕೊಳ್ಳುವನು? ನಿನ್ನೆ ದಿನ ಬಂದಿರುವ ಅವನ ಕಾಗದವನ್ನು ಒಡೆಯಲೇ? ಧೈರ್ಯ ಬರುವುದಿಲ್ಲವೇಕೆ? ಏನಾದರೂ ಇರಲಿ, ಓದಿ ಬಿಡುವೆನು... ಅಯ್ಯೋ... ಅವನು ಬರೆದಿರುವುದೇನು? ನನ್ನ ಮುಂದಿನ ಜೀವನವು ಸುಖ ಸಂತೋಷ ಪೂರ್ಣವಾಗಿರಲೆಂದು ದೇವರಲ್ಲಿ ಅವನ ಬೇಡಿಕೆಯಂತೆ! ಸುಖ! ಸಂತೋಷ! ಎಂತಹ ಹಾಸ್ಯಾಸ್ಪದ... ಅವನಿಲ್ಲದ ಮೇಲೆ ಸುಖವೇ? ಅವನೂ ನನ್ನನ್ನು ತಿಳಿಯಲಾರನೇನು? ಹೇಗವನನ್ನು ಮರೆಯಲಿ!... ನನಗೇಕೆ ಹುಚ್ಚು ಹಿಡಿಯುವುದಿಲ್ಲ" (ನಡೆದದ್ದೇ ದಾರಿ, ಪುಟ-೧೦೪) ಎಂಬ ವೇದನೆಯಲ್ಲಿಯ ಮುಂದಿನ ದಿನಗಳನ್ನು ಕಳೆಯುತ್ತಾಳೆ. ಮುಂದೊಂದು ದಿನ ಅವನು ಹೆಂಡತಿ ಮಗುವಿನೊಂದಿಗೆ ಮನೆಗೆ ಬಂದಾಗ ಸರಸಳ ಮನಸ್ಸಿನಲ್ಲಿ ಉಂಟಾಗುವ ತಳಮಳಗಳನ್ನು ಕತೆಗಾರರು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.

ವೀಣಾ ಶಾಂತೇಶ್ವರ್‌ರವರ 'ಕೊನೆಯದಾರಿ' ಕತೆಯು ೧೯೫೮ರ ಜುಲೈ ೨೪ಕ್ಕೆ ಪ್ರಾರಂಭವಾಗಿ ೨೪ ಆಗಸ್ಟ್ ೫೮ಕ್ಕೆ ಮುಕ್ತಾಯವಾಗಿದೆ. ಒಂದು ತಿಂಗಳ ಅವಧಿಯಲ್ಲಿ ಬರೆದ ದಿನಚರಿಯಲ್ಲಿ ಲಿಲಿ ತನ್ನ ಮನೋ ಬಯಕೆಯನ್ನು ದಾಖಲಿಸಿದ್ದಾಳೆ. ಕಛೇರಿಯ ಬಾಸ್; ವೈದ್ಯ ಗೋವಿಂದಮೂರ್ತಿ; ಸಹೋದ್ಯೋಗಿ ವಿಲಿಯಮ್ಸ್; ತತ್ವಶಾಸ್ತ್ರದ ಲೆಕ್ಚರರ್ ವಿನಯ ಸಾಳ್‌ಕರ್ ಇವರೊಂದಿಗೆ ಸ್ನೇಹ ಮತ್ತು ದೈಹಿಕ ಸಂಬಂಧವನ್ನು ಲಿಲಿ ಹೊಂದಿದ್ದಾಳೆ. ಆಕೆ ಮಗುವನ್ನು ಪಡೆಯುವ ಮನೋಬಯಕೆಗೆ ಇವರಾರೂ ಮುಂದಾಗುವುದಿಲ್ಲ. ಬರೆದ ದಿನಚರಿಯ ಮೂಲಕ ಮೂವರ ಗುಣಗಳನ್ನು ವಿಮರ್ಶಿಸುವ ವಿಧಾನವೂ ಕತೆಯಲ್ಲಿವೆ. ಲಿಲಿ 'ಸಿಂಗಲ್ ಮದರ್' ಆಗುವ ಬಯಕೆಗೆ ಒಬ್ಬೊಬ್ಬರೂ ಒಂದೊಂದು ಕಾರಣ ಹೇಳಿ ನುಣುಚಿಕೊಳ್ಳುತ್ತಾರೆ. ಅವರೆಲ್ಲರಿಗೆ ಲಿಲಿಯೊಂದಿಗಿನ ಸಂಬಂಧವೇ ಮುಖ್ಯವೇ ಹೊರತು, ಆಕೆಯ ಮನೋಬಯಕೆಯಲ್ಲ ಎಂಬುದು ವ್ಯಕ್ತವಾಗುತ್ತದೆ. ಕೊನೆಯ ದಾರಿಯೆಂಬಂತೆ

'ಎಂದೂ ಯಾತಕ್ಕೂ ಯಾರಿಗೂ ಇಲ್ಲವೆಂದವರೇ ಅಲ್ಲ'ದ ಅಪ್ಪನ ನೆನಪನ್ನು ತರುವ ಶಂಕರ ಗೌಡರಿಂದ ಮಗುವನ್ನು ಪಡೆಯಲು ನಿರ್ಧರಿಸುತ್ತಾಳೆ. ಲಿಲಿಯ ಸಂತೋಷಕ್ಕಾಗಿ ಹಂಬಲಿಸುವ ಶಂಕರ ಗೌಡರು ಅದಕ್ಕೆ ಒಪ್ಪಿಗೆ ನೀಡುತ್ತಾರೆ.

ವೈದೇಹಿಯವರ 'ಓಲೆಕಾರನ ಡೈರಿಯಿಂದ' ಕತೆಯು ಅಂಚೆ ಹಂಚುವವನ ದಿನಚರಿಯಿಂದ ಆಯ್ದ ಕತೆಯಾಗಿದೆ. ಅಂಚೆ ಹಂಚುವವನ ಮೂಲಕ ಹುಡುಗಿಯ ಕಾಯುವಿಕೆಯನ್ನು ವಿಶ್ಲೇಷಿಸಲಾಗಿದೆ. ಹುಡುಗಿಯ ನಿರೀಕ್ಷೆಯಲ್ಲಿ, ಬಾರದ ಪತ್ರವನ್ನು ತಾನೂ ಕಾಯತೊಡಗುವ ಓಲೆಕಾರನ ವ್ಯಕ್ತಿತ್ವ ಆಪ್ತವಾಗುತ್ತಾ ಹೋಗುತ್ತದೆ. ಓಲೆಕಾರನಿಗೆ "ಈಗೀಗ ನಿದ್ದೆ ದೂರವಾಯಿತು. ಅನ್ನ ಸೇರದಾಯಿತು. ಮುಂಚೆ ಇದ್ದಬಿದ್ದ ರಜೆಯನ್ನೆಲ್ಲ ಎಳೆದು ಹಾಕಿ ಸಪಾಯಿ ಮಾಡುತ್ತಿದ್ದೆ. ಈ ವರ್ಷ ಒಂದೇ ಒಂದು ರಜೆ ತೆಗೆದುಕೊಳ್ಳಲಿಲ್ಲ. ಊರು ಬಿಟ್ಟು ಎಲ್ಲಿಗೂ ಹೋಗಲಿಲ್ಲ. ನಾನು ಬರುವ ಹೊತ್ತೆಂದರೆ ಹುಡುಗಿ ಕಾಯುವ ಹೊತ್ತು. ನನ್ನ ತಲೆತುದಿ ಕಂಡೊಡನೆ ಮೆಟ್ಟಿಲಿನಿಂದ ಎದ್ದು ಕುತ್ತಿಗೆ ಉದ್ದ ಮಾಡಿ ಇಣುಕುವ, ಹತ್ತಿರ ಬರುವುದರೊಳಗೆ ಮಾಮೂಲು ಪ್ರಶ್ನೆ ಕೇಳುವ ಆ ಹುಡುಗಿಯನ್ನು ಕಾಯಿಸಬಾರದು. ನಾನಾದರೂ ಕಾಣದೆ ಇರಬಾರದು. ನಾನು ರಜೆ ಹಾಕಿದರೆ ಇನ್ನೊಬ್ಬ ಪೋಸ್ಟ್‌ಮನ್ ಕೊಡಬಹುದು. ಆದರೆ ಆತನಿಗೆ ಆ ಹುಡುಗಿಯ ಚಡಪಡಿಕೆ ಗೊತ್ತೆ? ಆಕೆ ಆ ಹೊತ್ತಿಗೆ ಮೆಟ್ಟಿಲಿನ ಮೇಲೆಯೇ ಇರುತ್ತಾಳೆ ಯಾಕೆ ಗೊತ್ತೆ? ಅವಳ ಪ್ರಶ್ನೆಗೆ ಏನಾದರೂ ವಕ್ರ ಉತ್ತರ ಕೊಟ್ಟು ನೋಯಿಸಿದರೂ ನೋಯಿಸಿದನೇ. ಆದ್ದರಿಂದ ರಜೆ ಮಾತ್ರ ಎಂದಿಗೂ ಹಾಕಬಾರದು. ಅವಳಿಗೊಂದು ಕಾಗದ, ಅವಳಿಗೆ ಬೇಕಾದ ಕಾಗದ ತಲುಪಿಸುವವರೆಗಾದರೂ" (ಅಲೆಗಳಲ್ಲಿ ಅಂತರಂಗ, ಪುಟ-೨೧೮) ಅವಳು ಕಾಯುತ್ತಿರುವ ವ್ಯಕ್ತಿಯ ಪತ್ರ ಬರುವವರೆಗೂ ಓಲೆಕಾರನ ತಲ್ಲಣಗಳು, ಸಹೃದಯತೆ ಅಭಿವ್ಯಕ್ತಗೊಂಡಿವೆ. ಆ ಹುಡುಗಿಯ ಸಾಂಗತ್ಯ ಆತನೊಳಗೆ ಹೊಸ ಚೈತನ್ಯ ಮೂಡಿಸುತ್ತದೆ. ಆಕೆಗೆ ಪತ್ರ ಬರುವ ಹೊತ್ತಿಗೆ ಓಲೆಕಾರ ಕೃಶನಾಗುತ್ತಾ ಹೋಗುತ್ತಾನೆ. ಪತ್ರ ಬಂದೊಡನೆ ಹುಡುಗಿಯ ಮೊದಲಿನ ಮಿಂಚು ಮಾಯವಾಗುತ್ತದೆ.

ಸ್ವಗತದ ಧಾಟಿಯನ್ನು ಹೊಂದಿದ ದಿನಚರಿಯ ಬರವಣಿಗೆಯಲ್ಲಿ 'ಸುಳ್ಳು ಸ್ವಪ್ನ' 'ಕೊನೆಯ ದಾರಿ' ಕತೆಗಳು ಹೆಣ್ಣಿನ ಆಕಾಂಕ್ಷೆಗಳನ್ನು, ಮನೋಬಯಕೆಯನ್ನು ವ್ಯಕ್ತಪಡಿಸಿದರೆ, 'ಓಲೆಕಾರನ ಡೈರಿಯಿಂದ' ಕತೆ, ಪತ್ರ ಕಾಯುವ ಹುಡುಗಿಗಾಗಿ ಪಡುವ ಓಲೆಕಾರನ ಮನಸ್ಥಿತಿಯ ಪಲ್ಲಟವನ್ನು ಸೂಚಿಸುತ್ತದೆ. ಪತ್ರ ಮತ್ತು ದಿನಚರಿ ಮಾದರಿಗಳು ಕತೆಯ ನಿರೂಪಣೆಯಲ್ಲಿ ತಂತ್ರವನ್ನಾಗಿ ಮಾಡಿಕೊಳ್ಳುವುದರ ಮೂಲಕ, ಹೇಳಬೇಕಾದ ಸಂಗತಿಯನ್ನು ಸ್ಪಷ್ಟಪಡಿಸಿದ್ದಾರೆ. ನೇರ ನಿರೂಪಣೆಯ ಅಪಾಯದಿಂದ ಪಾರಾಗಿದ್ದಾರೆ.

**೬.೪ ಸರ್ವಸಾಕ್ಷಿ ಪ್ರಜ್ಞಾ ಮಾದರಿ**

ಕತೆಯನ್ನು ನಿರೂಪಿಸುವಾಗ ಕತೆಗಾರರು, ಬೇರೆ ಬೇರೆ ಪಾತ್ರಗಳ ಪ್ರಜ್ಞೆಯ ಮೂಲಕ ಕತೆಯನ್ನು

ವಿಸ್ತರಿಸುವ ಮಾರ್ಗವನ್ನು 'ಸರ್ವಸಾಕ್ಷಿ ಪ್ರಜ್ಞಾ' ಮಾದರಿಯೆಂದು ಗುರುತಿಸಲಾಗಿದೆ. ಈ ಮಾದರಿಯಲ್ಲಿ ನಿರೂಪಕರು ಕತೆಯ ಬಗ್ಗೆ, ಪಾತ್ರಗಳ ಬಗ್ಗೆ, ಘಟನೆಗಳ ಬಗ್ಗೆ ಏನೆಲ್ಲವನ್ನು ತಿಳಿಯಬೇಕೋ ಅದೆಲ್ಲವನ್ನೂ ತಿಳಿದವರಾಗಿರುತ್ತಾರೆ. ಬೇರೆ ಬೇರೆ ಕಾಲಗಳಲ್ಲಿ ಸ್ಥಳಗಳಲ್ಲಿ ಸ್ವತಂತ್ರವಾಗಿ ಸಂಚರಿಸುತ್ತ ನಿರೂಪಿಸಬಲ್ಲ ಒಂದು ಪಾತ್ರದಿಂದ ಮತ್ತೊಂದು ಪಾತ್ರದತ್ತ ಗಮನಹರಿಸಬಲ್ಲ, ಅವರ ನಡೆ ನುಡಿಗಳಲ್ಲಿ ಬೇಕಾದಷ್ಟನ್ನು ಹೇಳಿ ಉಳಿದದ್ದನ್ನು ನಮಗೆ ಸೂಕ್ತ ಕಂಡಂತೆ, ಸೂಕ್ತ ಸಮಯದವರೆಗೆ ಮುಚ್ಚಿಡಬಲ್ಲರು. ಪಾತ್ರಗಳ ಮನಸ್ಸಿನೊಳಗೆ ಪ್ರವೇಶಿಸಿ ಅವರ ವರ್ತನೆಗಳನ್ನು ಹಿಂದಿನ ಭಾವನೆ, ಉದ್ದೇಶಗಳನ್ನು ತಿಳಿಯುವ ವಿಶೇಷ ಸಾಮರ್ಥ್ಯ ಸರ್ವಸಾಕ್ಷಿತ್ವ ದೃಷ್ಟಿಕೋನವನ್ನು ಆಯ್ದುಕೊಳ್ಳುವ ಲೇಖಕರಿಗೆ ದೊರೆಯುತ್ತದೆ.

ಸರ್ವಸಾಕ್ಷಿ ಪ್ರಜ್ಞಾ ಮಾದರಿಯಲ್ಲಿ ಬೇರೆ ಬೇರೆ ಪಾತ್ರಗಳ ಮೂಲಕ ಕತೆಯನ್ನು ವಸ್ತುನಿಷ್ಠವಾಗಿ ವ್ಯಾಖ್ಯಾನಿಸುವ ತಂತ್ರವನ್ನು ಅನುಸರಿಸುತ್ತಿರಬಹುದು. ಕೆಲವು ಬಾರಿ ನಿರೂಪಕರು ಸರ್ವಸಾಕ್ಷಿ ದೃಷ್ಟಿಕೋನವನ್ನು ಆಯ್ದುಕೊಂಡರೂ ಯಾವ ವ್ಯಾಖ್ಯಾನಗಳನ್ನೂ ನೀಡದೆ, ಅವೈಯಕ್ತಿಕವಾದ ನಿರೂಪಣೆಯನ್ನು ಮಾಡಬಹುದಾಗಿದೆ. ಪಾತ್ರಗಳೇ ಮುಖ್ಯವಾಗಿರುವುದರಿಂದ ನಿರೂಪಕರು ಕೆಲವು ಮುಖ್ಯ ಪಾತ್ರಗಳ ಮೂಲಕ ಕತೆಯ ಕೇಂದ್ರಪ್ರಜ್ಞೆಯನ್ನು ವಿಸ್ತರಿಸಬಹುದಾಗಿದೆ.

ಮಹಿಳಾ ಕತೆಗಳಲ್ಲಿ ಕ್ವಚಿತ್ತಾಗಿ ಕಾಣಿಸಿಕೊಳ್ಳುವ ಈ ಮಾದರಿಯನ್ನು ಎಚ್.ಎಸ್. ಕಾತ್ಯಾಯನಿಯವರು ಹಲವು ಕತೆಗಳಲ್ಲಿ ಬಳಸಿಕೊಂಡಿದ್ದಾರೆ. ಕಾತ್ಯಾಯನಿಯವರು ತಾವು ಆಯ್ದುಕೊಂಡ ವಸ್ತುವಿನ ವಿಶ್ಲೇಷಣೆಯನ್ನು ಕತೆಯೊಳಗಿನ ಬೇರೆ ಬೇರೆ ಪಾತ್ರಗಳ ಮೂಲಕ ವಿಸ್ತರಿಸಲು ಆಸಕ್ತರಾಗಿದ್ದರು ಎಂಬುದಕ್ಕೆ ಇವರ ಕೆಲವು ಕತೆಗಳು ಸಾಕ್ಷಿಯಾಗಿವೆ.

'ಮಾಲಾ', 'ರಂಗು' ಕತೆಗಳು ಬಂಜೆತನದ ವಸ್ತುವನ್ನು ನಿಭಾಯಿಸಿದ ಕತೆಗಳು, 'ಸಾವಿತ್ರೆ', 'ಮಾದೇವಿ', ತಮಗೊದಗಿದ ಸಂಕಷ್ಟಗಳಿಗೆ ಸೋಲದೆ ಬದುಕನ್ನು ದಿಟ್ಟವಾಗಿ ಎದುರಿಸುವ ವ್ಯಕ್ತಿ ಚಿತ್ರಗಳಾಗಿವೆ. 'ಕಾಳೀ' ಕತೆ ಅತ್ತೆ ಮತ್ತು ಸೊಸೆ–ಎರಡು ಪೀಳಿಗೆಯವರಲ್ಲಿ ಬದಲಾದ ನಡವಳಿಕೆಗಳನ್ನು ಸೂಚಿಸಿದರೆ, 'ಕರುಣಾ' ಕತೆ ಸ್ವಾತಂತ್ರ್ಯಪೂರ್ವ–ಸ್ವಾತಂತ್ರ್ಯೋತ್ತರ ಕಾಲದ ರಾಜಕೀಯ ಆದರ್ಶವನ್ನು ವಿಮರ್ಶಿಸುತ್ತದೆ. ಕಾತ್ಯಾಯನಿಯವರ ಹೆಚ್ಚು ಕತೆಗಳ ಶೀರ್ಷಿಕೆಗಳು ಹೆಣ್ಣಿನ ಹೆಸರುಗಳನ್ನು ಒಳಗೊಂಡಿವೆ. ಹಾಗಾಗಿ ಇವರ ಕತೆಯ ವಸ್ತುಗಳೂ ಹೆಣ್ಣಿನ ಬದುಕಿನ ಚಿತ್ರಣವನ್ನೇ ನೀಡುತ್ತವೆ.

'ಮಾಲಾ' ಕತೆಯ ಮಾಲಾಳ ವ್ಯಕ್ತಿತ್ವ ಬಿಚ್ಚಿಕೊಳ್ಳುವುದು ಆಕೆಯ ಗೆಳತಿಯಾದ ಕಾಂತಿ; ಮಾಲಾಳ ತಂದೆ ಡಾ. ಸುಂದರಂ, ಮಾಲಾಳ ತಾಯಿ, ನರ್ಸ್ ಕಲಿಕೆಯ ವಿದ್ಯಾರ್ಥಿಗಳು, ಮದುವೆ ಮನೆಯ ಹೆಂಗಸರು ಮುಂತಾದವರಿಂದ, ಈ ಕತೆಯ ಕಾಂತಿ ಪಾತ್ರದ ಮೂಲಕ ಕತೆಗಾರರ ಆಶಯಗಳು ವ್ಯಕ್ತವಾಗಿವೆ. ಅದಕ್ಕೆ ಉದಾಹರಣೆ ನೀಡುವುದಾದರೆ, ಮಾಲಾಳಿಗೆ ಮಕ್ಕಳಾಗದ್ದಕ್ಕೆ ಕೊಂಕು ನುಡಿಯುವವರನ್ನು ಕುರಿತು "ಮದುವೆ' 'ಮಕ್ಕಳು' ಬಿಟ್ಟು ಬೇರೆ ಪ್ರಪಂಚವೂ ಇದೆ, ಕಾರ್ಯಾಂಗವೂ ಇದೆ, ಅದರಷ್ಟೇ ಹೆಚ್ಚಿನ ಪ್ರಾಮುಖ್ಯದ ಪ್ರಯೋಜನಕಾರಿಯಾದ ನಿಸ್ವಾರ್ಥ ಮನಸ್ಸಿನ ಸೇವೆಗಳಿವೆ.

ಮನೆ ಮಾತ್ರವಲ್ಲದೆ ಸಮಾಜದಲ್ಲಿಯೂ ಮಾಡಬೇಕಾದ ಕರ್ತವ್ಯ ಪ್ರತಿ ಹೆಂಗಸಿಗೂ ಇದೆ. ಅಡಿಗೆ ಉಪಚಾರ ಮಕ್ಕಳ ಪೋಷಣೆಯಲ್ಲದೆ ಪ್ರಪಂಚದ ದುಃಖಗಳನ್ನು ಸಮಾಧಾನ ಮಾಡುವ, ಮಕ್ಕಳು ಇಲ್ಲದವರಿಗೆ "ಏನೂ ಕೊಳ್ಳೇ ಹೋಗಿಲ್ಲರೀ ಅದೇನು ಮಹಾ" ಎಂದು ದುಃಖವನ್ನು ತಗ್ಗಿಸುವ, ಇದ್ದವರಿಗೆ "ಇದೇನು ಮಹಾ ಬಿಡ್ರೀ, ಬರೀ ಉಂಡು ತಿಂದು ಮದುವೆಯಾಗಿ ಹತ್ತು ಮಕ್ಕಳು ಪಡೆದರೆ ಬಂತೇ ಮೋಕ್ಷ" ಎಂದು ಹೆಮ್ಮೆ ಮುರಿಯುವ ಒಂದು ಸಂಸ್ಕೃತ ಬುದ್ಧಿ... ಇದೇ ಮುಂತಾದ ತಿಳುವಳಿಕೆ ಪ್ರತಿ ಹೆಂಗಸಿಗೂ ಯಾರಾದರೂ ವಿವರಿಸಿ ಹೇಳಬಾರದೇ ಎಂಬ ಕುದಿ ಒಳಗೇ ಎದೆಯಲ್ಲುಳಿದಿತ್ತು" (ಕಾತ್ಯಾಯಿನಿ, ಪುಟ-೦೯) ಇದು ಕಾಂತಿಯ ಮೂಲಕ ಲೇಖಕರು ಸಮಾಜಕ್ಕೆ ಕೊಡುವ ಸಂದೇಶವಾಗಿದೆ. ಕತೆಗಾರರ ಮೂಲಕ ಕಾಂತಿಯ ಆದರ್ಶ ಜೀವನದ ಕನಸು ವ್ಯಕ್ತವಾಗುತ್ತದೆ.

ಮಾಲಾ ಮತ್ತು ಕಾಂತಿಯ ಭೇಟಿಯಾಗುವುದು ಮದುವೆ, ಮತ್ತಿತರ ಸಮಾರಂಭಗಳಲ್ಲಿ, ಮಕ್ಕಳಾಗದಿರುವುದಕ್ಕೆ ಕೇಳಿ ಬರುವ ನಿಂದೆಗಳು, ತಂದೆ ತಾಯಿಯ ಕೊರಗುಗಳು ವ್ಯಕ್ತವಾಗುತ್ತಾ ಹೋಗುತ್ತವೆ. ಹದಿನಾಲ್ಕು ವರ್ಷಗಳ ನಂತರ ಮಾಲಾಳಿಗೆ ಮಗುವಾಗುವ ಮೂಲಕ ಬಂಜೆತನದ ಸಮಸ್ಯೆ ನಿವಾರಣೆಯಾಗುತ್ತದೆ.

ಮಾಲಾಳ ಗಂಡನ ವ್ಯಕ್ತಿತ್ವ ಮಾಲಾಳ ತಾಯಿಯ ಮೂಲಕ ವ್ಯಕ್ತವಾಗುತ್ತದೆ. ಮಕ್ಕಳಾಗದಿರುವುದಕ್ಕೆ ಮನೆಯವರು ಬೇರೆ ಮದುವೆಯಾಗುವುದಕ್ಕೆ ಒತ್ತಡ ತಂದಾಗ ಮಾಲಾಳ ಗಂಡ ಅದನ್ನು ನಿರಾಕರಿಸುತ್ತಾನೆ. ಮಗುವಾದ ಮೇಲೂ ಮಾಲಾಳ ಸಮಸ್ಯೆ ಪರಿಹಾರವಾಗದಿರುವುದು ಗಂಡನ ಮನೆಯವರ ಅಸಮಾಧಾನದ ಮೂಲಕ ಎಂಬ ಸೂಚನೆಯೊಂದಿಗೆ ಕತೆ ಮುಕ್ತಾಯವಾಗುತ್ತದೆ.

'ರಂಗು' ಕತೆಯಲ್ಲಿ ರಂಗಮ್ಮನ ಬಂಜೆತನದ ಕೊರಗು ಮಾನಸಿಕ ಅಸ್ವಸ್ಥತೆಗೆ ಈಡು ಮಾಡುತ್ತದೆ. ರಂಗಮ್ಮನ ಬಂಜೆತನದ ಕೊರಗು ದಿನದಿನಕ್ಕೆ ಅವಳ ವರ್ತನೆಯಲ್ಲಾಗುವ ಬದಲಾವಣೆಯನ್ನು ಕತೆಗಾರರು ಪಕ್ಕದ ಮನೆಯ ಹೆಂಗಳೆಯರ ಮಾತಿನ ಮೂಲಕ ಪ್ರತಿಪಾದಿಸುತ್ತಾ ಹೋಗುತ್ತಾರೆ. ರಾಧಮ್ಮ, ಗೋದಮ್ಮ, ಗೌರಮ್ಮನವರ ಪರಸ್ಪರ ಮಾತಿನ ಮೂಲಕ ರಂಗಮ್ಮನ ವಿಚಿತ್ರವೆನಿಸುವ ವರ್ತನೆಗಳು ಓದುಗರ ಗೋಚರಕ್ಕೆ ಬರುತ್ತವೆ. ಹೂವಿನ ಜಗಳದಿಂದ ಪ್ರಾರಂಭವಾಗುವ ಕತೆ, ರಂಗಮ್ಮ ಹುಚ್ಚಾಸ್ಪತ್ರೆ ಸೇರುವವರೆಗೂ ಬೇರೆಯವರೊಂದಿಗೆ ಜಗಳವಾಡುವ ಸನ್ನಿವೇಶವಿದೆ.

ಉದಾ: "ಪಾಪ, ಬರಬರುತ್ತಾ ರಂಗಮ್ಮ ಒಣಗ್ತಿದ್ದಾಳೆ, ಮುದ್ದಾಗಿ ಒಂದ್ಮಗು ಆದ್ರೆ ಮಾತಾಡಿಸಿ ಕೊಂಡಾದ್ರೂ ಕಾಲ ಕಳೀತಾಳೆ" ಎಂದರು ರಾಧಮ್ಮ.

"ಪಾಪ ನಾನೀ ಮನೆಗೆ ಬಂದ್ಹೊಸದು, ಎರಡು ವರ್ಷವಾಗಿತ್ತು. ಒಂದು ದಿನ ಕರೆದು ಕೇಳಿದಳು... 'ನೋಡ್ರಿ, ಒಂದೂವರೆ ತಿಂಗಳಾಗಿತ್ತು ಹೋಗಿ ಬಿಡ್ತು. ಮೇಲಿಂದ ಮೇಲೆ ಹೇಗಾಯ್ತಲ್ರೀ ಯಾಕ್ರೀ? ಮೊನ್ನೆ ಕಸ ಹೊಡೀತಾ ರುಬ್ಬುಗುಂಡು ಎತ್ತಿಟ್ಟೆರೀ ಅದಕ್ಕೇ ಏನೋ...' ಅಂತ ಒದ್ದಾಡಿಕೊಂಡಳು ಪ್ರಾಣಿ" ಎಂದರು ಗೋದಮ್ಮ

"ನೀನು ನಕ್ಕೆ ತಾನೆ?" ಎಂದರು ರಾಧಮ್ಮ

"ಛೇ ಛೇ, ನನಗಯ್ಯೋ ಅನ್ನಿಸಿತು, 'ಅದಕಲ್ಲ ನೀವು ಡಾಕ್ಟರನ್ನು ನೋಡಿ ಸ್ವಲ್ಪ ಔಷಧಿ ಗಿವುಷಧಿ ತಗೊಳ್ಳಿ, ಮೇಲಿಂದ ಮೇಲೆ ಆದ್ರೆ ಕಷ್ಟ ಎಂದೆ" ಎಂದರು ಗೋದಮ್ಮ...

"ಏನೋಪ್ಪ ಮೈಗಾಗಲೀ ಮನಸ್ಸಿಗಾಗಲೀ ಆಕೆಗೆ ಒತ್ತಾಸೆಯಿಲ್ಲ. ಆದರೂ ಗಟ್ಟಿ ಜೀವ ಆರೋಗ್ಯವೂ ಪಾಪ ತಡೆದಿದೆ. ಒಂದು ದಿನ ಬಿಡುವಿಲ್ಲದೆ ದುಡೀತದೆ. ಒಂದು ತಿಂಗಳ ಆರೈಕೆ ಕೂಡ ಇಲ್ಲಂತ ತೋರುತ್ತೆ ಮೈಯಿಳಿದಾಗ" ಎಂದರು ಗೌರಮ್ಮ.

"ತಾತ ಪ್ರತಿಯೊಂದು ಮಾಡುತ್ತೀರೀ, ಹೆಂಗಸರಿಗಿಂತ ಹೆಚ್ಚಾಗಿ ಮೊಮ್ಮಗಳೆ ತಾನೆ ಗಿಣಿ ಹಾಗೆ ನೋಡಿಕೊಳ್ಳುತ್ತೆ" ಎಂದರು ಗೋದಮ್ಮ.

"ಗಿಣಿ ಹಾಗೆ, ಪಾಪ ಚಿನ್ನದ ಪಂಜರದಲ್ಲಿ" ಎಂದು ರಾಧಮ್ಮ ನಕ್ಕರು. (ಅದೇ, ಪುಟ-೪೯)

ಕಾಲು ಕೆರೆದು ಜಗಳ ತೆಗೆಯುವ ರಂಗಮ್ಮನೊಂದಿಗೆ ಜಗಳಾಡುವ ರಾದಮ್ಮ, ಗೋದಮ್ಮ, ಗೌರಮ್ಮ ತಿರಸ್ಕಾರದ ಭಾವನೆಯನ್ನು ತೋರಿದರೂ ಅವರ ಮೂಲಕವೇ ರಂಗಮ್ಮನ ಬಗ್ಗೆ ಕನಿಕರ, ಅನುಕಂಪ ಮೂಡುವ ಅಭಿಪ್ರಾಯಗಳು ವ್ಯಕ್ತವಾಗುತ್ತದೆ. ಕತೆಗಾರರು ಕತೆಯ ಹೊರಗೆ ನಿಂತು ಪಾತ್ರಗಳನ್ನು ನಿಯಂತ್ರಿಸಿದ್ದಾರೆ. ಯಾವ ಪಾತ್ರದ ಮೂಲಕವೂ ತಮ್ಮ ವ್ಯಾಖ್ಯಾನವನ್ನು ನೀಡಿಲ್ಲ. ಎಲ್ಲಾ ಪಾತ್ರಗಳೂ (ಇತರ ಪಾತ್ರಗಳಾದ ನಳಿನಿ, ರತ್ನ, ಚಿನ್ನಮ್ಮ, ರುಕ್ಕು, ಸುಶೀಲಮ್ಮ, ಸುನಂದಮ್ಮ, ಪಾಪ, ರಂಗಮ್ಮನ ಗಂಡ) ತಮ್ಮ ತಮ್ಮ ದೃಷ್ಟಿಕೋನದಿಂದ ರಂಗಮ್ಮನ ಅವಸ್ಥೆಯನ್ನು ಪರಿಚಯಿಸುತ್ತಾ ಹೋಗುವಂತೆ ನೋಡಿಕೊಳ್ಳಲಾಗಿದೆ. ವೃತ್ತಾಂತ ವಿಧಾನದಲ್ಲಿ ಕತೆಗಾರರ ವಿಚಾರಗಳಿಗೆ ಅವಕಾಶವಿದ್ದರೆ, ಇಲ್ಲಿ ವಿವಿಧ ಪಾತ್ರಗಳ ವಿವಿಧ ಅಭಿಪ್ರಾಯದ ಮಂಡನೆಗೆ ಅವಕಾಶವಿದೆ.

'ಕರುಣಾ' ಕತೆ ತಾತ್ವಿಕವಾಗಿಯೂ ಮತ್ತು ತಾಂತ್ರಿಕವಾಗಿಯೂ ಮಹತ್ವವಾದ ಕತೆ. ಸ್ವಾತಂತ್ರ್ಯಪೂರ್ವದಲ್ಲಿದ್ದ ರಾಜಕೀಯ ಮಹತ್ವಾಕಾಂಕ್ಷಿಗಳು, ಸ್ವಾತಂತ್ರ್ಯೋತ್ತರದಲ್ಲಿ ಅಧಿಕಾರದಾಹ, ವಂಚನೆ, ಭ್ರಷ್ಟತೆಯಲ್ಲಿ ಪರ್ಯಾವಸನಗೊಂಡದ್ದನ್ನು ಪರಿಣಾಕಾರಿಯಾಗಿ ದಾಖಲಿಸಿದೆ. ಕರುಣಾ, ಕೃಷ್ಣ, ರಾಮು ಈ ಮೂವರ ನಡುವೆ ನಡೆಯುವ ಸಂಭಾಷಣೆ ಇಡೀ ಕತೆಯನ್ನು ನಿರೂಪಿಸಿವೆ. ಕತೆಗಾರರು ಕರುಣಾಳ ಮೂಲಕ ತಮ್ಮ ಆಶಯಗಳನ್ನು ಪ್ರಕಟಿಸಿದ್ದಾರೆ. ಕೃಷ್ಣ ಮತ್ತು ಕರುಣಾರ ನಡುವೆ ತಾತ್ವಿಕವಾಗಿ ಭಿನ್ನತೆಗಳಿವೆ. ಕೃಷ್ಣ ರಾಜಕೀಯದಲ್ಲಿ ತೊಡಗಿಸಿಕೊಳ್ಳುವ ಆಸಕ್ತಿಯನ್ನು ಉಳಿಸಿಕೊಂಡು, ಪಾರ್ಟಿಯ ಅಧ್ಯಕ್ಷನಾಗಿ ಚುನಾಯಿತನಾಗುತ್ತಾನೆ. ತಾನು ಕಂಡ ಕನಸುಗಳನ್ನು ಸಾಕಾರಗೊಳಿಸುವ ಮುನ್ನವೇ ಸಾವಿಗೀಡಾಗುತ್ತಾನೆ. ಆದರೆ ಕರುಣಾ ಹಳ್ಳಿಗೆ ಮರಳಿ ಹೋಗುವ ಮೂಲಕ ಕೃಷಿ, ಜನಸೇವೆಗೆ ತೊಡಗುತ್ತಾಳೆ. ರಾಜಕೀಯ ಅಧಿಕಾರದಾಚೆ ಮಾಡುವ ಜನಸೇವೆ ಮುಖ್ಯವಾದುದೆಂದು ಭಾವಿಸುತ್ತಾಳೆ. "ಕಾತ್ಯಾಯಿನಿ ನಲವತ್ತೆರಡರ ಚಳವಳಿಯಲ್ಲಿ ಪಾಲ್ಗೊಂಡವರು ಎಂಬುದಕ್ಕೂ ಈ ಕಥೆಯಲ್ಲಿ ಚರ್ಚಿತವಾಗುವ ವಿಷಯಕ್ಕೂ ನೇರ ಸಂಬಂಧ ಇಲ್ಲದಿರಬಹುದು. ಆದರೂ ಲೇಖಕಿಯರ ರಚನೆಗಳಲ್ಲಿ ಅಪರೂಪವೆನಿಸುವ ರಾಜಕೀಯದಂಥ ವಸ್ತುವಿನ ಆಯ್ಕೆ ತೀರ ಆಕಸ್ಮಿಕವೂ ಆಗಿರಲಾರದು." ('ಪ್ರಸ್ತಾವನೆ', ಕಾತ್ಯಾಯಿನಿ, ಪುಟ-೨೫)

'ಸರ್ವಜ್ಜ' ಕತೆಯಲ್ಲಿ ಅಜ್ಜಿ ಶುರು ಮಾಡಿದ ಕತೆಯನ್ನು ಮಾಲಕ್ಷ್ಮಿ, ನಡು ನಡುವೆ ಮೈದುನರು, ಮತ್ತೆ ಅಜ್ಜಿ 'ನರಿಯಮ್ಮನ ಹರಕೆ'ಯ ಕತೆಯನ್ನು ಹೇಳಿ ಮುಗಿಸುತ್ತಾರೆ. ನಂತರ ಸರ್ವಜ್ಜಿಯ ಕತೆ ಪ್ರಾರಂಭ, ಎಂಟು ವರ್ಷದ ಸರ್ವಮಂಗಳ (ಸರ್ವಜ್ಜಿಯ ಹೆಸರು) ತಾಯಿಯಿಲ್ಲದ ಮಗುವಿಗೆ ತಾಯಿಯಾದವಳು.

"ಬಾಲ ವಿಧವೆಯಾಗಿ, ಯಾರೋ ಬೇಜವಾಬ್ದಾರಿಯಿಂದ ಬಿಟ್ಟುಹೋದ ಮಗುವನ್ನು ತನ್ನ ಮಗುವಾಗಿಸಿಕೊಂಡು ಆ 'ಕರ್ಣ'ನ ಕುಟುಂಬ ಬೆಳೆಸಿ, ಅದರ ಶಾಖೆ ಉಪಶಾಖೆಗಳ ಎಲ್ಲ ಕುಡಿ, ಚಿಗುರು, ಕಾಯಿ, ಹಣ್ಣುಗಳಿಗೂ ತಾಯಿಯ ಮಮತೆಯನ್ನು ಎರೆಯುತ್ತಲೇ ಸರ್ವಜ್ಜಿ ಒಂದು ದೊಡ್ಡ ಆಲವಾಗಿ ಬಿಡುವ ಬಗೆ ಕನ್ನಡ ಕಥೆಯಲ್ಲಿ ಬೇರೆಲ್ಲೂ ಕಾಣಲು ಸಿಕ್ಕುವುದಿಲ್ಲ. ಎಂ.ಕೆ. ಇಂದಿರಾ ಅವರ 'ಫಣಿಯಮ್ಮ' ಈ ಸರ್ವಜ್ಜಿಯ ಮುಂದೆ ನಿಲ್ಲಲಾರದು. ಇಡೀ ಜಗತ್ತಿನ ಬದುಕಿನ ಎಲ್ಲಾ ಜೀವಂತಿಕೆ ವಿಜೃಂಭಿಸುವಂತೆ ಇವಳಲ್ಲಿ ಹಾಸ್ಯಪರತೆ ಇದೆ, ಕಷ್ಟಕ್ಕೆ ಉಕ್ಕುವ ಕರುಣೆಯಿದೆ. ಬುದ್ಧಿ ಹೀನವಾಗಿ ವರ್ತಿಸುವ ಸಾಂಪ್ರದಾಯಸ್ಥ ಮನಗಳಿಗೆ ಜಗ್ಗದೆ, ಎಳೆ ಕುಡಿಗಳಿಗೆ ದಾರಿ ಹಸನು ಮಾಡಿಕೊಡುವ ಪ್ರಗತಿಯ ವಿಚಾರವಿದೆ." (ಅದೇ, ಪುಟ-೨೯)

ಕಾತ್ಯಾಯಿನಿವರ 'ಸರ್ವಜ್ಜ' ಕತೆ ಸಾಂಪ್ರದಾಯಸ್ಥ ವಿಚಾರಗಳ ಕೊಂಡಿ ಕಳಚುವ ಗುಣದೊಂದಿಗೆ ಮತ್ತೊಂದು ಕುತೂಹಲಕಾರಿ ಅಂಶವನ್ನು ಒಳಗೊಂಡಿದೆ. ಈ ಕತೆಯಲ್ಲಿ ಬರುವ ೫೦ಕ್ಕೂ ಹೆಚ್ಚು ಪಾತ್ರಗಳು ಕಥನ ಕ್ರಿಯೆಯಲ್ಲಿ ಪಾಲ್ಗೊಳ್ಳುತ್ತವೆ. ಕನ್ನಡ ಸಣ್ಣ ಕತೆಗಳಲ್ಲಿ ಇಷ್ಟೊಂದು ಪಾತ್ರಗಳು ಚಲನಶೀಲವಾಗಿರುವುದು ಕಾತ್ಯಾಯಿನಿಯವರ ಕತೆಯಲ್ಲಿ ಮಾತ್ರ ಎನಿಸುತ್ತದೆ.

'ನರಿಯಮ್ಮನ ಹರಕೆ'ಯ ಅಡಗೋಲಜ್ಜಿ ಕತೆಯನ್ನು ಆಧುನಿಕಗೊಳಿಸಿ ಸರ್ವಜ್ಜಿ, ಮಹಾಲಕ್ಷ್ಮಿ, ನಡುನಡುವೆ ಮೈದುನರು ಹೇಳುವ ಭಾಗ ಕತೆಯ ಪೂರ್ವಾರ್ಧದಲ್ಲಿದೆ. ಉತ್ತರಾರ್ಧದಲ್ಲಿ ಸರ್ವಜ್ಜಿಯ ಬದುಕು ಅಜ್ಜಿ, ಮಹಾಲಕ್ಷ್ಮಿ, ನಾಗಮ್ಮನ ಮೂಲಕ ಬಿಚ್ಚಿಕೊಳ್ಳುತ್ತದೆ.

### ೬.೫ ಪೌರಾಣಿಕ ಪಾತ್ರಗಳ ಪುನರವಲೋಕನ ಮಾದರಿ

ಕತೆಯ ಅಭಿವ್ಯಕ್ತಿಯಲ್ಲಿ ಪೌರಾಣಿಕ ಪಾತ್ರಗಳ ಬಳಕೆ ಕಡಿಮೆಯಿದ್ದರೂ ಶಕ್ತಿಯುತ ಪಾತ್ರಗಳು ಕಾಣಿಸಿಕೊಂಡಿವೆ. ಬದುಕಿನ ಅವಲೋಕನವನ್ನು ಕೈಗೊಳ್ಳಲು ಪೌರಾಣಿಕ ಪಾತ್ರಗಳನ್ನು ಕೇಂದ್ರವಾಗಿ ಕತೆಗಾರರು ಬಳಸಿಕೊಂಡಿದ್ದಾರೆ. ವೈದೇಹಿಯವರ ಮತ್ತು ಭಾರತಿ ಕಿನ್ನಾಳ್‌ರವರ ಕತೆಗಳನ್ನು ಪ್ರಾತಿನಿಧಿಕವಾಗಿ ಆಯ್ದುಕೊಳ್ಳಲಾಗಿದೆ. ಎರಡೂ ಪಾತ್ರಗಳು ಪಿತೃಪ್ರಧಾನ ವ್ಯವಸ್ಥೆಯಲ್ಲಿ ಶೋಷಣೆಗೊಳಗಾದ ಪಾತ್ರಗಳೇ. ಆದರೆ, ಆ ಪಾತ್ರಗಳಿಗಿರುವ ಬದುಕಿನ ಪ್ರೀತಿಯನ್ನು ಅವಲೋಕಿಸಲಾಗಿದೆ. ನಡೆದ ಘಟನೆಗಳಿಗೆ ಹಳಹಳಿಕೆಯಿಯದ್ದರೂ ಅದನ್ನು ಬದಿಗಿಟ್ಟು ಅಂತರಂಗವನ್ನು ಶೋಧಿಸುವ, ಹೊಸ ಬದುಕನ್ನು ಕಟ್ಟಿಕೊಳ್ಳುವ ನಿಲುವನ್ನು ಕತೆಗಳಲ್ಲಿ ಕಾಣಬಹುದಾಗಿದೆ.

೬.೫.೧ ಶಕುಂತಲೆ

'ಶಕುಂತಲೆಯೊಂದಿಗೆ ಕಳೆದ ಅಪರಾಹ್ನ' ಕತೆಯಲ್ಲಿ ಕಾಳಿದಾಸ ನೀಡದ ಶಕುಂತಲೆಯ ಚಿತ್ರಣವನ್ನು ವೈದೇಹಿಯವರು ನೀಡಿದ್ದಾರೆ. ಆಕೆಯ ಅಂತಃಸತ್ವದೊಂದಿಗೆ ಶಕುಂತಲೆಯ ಮನಃಸ್ಥಿತಿಯನ್ನು ಅನಾವರಣಗೊಳಿಸಿದ್ದಾರೆ. ಈ ಕತೆಯು, ಶಕುಂತಲೆ ಇರುವಂತಿಗೆಯೊಂದಿಗೆ ಹಂಚಿಕೊಂಡ ಸಂಭಾಷಣಾ ರೂಪದ ಸ್ವಗತ ಶೈಲಿಯನ್ನು ಹೊಂದಿದೆ. ಅಸ್ತಿತ್ವದ ಪ್ರಶ್ನೆ ಎದುರಾದಾಗ ಮಹಿಳೆಯರು ಹೆಚ್ಚಾಗಿ ಸ್ವಗತ ಶೈಲಿಯನ್ನು ಅನುಸರಿಸುತ್ತಾರೆ. ಬದುಕಿನ ಪುನರವಲೋಕನ ಸಾಧ್ಯವಾಗುವುದು ತನ್ನ ಮನಸ್ಸನ್ನು ತಾನು ಒರೆಗೆ ಹಚ್ಚಿದಾಗ; ಬದುಕಿನ ಸೋಲು-ವಿಮುಖತೆಗಳಿಗೆ ಕಾರಣಗಳನ್ನು; ದೌರ್ಬಲ್ಯಗಳನ್ನು ಕಂಡುಕೊಂಡಾಗ, ವರ್ತಮಾನ-ಭವಿಷ್ಯದ ಸಾಧ್ಯತೆ-ಸಾಮರ್ಥ್ಯಗಳು ಪ್ರಕಟಗೊಳ್ಳುತ್ತವೆ. ವೈದೇಹಿಯವರು ಶಕುಂತಲೆಯ ಬದುಕನ್ನು ಕೇಂದ್ರವಾಗಿಟ್ಟುಕೊಂಡು ಹೆಣ್ಣುಲೋಕದ ಸತ್ವವನ್ನು ಶೋಧಿಸಿದ್ದಾರೆ.

ಹಿನ್ನೋಟ ಕ್ರಮದಲ್ಲಿ ಶಕುಂತಲೆ ತನ್ನ ಬದುಕನ್ನು ಪುನರ್ವಿಮರ್ಶಿಸುವ ತಂತ್ರವನ್ನು ಕತೆ ಒಳಗೊಂಡಿದೆ. "ಲೋಕಕ್ಕೆ ಸತ್ಯದ ತಂಪುಬೇಡ. ಸುಳ್ಳಿನ ಪ್ರಖರತೆ ಬೇಕು. ಪ್ರೇಮದ ನಿಜ ಬೇಡ. ಸುಳ್ಳು ಬಿನ್ನಾಣ ಬೇಕು. ಕವಿಯೋ! ಕಾವ್ಯಮಯ ಸುಳ್ಳು ಹೇಳಿ ಜಗತ್ತನ್ನು ಮರುಳುಗೊಳಿಸುವ ಅಪ್ರತಿಮ. ಪ್ರಪಂಚ ಇವತ್ತು ಕಾಳಿದಾಸನನ್ನು ನಂಬುವಷ್ಟು ಶಕುಂತಲೆಯನ್ನು ನಂಬುತ್ತದೆಯೆ? ದುಷ್ಯಂತನ ವರ್ತನೆಗೆ ವ್ಯಾಖ್ಯಾನ ನೀಡಬಹುದು. ಶಕುಂತಲೆಯ ಹೃದಯಕ್ಕೆ?....ಈ ಮನ ಲೌಕಿಕರ ವ್ಯಾಖ್ಯಾನಕ್ಕೆ ನಿಲುಕಲಾರದಂತಹುದು ಎಂದು ಹೇಳಿಕೊಳ್ಳುವುದು ನನಗೆ ಕ್ಷೇಮ" (ಅಲೆಗಳಲ್ಲಿ ಅಂತರಂಗ, ಪುಟ-೨೭೮) ಎಂಬ ವ್ಯಾಖ್ಯಾನವನ್ನು ಶಕುಂತಲೆಯ ಮಾತಿನ ಮುಖಾಂತರ ಕತೆಗಾರರು ಶಕುಂತಲೆಯ ಸ್ಥಾನವನ್ನು ನಿರ್ಧರಿಸಿದ್ದಾರೆ.

ಕತೆಯಲ್ಲಿ ಶಕುಂತಲೆ ಉಂಗುರುವನ್ನು ಕಳೆದುಕೊಂಡು ಕಣ್ಣೀರ ಕಡಲಲ್ಲಿ ಮುಳುಗುವ ಅಸಹಾಯಕಿ ಅಲ್ಲ. ದುಷ್ಯಂತನ ಮರೆವಿನ ನಾಟಕ ತಿಳಿದಾಗ 'ಮರೆವಿನ ನಟನೆಗೆ ಉಂಗುರ ಎಂದಾದರೂ ಔಷಧಿಯಾಗುವುದೇ?" ಎಂಬ ಪ್ರಶ್ನೆಯನ್ನು ಹಾಕುತ್ತಾಳೆ. ದುಷ್ಯಂತನ ಮರೆವಿಗೆ ಕಾರಣವಾಗಿದ್ದು ಉಂಗುರವಲ್ಲ. ಆತನ ಹೆಂಡತಿ, ಉಪಪತ್ನಿ, ಇತರ ನಲ್ಲೆಯರ ಭಯವೆಂಬ ಸತ್ಯವನ್ನು ಅರಿತಿದ್ದಾಳೆ. ದುಷ್ಯಂತ ಶಕುಂತಲೆಯನ್ನು ಗುರುತಿಸದೇ ನಯವಂಚನೆ ತೋರಿದಾಗ, ಹಿಂದೆ ತೋರಿದ ಪ್ರೀತಿಯ ಬಗ್ಗೆ ದ್ವೇಷ ಅಸೂಯೆಗಳನನ್ನು ಬೆಳೆಸಿಕೊಳ್ಳುವುದಿಲ್ಲ. ಬದಲಾಗಿ ಯೌವನಕ್ಕೆ ಸಹಜವಾದ ಬಯಕೆಗಳಲ್ಲಿ ಹೆಣ್ತನವನ್ನು ಪುಳಕಗೊಳಿಸಿದ, ದುಷ್ಯಂತನೊಂದಿಗೆ ಎಲ್ಲ ಮರೆತು ಸೇರಿದ ರೋಮಾಂಚನ ಕ್ಷಣಗಳನ್ನು ಪ್ರೀತಿಯಿಂದ ನೆನೆಯುತ್ತಾಳೆ. ದುಷ್ಯಂತ ಶಕುಂತಲೆಯನ್ನು ತಿರಸ್ಕರಿಸಿದ ಮೇಲೆ ಆಕೆಯ ಸ್ವತಂತ್ರ ಅಸ್ತಿತ್ವದ ಬದುಕಿನ ಬಗ್ಗೆ ಹಂಬಲವುಂಟಾಗುತ್ತದೆ.

ಸಾಕು ತಂದೆಯಾದ ಕಣ್ವನ ಆಶ್ರಮವನ್ನು ಬಿಟ್ಟು, ಮಾರೀಚನ ಆಶ್ರಮಕ್ಕೆ ಬರುತ್ತಾಳೆ. ದಟ್ಟ ಕಾಡಿನಲ್ಲಿ ಮಗುವನ್ನು ಬಿಟ್ಟು ಹೋದ ತಾಯಿ ಮೇನಕೆ ಮತ್ತು ಭೂಮಿ ಬಾಯಿ ತೆರೆಯಲಿ ಎಂದು ಹಲುಬಿದ ಅಸಹಾಯಕಿ ಸೀತೆಯಂತೆ ತಾನಾಗದೇ, ತನಗಾಗಿ ತಾನು ಬದುಕುವ ನಿರ್ಧಾರ ಕೈಗೊಳ್ಳುತ್ತಾಳೆ.

ತನ್ನ ಮಗುವನ್ನು ಬೆಳೆಸುತ್ತಾಳೆ. ಮುಂದೆ ದುಷ್ಯಂತ, ಮಗ ಭರತನನ್ನು ತನ್ನೊಂದಿಗೆ ಕರೆದೊಯ್ಯುತ್ತಾನೆ. ಆದರೆ ಶಕುಂತಲೆ ದುಷ್ಯಂತನನ್ನು ಹಿಂಬಾಲಿಸದೆ, ಆಶ್ರಮದಲ್ಲೇ ಉಳಿಯುತ್ತಾಳೆ. ಕತೆಯ ಅವಲೋಕನದಲ್ಲಿ ಆವೇಶದ ಏರುದನಿಯಿಲ್ಲ. ತಣ್ಣಗಿನ ದನಿಯಲ್ಲಿ, ಬದುಕಿನ ತಲ್ಲಣಗಳನ್ನು ಚಿಂತಿಸುವ, ನೆಮ್ಮದಿಯ ನೆಲೆಯನ್ನು ಅಯ್ದು ಕೊಳ್ಳುವ ಪ್ರಬುದ್ಧ ಚಿಂತಕಿಯಾಗಿ ಶಕುಂತಲೆ ಕಾಣಿಸಿಕೊಳ್ಳುತ್ತಾಳೆ. ಹೆಣ್ಣಿನ ಭಾವನೆಗಳಿಗೆ ಬೆಲೆ ನೀಡದೆ ತೋರುವ ನಿರ್ಲಕ್ಷ, ಉಪೇಕ್ಷೆ, ತಿರಸ್ಕಾರಗಳನ್ನು ಕತೆಗಾರರು ಗಂಡು ಜಗತ್ತಿನ ತಿಳಿವಿಗೆ ಬರುವಂತೆ ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ.

**೬.೫ ಊರ್ಮಿಳೆ**

ಭಾರತಿ ಕಿನ್ನಾಳರವರು ಆತ್ಮಾವಲೋಕನದ ವಿಧಾನದಲ್ಲಿ ಊರ್ಮಿಳೆಯ ಬದುಕಿನ ಒಳನೋಟವನ್ನು ಹೆಕ್ಕಿ ತೆಗೆದಿದ್ದಾರೆ. ಕತೆಯು ಊರ್ಮಿಳೆಯನ್ನು ನೆಪವಾಗಿಟ್ಟುಕೊಂಡು ಹೆಣ್ಣಿನ ಸ್ಥಿತಿಗತಿಗಳನ್ನು ಅವಲೋಕಿಸುವ ಪ್ರಯತ್ನ ಮಾಡಿದೆ. ಹೊರ ಜಗತ್ತಿಗೆ, ಹೊಸ ಚಿಂತನೆಗಳಿಗೆ ತೆರೆದುಕೊಳ್ಳಲಾಗದಂತೆ ಸೃಷ್ಟಿಸಲಾಗಿರುವ ಸಾಮಾಜಿಕ ವ್ಯವಸ್ಥೆಯನ್ನು ಖಂಡಿಸಲಾಗಿದೆ.

ರಾಮಾಯಣದಲ್ಲಿ ಬರುವ ಲಕ್ಷ್ಮಣನ ಹೆಂಡತಿ ಊರ್ಮಿಳೆಯದು ವಿಭಿನ್ನ ಪಾತ್ರ. ತನ್ನ ಭಾವನೆಗಳನ್ನು ಲೆಕ್ಕಿಸದೆ, ರಾಮನ ಅನುಯಾಯಿಯಾಗಿ ಕಾಡಿಗೆ ಹೊರಟು ನಿಂತ ಲಕ್ಷ್ಮಣನನ್ನು ಆಕೆ ಹಿಂಬಾಲಿಸುವುದಿಲ್ಲ. ಅರಮನೆಯ ವಾತಾವರಣದಲ್ಲಿ ಹದಿನಾಲ್ಕು ವರ್ಷಗಳ ವಿರಹವನ್ನು ಸಹಿಸುತ್ತಾಳೆ. ಕತೆಗಾರರು, ಕತೆಯಲ್ಲಿ ಸಾಂಕೇತಿಕ ವಾತಾವರಣವನ್ನು ಕಲ್ಪಿಸಿದ್ದಾರೆ. ಪಂಜರ, ಪಂಜರದ ವಾತಾವರಣಕ್ಕೆ ಹೊಂದಿಕೊಂಡ ಹಕ್ಕಿಗಳು, ಬಾನಿಗೆ ಹಾರಿ ಬಿಟ್ಟಾಗ ಹಾರಲಾಗದೇ ಬೆಕ್ಕಿಗೆ ಬಲಿಯಾದ ಬಗೆಯನ್ನು ಊರ್ಮಿಳೆಯ ಬದುಕಿಗೆ ಅನ್ವಯಿಸಲಾಗಿದೆ. ತವರಿನ ನೆನಪಿಗಾಗಿ ತಂದ 'ವೈಶಾಖಿ' ಹೂವಿನ ಸಸಿಯನ್ನು ಅರಮನೆಯ ಉದ್ಯಾನವನದಲ್ಲಿ ಬೆಳೆಸಿದ್ದಾಳೆ. ತನ್ನ ಬದುಕಿನ ಅಸ್ತಿತ್ವವನ್ನು ಪ್ರತಿಬಿಂಬಿಸುವ 'ವೈಶಾಖಿ' ಹೂ ರಾಮನ ಪಾಲಾದಾಗ ಊರ್ಮಿಳೆಯ ಮನಸ್ಸಿನಲ್ಲಾದ ಭಾವನೆಗಳನ್ನು ಕತೆಗಾರರು ಸಾಂಕೇತಿಕವಾಗಿ ಸೆರೆ ಹಿಡಿದ್ದಾರೆ.

ಕತೆಯ ಪ್ರಾರಂಭದಲ್ಲಿ ಪಂಜರದೊಳಗೆ ಸಿಕ್ಕಿ ಹಾಕಿಕೊಂಡ ಗಿಳಿಗಳನ್ನು ಬಿಡುಗಡೆಗೊಳಿಸಲು ಹಾತೊರೆಯುವ ಊರ್ಮಿಳೆ ಎದುರಾಗುತ್ತಾಳೆ. ಪಂಜರದಲ್ಲಿದ್ದ ಗಿಳಿಗಳನ್ನು ಬಂಧನದಲ್ಲಿಟ್ಟು, ಹಣ್ಣು, ಹಾಲು ನೀಡಿ ಬಂಧಿಯಾಗಿಸಿರುವ ಬಗ್ಗೆ ತನ್ನ ಮೇಲೆ ತನಗೇ ಜಿಗುಪ್ಸೆಯಾಗುತ್ತದೆ. ನೀಲ ನಭದಲ್ಲಿ ಸ್ವಚ್ಛಂದವಾಗಿ ಹಾರಲಿ ಎಂದು ಪಂಜರದ ಬಾಗಿಲು ತೆಗೆಸುತ್ತಾಳೆ. "ಈ ಗಿಳಿಗಳು ವರ್ಷ ವರ್ಷಗಳ ಬಂಧನದೊಳಗೆ ಹಾರುವುದನ್ನೇ ಮರೆತ ಗಿಳಿಗಳು.. ತನ್ನ ಪರಿಸ್ಥಿತಿಯಾದರೂ ಏನು? ಹದಿನೈದು ವರ್ಷದ ಹಿಂದೆ ಒಂದು ಪಂಜರದಿಂದ ಮತ್ತೊಂದಕ್ಕೆ ವರ್ಗಾವಣೆ. ಅರಮನೆ, ಅರಮನೆಯ ದೊಡ್ಡ ದೊಡ್ಡ ಬೆಳ್ಳಿಯ ಕಂಬಗಳು, ಜರತಾರಿಯ ವಸ್ತ್ರ, ಸುವರ್ಣ ಇಷ್ಟೇ ಸಾಕೆ ಒಂದು ಹೆಣ್ಣಿಗೆ?. ಛೇ, ಆರ್ಯ ಪುತ್ರ, ನೀನು ನನ್ನನ್ನು ಮೋಸಗೊಳಿಸಿಬಿಟ್ಟೆ. ಈ ಊರ್ಮಿಳೆ, ಅವಳ ಯೌವ್ವನ,

ಭಾವನೆಗಳು, ಹೃದಯ, ಪ್ರೀತಿ ಸರ್ವಸ್ವವನ್ನೂ ಧೂಳೀಪಟಗೊಳಿಸಿಬಿಟ್ಟೆ" (ಲೇಖಕಿಯರ ಸಣ್ಣ ಕತೆಗಳು, ಪುಟ-೨೬೨) ಎಂಬ ಪ್ರಶ್ನೆಯನ್ನು ಊರ್ಮಿಳೆ ಲಕ್ಷ್ಮಣನ ಬಗ್ಗೆ ಎತ್ತುತ್ತಾಳೆ. ರಾಮನ ಹಿತಾಸಕ್ತಿ ಕಾಯಲು ಲಕ್ಷ್ಮಣ, ತನ್ನ ಹೆಂಡತಿ ಬದುಕನ್ನು ಬಲಿಗೊಟ್ಟದ್ದನ್ನು ಕತೆಗಾರರು ಖಂಡಿಸಿದ್ದಾರೆ.

ಊರ್ಮಿಳೆಗೆ ದೊರಕಿದ್ದು ಸದಾ ಎರಡನೇ ಸ್ಥಾನ. ಮಿಥಿಲೇಶ್ವರನ ಮಗಳಾದರೂ ಮಿಥಿಲೆ ಎನಿಸಿಕೊಳ್ಳಲಿಲ್ಲ. ಅದು ದೊರಕಿದ್ದು ಸೀತೆಗೆ. ಆದರೆ ಸೀತೆಯ ಬಗ್ಗೆ ಅನುಕಂಪವನ್ನು; ಶ್ರೀರಾಮನ ಹೊಣೆಗೇಡಿತನದ ನೀತಿಯನ್ನು ಊರ್ಮಿಳೆ ಖಂಡಿಸುತ್ತಾಳೆ. ಊರ್ಮಿಳೆ ಬೇಡವೆಂದರೂ ಲಕ್ಷ್ಮಣ ರಾಮನ ಹಿಂದೆ ಕಾಡಿಗೆ ಹೋಗುತ್ತಾನೆ. ಮದುವೆಗೂ ಮುನ್ನ ಕಂಡ ಕನಸುಗಳು ನುಚ್ಚು ನೂರಾಗುತ್ತವೆ. ರಾಮನ ಮೇಲಿನ ಅತಿ ವ್ಯಾಮೋಹದಿಂದ ಲಕ್ಷ್ಮಣ, ಊರ್ಮಿಳೆಯ ಮನಸ್ಸನ್ನು ಗೆಲ್ಲಲು ಸೋಲುತ್ತಾನೆ. ಅದಕ್ಕೆ ಪೂರಕವಾಗಿರುವ ಘಟನೆಯನ್ನು ಕತೆಯಲ್ಲಿ ದಾಖಲಿಸಲಾಗಿದೆ. ತವರಿನಿಂದ ತಂದು ಬೆಳೆಸಿದ, ವೈಶಾಖ ಮಾಸದಲ್ಲಿ ಮಾತ್ರ ಅರಳುವ 'ವೈಶಾಖಿ' ಹೂ ಬಿಟ್ಟಾಗ ಊರ್ಮಿಳೆ ಸಂಭ್ರಮಿಸಿದ್ದಳು. ಆದರೆ ಅವಳನ್ನು ಒಂದು ಮಾತು ಕೇಳುವ ಸೌಜನ್ಯವನ್ನು ತೋರದ ಲಕ್ಷ್ಮಣ, ಆ ಮೊದಲ ಹೂವನ್ನು ರಾಮನಿಗೆ ನೀಡುತ್ತಾನೆ. ಬಹುಪತ್ನೀವ್ರತಸ್ಥನಾಗಿರದಿದ್ದರೆ, ರಾಮನಿಗೆ ಲಕ್ಷ್ಮಣ, ತನ್ನ ಮೊದಲ ಹೆಂಡತಿಯನ್ನು ಅರ್ಪಿಸುತ್ತಿದ್ದನೇನೋ ಎಂಬ ವ್ಯಂಗ್ಯದ ಧ್ವನಿ ಕತೆಯಲ್ಲಿ ಮೂಡಿದೆ. ಊರ್ಮಿಳೆಗೆ ಲಕ್ಷ್ಮಣನ ಹೃದಯಲ್ಲಿ ಸ್ಥಾನ ದೊರೆಯದೇ ಹೋದಾಗ, ಆತನ ಹಿಂದೆ ಸೇವಕಿಯಾಗಿ ಹೋಗಲು ನಿರಾಕರಿಸುತ್ತಾಳೆ. ಅರಮನೆಯ ಬಂಧನದ ಬದುಕನ್ನು ಆಯ್ದುಕೊಳ್ಳುತ್ತಾಳೆ. ವನವಾಸದಿಂದ ಮರಳಿ ಬಂದಾಗ, ಮೊದಲಿನಂತೆ ಲಕ್ಷ್ಮಣನನ್ನು ಸೇರಲು ನಿರಾಕರಿಸುತ್ತಾಳೆ. ಗರ್ಭಿಣಿ ಸೀತೆಯನ್ನು ಕಾಡಿಗಟ್ಟಿ ಬಂದಾಗ ಲಕ್ಷ್ಮಣನ ವರ್ತನೆಯನ್ನು ವಿರೋಧಿಸುತ್ತಾಳೆ. ಸೀತೆಯ ಬಗ್ಗೆ ಅನುಕಂಪ ಹೊಂದಿದ್ದರೂ, ಆಕೆಯ ಹಿಂದೆ ತಾನು ಹೋಗದಿರುವ ಪ್ರಶ್ನೆ ಎದುರಾದಾಗ, "ಅರಮನೆಯ ಗೋಡೆಗಳಿಗೆ ಎಷ್ಟೊಂದು ಹೊಂದಿಕೊಂಡು ಬಿಟ್ಟೆ ಎಂದರೆ... ಸೆರೆಮನೆಯ ಬಿಸಿಗಾಳಿಗೆ ಎಷ್ಟೊಂದು ಸ್ಪಂದಿಸಿ ಬಿಟ್ಟೆ ಎಂದರೆ, ಕಾಡಿನ ತಂಗಾಳಿಯೂ ತನಗೆ ಬದುಕು ನೀಡುವುದಿಲ್ಲ. ಈ ಊರ್ಮಿಳೆ ಅರಮನೆಯೊಳಗೂ ಕಾಡೊಳಗೂ ಅದೇ ವಿಕ್ಷಿಪ್ತ ಊರ್ಮಿಳೆಯಾಗಿ ಉಳಿದು ಬಿಡುತ್ತಾಳೆ (ಅದೇ, ಪುಟ-೨೭೮) ಎಂಬ ಸತ್ಯವನ್ನು ಮನಗಾಣುತ್ತಾಳೆ. ಬಾನಿಗೆ ಹಾರಿಬಿಟ್ಟ ಗಿಳಿಗಳು ಮುಕ್ತ ವಾತಾವರಣಕ್ಕೆ ಹೊಂದಿಕೊಳ್ಳದೇ, ಬೆಕ್ಕಿಗೆ ಬಲಿಯಾದಂತೆ ಊರ್ಮಿಳೆಯ ಮನಸ್ಥಿತಿಯನ್ನು ಹೋಲಿಸಲಾಗಿದೆ. ಕತೆಗಾರರು ಹೆಣ್ಣಿನ ಭಾವನೆಗಳು ಮುರುಟಿ ಹೋಗಲು ಗಂಡಿನ ವರ್ತನೆಗಳು ಹೇಗೆ ಕಾರಣವಾಗಿದೆ ಎಂಬುದನ್ನು ಸಾಂಕೇತಿಕವಾಗಿ ಚಿತ್ರಿಸಿದ್ದಾರೆ.

### ೬.೬ ಮನೋವಿಶ್ಲೇಷಣಾತ್ಮಕ ಮಾದರಿ

ಮನೋವಿಜ್ಞಾನದ ಸಹಾಯದಿಂದ ಬದುಕನ್ನು ನೋಡಿ ಮನಃಶಾಸ್ತ್ರೀಯ ವಿಚಾರ ಸರಣಿಯಿಂದ ಕತೆ/ ಕಾದಂಬರಿ ಬರೆಯುವುದನ್ನು ಮನೋವಿಶ್ಲೇಷಣಾತ್ಮಕ ಮಾದರಿ ಎಂದು ಕರೆಯಲಾಗಿದೆ.

ಬಾಲ್ಯದ ನೆನಪುಗಳು, ಕೌಟುಂಬಿಕ ಮತ್ತು ಸಾಮಾಜಿಕ ಘಟನೆಗಳು, ತಾಯಿ ತಂದೆ, ಬಂಧು ಬಳಗ, ನೆರೆಹೊರೆ ಮುಂತಾದ ಪರಿಸರ ಪ್ರಭಾವಗಳು ವ್ಯಕ್ತಿಯ ವ್ಯಕ್ತಿತ್ವವನ್ನು ನಿರೂಪಿಸುತ್ತದೆ. ಕಾರ್ಲ್‌ಯೂಂಗ್ ವ್ಯಕ್ತಿಯ ವ್ಯಕ್ತಿತ್ವವನ್ನು 'ಅಂತರ್ಮುಖತೆ' ಮತ್ತು 'ಬಹಿರ್ಮುಖತೆ' ಎಂಬ ಎರಡು ವಿರುದ್ಧ ಮನಸ್ಸಿನ ಪ್ರವೃತ್ತಿಗಳನ್ನು ತಿಳಿಸಿದ್ದಾನೆ. ಪರಿಸರ ಈ ಎರಡು ಪ್ರಕಾರದ ವ್ಯಕ್ತಿಗಳ ಮೇಲೆ ಒಂದೇ ತೆರನಾದ ಪ್ರಭಾವ ಬೀರಿದರೂ, ಪರಿಣಾಮದಲ್ಲಿ ಬೇರೆ ಬೇರೆ ರೂಪಾಂತರಗಳನ್ನು ಉಂಟುಮಾಡುತ್ತವೆ. ಕಲಾಕಾರರೂ, ತತ್ವಜ್ಞಾನಿಗಳು ಸೇರಿದಂತೆ ಸಾಹಿತಿಗಳು ತಮ್ಮ ಅಂತರಂಗದ ಮುಖಾಂತರ ಜಗತ್ತನ್ನು ಅರಿಯುತ್ತಾರೆ. ತಮ್ಮ ಕೃತಿಗಳ ಮೂಲಕ ಅದನ್ನು ಹೊರಗೆಡವುತ್ತಾರೆ.

ಎಡ್ಮಂಡ್ ಫ್ರಾಯ್ಡ್‌ನ ವಿಶ್ಲೇಷಣೆಯಲ್ಲಿ

ಜಾಗೃತ

ಸುಪ್ತ

ಅಜಾಗೃತ

ಅವಸ್ಥೆಗಳನ್ನು ವಿವರಿಸಲಾಗಿದೆ. ನಾವು ಬಹು ಎಚ್ಚರದಿಂದ ಮಾಡುವ ಕಾರ್ಯಗಳು ಜಾಗೃತ ಅವಸ್ಥೆಯನ್ನು ಹೊಂದಿರುತ್ತವೆ. ಸ್ಮೃತಿ ಶಕ್ತಿಯಿಂದ ನೆನಪು ಮಾಡಿಕೊಂಡು ಕ್ರಿಯೆಗಿಳಿಯುವಂಥದ್ದು ಮನಸ್ಸಿನ ಸುಪ್ತ ಅವಸ್ಥೆಯನ್ನು ಸೂಚಿಸುತ್ತದೆ. ಇವೆರಡಕ್ಕಿಂತ ಮುಖ್ಯವಾದುದು ಅಜಾಗೃತ ಅವಸ್ಥೆ. 'ನಾಗರೀಕ'ವಲ್ಲದ ಪ್ರವೃತ್ತಿಗಳು ಬದುಕಿನಲ್ಲಿ ಹಾದು ಹೋಗುತ್ತವೆ. ಮನಸ್ಸಿನಲ್ಲಿ ಅದುಮಿಟ್ಟ ಭಾವನೆಗಳು, ಗೊತ್ತಿಲ್ಲದಂತೆ ವೇಷ ಮರೆಸಿಕೊಂಡು ಕನಸಿನ ರೂಪದಲ್ಲಿ, ಭ್ರಮೆಯ ರೂಪದಲ್ಲಿ ಪ್ರಕಟವಾಗುತ್ತಿರುತ್ತವೆ. ಸಮಾಜ ಒಪ್ಪಿಕೊಂಡ ಸಾಂಪ್ರದಾಯಿಕ ಕಟ್ಟುಪಾಡುಗಳು, ವಿಧಿ ನಿಷೇಧಗಳು ವ್ಯಕ್ತಿಯ ಒಳ ಮನಸ್ಸಿನ ಬಯಕೆಗಳ ಈಡೇರಿಕೆಗೆ ಅಡ್ಡಿಯಾಗುತ್ತವೆ. ಹೀಗೆ ದಮನಕ್ಕೆ ಒಳಗಾಗುವ ಬಯಕೆಗಳು ಪ್ರಮುಖವಾಗಿ ಲೈಂಗಿಕ ಆಸೆಗಳೇ ಆಗಿರುತ್ತವೆ. ಈ ಲೈಂಗಿಕ ಬಯಕೆಗಳನ್ನು ಫ್ರಾಯ್ಡ್ 'ಲಿಬಿಡೊ' ಎಂದು ಕರೆದಿದ್ದಾನೆ. ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನಲ್ಲೂ ಅಡಕವಾಗಿರುವ ಭಾವನೆಗಳನ್ನು, ಮೇಲ್ನೋಟಕ್ಕೆ ಕಾಣದಂತೆ ಸುಪ್ತ ಮನಸ್ಸಿಗೆ ರವಾನಿಸಲಾಗುತ್ತದೆ. ಆದರೆ ಒಳಗೆ ಅವಿತಿಟ್ಟುಕೊಂಡ ಬಯಕೆಗಳು ವೇಷ ಮರೆಸಿಕೊಂಡು, ವಿಕೃತವಾಗಿ ಕನಸಿನ ರೂಪದಲ್ಲಿ, ಭ್ರಮೆಯ ರೂಪದಲ್ಲಿ ಜಾಗೃತ ಮನಸ್ಸನ್ನು ಪ್ರವೇಶಿಸುತ್ತವೆ. ಹೀಗೆ ವ್ಯಕ್ತವಾಗುವುದರಿಂದ ಮನಸ್ಸು ಸ್ಥಿಮಿತಗೊಳ್ಳುತ್ತದೆ. ಸುಪ್ತ ಮನಸ್ಸಿನ ಬಯಕೆಗಳನ್ನು

ಸಂಗ್ರಹಕತೆ

ಪಲ್ಲಟ

ಸಾಂಕೇತಿಕತೆ

ಅಂಶಗಳ ಮೂಲಕ ಗುರುತಿಸಲಾಗಿದೆ. ಸುಪ್ತವಾಗಿದ್ದ ಬಯಕೆಗಳ ಕೆಲವು ಅಂಶಗಳು ನೇರವಾಗಿ ವ್ಯಕ್ತವಾಗದೆ, ಇನ್ನಿತರ ಅಂಶಗಳೊಡನೆ ಬೆರೆತು ಒಂದು ಬಿಂಬದ ರೂಪವನ್ನು ತಾಳುವುದನ್ನು 'ಸಂಗ್ರಹಕತೆ' ಎಂದು ಕರೆಯಲಾಗಿದೆ. ಅದುಮಿಟ್ಟ ಬಯಕೆಯು ಇಚ್ಛಿತ ವ್ಯಕ್ತಿ, ಭಾವ, ವಸ್ತುವಿನ

ಬದಲಾಗಿ, ಎಚ್ಚರದ ಮನಸ್ಸು ಒಪ್ಪಿಕೊಳ್ಳುವಂಥ ಇನ್ನೊಂದು ರೂಪವನ್ನು ಧರಿಸುವುದನ್ನು 'ಪಲ್ಲಟ' ಎನ್ನಲಾಗಿದೆ. ಲೈಂಗಿಕ ಬಯಕೆಗಳು ಲೈಂಗಿಕತೆಗೆ ಸಂಬಂಧಪಡದ ವಸ್ತುಗಳ ರೂಪವನ್ನು ಪಡೆಯುವುದು 'ಸಾಂಕೇತಿಕತೆ'ಯಾಗಿದೆ. ಜಾಗೃತ ಸ್ಥಿತಿಗೆ ಕಾಣುವ ರೂಪಗಳು ಕನಸಿನ ಅಥವಾ ಸಾಹಿತ್ಯ ಕೃತಿಯ ವ್ಯಕ್ತ ವಿಷಯವಾಗಿರುತ್ತವೆ. ವ್ಯಕ್ತ ರೂಪವು ಅವ್ಯಕ್ತ ಅರ್ಥವನ್ನು ಒಳಗೊಂಡಿರುತ್ತದೆ.

ತ್ರಿವೇಣಿಯವರ 'ಎರಡು ಮನಸ್ಸು' ಮತ್ತು 'ಹೆಂಡತಿಯ ಹೆಸರು' ಕಥಾ ಸಂಕಲನಗಳನ್ನು; ಅನುಪಮಾ ನಿರಂಜನವರ ಕೆಲವು ಕತೆಗಳನ್ನು; ವೀಣಾ ಶಾಂತೇಶ್ವರ್‌ರವರ 'ಮಳೆ ಬಂದಾಗ' ಕತೆಯನ್ನು ಅಧ್ಯಯನ ಮಾಡಲಾಗಿದೆ.

ವೀಣಾ ಶಾಂತೇಶ್ವರ್ ಅವರ 'ಮಳೆ ಬಂದಾಗ' ಕತೆ ಮನೋವಿಶ್ಲೇಷಣಾತ್ಮಕ ತಾತ್ವಿಕತೆಯನ್ನು ಪ್ರಯೋಗಿಸಿದೆ. ಜಿಟಿಜಿಟಿ ಮಳೆಯೊಂದಿಗೆ ಆರಂಭವಾದ ಕತೆ ಮಳೆಯೊಂದಿಗೆ ಮುಗಿಯುತ್ತದೆ. ಕತೆಯಲ್ಲಿ ಬರುವ ಸಹನಾ ಚಿತ್ರಕಲಾವಿದೆ. ಅವಳ ಚಿಕ್ಕಪ್ಪ ಸೈಕಿಯಾಟ್ರಿಸ್ಟ್, ಚಿಕ್ಕಪ್ಪನ ಬಳಿ ಬಂದ ಮಾನಸಿಕ ರೋಗಿಯ ಮನೋಸ್ಥಿತಿಯನ್ನು ಸಹನಾ ಬಿಡಿಸುವ ಚಿತ್ರದೊಂದಿಗೆ ಸಾಮಾನ್ಯೀಕರಿಸಲಾಗಿದೆ. "ಅವನಿಗೆ ಸದಾ ಮಳೆಯೊಳಗೆ ತೋಯಿಸಿಗೋತ ತಿರುಗಾಡಬೇಕು ಅನಸತಿತ್ತಂತ. ಅದು ತಪ್ಪು, ಅದರಿಂದ ತ್ರಾಸಾಗದಂತ ಗೊತ್ತಿದ್ದರೂ ಮಳೆ ಬಂದ ಕೂಡಲೇ ತನಗ, ಗೊತ್ತಾಗಧಾಂಗ ಹೊರಟ ಬಿಡತಿದ್ದನಂತ" (ನೆಡದದ್ದೇ ದಾರಿ, ಪುಟ–೮೯) ಆತನ ಮಾನಸಿಕ ಸ್ಥಿತಿಯಿಂದ ಪ್ರಭಾವಿತಳಾದ ಸಹನ ಮಳೆಯೊಳಗೆ ತೋಯಿಸಿಕೊಳ್ಳುವ ಅವನ ಚಿತ್ರ ಬರೆಯುತ್ತಾಳೆ. ನಂತರ ಆ ಚಿತ್ರವನ್ನು ಬದಲಾಯಿಸಿ ಮಳೆಯ ಗುರುತನ್ನು ಅಳಿಸಿ ಸೂರ್ಯನ ನೆರಳು ಬೆಳಕುಗಳನ್ನು ಮೂಡಿಸುತ್ತಾಳೆ. ಇದು ಮಾನಸಿಕ ರೋಗ ಚೇತರಿಸಿಕೊಂಡಿರುವುದನ್ನು ಸೂಚಿಸುತ್ತದೆ. ಇನ್ನೇನು ಚಿತ್ರ ಮುಗಿಯಿತು ಎನ್ನುವಾಗ ಮಳೆಯಲ್ಲಿ ತೊಯ್ದ ತಲೆ ಮತ್ತು ಕೂದಲನ್ನು ಗರಿಗರಿಯಾಗಿಸಲು ಸಾಧ್ಯವಾಗುವುದಿಲ್ಲ. ಗುಣಮುಖನಾದನೆಂದು ಬಗೆದಿದ್ದ ಅವನು ಮತ್ತೆ ಮೊದಲಿನಂತೆ ಮಳೆಯಲ್ಲಿ ತೋಯಿಸಿಕೊಳ್ಳುವ ಸುದ್ದಿ ಚಿಕ್ಕಪ್ಪನ ಪತ್ರದಿಂದ ತಿಳಿಯುತ್ತದೆ. ಸಹನಾಳ ಚಿತ್ರ ಅಂತಿಮ ರೂಪ ಪಡೆಯದಿರುವುದಕ್ಕೂ, ಮಾನಸಿಕ ರೋಗಿ ಚೇತರಿಸಿಕೊಳ್ಳದಿರುವುದಕ್ಕೂ ಪರಸ್ಪರ ಸಾಮ್ಯತೆಯ ತರ್ಕವನ್ನು ಕತೆಗಾರರು ಅನುಸರಿಸಿದ್ದಾರೆ. ಕತೆಯ ಕೊನೆಗೆ ಆ ಅಪೂರ್ಣ ಚಿತ್ರವನ್ನು ಮಳೆಯಲ್ಲಿ ಕರಗಲು ಬಿಡುತ್ತಾಳೆ. ಚಿಕ್ಕಪ್ಪನ ಮತ್ತು ತನ್ನ ಪ್ರಯತ್ನಗಳೆರಡೂ ನೀರಿನಲ್ಲಿ ಕರಗಿದ ಬಣ್ಣದಂತೆ ವ್ಯರ್ಥವಾಗುತ್ತದೆ. ವೀಣಾ ಶಾಂತೇಶ್ವರ್‌ರವರ ಇತರ ಕತೆಗಳನ್ನು ಪ್ರತಿಮಾತ್ಮಕ ಮಾದರಿಯಲ್ಲಿ ಚರ್ಚಿಸಲಾಗಿದೆ. ರಾಜಲಕ್ಷ್ಮಿ ಎನ್.ರಾವ್‌ರವರ 'ಫೀಡ್ರಾ' ಕತೆಯಲ್ಲಿ ಫ್ರಾಯ್ಡ್‌ನ ಈಡಿಪಸ್ ಕಾಂಪ್ಲೆಕ್ಸ್ ಸಿದ್ಧಾಂತವನ್ನು ಅಳವಡಿಸಿಕೊಳ್ಳಲಾಗಿದೆ. ಕತೆಯ ನಾಯಕಿ ಪಾರ್ವತಿ ತನ್ನ ಮಲಮಗನಾದ ಶ್ರೀಧರನ ಪ್ರೀತಿಗಾಗಿ ಹಾತೊರೆಯುತ್ತಾಳೆ. ಅದು ಸಾಧ್ಯವಾಗದಿದ್ದಾಗ ಆಕೆಯ ಅತೃಪ್ತ ಬಯಕೆಗಳು ಕನಸಿನ ಮೂಲಕ ಪ್ರಕಟವಾಗುತ್ತವೆ.

ಅನುಪಮಾ ನಿರಂಜನ ಅವರ ಕೆಲವು ಕತೆಗಳು ಮನೋವಿಜ್ಞಾನದ ಕೆಲವು ತತ್ವಗಳನ್ನು ಅಳವಡಿಸಿಕೊಂಡಿವೆ. 'ಏಳು ಸುತ್ತಿನ ಮಲ್ಲಿಗೆ' ಕತೆಯಲ್ಲಿ, ಇಂದುಮತಿಯ ಇಚ್ಛೆಯ ವಿರುದ್ಧವಾಗಿ, ತಂದೆ ಗೋಪಾಲನನ್ನು ಬಿಟ್ಟು ಬೇರೊಬ್ಬನೊಂದಿಗೆ ಮದುವೆ ಮಾಡಲು ಮುಂದಾದಾಗ ಇಂದುಮತಿಗೆ ಮಾನಸಿಕ ಸ್ಥಿಮಿತತೆ ಇಲ್ಲವಾಗುತ್ತದೆ. ಮತ್ತೆ ಗೋಪಾಲನ ಭರವಸೆಯಿಂದ ಗುಣವಾಗುವ ಚಿತ್ರಣವಿದೆ.

'ಕೊರಳಹಾರ' 'ವಿಳಾಸವಿಲ್ಲದ ಮಗು', ಕತೆಗಳು ತಾಯ್ತನದ ವಸ್ತುವನ್ನು ಆಯ್ದುಕೊಂಡಿವೆ. 'ಕೊರಳಹಾರ' ಕತೆಯು ತ್ರಿವೇಣಿಯವರ 'ಸಲಹೆ' ಕತೆಯ ರೇವತಿಯ ಮನಃಸ್ಥಿತಿಯನ್ನು ಹೋಲುತ್ತದೆ. ಮೊದಲ ಹೆರಿಗೆಯಲ್ಲಿ 'ಕಾರ್ಡ್ ಪ್ರೊಲಾಪ್ಸ್'ನಿಂದ ಮಗುವನ್ನು ಕಳೆದುಕೊಂಡ ಮಾಲತಿಗೆ ಮತ್ತೊಂದು ಹೆರಿಗೆಯಲ್ಲಿಯೂ ಹಾಗೇ ಆಗುತ್ತದೆಯೆಂಬ ಆತಂಕ ಕಾಡುತ್ತಿರುತ್ತದೆ. ಆದರೆ ಆತಂಕ ದೂರವಾಗಿ ಮಗು ಉಳಿಯುತ್ತದೆ. 'ವಿಳಾಸವಿಲ್ಲದ ಮಗು' ಕತೆಯಲ್ಲಿ ತಾಯಿ ಸತ್ತು ಹೋದ ಅನಾಥ ಮಗುವಿಗೆ, ನರ್ಸ್ ಸುಂದರಮ್ಮ ತಾಯಿಯಾಗುವ, ತಾಯ್ತನದ ಪುಳಕವನ್ನು ಅನುಭವಿಸುವ ಚಿತ್ರಣವಿದೆ. ಒರಟು ಸ್ವಭಾವದ  ಸುಂದರಮ್ಮ ಮದುವೆಯನ್ನು, ಮಕ್ಕಳನ್ನು ವಿರೋಧಿಸಿ ಒಂಟಿಯಾಗಿ ಜೀವನ ನಡೆಸುವವಳು. ಆದರೆ  ಅನಾಥ ಮಗು ಆಕೆಯ "ಹೃದಯದ ತಂತಿಯನ್ನು ಯಾರೋ ಮೃದುವಾಗಿ ಮೀಟಿದ ಹಾಗಾಯಿತು. ಸುಂದರಮ್ಮ ಮಗುವನ್ನು ಕೈಗೆತ್ತಿಕೊಂಡಳು. ಮಗುವಿನ ಕೈ ಅವಳ ಎದೆಯ ಮೇಲೆ ಆಡಿತು. ಅದರ ಬಾಯಿ ಏನನ್ನೋ ಹುಡುಕಿತು. ಹಾಗೆ ಹುಡುಕುತ್ತ, ಇಂತಹದೇ ಎಂದು ಹೇಳಲಾಗದ ಅಪೂರ್ವ ಅನುಭವವನ್ನು ಅದು ಸುಂದರಮ್ಮನಿಗೆ ನೀಡಿತು" (ಹೃದಯಸಮುದ್ರ, ಪುಟ-೧೦) ಆರೈಕೆಯಲ್ಲಿ ಬೆಳೆದ ಮಗುವಿನೊಂದಿಗೆ ಆಪ್ತ ಭಾವವೊಂದು ಬೆಳೆಯುತ್ತದೆ. ಕೊನೆಗೆ ಆಸ್ಪತ್ರೆಯಿಂದ ಮಗುವನ್ನು ಮನೆಗೆ ಒಯ್ದು ಸಾಕುವ ನಿರ್ಧಾರಕ್ಕೆ ಆಸ್ಪತ್ರೆಯ ಮುಖ್ಯಸ್ಥರಿಂದ ಅನುಮತಿ ದೊರಕುತ್ತದೆ.

'ಸೊಡರು' ಕತೆ ಪೋಲಿಯೋದಿಂದ ಕುಂಟನಾದ ಮಗು ಅನುಭವಿಸುವ ಯಾತನೆಗಳನ್ನು ತಾಯಿ ಕುಮುದಳ ಮೂಲಕ ಚಿತ್ರಿಸಲಾಗಿದೆ. ಮಗುವಿನ ಕಾಲು ಸರಿ ಹೋಗುವವರೆಗೂ ಕುಮುದಳ ಆತಂಕವನ್ನು, ಮಾಡಿದ ಆರೈಕೆಯನ್ನು ಕತೆ ನಮ್ಮ ಮುಂದಿಡುತ್ತದೆ. 'ತೆರೆ' ಕತೆಯಲ್ಲಿ ನಳಿನಿಯ ಬಂಜೆತನದ ಸಮಸ್ಯೆಯನ್ನು ಅತ್ತೆ, ನಳಿನಿ, ಗಂಡ ಚಂದ್ರೂ, ಮೂವರ ದೃಷ್ಟಿಕೋನದಲ್ಲಿ ವಿಶ್ಲೇಷಿಸಲಾಗಿದೆ. ಅನುಪಮಾ ನಿರಂಜನರವರ 'ಎರಡನೆಯ ಹುಟ್ಟು' ಕತೆ ಮಧ್ಯಮ ವರ್ಗದ ಶ್ರೀಪತಿ, ಸಂಸಾರ ನಿಭಾಯಿಸಲು ಪಡಬೇಕಾದ ದುಃಸ್ಥಿತಿಯನ್ನು ಮುಂದಿಡುತ್ತದೆ. ಹೆಂಡತಿ-ಮಕ್ಕಳ ಅವಶ್ಯಕತೆಗಳನ್ನು ಪೂರೈಸಲಾಗದ ಶ್ರೀಪತಿ ಮಾನಸಿಕ ಅಸ್ವಸ್ಥತೆಗೆ ಒಳಗಾಗುತ್ತಾನೆ. ಮುಂದೆ ಹೆಂಡತಿ ಮಂದಾಕಿನಿ ಕೆಲಸಕ್ಕೆ ಸೇರಿ ಆರ್ಥಿಕ ಹೊರೆಯನ್ನು ಕಡಿಮೆ ಮಾಡಿದಾಗ ಶ್ರೀಪತಿಯ ಮನಃಸ್ಥಿತಿ ಸ್ಥಿಮಿತಕ್ಕೆ ಬರುತ್ತದೆ.

ಮನೋವಿಶ್ಲೇಷಣಾ ಮಾದರಿಯಲ್ಲಿ ವ್ಯಕ್ತಿ ವ್ಯಕ್ತಿಗಳ ಮಾನಸಿಕ ವ್ಯಾಪಾರಗಳನ್ನು ತಿಳಿಯುವುದು ಮುಖ್ಯವಾಗಿರುತ್ತದೆ. ತ್ರಿವೇಣಿಯವರ ಕತೆ, ಕಾದಂಬರಿಗಳನ್ನು ಈ ಮಾದರಿಯಲ್ಲಿ ಅಧ್ಯಯನ

ಮಾಡಲಾಗಿದೆ. ತ್ರಿವೇಣಿಯವರು ಮನೋವಿಜ್ಞಾನವನ್ನು ಆಧರಿಸಿ, ವ್ಯಕ್ತಿಯ ಸಹಜ ವರ್ತನೆಯಲ್ಲಾಗುವ ಕಾರಣಗಳನ್ನು ತರ್ಕಿಸುವ ವಿಧಾನದೊಂದಿಗೆ ಸಾಮಾಜಿಕ ಬದುಕಿನ ಶೋಧವೂ ಕಂಡುಬರುತ್ತದೆ.

ಕೌಟುಂಬಿಕ ಚೌಕಟ್ಟಿನಲ್ಲಿ ಹೆಣ್ಣು ಅನುಭವಿಸುವ ಮಾನಸಿಕ ಸ್ಥಿತಿಯನ್ನು ವಿವರಿಸಲು ತ್ರಿವೇಣಿಯವರು ಮನಃಶಾಸ್ತ್ರದ ಕೆಲವು ತತ್ವಗಳನ್ನು ತಾಂತ್ರಿಕವಾಗಿ ಬಳಸಿಕೊಂಡಿದ್ದಾರೆ. 'ಸೇರದ ದಾರಿ', 'ಬಿಳಿಯ ಕಾಗೆ', 'ನನ್ನ ಬೊಂಬೆ', 'ಬೆಡ್ ನಂಬರ್ ಏಳು', 'ಎರಡು ಜೀವ' ಮುಂತಾದ ಕತೆಗಳು ಗಂಡು ಹೆಣ್ಣಿನ ಸಂಬಂಧಗಳುಳ್ಳ ಕಥಾ ವಸ್ತುವನ್ನು ಹೊಂದಿದೆ. 'ಬಿಳಿಯ ಕಾಗೆ' ಕತೆಯಲ್ಲಿ, ಪ್ರೀತಿಸಿದವನು ಮದುವೆಯಾಗುವುದಿಲ್ಲವೆಂದು ಹೇಳಿದಾಗ ಆತ್ಮಹತ್ಯೆ ಮಾಡಿಕೊಳ್ಳಲು ಹೊರಟ ಸುಧಾಳ ಮನಸ್ಥಿತಿಗೂ, "ಯಾರಿಗೋಸ್ಕರ ಅವಳು ಸಾಯಲು ಹೊರಟಿದ್ದಳೋ ಆ ವ್ಯಕ್ತಿ ತನ್ನ ಸಾವಿನಿಂದ ಕೊಂಚವೂ ವಿಚಲಿತನಾಗುವುದಿಲ್ಲವೆಂಬುದು ಅವಳಿಗೆ" (ಎರಡು ಮನಸ್ಸು, ಪುಟ-೯೯) ತಿಳಿದಾಗಿನ ಸುಧಾಳ ಮನಸ್ಥಿತಿಯಲ್ಲಿ ಬದಲಾದ ಆಶಯಗಳು ಗೋಚರಿಸುತ್ತವೆ. ತಂದೆ ತಾಯಿಯ ಮೆಚ್ಚಿನ ಮಗಳಾದ ತಾನು, 'ಸುಡುವ ಸೌಂದರ್ಯ'ದಲ್ಲಿ ಸುಟ್ಟು ಹೋಗುವ ಬದಲು ಹೊಸ ಜೀವನಕ್ಕೆ ಕಾಲಿರಿಸುವ ನಿರ್ಧಾರ ಕೈಗೊಳ್ಳುತ್ತಾಳೆ. 'ನನ್ನ ಬೊಂಬೆ' ಕತೆಯಲ್ಲಿ ಪ್ರೀತಿಸುತ್ತಾಳೆ. ರಾಜ ತನ್ನ ಜೀವನದಲ್ಲಿ ಪ್ರೀತಿಸಿ, ಮರೆಯಾದ ತಾರಾಳ ನೆನಪಿಗಾಗಿ, ಅಕ್ಕನ ಮಗಳಿಗೆ ತಾರಾ ಎಂದು ಕರೆದು ಮಗಳ ರೂಪವನ್ನು ಕಾಣುತ್ತಾನೆ. ಆದರೆ ತಾರಾ, ಸೋದರ ಮಾವ ರಾಜನನ್ನು ಪ್ರೀತಿಸತೊಡಗಿರುತ್ತಾಳೆ. ಇದನ್ನು ತಿಳಿದ ರಾಜ, ತಾರಾಳ ಮದುವೆ ಮುಗಿದ ದಿನ ಸನ್ಯಾಸಿಯಾಗಿ ಹೊರಟು ಹೋಗುತ್ತಾನೆ. ಕತೆ ಪ್ರಾರಂಭವಾಗುವುದು ತಾರಾ ಮತ್ತು ತಾರಾಳ ಮಗಳು ದಸರಾ ಹಬ್ಬಕ್ಕಾಗಿ ಬೊಂಬೆಗಳನ್ನು ಹೊರ ತೆಗೆದಾಗ, ಬಾಲ್ಯದಲ್ಲಿ ರಾಜ ಕೊಟ್ಟ ಚಂದನದ ಬೊಂಬೆಯ ಮೂಲಕ ಹಿಂದಿನ ಕತೆ ನೆನಪಾಗುತ್ತದೆ. ಆ ನೆನಪನ್ನು ಮರೆಯಲು ಬೊಂಬೆಯನ್ನು ಬಾವಿಗೆ ಎಸೆದು, ತಾರಾ ನಿರಾಳವಾಗುವುದನ್ನು ಕತೆ ಸೂಚಿಸುತ್ತದೆ. 'ಸೇರದ ದಾರಿ' ಕತೆಯಲ್ಲಿಯಲ್ಲಿ ಕಮಲಳ ಗಂಡ ಬೇರೊಬ್ಬಳೊಂದಿಗೆ ಸ್ನೇಹ ಬೆಳೆಸಿ, ಕಮಲಳನ್ನು ತಿರಸ್ಕರಿಸುತ್ತಾನೆ. ಯಾರೊಂದಿಗೂ ಹೇಳಿಕೊಳ್ಳಲಾಗದ ಆಕೆಯ ತಳಮಳಗಳು ಬೇರೆ ಬೇರೆ ರೂಪದಲ್ಲಿ ಪ್ರಕಟವಾಗುತ್ತವೆ. "ನನಗೆ ತುಂಬಾ ಕೋಪ ಬಂತು ಮಲಗಿದ್ದಾತನನ್ನು ನೋಡಿ ಚೆನ್ನಾಗಿ ಹೊಡೆದು ಬಿಡೋಣ ಎನ್ನಿಸಿತು. ನನಗೆ ಬರೀ ಕಂಠ ಶೋಷಣೆ ಅಷ್ಟೆ. ಇನ್ನು ರೂಮಿನಲ್ಲೇ ನಿಂತರೆ ಮನಸ್ಸು ನನ್ನ ಕೈಮೀರಿ ಓಡುವುದೆಂದರಿತು ಹೊರಗೆ ಬಂದೆ, ದಾರಿಯಲ್ಲಿ ಸಿಕ್ಕಿದ ಕಂಚಿನ ಲೋಟವೊಂದನ್ನು ಕೈಗೆ ತೆಗೆದುಕೊಂಡು ನನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ದೂರ ಎಸೆದೆ, ಲೋಟ ಚೂರಾಯಿತು" (ಅದೇ, ಪುಟ-೦೬)

ಲೋಟ ಎಸೆಯುವುದು, ಪೇಪರ್ ವೈಟ್‌ನ್ನು ಎಸೆಯುವುದು, ಬೆರಳನ್ನು ರಕ್ತ ಬರುವವರೆಗೂ ಕಚ್ಚುವುದು, ಕಮಲಳ ಮನಸ್ಸಿನೊಳಗೆ ಆಗುವ ತಾಕಲಾಟಗಳನ್ನು ಹೊರ ಹಾಕುವ ಮಾರ್ಗವಾಗಿದೆ. ಆಕೆಯ ಅಸಹಾಯಕತೆಯನ್ನು ಅದು ಸೂಚಿಸುತ್ತದೆ. ಮುಂದೆ ಮಗ ಶಾಂತಾರಾಂಗೆ ಕೆಲಸ ಸಿಕ್ಕಾಗ, ಅವನೊಂದಿಗೆ ಗಂಡನನ್ನು ಬಿಟ್ಟು ಹೋಗುವ ನಿರ್ಧಾರದೊಂದಿಗೆ ಬಿಡುಗಡೆ ದೊರೆಯುತ್ತದೆ.

ಮೇಲಿನ ಮೂರೂ ಕತೆಗಳಲ್ಲಿ ಹಿಂದಿನ ನೆನಪುಗಳು ಸ್ವಗತ ರೂಪದಲ್ಲಿ ಪ್ರಕಟವಾಗಿವೆ. ಸುಧಾ, ತಾರಾ, ಕಮಲ ಇವರು ಕೊನೆಗೆ ತೆಗೆದುಕೊಳ್ಳುವ ನಿರ್ಧಾರಗಳು ಕತೆಗಾರರ ಆಶಯಗಳೂ ಆಗಿವೆಯೆಂಬುದು ಮುಖ್ಯ.

ಗಂಡು ಹೆಣ್ಣಿನ ಸಂಬಂಧಗಳು 'ಬೆಡ್ ನಂಬರ್ ಏಳು', 'ಎರಡು ಜೀವ' ಕತೆಗಳಲ್ಲಿ ಮುಂದುವರೆದಿದೆ. ಈ ಕತೆಗಳು ಕತೆಯ ನಿರೂಪಣೆಯ ದೃಷ್ಟಿಯಿಂದ ವಿಶಿಷ್ಟವಾದವುಗಳು. ಬೆಡ್ ನಂಬರ್ ಆರು, ಬೆಡ್ ನಂಬರ್ ಏಳು, ಬೆಡ್ ನಂಬರ್ ಎಂಟು ಕತೆಯನ್ನು ನಿರೂಪಿಸುತ್ತವೆ. ಆರನೇ ಬೆಡ್ಡು ಗಂಡಿನ ಸಂಕೇತವಾಗಿ, ಏಳನೇ ಬೆಡ್ಡು ಹೆಣ್ಣನ್ನು ಪ್ರತಿನಿಧಿಸುವ ಸಂಕೇತವಾಗಿ ಕತೆಗಾರರು ಅರ್ಥೈಸಿದ್ದಾರೆ. ವಿಶ್ವನಾಥನಿಗೆ ಕ್ಷಯ ರೋಗವಾಗಿ ಎರಡು ವರ್ಷ ಆಸ್ಪತ್ರೆಯಲ್ಲಿದ್ದಾಗ ಉಮಾ ದುಡಿದು, ತನ್ನ ಆರೋಗ್ಯದ ಕಡೆ ಲಕ್ಷ್ಯ ಕೊಡದೆ ಅವನನ್ನು ರಕ್ಷಿಸುತ್ತಾಳೆ. ಆದರೆ ಮುಂದೆ ಅದೇ ರೋಗದಿಂದ ಆಕೆ ಆಸ್ಪತ್ರೆ ಸೇರಿದಾಗ, ವಿಶ್ವನಾಥ ಅವಳನ್ನು ಉಪೇಕ್ಷಿಸಿ ಮತ್ತೊಂದು ಮದುವೆಯಾಗುತ್ತಾನೆ. ಉಮಾಳ ದುರಂತ ಜೀವನವನ್ನು ಮನೋಜ್ಞವಾಗಿ ಬೆಡ್ ನಂಬರ್ ಏಳು ಓದುಗರ ಮುಂದಿಟ್ಟಿದೆ. ಎರಡು ಜೀವ ಕತೆಯನ್ನು, ಲತೀಫ್ ಎಂಬ ಕುದುರೆ ನಿರೂಪಿಸುತ್ತಾ ಹೋಗಿದೆ. ಶೀಲಾ ಚಂದುವಿನ ಮದುವೆ ನಿಶ್ಚಯಕ್ಕೆ ಸಾಕ್ಷಿಯಾಗಿದ್ದ ಕುದುರೆ, ಅವರಿಬ್ಬರ ಪ್ರೀತಿ ಸರಸ ಸಲ್ಲಾಪಗಳಲ್ಲೂ ಪಾಲುಗೊಂಡಿತ್ತು. ಆದರೆ ಹೆರಿಗೆ ಸಮಯದಲ್ಲಿ ಶೀಲ ಅಸುನೀಗುತ್ತಾಳೆ. ಆರು ತಿಂಗಳ ನಂತರ ಚಂದು, ತನ್ನ ಹೊಸ ಹೆಂಡತಿ ಜಯಳೊಂದಿಗೆ ಸರಸ ಸಲ್ಲಾಪ ನಡೆಸುತ್ತಾ, ತಾನು ಎಳೆದೊಯ್ಯುವ ಗಾಡಿಯಲ್ಲಿ ಕುಳಿತಿರುವುದನ್ನು ನೋಡಿ ಲತೀಫನಿಗೆ ಅಸಹ್ಯವೆನಿಸುತ್ತದೆ. "ನನ್ನ ಮನಸ್ಸಿನಲ್ಲಿ ಬಿರುಗಾಳಿ ಎದ್ದಿತು. ಮಾನವ ಎಷ್ಟು ಕೃತಘ್ನ ಅವನಿಗಿಂತ ಕಟುಕರು, ಹೃದಯ ಹೀನರು ಬೇರೆ ಯಾರಿದ್ದಾರೆ? ನನ್ನ ಹೀರಾ ಈ ಮಾನವ ಪ್ರಾಣಿಗಿಂತಲೂ ಎಷ್ಟೋ ಮೇಲು. ಶಂಷೀರ್ ತನಗಾಗಿ ಹಾತೊರೆದಾಗ ಹೀರಾ ಅವನಿಗೆ ಬುದ್ದಿ ಹೇಳಿದ್ದಳು. ಅವನು ಮಂಡು ಹಿಡಿದಾಗ ಒದ್ದು ಕಳುಹಿಸಿದ್ದಳು. ನನಗೂ ಹೀರಾಳನ್ನು ಬಿಟ್ಟು ಈ ಜಗತ್ತಿನಲ್ಲಿ ಬೇರೆ ಯಾರನ್ನೂ ಪ್ರೀತಿಸುವುದು ಸಾಧ್ಯವಿಲ್ಲ.... ಮಾನವರ ಪ್ರೇಮ ನಮಗಿಂತಲೂ" (ಹೆಂಡತಿಯ ಹೆಸರು, ಪುಟ-೧೩೮) ಕೀಳಾಗಿದೆ ಎಂಬುದನ್ನು ಲತೀಫ ಮನಗಾಣಿಸುತ್ತದೆ. ಹೀರಾ ಲತೀಫರೆಂಬ ಕುದುರೆಗಳ ನಿಷ್ಠೆಯ ಪ್ರೀತಿಯನ್ನು ಉದಾಹರಿಸುವ ಮೂಲಕ ಗಂಡು ಜಗತ್ತಿನ ಅನಾಗರೀಕತೆಯನ್ನು ಪ್ರಶ್ನಿಸಿದ್ದಾರೆ, ಖಂಡಿಸಿದ್ದಾರೆ.

ಗಂಡ ಸತ್ತರೆ ಹೆಣ್ಣು ವಿಧವೆಯಾಗುತ್ತಾಳೆ. ಹೆಂಡತಿ ಸತ್ತರೆ ಗಂಡ ಮತ್ತೊಂದು ಮದುವೆಯಾಗುವ ಅಸಮಾನ ನೆಲೆಗಳನ್ನು ಕತೆ ಯೋಚಿಸುವಂತೆ ಮಾಡುತ್ತದೆ. ಮನುಷ್ಯನಿಗಿಲ್ಲದ ಸೂಕ್ಷ್ಮ ಸಂವೇದನೆಯನ್ನು ಕುದುರೆ ಪ್ರಜ್ಞೆಯ ಮೂಲಕ ಕತೆಗಾರರು ಮನಗಾಣಿಸಿದ್ದಾರೆ.

'ಸಲಹೆ' ಮತ್ತು 'ಅತಿಥಿ ಬರಲಿಲ್ಲ', 'ಹಸಿರು ಪೀತಾಂಬರ' ಕತೆಗಳಲ್ಲಿ ಹೆಣ್ಣು ತಾಯಿಯಾಗುವಾಗ ಮನಸ್ಸಿನಲ್ಲಿ ಉಂಟಾಗುವ ಆತಂಕ, ಭಯ, ಸಂಭ್ರಮಗಳನ್ನು ಚಿತ್ರಿಸುತ್ತಾರೆ. ಸಲಹೆ ಕತೆಯಲ್ಲಿ ತಾಯಿಯಾಗಲಿರುವ ರೇವತಿ, ತನ್ನಕ್ಕ ಹೆರಿಗೆಯಲ್ಲಿ ಅಸುನೀಗಿದ್ದನ್ನು ನೆನಪಿಸಿಕೊಂಡು ತಾನೂ

ಹಾಗೇ ಸಾಯಬಹುದೆಂಬ ಕಲ್ಪನೆ ಮಾಡಿಕೊಂಡು ವೇದನೆಗೀಡಾಗಿದ್ದಾಳೆ. ಇದಕ್ಕೆ ಪೂರಕವೆನ್ನುವಂತೆ 'ಸುಮಂಗಲಿ' ವಾರಪತ್ರಿಕೆಯು 'ಅಗ್ನಿ ಪರೀಕ್ಷೆ' ಎಂಬ ಸಶೇಷ ಕತೆಯಲ್ಲಿ ಬರುವ ಗರ್ಭಿಣಿ ಆಶಾಳಿಗೆ ಉಂಟಾಗುವ ತೊಂದರೆ ಖಾಯಿಲೆಗಳನ್ನು ತನ್ನವೇ ಎಂದು ರೇವತಿ ಆರೋಪಿಸಿಕೊಳ್ಳುತ್ತಾಳೆ. ಗಂಡ ಶ್ರೀಧರ, ಪತ್ರಿಕೆಯಲ್ಲಿ ಬರೆಯುತ್ತಿರುವ ಕತೆಗಾರರನ್ನು ಭೇಟಿಯಾಗಿ ಕತೆ ಸುಖ್ಯಾಂತವಾಗುವಂತೆ ನೋಡಿಕೊಳ್ಳುತ್ತಾನೆ. ಪರಿಣಾಮ ರೇವತಿಗೆ ಸುಖ ಪ್ರಸವವಾಗುತ್ತದೆ. 'ಅತಿಥಿ ಬರಲಿಲ್ಲ' ಕತೆಯಲ್ಲಿ ಹೆಣ್ಣು ಹೆರಿಗೆಯಲ್ಲಿ ಅನುಭವಿಸುವ ಯಾತನೆಯ ಚಿತ್ರಣ ನೀಡಿದ್ದಾರೆ.

"ಈಗ ಕಾಮಾಕ್ಷಿಗೆ ಅರಿವಿದ್ದುದು ನೋವು ಮಾತ್ರ. ಅವಳಿದ್ದುದು ನೋವಿನ ಪ್ರಪಂಚದಲ್ಲಿ,
ಅವಳು ಮುಳುಗಿದ್ದುದು ನೋವಿನ ಸಾಗರದಲ್ಲಿ.
ದೇಹದ ನರ ನರವನ್ನು ತಿರುಚಿ ಹಿಂಡಿದ ಹಾಗೆ ಅನುಭವ ಅವಳಿಗೆ.
ನೋವಿನ ಯಜ್ಞಕುಂಡದ ನಡುವೆ ಇದ್ದಳು ಕಾಮಾಕ್ಷಿ
ಅವಳ ಸುತ್ತಲೂ ನೋವಿನ ಕೆನ್ನಾಲಗೆಗಳು ಕುಣಿಯುತ್ತಿದ್ದವು. ಅವುಗಳ ಕಾವಿಗೆ,
ಪ್ರಖರತೆಗೆ ತೀಕ್ಷ್ಣತೆಗೆ ಬಸವಳಿದು ಬೆವರಿ ನೀರಾದಳು ಕಾಮಾಕ್ಷಿ
ಸಣ್ಣ ಉಳಿಯೊಂದು ಮೂಳೆಗಳನ್ನು ಕುಟ್ಟುತ್ತಿತ್ತು.
ಮಾಯಾ ಹಸ್ತವೊಂದು ಉಳಿಯೊಡನೆ ಹಾರೆ, ಗುದ್ದಲಿ, ಕೊಡಲಿ, ಕತ್ತಿ, ಚಾಕು,
ಕತ್ತರಿ ಎಲ್ಲವನ್ನೂ ಸೇರಿಸಿತು.
ಹರಿತವಾದ ಆಯುಧಗಳೆಲ್ಲವೂ ಏಕಕಾಲದಲ್ಲಿ ಅವಳ ಮೇಲೆ ಧಾಳಿಯಿಟ್ಟವು" (ಅದೇ,
ಪುಟ–೧೬೬)

ತ್ರಿವೇಣಿಯವರ ಕಾಲದಲ್ಲಿ, ಹೆಚ್ಚಾಗಿ ಬಳಕೆಯಲ್ಲಿಲ್ಲದ ಸಿಝೇರಿಯನ್ ಆಪರೇಷನ್ ಮೂಲಕ ಹೆರಿಗೆ ಮಾಡಿಸುವಾಗ ಅನುಭವಿಸುವ ಮಾನಸಿಕ ಯಾತನೆಗಳನ್ನು ಮೇಲಿನ ಚಿತ್ರಣ ನೀಡುತ್ತದೆ. ಇದರೊಂದಿಗೆ

"ಮಕ್ಕಳಿಂದಲೇ ಬಾಳೇನು?

ಬದುಕನ್ನು ನಿತ್ಯ ನೂತನವನ್ನಾಗಿಸಲು ಪ್ರಪಂಚದಲ್ಲಿ ಎಷ್ಟೊಂದು ಆಕರ್ಷಣೆಗಳಿವೆ, ಎಷ್ಟೊಂದು ಹವ್ಯಾಸಗಳಿವೆ...

ಅವುಗಳಿಂದ ಬಾಳು ರಂಗಾಗುವುದಿಲ್ಲವೇ ಕೊನೆಗೆ ಒಂದು ನಾಯಿ, ಬೆಕ್ಕು, ಪಕ್ಷಿಯನ್ನು ಸಾಕಿ ದಿನಗಳೆದರೂ ಆದೀತು" (ಅದೇ, ಪುಟ–೧೬೬) ಎಂಬ ಕತೆಗಾರರ ಆಶಯ ಕಾಮಾಕ್ಷಿಯ ಮೂಲಕ ವ್ಯಕ್ತವಾಗುತ್ತದೆ. ಇಂಥ ಮನಃಸ್ಥಿಗೆ ಹೆಣ್ಣು ಇನ್ನೂ ಪಕ್ವವಾಗಿಲ್ಲ ಎಂಬುದನ್ನು ಕತೆಗಾರರು ಅರಿತಿದ್ದಾರೆ. ಆದ್ದರಿಂದ ಕಾಮಾಕ್ಷಿ ಮೊದಲ ಹೆರಿಗೆಯಲ್ಲಿ ಜೀವಂತ ಮಗುವನ್ನು ಹೇರಲಾಗದ್ದಕ್ಕೆ ಸಂತಾಪಗೊಳ್ಳುತ್ತಾಳೆ. ಆಕೆಯ ಆದರ್ಶಗಳೆಲ್ಲ ಕರಗಿ, ಮುಂದೆ ಜೀವಂತ ಮಗುವಿಗೆ ಜನ್ಮ ನೀಡುವ ನಿರ್ಧಾರ ಕೈಗೊಳ್ಳುವಂತೆ ನೋಡಿಕೊಳ್ಳಲಾಗಿದೆ. 'ಹಸಿರು ಪೀತಾಂಬರ' ಕತೆಯು ತಾಯಿಯಾಗುವಳ ಅಪೇಕ್ಷೆಗಳಿಗಿಂತ, ಮಗುವಿನ ಅಗತ್ಯಗಳ್ನು ಪೂರೈಸುವಲ್ಲಿ ತಾಯಿ ಸಹಿಸುವ ಕಾಳಜಿಯನ್ನು ವ್ಯಕ್ತಪಡಿಸುತ್ತದೆ.

ತ್ರಿವೇಣಿಯವರು ಹೆಣ್ಣಿನ ಮಾನಸಿಕ ಸ್ಥಿತಿಯನ್ನು ವಿಶ್ಲೇಷಿಸುವುದರೊಂದಿಗೆ ಗಂಡಿನ ಮನಸ್ಥಿತಿಯನ್ನು 'ಹೆಂಡತಿಯ ಹೆಸರು' 'ನಾ ಮೆಚ್ಚಿದ ಹುಡುಗಿ' ಕತೆಗಳಲ್ಲಿ ಚಿತ್ರಿಸಿದ್ದಾರೆ. 'ಹೆಂಡತಿಯ ಹೆಸರು' ಕತೆಯಲ್ಲಿ ತನ್ನೊಂದಿಗೆ ಮದುವೆಯಾದ ಹೆಂಡತಿಯ ಹೆಸರನ್ನು ಈಶ್ವರ ಮೂರ್ತಿ ಮರೆತು ಹೋಗಿರುತ್ತಾನೆ. ಕಾರಣ, ಹಿಂದೆ ತಾನು ಪ್ರೀತಿಸಿದ-ಕೈಕೊಟ್ಟ ಹುಡುಗಿಯ ಹೆಸರೂ ಹೆಂಡತಿಯ ಹೆಸರೂ ಒಂದೇ ಆಗಿದ್ದರಿಂದ ಎಂಬ ವಿಶ್ಲೇಷಣೆ ದೊರೆಯುತ್ತದೆ. ಮನಸ್ಸಿನ ಪರಿಧಿಯಿಂದ ಆ ಹುಡುಗಿಯನ್ನು ದೂರ ಸರಿಸಿದ್ದರಿಂದ ಹೆಸರು ನೆನಪಿನಲ್ಲುಳಿಯದೆ, ಹೆಂಡತಿಗೆ 'ಗಂಗಾ' ಎಂಬ ಹೊಸ ನಾಮಕರಣ ಮಾಡಲಾಗುತ್ತದೆ. 'ನಾ ಮೆಚ್ಚಿದ ಹುಡುಗಿ' ಕತೆಯಲ್ಲಿ ಗೋಪಿಯು ಕುಮುದಿನಿ, ಸಾದಾಮಿನಿ, ವಿಲಾಸಿನಿ, ಇವರು ಮೂವರಲ್ಲಿ ತನ್ನ ಸಂಗಾತಿಗಾಗಿ ಒಬ್ಬರನ್ನು ಆಯ್ದುಕೊಳ್ಳುವ ತಾಕಲಾಟವಿದೆ.

ಕಾವ್ಯಾತ್ಮಕವಾಗಿ ಚಿತ್ರಿಸಲಾಗಿರುವ ಈ ಕತೆಯಲ್ಲಿ ಕನಸಿನ ರೂಪಕ ನೀಡಲಾಗಿದೆ. ಸಮುದ್ರ ತೀರದ ದೋಣಿಯಲ್ಲಿ ಮುಳುಗುವ, ವಿಲಾಸಿನಿಯನ್ನು ಈಜಿ ಹೊರ ತಂದು, "ಒಗಟು, ರಹಸ್ಯ, ರಸಿಕತೆ, ವಿಲಾಸ, ಗಾಂಭೀರ್ಯ ತುಂಬಿರುವ ಚಲಿಸುವ ಕಲ್ಪವಲ್ಲಿ"ಯಾದ (ಅದೇ, ಪುಟ-೨೨) ಅವಳನ್ನು ಸಂಗಾತಿಯಾಗಿ ಆಯ್ಕೆ ಮಾಡಿಕೊಳ್ಳುತ್ತಾನೆ.

ತ್ರಿವೇಣಿಯವರು ಮನೋವಿಶ್ಲೇಷಣಾತ್ಮಕ ಮಾದರಿಯನ್ನು ಬಳಸಿ ಮಕ್ಕಳ ವರ್ತನೆಗಳನ್ನು ಅಧ್ಯಯನ ಮಾಡುವಲ್ಲಿ ಹೆಚ್ಚಿನ ಆಸಕ್ತಿಯನ್ನು ಹೊಂದಿದ್ದಾರೆ. ಇತರೆ ಮಹಿಳಾ ಲೇಖಕಿಯರಿಗಿಂತ ತ್ರಿವೇಣಿಯವರು ಬಾಲ್ಯದ ಬದುಕಿನ ಮನೋಚಟುವಟಿಕೆಗಳನ್ನು ಹೆಚ್ಚು ಸಮರ್ಥವಾಗಿ ಗ್ರಹಿಸಿದ್ದಾರೆಂಬುದಕ್ಕೆ ಅವರ ಕೆಲವು ಕತೆಗಳು ಸಾಕ್ಷಿಯಾಗಿವೆ. 'ಕೊನೆಯದಿನ', 'ಅವನ ಆಯ್ಕೆ', 'ಚಂಪಿ', 'ಎಂಟು ಗಂಟೆ' ಕತೆಗಳು, ಅನಾರೋಗ್ಯ, ಅಂಗ ವೈಕಲ್ಯ ಹೊಂದಿದ, ಮಾನಸಿಕ ಅಸ್ವಸ್ಥತೆ ಹೊಂದಿದ ಮಕ್ಕಳ ಮಾನಸಿಕ ಪ್ರಪಂಚವನ್ನು ಪರಿಚಯಿಸಿವೆ. 'ಎರಡು ಮನಸ್ಸು' ಕತೆಯು ಮಕ್ಕಳ ಮಾನಸಿಕ ಚಂಚಲತೆಯನ್ನು; 'ಅಳಿಲ ಸೇವೆ' ಕತೆ ಕುಟುಂಬದ ಕಷ್ಟಕ್ಕೆ ತಾನು ಮಾನಸಿಕ ಚಂಚಲತೆಯನ್ನು 'ಅಳಿಲ ಸೇವೆ' ಕತೆ ಕುಟುಂಬದ ಕಷ್ಟಕ್ಕೆ ತಾನು ನೆರವಾಗುವ ಹಂಬಲವನ್ನು ಸೂಚಿಸುತ್ತವೆ. 'ಸಾಕಿದ ಹಾವು' ಕತೆ ರಹೀಮನು ಕಳ್ಳತನ ಮಾಡುವ ಗುಣಕ್ಕೆ, ಹೆತ್ತವರು, ಸಮಾಜ ಪರೋಕ್ಷವಾಗಿ ಕಾರಣರೆಂಬುದನ್ನು ಬಿಂಬಿಸಿದೆ. ಕೆಲವು ಕತೆಗಳನ್ನು ವಿಸ್ತೃತವಾಗಿ ಚರ್ಚೆಗೊಳಪಡಿಸೋಣ.

'ಕೊನೆಯ ದಿನ' ಕತೆಯಲ್ಲಿ ಉಬ್ಬಸ ರೋಗದಿಂದ ನರಳುತ್ತಿರುವ ಸರಸಿ, ಅಂಗವಿಕಲೆಯಾದ ಶ್ಯಾಮಲೆ ಎಂಟು ವರ್ಷದ ಬಾಲೆಯರಿಬ್ಬರು ತಮ್ಮೊಳಗೆ ಮಾತನಾಡಿಕೊಳ್ಳುವ ಸ್ವಗತಗಳಿವೆ. "ಆಹಾ! ಎಂತಹ ಭಾಗ್ಯಶಾಲಿ ಶ್ಯಾಮಲ! ತಾನು ಅನುಭವಿಸುವ ನರಕ ಹಿಂಸೆಯೊಂದಿದೆ ಎಂಬುದರ ಅರಿವು ಇಲ್ಲದವರೂ ಇದ್ದಾರೆಯೇ? ರಾತ್ರಿಯಹೊತ್ತು ದಿಂಬಿನ ಮೇಲೆ ತಲೆಯಿಟ್ಟು ನಿದ್ರಿಸುವವರು ಎಂತಹ ಪುಣ್ಯಶಾಲಿಗಳು! ಕೆಮ್ಮಿಲ್ಲ-ದಮ್ಮಿಲ್ಲ- ಮಜ್ಜಿಗೆ ಅನ್ನ ಊಟ ಮಾಡಬಹುದು, ಮಾವಿನ ಕಾಯಿ ತಿನ್ನಬಹುದು-ತಣ್ಣೀರು ಕುಡಿಯಬಹುದು-ಜೂಜಾಟ ಆಡಬಹುದು" (ಅದೇ, ಪುಟ-೧೪೭) ಎಂಬುದು

ಸರಸಿಯ ಬಯಕೆಯಾದರೆ ಎಡಗಾಲು ಕಳೆದುಕೊಂಡ ಶ್ಯಾಮಲ "ಎಂತಹ ಸುಖಿ ಸರಸು! ತಾನು ನಾಲ್ಕು ವರ್ಷಗಳಿಂದ ಅನುಭವಿಸುತ್ತಿರುವ ನರಕ ವೇದನೆಯರಿವು ಸಹ ಅವಳಿಗಿಲ್ಲ. ಅವಳಿಗೆ ತನ್ನಂತೆ ಊರುಗೋಲಾಗಲಿ ಗಾಲಿಯಿರುವ ಕುರ್ಚಿಯಾಗಲೀ ಬೇಕಿಲ್ಲ. ಅವಳಿಗೆ ಓಡೋಕೆ ಆಗದಿದ್ದರೂ ನಡೆಯಲು ಸಾಧ್ಯವಿದೆ" (ಅದೇ, ಪುಟ-೧೪೪) ಇದು ಶ್ಯಾಮಲಳ ಕೊರಗು ಇತರ ಮಕ್ಕಳಂತೆ ಸಹಜವಾಗಿ ಆಟವಾಡುವ ಅದೃಷ್ಟವನ್ನು ಕಳೆದುಕೊಂಡ ಮಕ್ಕಳ ಮನೋವೇದನೆಯನ್ನು ಕತೆಗಾರರು ತುಂಬಾ ನೈಜವಾಗಿ ಚಿತ್ರಿಸಿದ್ದಾರೆ. 'ಚಂಪಿ' ಕತೆಯಲ್ಲಿ ಮಗುವಿನ ಸ್ವಗತದ ನಿರೂಪಣೆ ಇದೆ. ಮಗುವೊಂದು ಕೌಟುಂಬಿಕ ಜಗತ್ತನ್ನು ಗ್ರಹಿಸುವ ಬಗೆಯಿದೆ. ಗಂಡು ಮಗುವಿನ ಹಂಬಲದಲ್ಲಿದ್ದ ಮನೆಯವರಿಗೆ ಹೆಣ್ಣು ಹುಟ್ಟಿದಾಗ ಆಗುವ ಅಸಮಾಧಾನ, ಅದೂ ಅಂಗವಿಕಲೆಯಾದ ಹೆಣ್ಣು ಮಗು ಹುಟ್ಟಿದಾಗ ಆಗುವ ತಳಮಳಗಳನ್ನು ಕತೆ ಹಿಡಿದಿಟ್ಟಿದೆ. ಮಗುವಿಗಿರುವ ಸಹಜ ಮುಗ್ಧತೆಯನ್ನು ಕೆಳಗಿನ ಸಂಭಾಷಣೆ ಮೂಲಕ ಗ್ರಹಿಸಬಹುದು.

"ಅಮ್ಮಾ ಮಗೂಗೆ ಬಾಯಲ್ಲಿ ಹಲ್ಲಿಲ್ಲ! ತಲೇಲಿ ಕೂದಲಿಲ್ಲ! ಯಾಕಮ್ಮ?"

ನನ್ನ ಪ್ರಶ್ನೆಗೆ ಅಜ್ಜಿ ಉತ್ತರ ಕೊಟ್ಟರು. "ಮಗು ದೊಡ್ಡದಾಗುತ್ತಾ ಎಲ್ಲಾ ಬೆಳೆಯುತ್ತದೆ."

"ನಂಗೆ ಎರಡು ಕೈಯಿದೆ, ಮಗೂಗೆ ಮಾತ್ರ ಒಂದೇ ಕೈಯಿದೆಯಲ್ಲಾ ಯಾಕೆ?"

ನನ್ನ ಪ್ರಶ್ನೆಗೆ ಯಾರೂ ಉತ್ತರ ಕೊಡಲಿಲ್ಲ (ಅದೇ, ಪುಟ-೮೨)

ಮಕ್ಕಳ ಪ್ರಶ್ನೆಗೆ ಸಮಂಜಸ ಉತ್ತರ ಕೊಡಲಾಗದ ಸಂದಿಗ್ಧತೆಗಳನ್ನು ಕತೆಗಾರರು ಗ್ರಹಿಸಿದ್ದಾರೆ. 'ಅವನ ಆಯ್ಕೆ' ಕತೆಯಲ್ಲಿ ಎಡಗಾಲನ್ನು ಕಳೆದುಕೊಂಡ ಹತ್ತು ವರ್ಷದ ಹುಡುಗನೊಬ್ಬ, ಆಲಿಯ ಒಡೆತನದಲ್ಲಿದ್ದ ಪಾರಿವಾಳಗಳ ಹಿಂಡಿನಲ್ಲಿ 'ಕುಂಟಿ' ಹೆಸರಿನ ಕುಂಟ ಪಾರಿವಾಳವನ್ನು ಆಯ್ದು, ಸಾಕಲು ನಿರ್ಧರಿಸುತ್ತಾನೆ. ತಮ್ಮಂತೆ ನೋವನ್ನು ಅನುಭವಿಸಿದವರು ಮಾತ್ರ ಇತರರ ನೋವುಗಳನ್ನು ಅರ್ಥ ಮಾಡಿಕೊಳ್ಳಬಲ್ಲರೆಂಬ ತತ್ವ ಈ ಕತೆಯೊಂದಿಗೆ 'ಕೊನೆಯ ದಿನ' ಕತೆಯೂ ಸಮರ್ಥಿಸುತ್ತದೆ.

'ಎಂಟು ಗಂಟೆ' ಕತೆಯಲ್ಲಿ ರೋಹಿಣಿ ಪ್ರತಿ ರಾತ್ರಿ ಎಂಟು ಗಂಟೆಗೆ ಚೀರಿ ಮೂರ್ಛೆ ಬೀಳುತ್ತಿರುತ್ತಾಳೆ. ಮನಃಶಾಸ್ತ್ರಜ್ಞನಾದ ಗಂಗಾಧರ ರೋಹಿಣಿಯ ಸಮಸ್ಯೆಯನ್ನು ಬಗೆಹರಿಸುತ್ತಾನೆ. ಹದಿಮೂರು ವರ್ಷದ ರೋಹಿಣಿಯದು ಬಾಲ್ಯಾವಸ್ಥೆಯಿಂದ ಕೌಮರ್ಯಾವಸ್ಥೆಗೆ ಬದಲಾಗುವ ಹಂತವಾಗಿದೆ. ಇಂಥ ಸಂದರ್ಭದಲ್ಲಿ ಬಾಲ್ಯದಲ್ಲಿ ಸತ್ತ ಅಜ್ಜಿಯ ರೌದ್ರ ರೂಪವನ್ನು ನೆನೆದು ಮೂರ್ಛೆ ಬೀಳುತ್ತಿರುತ್ತಾಳೆ. ಈ ವಿಷಯವನ್ನು ರೋಹಿಣಿಯ ಮನಸ್ಸಿನಿಂದ ಹೊರಗೆ ಹಾಕಿದ ಮೇಲೆ ಮೊದಲಿನ ಸ್ಥಿತಿಗೆ ತಲುಪುತ್ತಾಳೆ.

'ಎರಡು ಮನಸ್ಸು' ಕತೆ ಮಕ್ಕಳಿಗಿರುವ ಆಸಕ್ತಿ-ಅನಾಸಕ್ತಿಯ ಕ್ಷೇತ್ರಗಳ ಪರಿಚಯ ಮಾಡಿಕೊಡುತ್ತದೆ. ನಿತ್ಯ ಎತ್ತುವ ಪ್ರಶ್ನೆಗಳು-ಬೇಡಿಕೆಗಳು, ಹೂಡುವ ಮೊಂಡಾಟ, ಮನಸೆಳೆಯುವ ಮತ್ತೊಂದು-ಮಗದೊಂದು ವಸ್ತುವಿನಲ್ಲಿ ಮೊದಲ ಬೇಡಿಕೆಯ ಮರೆವು ಮುಂತಾದ ಸಂಗತಿಗಳ್ನು ಕತೆ ಪ್ರಸ್ತಾಪಿಸುತ್ತದೆ. ರಾಜಕುಮಾರಿ ಲೀಲಾವತಿಯ ಭಾಷಣದಲ್ಲಿ ಮಗು ನಿರಾಸಕ್ತೆ. ಆದರೆ, ಲೀಲಾವತಿಯ ಕಿವಿಯ

ಲೋಲಕ್ಕುಗಳಿಗೆ ಮನಸೋಲುತ್ತಾಳೆ. ಅವು ಬೇಕೇಬೇಕೆಂಬ ಹಠ ಹೂಡುವುದಕ್ಕೂ ಮುಂದಾಗುತ್ತಾಳೆ. ಆದರೆ ಅಂಗಡಿಯಲ್ಲಿ ರಂಗು ರಂಗಿನ ರಿಬ್ಬನ್ನುಗಳ ಆಕರ್ಷಣೆಯಲ್ಲಿ ಲೋಲಕ್ಕುಗಳು ಬೇಡವಾಗುತ್ತವೆ. ಬಣ್ಣದ ರಿಬ್ಬನ್ನುಗಳನ್ನು ಮನೆಗೆ ತರುತ್ತಾಳೆ. ಇದು ಕೇವಲ ಮಗುವಿನ ಎರಡು ಮನಸ್ಸಲ್ಲ. ತಾಯಿಯದೂ ಹೌದೆಂಬುದನ್ನು ಕತೆಯ ಕೊನೆ ಹೇಳುತ್ತದೆ. ತಾಯಿ ತನಗೆಂದು ಆಗ ಆಯ್ದು ತಂದ ಸೀರೆ ಈಗ ಬೇಡವೆನಿಸಿದೆ. ಅದನ್ನು ಬದಲಾಯಿಸಿ ಮೊದಲು ನೋಡಿದ ಆನಂದ ಕಲರಿನ ಸೀರೆಯನ್ನು ತರಲು ಮಾಡುವ ಮನಸ್ಸೂ 'ಎರಡು ಮನಸ್ಸಾಗಿದೆ'.

ಮನೋವಿಶ್ಲೇಷಣಾತ್ಮಕ ಮಾದರಿಯ ಕತೆಗಳಲ್ಲಿ ಸ್ವಗತ ಧಾಟಿಯ ನಿರೂಪಣೆಗಳು ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ. ಈ ವಿಧಾನವನ್ನು ಅನುಸರಿಸುವ ತ್ರಿವೇಣಿಯವರ ಕತೆಗಳು ಪಿತೃಪ್ರಧಾನತೆಯ ಅಸಮಾನತೆಯ ನೆಲೆಗಳನ್ನು ಪ್ರಶ್ನಿಸಿದೆ. 'ಸೇರದ ದಾರಿ' 'ಬಿಳಿಯ ಕಾಗೆ' 'ನನ್ನ ಬೊಂಬೆ' ಕತೆಗಳ ಮೂಲಕ ಹೆಣ್ಣು ತನಗೊದಗಿದ ದುರಂತ ಅವಸ್ಥೆಯಿಂದ ಬಿಡುಗಡೆ ಕಂಡು, ಹೊಸ ಬದುಕನ್ನು ಆಯ್ದುಕೊಳ್ಳುವ ನಿಟ್ಟಿನಲ್ಲಿ ಕತೆಗಾರರ ಆಶಯಗಳು ವ್ಯಕ್ತವಾಗಿವೆ. 'ಎರಡು ಮನಸ್ಸು' 'ಎಂಟು ಗಂಟೆ' 'ಕೊನೆಯ ದಾರಿ' 'ಚಂಪಿ' ಮುಂತಾದ ಕತೆಗಳು ಎಂಟು ಹತ್ತು ವರ್ಷದ ಮಕ್ಕಳ ಮನಸ್ಥಿತಿಯಿಂದ ಕತೆಯ ನಿರೂಪಣೆ ಸಾಗಿದೆ. 'ಎರಡು ಜೀವ' 'ಬೆಡ್ ನಂಬರ್ ಏಳು' ಕತೆಗಳು ಕುದುರೆ ಮತ್ತು ಆಸ್ಪತ್ರೆಯ ಏಳನೇ ನಂಬರಿನ ಬೆಡ್‌ಗಳ ಮೂಲಕ ನಿರೂಪಣೆ ಮಾಡಲಾಗಿದೆ. ಮನುಷ್ಯ ಸಂಬಂಧಗಳ 'ಅನಾಗರೀಕ' ವರ್ತನೆಯನ್ನು ಖಂಡಿಸಲಾಗಿದೆ. ತ್ರಿವೇಣಿಯವರ ಆಶಯ ನಿರೂಪಣಾ ತಂತ್ರಗಳನ್ನು ಇತರ ಲೇಖಕಿಯರು ಅನುಸರಿಸಿರುವರಾದರೂ, ಮನೋವಿಶ್ಲೇಷಣೆಯ ಹಿನ್ನೆಲೆಯನ್ನು ಸಮರ್ಥವಾಗಿ ಬಳಸಿಕೊಂಡದ್ದು ತ್ರಿವೇಣಿಯೊಬ್ಬರೇ ಎನಿಸುತ್ತದೆ.

## ೬.೭ ಪ್ರತಿಮಾತ್ಮಕ ವಿಧಾನ

ಕಾವ್ಯದಲ್ಲಿ ಬಳಕೆಯಾಗುವ ಪ್ರತಿಮಾತ್ಮಕ ವಿಧಾನಕ್ಕೂ, ಕತೆಯಲ್ಲಿ ಬಳಕೆಯಾಗುವ ಪ್ರತಿಮಾತ್ಮಕ ವಿಧಾನಕ್ಕೂ ಕೆಲವು ಭಿನ್ನತೆಗಳಿವೆ. ಕವಿತೆಯಲ್ಲಿ ಮಹಿಳೆಯರು 'ನವ್ಯ'ದ ಛಾಯೆಯಿಂದ ಹೊರ ಬಂದು, ಖಾಸಗಿ ನೆಲೆಯಲ್ಲಿ ತಮ್ಮ ಶೈಲಿಯನ್ನು ರೂಢಿಸಿಕೊಂಡಿದ್ದಾರೆ. ರಾಜಲಕ್ಷ್ಮಿ ಎನ್.ರಾವ್, ವೀಣಾ ಶಾಂತೇಶ್ವರ್‌ರವರ ಕತೆಗಳಲ್ಲಿ 'ನವ್ಯ'ದ ಛಾಯೆ ಅಲ್ಲಲ್ಲಿ ಕಾಣಿಸಿಕೊಂಡಿದೆ.

### ೬.೭.೧ ವ್ಯಕ್ತಿತ್ವದ ವರ್ತನೆಗಳ ಅನಾವರಣದ ಪ್ರತಿಮಾತ್ಮಕತೆ

ರಾಜಲಕ್ಷ್ಮಿ ಎನ್.ರಾವ್‌ರವರು ಗಂಡು ಹೆಣ್ಣಿನ ನಡುವಿನ ಪ್ರೀತಿ-ಸ್ನೇಹಗಳನ್ನು ಬೆಳದಿಂಗಳು, ಬಣ್ಣ, ಹೂಗಳನ್ನು ಸಂಕೇತಗಳನ್ನು ಬಳಸಿಕೊಂಡು ಪ್ರತಿಮಾತ್ಮಕಗೊಳಿಸಬಲ್ಲರು. ಚರ್ಚಿನ ಗಂಟೆಯ ಮೂಲಕವೂ ಜೀವನದ ಹೊಸ ತಿರುವನ್ನು ಸೂಚಿಸುತ್ತಾರೆ.

'ವೈಶಾಖ ಶುದ್ಧ ಪೂರ್ಣಿಮೆ', 'ನನಗೊಂದು ಬಿಳಿ ಗುಲಾಬಿ' 'ಆವೇ ಮರಿಯಾ', 'ಕಲ್ಯಾಣಿ' ಕತೆಗಳು ಸಂಗಾತಿಗಳ ಆಯ್ಕೆ ಮತ್ತು ನಿರಾಕರಣೆಗಳನ್ನು ಕುರಿತವುಗಳಾಗಿವೆ. 'ಸಂಗಮ', 'ಇಲ್ಲ

ಇಲ್ಲ...' ಕತೆಗಳಲ್ಲಿ ದಾಂಪತ್ಯದ ಚೌಕಟ್ಟನ್ನು ಒಡೆದು ಹಿಂದಿನ ಸಂಗಾತಿಯ ನೆನಪುಗಳು ಗಾಢವಾಗಿ ಕಾಡುತ್ತವೆ. 'ಕೆಂಪು-ಕಪ್ಪು-ಬಿಳುಪು' ಕತೆ ವೇಶ್ಯಾ ಜೀವನ ದುಃಸ್ಥಿತಿಯನ್ನು ಬಣ್ಣಿಸುತ್ತದೆ.

'ವೈಶಾಖ ಶುದ್ಧ ಪೂರ್ಣಿಮೆ' ಕತೆಯಲ್ಲಿ ಬೆಳದಿಂಗಳು ಮತ್ತು ಬುದ್ಧನ ಪ್ರತಿಮೆಗಳು ವಿರಕ್ತಿಯನ್ನು ಬೋಧಿಸುವ ಸಂಕೇತವಾಗಿರದೆ, ಹೊಸ ಬದುಕಿನ ಹಾದಿಯನ್ನು ಕಂಡುಕೊಳ್ಳುವ ಸಂಕೇತವಾಗಿ ನಿರೂಪಿತಗೊಂಡಿವೆ. ವಿಜಯಾ ತನ್ನ ಬಾಳ ಸಂಗಾತಿಯಾಗಿ ಬರುವ ಚಂದ್ರಶೇಖರನ ನೆರಳಿನಲ್ಲಿ ಬುದ್ಧಾಕೃತಿಯನ್ನು ಕಂಡಿದ್ದಳು. ಬುದ್ಧನ ಜನ್ಮ ದಿನವಾದ ವೈಶಾಖ ಶುದ್ಧ ಹುಣ್ಣಿಮೆಯಲ್ಲಿ ಅವರಿಬ್ಬರ ಪ್ರೀತಿಯ ಹಾಡು ದಿವ್ಯದರ್ಶನವನ್ನು ತೋರಿತ್ತು. ಆದರೆ, ಹೈದ್ರಾಬಾದಿನಲ್ಲಿ ರಜಾಕಾರರ ಗುಂಡಿನ ದಾಳಿಗೆ ಚಂದ್ರಶೇಖರ ಬಲಿಯಾದ ಮೇಲೆ ಆಕೆಯ 'ಬೆಳದಿಂಗಳು' ಮರೆಯಾಗಿ ಅಮವಾಸ್ಯೆಯ ಕತ್ತಲು ಆವರಿಸಿಕೊಳ್ಳುತ್ತದೆ. ಮದುವೆ ನಂತರ, ಚಂದ್ರಶೇಖರನಿಗೊಂದು ಉಡುಗೊರೆ ತಂದ ಬುದ್ಧನ ಪ್ರತಿಮೆ ಒಡೆದು ಹೋಗಿದೆಯೆಂದು ತಂಗಿ ಹೇಳಿದಾಗ, ವಿಜಯಾ ಚಂದ್ರಶೇಖರನ ಮರಣದ ಮುನ್ಸೂಚನೆಯಾಗಿ ಗ್ರಹಿಸುತ್ತಾಳೆ. ಆದರೆ, ವರ್ಷದ ನಂತರ ಪ್ರತಿಮೆಯನ್ನು ನೋಡಿದಾಗ ವಿಜಯಳಿಗೆ ಅಚ್ಚರಿ ಕಾದಿತ್ತು. ಬುದ್ಧನ ಪ್ರತಿಮೆಯ ಪ್ರಭಾವಳಿಯ ಎಡಭಾಗದ ಚೂರು ಮಣ್ಣು ಮಾತ್ರ ಕಿತ್ತು ಹೋಗಿತ್ತು. ಉಳಿದಂತೆ ಸಂಪೂರ್ಣವಾಗಿತ್ತು, "ಒಲವು ಮರಣ ಹೊಂದಿದಾಗ ಅಥವಾ ನಮ್ಮ ಪಾಲಿಗೆ ಇಲ್ಲವಾದಾಗ, ಸುಂದರ ಪ್ರತಿಮೆ ಚೂರು ಚೂರಾಯಿತು ಎಂದು ತಿಳಿಯುತ್ತೇವೆ. ಚೂರುಗಳ ಹುಡಿ ಕಣ್ತುಂಬ ಕುಳಿತು ಕತ್ತಲೆ ತಂದಿತು ಎಂದುಕೊಳ್ಳುತ್ತೇವೆ. ಸ್ವಲ್ಪ ಕಾಲ ಕಳೆದ ನಂತರ ನಿಜ ಸ್ಥಿತಿಯ ಅರಿವಾಗುತ್ತದೆ. ಪ್ರತಿಮೆ ಒಡೆಯಲಿಲ್ಲ; ಒಂದು ಚೂರು ಮಾತ್ರ ಮಾಯವಾಗಿದೆ ಅಷ್ಟೆ" (ಸಂಗಮ, ಪುಟ-೪೩) ಎಂಬ ತತ್ವವನ್ನು ಅರಿತು ಬೇರೆಯವನನ್ನು ಮದುವೆಯಾಗಲು ಮನಸ್ಸನ್ನು ಸಿದ್ಧಪಡಿಸಿಕೊಳ್ಳುತ್ತಾಳೆ. ಕತೆ ಕಾವ್ಯದ ಅನುಭೂತಿಯನ್ನು ನೀಡುತ್ತದೆ. ವಿಜಯಳ ಸ್ವಗತದ ಮೂಲಕ ಕತೆಯ ನಿರೂಪಣೆಯಿದೆ.

'ನನಗೊಂದು ಬಿಳಿ ಗುಲಾಬಿ' ಕತೆಯಲ್ಲಿ ರಮ ತನ್ನ ಬಾಳಿನ ಸಂಗಾತಿಯನ್ನು ಆಯ್ದುಕೊಳ್ಳುವಾಗ ಇರುವ ಇಬ್ಬಂದಿತನವನ್ನು ಸೂಚಿಸಿದೆ. ವಿಶ್ವನಾಥ ಪ್ರೀತಿಯ ಸಂಕೇತವಾಗಿ ಬಿಳಿ ಗುಲಾಬಿಯನ್ನು ರಮಳಿಗೆ ಅಂಚೆಯ ಮೂಲಕ ಕಳಿಸುತ್ತಾನೆ. ಆ ಹೂವು ರಮಾಳನ್ನು ತಲುಪುವ ಹೊತ್ತಿಗೆ ನಸು ಹಳದಿಗೆ, ಕಂದು ಬಣ್ಣಕ್ಕೆ ತಿರುಗಿದೆ. "ಹಳತು ವಾಸನೆ, ಒಣಗಿದ ದಳಗಳು ನನ್ನ ಒಲವಿನ ಪ್ರತೀಕ. ನಿರ್ಜೀವವಾದ ಆದರೆ, ನಾಶ ಮಾಡಲ್ಪಟ್ಟಿಲ್ಲದ ವಸ್ತು" (ಅದೇ, ಪುಟ-೮೪)ವಾಗಿದ್ದು, ವಿಶ್ವನಾಥನ ಪ್ರೀತಿಯನ್ನು ಒಪ್ಪಿಕೊಳ್ಳಲು ಇನ್ನೂ ಸಿದ್ಧವಿಲ್ಲದ ಮನಃಸ್ಥಿತಿಯನ್ನು ವಿವರಿಸುತ್ತದೆ. ಕಾರಣ, ರಘುವೀರನ ಮಧ್ಯಪ್ರವೇಶದಿಂದ ಆತನ ಸ್ನೇಹ-ಸಾಂಗತ್ಯ ಪ್ರೇಮವಾಗಿ ಮಾರ್ಪಾಡಾಗಬಹುದೆಂಬ ನಿರೀಕ್ಷೆಯಲ್ಲಿ. ಆದರೆ ರಘುವೀರ ತನ್ನ 'ಪರಿಪೂರ್ಣತೆ'ಯ ಹಂಬಲಕ್ಕಾಗಿ ರಮಾಳಿಂದ ದೂರವಿರಲು ಪ್ರಯತ್ನಿಸುತ್ತಾನೆ. ಇದನ್ನರಿತ ರಮಾ, ಅರ್ಧ ಬಾಡಿದ ಗುಲಾಬಿಯನ್ನು ನೋಡಿ, ವಿಶ್ವನಾಥನ ಮೇಲಿನ ಪ್ರೀತಿ ಇನ್ನೂ ಸತ್ತಿಲ್ಲವೆಂದು ಮನವರಿಕೆ ಮಾಡಿಕೊಂಡು, ಪ್ರೀತಿಯ ಗುಲಾಬಿ ತೋಟದತ್ತ, ತನ್ನ ನಡೆಯನ್ನು ಬದಲಾಯಿಸುತ್ತಾಳೆ.

'ಆವೇ ಮರೀಯಾ' ಕತೆಯಲ್ಲಿ ಟೋನಿ ಮರಿಯಾಳನ್ನು, ಅವಳ ಪ್ರೀತಿಯನ್ನು ಮರೆಯಲು ಪ್ರಯತ್ನಿಸುತ್ತಾನೆ. ಕಾರಣ, ಗೆಳೆಯರ ಸಂಸಾರದ ತಾಪತ್ರಯಗಳು, ಜತೆಗೆ ಸ್ವತಃ ತಂಗಿ, ಪ್ರೇಮ ವಿವಾಹದಲ್ಲಿ ಬಂಧಿತಳಾಗಿ, ಮಕ್ಕಳಿಗೆ ಹೊತ್ತು ಹೊತ್ತಿಗೆ ಊಟ ಹಾಕಲು ಆಗದ ಸ್ಥಿತಿಯಿಂದ ಬೇಸತ್ತ ಟೋನಿ ತಾನು ಮದುವೆಯಾಗದಿರುವ ನಿರ್ಧಾರಕ್ಕೆ ಬರುತ್ತಾನೆ. ಕತೆಯ ಉತ್ತರಾರ್ಧದಲ್ಲಿ ಅವನ ನಿರ್ಧಾರವನ್ನು ಬದಲಿಸಲು ಚರ್ಚಿನ ಗಂಟೆ, ಮತ್ತು ಈಸ್ಟರ್ ಹಬ್ಬದ 'ನಾದದ ಹೊನ್ನು ಹೊಳೆ' ಕಾರಣವಾಗುತ್ತದೆ. "ಮೂರು ವಾರಗಳಿಂದ ಅಶಾಂತಿಗೆ ಕಾರಣವಾಗಿದ್ದ ಚಿಂತೆ, ಅದಕ್ಕೆ ಹೊಳೆದ ಪರಿಹಾರ, ಎಲ್ಲಾ ಅನವಶ್ಯಕ, ತಪ್ಪು ಎನಿಸಿತು ಅವನಿಗೆ...ಮೆನ್ಯೂಹಿನ್ ಪಿಟೀಲು ತಂತಿಗಳಿಂದ ಹೊರ ಹೊಮ್ಮಿವೆ ಜನರ ಮನ ಸೆಳೆದ ಹಾಡು ಅವನ ನಿರ್ಧಾರವನ್ನು ಕ್ಷಣ ಕಾಲದಲ್ಲಿ ಹೇಳ ಹೆಸರಿಲ್ಲದಂತೆ ಮಾಡಿತು." (ಅದೇ, ಪುಟ–೨೫) ತನ್ನ ಮೂರ್ಖತನದ ಅರಿವಾಗಿ ಟೋನಿ ಮರಿಯಾಳನ್ನು ಕಾಣಲು ಹೊರಡುತ್ತಾನೆ. ಈಸ್ಟರ್ ಹಬ್ಬದ ಗಾನಸುಧೆ ಬದುಕಿನ ಚೈತನ್ಯವನ್ನು ಹೊಮ್ಮಿಸುವ ಸಂಕೇತವಾಗಿ ಮೂಡಿ ಬಂದಿದೆ.

'ವೈಶಾಖ ಶುದ್ಧ ಪೂರ್ಣಿಮೆ', 'ನನಗೊಂದು ಬಿಳಿ ಗುಲಾಬಿ', 'ಅವೇ ಮರೀಯಾ' ಕತೆಗಳಲ್ಲಿ ಸಂಗಾತಿಗಳ ಆಯ್ಕೆಯಲ್ಲಿ ಒಪ್ಪಿತ ನಿಲುವು ಪ್ರಕಟವಾದರೆ, 'ಕಲ್ಯಾಣಿ' ಕತೆಯಲ್ಲಿ ಕಲ್ಯಾಣಿ, ಜೀವನ ಸಂಗಾತಿಗಳಾಗಲು ಬಯಸಿದ ಮೂವರನ್ನು ತಿರಸ್ಕರಿಸುವ ನಿರ್ಧಾರವನ್ನು ಕೈಗೊಳ್ಳುತ್ತಾಳೆ. ಕಲ್ಯಾಣಿಯ ವ್ಯಕ್ತಿತ್ವವನ್ನು, ಒಂದು ಸಮಾರಂಭದಲ್ಲಿ ಭೇಟಿಯಾದ–ಶ್ರೀಮಂತ ಉದ್ಯಮಿಯ ಮಗ ಕೇಶವ; ಚಿತ್ರ ಕಲಾವಿದ ಮಾಧವ; ಕವಿ ಗೋಪಾಲ ಮೂವರೂ ತಮ್ಮ ದೃಷ್ಟಿಕೋನದಿಂದ ಅಳೆಯುತ್ತಾರೆ. ಕಲ್ಯಾಣಿ ಈ ಮೂವರ ವ್ಯಕ್ತಿತ್ವಗಳನ್ನು ಗ್ರಹಿಸುವ ಬಗೆ ಭಿನ್ನವಾದುದು. ಪ್ರಪಂಚದಲ್ಲಿರುವ ಗಂಡಸರನ್ನು ಮೂರು ಗುಂಪುಗಳಾಗಿ ವಿಂಗಡಿಸಬಹುದು. ಹಸಿರು ಗ್ಯಾಬರ್ಡಿನ್ ಶರಾಯಿಯನ್ನು ಹಾಕಿಕೊಳ್ಳುವರು. ಮತ್ತು ಬೂದು ಬಣ್ಣದ ಫ್ಲಾನಲ್ ಶರಾಯಿಗಳನ್ನು ಹಾಕಿಕೊಳ್ಳುವವರು! ಮೂರು ಪಂಗಡಗಳಿಗೂ ಅವುಗಳದ್ದೇ ಆದ ವೈಶಿಷ್ಟ್ಯಗಳಿರುತ್ತವೆ ಎಂಬುದನ್ನು ಗುರುತಿಸುತ್ತಾಳೆ. ಮೊದಲನೆಯ ಗುಂಪಿನವರಿಗೆ ಅನಿರೀಕ್ಷಿತ ಘಟನೆಗಳು ಅಪ್ರಿಯವಾಗಿರುತ್ತವೆ. ಎರಡನೆಯ ಗುಂಪಿನವರಿಗೆ ಹೊಸ ವಸ್ತುಗಳು, ವ್ಯಕ್ತಿಗಳ ವ್ಯಾಮೋಹ ಹೆಚ್ಚಾಗಿರುತ್ತದೆ. ಮೂರನೆಯ ಗುಂಪಿನವರಿಗೆ ವಾಸ್ತವಕ್ಕೆ ದೂರವಾದ ಕನಸಿನ ಗೂಡಿನಲ್ಲಿ ಚಿಲಿಪಿಲಿಗುಟ್ಟುವ ಹಕ್ಕಿ ಮರಿಗಳ ಗುಂಪಿಗೆ ಸೇರಿರುವ ವ್ಯಕ್ತಿಗಳನ್ನು ಕ್ರಮವಾಗಿ ಕೇಶವ–ಮಾಧವ–ಗೋಪಾಲನ ವ್ಯಕ್ತಿತ್ವವನ್ನು ಸೂಚಿಸಲು ಬಳಸಿದ ಸಂಕೇತಗಳಾಗಿವೆ. ತನ್ನನ್ನು ಮದುವೆಯಾಗಲು ಬಯಸಿದ ಮೂವರನ್ನು ಅಪೂರ್ಣ ಚಿತ್ರಗಳಾಗಿ ಗುರುತಿಸಿ ತಿರಸ್ಕರಿಸುತ್ತಾಳೆ.

ರಾಜಲಕ್ಷ್ಮಿಯವರು ಬಣ್ಣಗಳ ಮೂಲಕ, ಉಡುಪಿನ ಸಂಕೇತಗಳ ಮೂಲಕ ವ್ಯಕ್ತಿಗಳ ವ್ಯಕ್ತಿತ್ವವನ್ನು ಶೋಧಿಸಲು ಆಸಕ್ತಿಯುಳ್ಳವರು. ಅದಕ್ಕೆ ಉದಾಹರಣೆಗಳೆಂದರೆ 'ನನಗೊಂದು ಬಿಳಿ ಗುಲಾಬಿ', 'ಕಲ್ಯಾಣಿ', 'ಕೆಂಪು, ಕಪ್ಪು, ಬಿಳುಪು' ಕತೆಗಳು. 'ನನಗೊಂದು ಬಿಳಿ ಗುಲಾಬಿ' ಕತೆಯಲ್ಲಿ ನಸು ಹಳದಿಗೆ, ಕಂದು ಬಣ್ಣಕ್ಕೆ ತಿರುಗಿದ ಬಿಳಿ ಗುಲಾಬಿ ರಮಾಳ ಮಾನಸಿಕ ಇಬ್ಬಂದಿತನವನ್ನು ತೋರಿದರೆ

'ಕಲ್ಯಾಣಿ' ಕತೆಯಲ್ಲಿ ವ್ಯಕ್ತಿಗಳು ತೊಡುವ ಉಡುಪುಗಳು ಅವರ ವ್ಯಕ್ತಿತ್ವವನ್ನು ಸೂಚಿಸುತ್ತವೆ. 'ಕೆಂಪು, ಕಪ್ಪು, ಬಿಳುಪು' ಕತೆಯು ವೇಶ್ಯಾ ಜೀವನವನ್ನು ಕುರಿತದ್ದಾಗಿದೆ. ಈ ಬಣ್ಣಗಳು ವೇಶ್ಯೆಯ ಬಾಹ್ಯ ಚಹರೆಯನ್ನು ಸೂಚಿಸುವುದರೊಂದಿಗೆ, ಆಕೆಗಿರುವ ಅಸಹಾಯಕತೆಯ ಅಂತರಂಗದ ಮುಖಗಳನ್ನು ಪರಿಚಯಿಸುತ್ತವೆ.

'ಸಂಗಮ' ಕತೆಯಲ್ಲಿ 'Who is the third? ಮೂರನೆಯವರಾರು?' ಎಂಬುದು ಕತೆಯುದ್ದಕ್ಕೂ ಕಾಡುವ ಪ್ರಶ್ನೆ ಪ್ರತಿಮೆಯಾಗಿ ಅನುರಣಿಸುತ್ತದೆ. "ಮದುವೆಗೆ ಮುಂಚಿನಿಂದ ಅವನು ಕೆಲಸಕ್ಕೆ ಹೊಸದಾಗಿ ಸೇರಿದಾಗ, ಅವಳು ಬೇರೆ ಊರಿನಲ್ಲಿ ಓದುತ್ತಿದದ್ದಾಗ ಇದರ ನೆರಳು ಅವನನ್ನು ಹಿಂಬಾಲಿಸಿತ್ತು. ಅವನಿಗೆ ಆಗಾಗ ಬರುತ್ತಿದ್ದ ಅವಳ ಕಾಗದದಲ್ಲಿ–ಪ್ರೇಮಮಯ, ಉತ್ಸಾಹ ಪೂರ್ಣ, ಆಸಕ್ತಿದಾಯಕ ಕಾಗದಗಳು–ಯಾವುದೋ ಒಂದು ಅದೃಶ್ಯ ಹಸ್ತದ ಆಟವಿದ್ದಂತಿತ್ತು" (ಅದೇ, ಪುಟ–೮೯) ಎಂಬ ಶಂಕೆ ಅವನನ್ನು ಸದಾ ಕಾಡತೊಡಗುತ್ತದೆ. ಹೆಂಡತಿಯೊಂದಿಗೆ ತೆಗೆಸಿಕೊಂಡ ಫೋಟೋದಲ್ಲಿಯೂ ಯಾವುದೋ ಒಂದು ನೆರಳಿರುವಂತೆ ಭಾಸವಾಗುತ್ತದೆ. ಕೊನೆಗೆ ಹೆಂಡತಿಯೊಂದಿಗೆ ತೆಗೆಸಿಕೊಂಡ ಫೋಟೋದಲ್ಲಿಯೂ ಯಾವುದೋ ಒಂದು ನೆರಳಿರುವಂತೆ ಭಾಸವಾಗುತ್ತದೆ. ಕೊನೆಗೆ ಹೆಂಡತಿಯನ್ನು ಪ್ರಶ್ನಿಸಿದಾಗ: ಮದುವೆಗೆ ಮುಂಚೆ ಕಾಲೇಜಿನ ಅಧ್ಯಾಪಕನೊಂದಿಗೆ ಒಲವಿನ ಕನಸು ಕಂಡದ್ದನ್ನು, ಮುಂದೆ ಪ್ರೌಢಾವಸ್ಥೆಗೆ ಬಂದಾಗ ಅಂತಹ ಬಯಕೆಯನ್ನು ಕೈ ಬಿಟ್ಟಿದ್ದನ್ನು ಹೇಳಿದಾಗ, ಅವನನ್ನು ಕಾಡುತ್ತಿದ್ದ ಮೂರನೇ ನೆರಳು ಮಾಯವಾಗುತ್ತದೆ.

'ಇಲ್ಲ ಇಲ್ಲ...' ಕತೆಯಲ್ಲಿ ಒಳ್ಳೇ ಕೆಲಸದಲ್ಲಿರುವ, ಸಮಾಜದಲ್ಲಿ ತನ್ನದೇ ಅಂತಸ್ಥನ್ನು ಹೊಂದಿರುವ ಶಂಕರನ ಹೆಂಡತಿ ಪದ್ಮಿನಿ, ತಾನು ಪ್ರೀತಿಸಿದ ಪ್ರಭಾಕರನ ನೆನಪಿನಲ್ಲಿ ಕಾಲ ಕಳೆಯುತ್ತಿದ್ದಾಳೆ. ಶಂಕರನ ವ್ಯಾವಹಾರಿಕ ಪ್ರಜ್ಞೆ, ಸ್ವಾರ್ಥತನದ ಮುಂದೆ ಪ್ರಭಾಕರನ ಹೋರಾಟ, ತ್ಯಾಗದ ಪ್ರಜ್ಞೆ ಅವಳಿಗೆ ಮಹತ್ವದ್ದಾಗುತ್ತದೆ. ಪ್ರಭಾಕರನ "ಬಂಡಾಯ ಕೇವಲ ಯೌವನದ ಕುದಿ ಭಾವನೆಯ ಪರಿಣಾಮವಾಗಿರಲಿಲ್ಲ. ಆದರ್ಶ ಜೀವನದ ಗೋಪುರವನ್ನು ವಾಸ್ತವದ ವಿಷ ತಳಹದಿಯ ಮೇಲೆ ಜೋಡಿಸಲು ಯತ್ನಿಸುತ್ತಿದ್ದ, ಬಾರಿ ಬಾರಿಗೂ ಗೋಪುರ ಉರುಳಿ ಬೀಳುತ್ತಿತ್ತು. ಬೀಳುವಾಗ ಅವನನ್ನು ಎಳೆದುಕೊಂಡೇ ಬೀಳುತ್ತಿತ್ತು. ರಾಜಕೀಯದಲ್ಲಿ, ಸಮಾಜದಲ್ಲಿ ಎಲ್ಲ ಕಡೆಯಲ್ಲೂ ಅವನಿಗೆ ಪೆಟ್ಟುಗಳು ಬೀಳತೊಡಗಿದವು. ಜನಕ್ಕೆ ಅಷ್ಟು ಕಠೋರ ಸೂರ್ಯ ಬೇಕಿರಲಿಲ್ಲ. ಆದರೆ ಸೂರ್ಯನಿಗೆ ಬೆಳಗುವುದನ್ನು ಬಿಡಲಾಗಲಿಲ್ಲ" (ಅದೇ, ಪುಟ–೧೧೭) ಎಂಬ ಮಾತುಗಳಲ್ಲಿ ಪ್ರಭಾಕರನ ಧ್ಯೇಯ ಧೋರಣೆಗಳು ವ್ಯಕ್ತವಾಗುತ್ತದೆ. ಬೆಳಗುವ ಸೂರ್ಯನ ಸಂಕೇತವಾದ ಪ್ರಭಾಕರನ ಮನೋಭಾವವನ್ನು ಇಷ್ಟಪಡದ ವರ್ಗವೂ ಒಂದಿದೆ ಎಂಬುದನ್ನು ತಿಳಿಸಲಾಗಿದೆ.

ರಾಜಲಕ್ಷ್ಮಿಯವರು ಹರಳುಗಟ್ಟಿದ ಭಾಷೆಯ ಮೂಲಕ, ಸಹಜವಾದ ಸಂಕೇತ ಪ್ರತಿಮೆಗಳ ಮೂಲಕ ಕತೆಯ ಆಶಯಗಳನ್ನು ಕಟ್ಟಿಕೊಡುತ್ತಾರೆ.

### ೬.೭.೨ ಮುಕ್ತ ಬದುಕಿನ ಹಂಬಲದ ಹೆಣ್ಣಿನ ಸ್ವಗತಗಳ ಪ್ರತಿಮಾತ್ಮಕತೆ

ಕೃತಿಯ ಆಶಯ ಧೋರಣೆಗಳು ಬದಲಾದಂತೆ ಆ ಕೃತಿಗಳೂ ಬದಲಾಗುತ್ತವೆ. ವ್ಯಕ್ತಿ ಕೇಂದ್ರಿತವಾದ ಕಾಳಜಗಳನ್ನು ಪ್ರತಿಮಾತ್ಮಕ ಮಾದರಿಯಲ್ಲಿ ಸಮರ್ಥವಾಗಿ ನಿಭಾಯಿಸುವ ಅವಕಾಶವಿರುತ್ತದೆ. ವಾಸ್ತವ ಚೌಕಟ್ಟುಗಳನ್ನು ಮೀರಿದ ಆಲೋಚನಾ ಕ್ರಮವನ್ನು ಈ ಮಾದರಿ ಅನುಸರಿಸಲಾಗುತ್ತದೆ. ವೀಣಾ ಶಾಂತೇಶ್ವರ್‌ರವರ ಕತೆಗಳ ಹಿನ್ನೆಲೆಯಲ್ಲಿ ಶಾಂತಿನಾಥ ದೇಸಾಯಿಯವರ 'ನವ್ಯ'ದ ಪ್ರಭಾವವಿದ್ದರೂ, ಹೆಣ್ಣು ಆಯ್ದುಕೊಳ್ಳುವ ತಾಂತ್ರಿಕ, ತಾತ್ವಿಕ ಆಯಾಮಗಳ ಹಿಂದೆ, ತನ್ನ ಅಸ್ತಿತ್ವವನ್ನು ಕಾಯ್ದುಕೊಳ್ಳುವ ಹಂಬಲವಿರುತ್ತದೆ. ಹೆಣ್ಣು ಪ್ರಶ್ನಿಸಲಾಗದ ವಿಧಿ ನಿಷೇಧಗಳ ಕಟ್ಟುಗಳನ್ನು ಬರಹದ ಮೂಲಕ ಒಡೆಯಲು, ಪ್ರತಿಮಾತ್ಮಕ ವಿಧಾನವನ್ನು ಸೂಕ್ತವಾಗಿ ಬಳಸಿಕೊಳ್ಳಲಾಗಿದೆ. ಅಂತರಂಗದಲ್ಲಿ ಕೋಲಾಹಲವೆಬ್ಬಿಸುವ ಆಲೋಚನೆಗಳನ್ನು ಮುಕ್ತವಾಗಿ ಹರಿಯ ಬಿಡಲು ಹೊಸ ದಾರಿಯನ್ನು ಶೋಧಿಸುವಾಗ, ಆ ಮಾರ್ಗಗಳು ಪುರುಷ ಕೇಂದ್ರಿತ ಮಾದರಿಗಳೇ ಆಗಿದ್ದರೂ, ಅದರ ಮೂಲಕ ತನ್ನನ್ನು ತಾನು ಕಂಡುಕೊಳ್ಳುವ ನಿರಂತರ ಪ್ರಯತ್ನದಲ್ಲಿ ಮಹಿಳಾ ಬರಹಗಾರರು ತೊಡಗಿಸಿಕೊಂಡಿದ್ದಾರೆ. ವೀಣಾ ಶಾಂತೇಶ್ವರ್‌ರವರ 'ಮುಳ್ಳುಗಳು', 'ಅತಿಥಿ', 'ಹೊರಟು ಹೋದವನು', 'ಪ್ರಶ್ನೆ', 'ನೀನೇ ತಂತಿ', 'ಹೆಣ', 'ನೆರಳು', 'ಕವಲು', 'ತಿರುಗಿ ಹೋದಳು', 'ಮರೀಚಿಕೆ', 'ದೆವ್ವ' ಇತ್ಯಾದಿ ಕತೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

'ಮುಳ್ಳುಗಳು' ಕತೆಯಲ್ಲಿ ಬರುವ ಮುಳ್ಳುಗಳು, ಹೆಣ್ಣನ್ನು ಇರಿದು ನೋಡುವ ದೃಷ್ಟಿಗೆ ಸಂಬಂಧಿಸಿದ ಸಂಕೇತವಾಗಿದೆ. ದಿನ ನಿತ್ಯದ ಯಾಂತ್ರಿಕ ಚಟುವಟಿಕೆಗಳಲ್ಲಿ ಎದುರಿಸಬೇಕಾದ ನೂರಾರು ಸಹಜವಲ್ಲದ ದೃಷ್ಟಿಗಳು ಮಾನಸಿಕ ಸ್ವಾಸ್ಥ್ಯವನ್ನು ಕಲಕುತ್ತಿವೆ. ದೇಸಾಯಿಯನ್ನು ಹೊರತುಪಡಿಸಿದರೆ, ಬೆಳಿಗ್ಗೆ ಕಸ ಗುಡಿಸಲು ಬರುವ ಜವಾನ್ ಮಾದನ ಕಣ್ಣಿನ ಮುಳ್ಳಿನ ಮೊನೆ; ರಸ್ತೆಯ ಮೇಲೆ ಅಶ್ಲೀಲ ಹಾಡು ಗುನುಗುತ್ತಾ ಹೋಗುವ 'ಕತ್ತೆ'ಯ ನಗೆಯ ಅಲೆಗಳ ಮುಳ್ಳು; ಗೆಳೆತನ ಬೆಳೆಸಿದ 'ಅವನ' ಕಣ್ಣ ನೋಟದ ಮುಳ್ಳುಗಳು; ಸಹೋದ್ಯೋಗಿಗಳ ಬೆರಳುಗಳಲ್ಲಿ ಹರಿವ ಮುಳ್ಳಿನ ಕರೆಂಟ್; ತನ್ನನ್ನು ಸಿನಿಮಾಗೆ ಕರೆಯುವ ಶಿಷ್ಯ ಶಂಕರ ಶೆಟ್ಟಿಯ ಕಣ್ಣಿನ ಜಾಲಿ ಮುಳ್ಳು; ಕಾಲೇಜಿನ ಕ್ರಿಶ್ಚಿಯನ್ ಹುಡುಗನ ನೋಟದ ಮುಳ್ಳಿನ ಪ್ರಖರತೆ; ಪುಣೆಯಿಂದ ಬಂದಿದ್ದ ಲೆಕ್ಚರರ್ ವಡಗಾಂವ್‌ಕರ್ ಸಾಂಗತ್ಯದ ಮುಳ್ಳುಗಳು ಶಾಂತಿಯನ್ನು ಚುಚ್ಚುತ್ತಿವೆ. ಚುಚ್ಚುವ ನೋಟಗಳಲ್ಲಿ ಜಗತ್ತಿನ ಎಲ್ಲ ಸಂಬಂಧಗಳು ಭ್ರಮೆಯಾಗಿ ಕಾಡುತ್ತವೆ. ಮುಳ್ಳಿನ ಮೊನೆಯಿಂದ ಪಾರಾಗಲು ಶಾಂತಿ "ಭವಿಷ್ಯದ ಬಗೆಗೆ, ನಿಷ್ಫಲ ಆದರೆ ಸವಿಯಾದ ಕನಸು ಕಾಣುವುದು... ಹೌದು ಒಂದೇ ದಾರಿ ಮುಳ್ಳುಗಳ ನೆನಪಿನಿಂದ ದೂರ ಹೋಗಲು ಇದೊಂದೇ ದಾರಿ" (ನಡೆದದ್ದೇ ದಾರಿ, ಪುಟ–೧೭) ಎಂಬುದನ್ನು ಕಂಡುಕೊಳ್ಳುತ್ತಾಳೆ. ಅಲ್ಲಿಯೂ ಭವಿಷ್ಯದ ಭರವಸೆಯ ಬಗ್ಗೆ ನಿರಾಸೆಯಿದೆ. ಆದರೂ ಕನಸು ಸವಿಯಾದದ್ದೆಂಬ ನಂಬಿಕೆಯಲ್ಲಿ ನಿದ್ದೆ ಹೋಗುತ್ತಾಳೆ.

'ಅತಿಥಿ' ಕತೆಯಲ್ಲಿರುವ ಲೀಲಾವತಿ ಮದುವೆಯಾಗದೆ ಆದರ್ಶ ಬದುಕನ್ನು ಸಾಧಿಸ ಹೊರಟವಳು. ಆದರೆ ಸುತ್ತಲಿನವರು ನೀಡುವ ಆಹ್ವಾನದ ಮೇರೆಗೆ ವೇದಿಕೆ ಮೇಲೆ ಭಾಷಣ ಮಾಡುವ 'ಅತಿಥಿ'ಯಷ್ಟೇ ಆಗದೇ ತನ್ನ ಬದುಕಿಗೆ ತಾನೇ 'ಅತಿಥಿ'ಯಾಗುವ ವ್ಯಂಗ್ಯವಿದೆ, ವಿಷಾದ ವ್ಯಕ್ತವಾಗುತ್ತದೆ. ಹಾಸ್ಟೆಲಿನ ವಾರ್ಡನ್ ಆಗಿರುವ ಲೀಲಾವತಿಗೆ, ಅಲ್ಲಿಯ ಸರೋಜಿನಿಯ ಸಣ್ಣ ನಡು, ಆಕೆಯನ್ನು ಪ್ರೀತಿಸುವ ಗೆಳೆಯನನ್ನು ನೆನಪಿಸಿಕೊಂಡರೆ ಎದೆಯಲ್ಲಿ ನೋವು ಕಾಣಿಸಿಕೊಳ್ಳುತ್ತದೆ. ಲೂಸಿ, ಜಯಲಕ್ಷ್ಮಿ, ಊರ್ಮಿಳಾ ಕೇಳ್ಕರ್ ಇವರ ಜೀವನದ ಉತ್ಸಾಹವನ್ನು ಕಂಡು ಉರಿದು ಬೀಳುವಂತಾಗುತ್ತದೆ. 'ಹೃದಯ ಹೀನ'ಳೆಂದು ತೋರಿಸಿಕೊಳ್ಳುವ ಲೀಲಾವತಿಯ ಹೃದಯ ತನ್ನ ಬದುಕಿನ ತಲ್ಲಣಗಳಿಗೆ ಮಿಡಿಯುವ ಚಿತ್ರ ಕತೆಯ ಕೊನೆಯಲ್ಲದೆ, "ಬರೇ ಅತಿಥಿಯಾಗಿ ಅಲ್ಲಲ್ಲಿ ತಿರುಗುವುದರೊಳಗೆ ತನ್ನ ಜೀವನ ಸವೆದು ಹೋಗುತ್ತಿದೆಯೇ? ಈ ಕಾರ್ಯಕ್ರಮಗಳಿಗೆ ಮಾತ್ರವಲ್ಲ, ಈ ಜೀವನಕ್ಕೇ ತಾನು ಅತಿಥಿಯೆಂದು ಬಂದವಳೇ? ದುಡಿದು-ದಣಿದು ಬಂದಾಗ ತನ್ನನ್ನು ಸ್ವಾಗತಿಸುವ, ದಣಿವು ಕಡಿಮೆ ಮಾಡುವ, ಪ್ರೀತಿಸುವ ಯಾವ ಜೀವನವೂ ಇರಲಿಲ್ಲವೇ? ಯಾರೇಕೆ ಬೇಕು, ಒಬ್ಬಳೇ ಜೀವನವನ್ನೆದುರಿಸುವನೆಂಬ ಆ ಧೈರ್ಯ ಈಗ ಎಲ್ಲಿಗೆ ಹೋಯಿತು? ತಾನು ಎಲ್ಲಿ ಹೋದರೂ, ಬಂದರೂ, ಸತ್ತರೂ "ಮನೆ"ಯವಳಲ್ಲವೆಂಬ ಬರೇ "ಅತಿಥಿ"ಯೆಂಬ ಈ ಪ್ರಜ್ಞೆ ಎಷ್ಟೊಂದು ತೀಕ್ಷ್ಣವಾಗಿ ಹೃದಯವನ್ನು ಕೊರೆಯತೊಡಗಿದೆಯಲ್ಲ" (ಪುಟ-೩೩) ಎಂಬ ವಿಷಾದ ಆವರಿಸುತ್ತದೆ. ತಾನು ಅಧೀರಳಾದುದು ಅರಿವಿಗೆ ಬಂದ ತಕ್ಷಣ, ಸಣ್ಣದೊಂದು ನಗೆ ನಕ್ಕು ಮತ್ತೆ ನಾಳೆಯ ಅತಿಥಿ ಭಾಷಣ ತಯಾರಿಗೆ ತೊಡಗಿಕೊಳ್ಳುತ್ತಾಳೆ. ಲೀಲಾವತಿಯ ಅನುಭವದ ಸಂದಿಗ್ಧತೆಗಳನ್ನು ಹೊರಗೆಡವಲು ಕತೆಗಾರರು ಹಾಸ್ಟೆಲಿನ ವಾತಾವರಣವನ್ನು ನಿರ್ಮಿಸಿಕೊಂಡಿದ್ದಾರೆ. ಭಿನ್ನ ಮನೋಭಾವದ ಹುಡುಗಿಯರ ಪ್ರತಿಕ್ರಿಯೆಯನ್ನು ಊಹಿಸಲು ಸಾಧ್ಯವಾಗುವಂತೆ ಮಾಡಲಾಗಿದೆ.

ವೀಣಾರವರ ಹೆಚ್ಚು ಕತೆಗಳಲ್ಲಿ ವಿಷಾದ, ನಿರಾಸೆ, ವ್ಯಂಗ್ಯಗಳು ಸ್ಥಾಯಿ ಭಾವಗಳಾಗಿವೆ. 'ಪ್ರಶ್ನೆ' ಕತೆಯ ಶಶಿಯ ವಿಷಾದ ಬೇರೆ ರೂಪದ್ದು. ಶಶಿ ತನ್ನ ಬದುಕಿನಲ್ಲಿ ಸ್ನೇಹ-ಪ್ರೀತಿಯ ಹೆಸರಲ್ಲಿ ಹಾದು ಹೋದವರನ್ನು ನಂ.I, ನಂ.II , ನಂ.III , ನಂ.IV ಎಂಬ ಸಂಕೇತಗಳನ್ನು ಕೊಟ್ಟುಕೊಳ್ಳುತ್ತಾಳೆ. ಆ ಸಂಕೇತಗಳಲ್ಲಿ ನಂ.IV ಶಶಿಯನ್ನು ಹೆಚ್ಚು ಕಾಡಿದ್ದಾನೆ. ಆತನಲ್ಲಿರುವ ಚಂಚಲತೆಯನ್ನು ಕಂಡು "ನನ್ನ ಬಗೆಗಿನ ನಿನ್ನ ಹುಚ್ಚು-ಸೆಳೆತ ಹೀಗೆಯೇ ಇರಲಿ, ಇಷ್ಟೇ ತೀವ್ರವಾಗಿರಲಿ, ಕುದಿಯುತ್ತಿರಲಿ, ಉರಿಯುತ್ತಿರಲಿ; ಆಗ ಸದ್ದಿಲ್ಲದೆ ನಿನ್ನ ಹುಚ್ಚಿಗೆ-ತೀವ್ರತೆಗೆ-ಬೆಂಕಿಗೆ ನೀರು ಹಾಕಿ, ಕಲ್ಲು ಹಾಕಿ, ಮಣ್ಣು ಹಾಕಿ, ಗೋರಿ ಕಟ್ಟಿ ನಾನು ಎಲ್ಲಾದರೂ ದೂರ ಹೋಗಬೇಕು; ಆಗ ಹಾಗಾದ ನಂತರ, ನಿನ್ನಲ್ಲಿ ಅವಳು ಹೊತ್ತಿಸಿ ಹೋದ ಸುಪ್ತ ಜ್ವಾಲೆಯನ್ನು ಈ ಉರಿ ಕೆರಳಿಸಿ ಭುಗಿಲೆದ್ದು ಬೆಂಕಿಯಾಗಿ, ಅದರಲ್ಲೇ ನೀನು ಸ್ವಲ್ಪ-ಸ್ವಲ್ಪವಾಗಿ ಸುಟ್ಟು ಬೆಂದು ಹೋಗುವುದನ್ನು ದೂರದಿಂದ ನೋಡುತ್ತಿರಬೇಕು' ನೋಡಿ ಸಮಾಧಾನ ಹೊಂದಬೇಕು" (ಪುಟ-೪೧) ಎಂಬ ಭಯಂಕರ ಬಯಕೆಯ ಹಿಂದೆ, ಗಂಡು, ತನ್ನ ಪ್ರಶ್ನೆಗೆ ಉತ್ತರ ಹುಡುಕಲು, ಹುಡುಗಿಯರ ಮೇಲೆ ಪ್ರಯೋಗ ಮಾಡುವ ಮನಸ್ಥಿತಿಯನ್ನು

ಖಂಡಿಸುತ್ತಾರೆ. ನಾಳೆ ಸೋದರ ಮಾವನ ಮಗ ಅರುಣನನ್ನು ಮದುವೆಯಾದ ಮೇಲೂ ಅವರು ಕಾಡದೇ ಬಿಡುವರೇ ಎಂಬ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿಯುತ್ತದೆ.

ವೀಣಾರವರ ಕತೆಗಳಲ್ಲಿ ಬರುವ ಹೆಣ್ಣುಗಳು "ರಕ್ತ ಮಾಂಸಗಳಿಂದ ತುಂಬಿದ ದೇಹವುಳ್ಳ, ದ್ವೇಷ ಕ್ರೋಧ ಅಸೂಯೆ ಎಲ್ಲವನ್ನೊಳಗೊಂಡ ಮನಸ್ಸುಳ್ಳ" (ಅದೇ,ಪುಟ-೩೪) ಮನುಷ್ಯರಾಗಿದ್ದಾರೆ. ಸಭ್ಯತೆಯ ಮುಖವಾಡಗಳನ್ನು ಕಳಚಿ, ಮನಸ್ಸಿನ ಒಳಗನ್ನು ಮುಕ್ತವಾಗಿ ತೆರೆದಿಡುವ ಪಾತ್ರಗಳನ್ನು ಚಿತ್ರಿಸುವಲ್ಲಿ ಕತೆಗಾರರ ಆಸಕ್ತಿಯಿದೆ. ಆದ್ದರಿಂದಲೇ ಹೆಣ್ಣು ಪಾತ್ರಗಳು 'ಮದುವೆ' ಎಂಬ ಚೌಕಟ್ಟನ್ನು ಮುರಿಯಲು ಹವಣಿಸುತ್ತವೆ. ಬಯಸಿದವರೊಂದಿಗೆ ಮುಕ್ತ ಲೈಂಗಿಕ ಸಂಪರ್ಕ ಬೆಳೆಸುತ್ತವೆ. ಜಗತ್ತಿನ ಸಂಪ್ರದಾಯದ ಕ್ಲೀಷೆಗಳ ಬಗ್ಗೆ ವಿಷಾದಿಸುತ್ತವೆ. ಮದುವೆಯ ಚೌಕಟ್ಟಿಗೆ ಸಿಲುಕುವ ಗೃಹಿಣಿಯರ ಅನುಭವ ಸಂದಿಗ್ಧತೆಗಳನ್ನು ವೀಣಾರವರು ಸಾಂಕೇತಿಕವಾಗಿ ಸೆರೆಹಿಡಿದಿದ್ದಾಳೆ. ಅವರ ಸುಪ್ತ ಮನಸ್ಸಿನ ಬಯಕೆ-ಕನಸುಗಳನ್ನು ಹೊರಗೆಡವಿದ್ದಾರೆ.

'ನೀನೇ ತಂತಿ', 'ಹೆಣ', 'ನೆರಳು', 'ಮರೀಚಿಕೆ' ಮುಂತಾದ ಕತೆಗಳಲ್ಲಿ ಮದುವೆಯಾದ ಗೃಹಿಣಿಯರು, ತಾವು ಈ ಹಿಂದೆ ಪ್ರೀತಿಯ ಸುಳಿಯಲ್ಲಿ ಸಿಕ್ಕ ನೆನಪುಗಳನ್ನು ವರ್ತಮಾನಕ್ಕೆ ಎಳೆದು ತರುತ್ತಾರೆ. 'ನೀನೇ ತಂತಿ' ಕತೆಯಲ್ಲಿ ಸರೂ ಮತ್ತು ಗಂಡ ಹರೀಶ ಮಧ್ಯೆ, ನೆನಪಾಗಿ ನುಸುಳುವ 'ಅವನ' ಸಂಬಂಧವನ್ನು ನಿರೂಪಿಸಲು ಕತೆಗಾರರು, ತಂಬೂರಿಯ ತಂತಿ, ಪಂಜರದೊಳಗಿನ ಗಿಳಿಯ ಪ್ರತಿಮೆಗಳನ್ನು ಬಳಸಿ ಕತೆಯನ್ನು ಬೆಳೆಸಿದ್ದಾರೆ. ಹರೀಶನ, ಇಂಡಸ್ಟ್ರಿಯಲ್ ಟೂರಿಗೆಂದು ದಾಂಡೇಲಿಗೆ ಹೋದಾಗ ತಂದ ಗಿಳಿಯನ್ನು ಪಂಜರದಲ್ಲಿಟ್ಟು ಸಾಕಿದ್ದಾನೆ. ಹೆಂಡತಿ ಸರೂಳನ್ನು ಅಂತೆಯೇ ಪ್ರೀತಿಸುತ್ತಾನೆ. ಆದರೆ ಸರೂಗೆ "ತನ್ನ ಗಂಡನ ತೋಳುಗಳಲ್ಲಿ ಮೈಮರೆತಿದ್ದಾಗ ಎಲ್ಲಿಂದಲೋ 'ಅವನ' ಮೈ ವಾಸನೆ ಮೂಗಿಗೆ ಹೊಡೆಯುವುದು" (ಅದೇ, ಪುಟ-೫೭) ಹರಿಗೂ ಇದರ ಸುಳಿವು ಹತ್ತಿದೆ. ಹಾಡಿನ ತಂಬೂರಿಯ ತಂತಿಯಾಗುವ ಹಂಬಲವನ್ನು ಸರೂಳೊಂದಿಗೆ ಹೇಳಿಕೊಂಡಿದ್ದಾನೆ. ಉಸಿರುಗಟ್ಟಿಸುವ ವಾತಾವರಣದಲ್ಲಿ ಪಂಜರದ ಗಿಳಿ 'ಹರಿ ಹರಿ' ಎಂದು ಕಿರುಚಿ ಸರೂಳನ್ನು ಮತ್ತಷ್ಟು ಹಿಂಸೆಗೀಡು ಮಾಡುತ್ತದೆ. ಮುಂದೆ ಹರೀಶನ ಮಗುವಿಗೆ ತಾಯಿಯಾಗುವ ಸಂದರ್ಭ ಒದಗಿದಾಗ, ಹಿಂದಿನ ಅವನನ್ನು ಮರೆತು ಹರೀಶ, ಸರೂಳ ವೀಣೆಯ ತಂತಿಯಾಗುತ್ತಾನೆ. ತನ್ನೊಳಗೆ ಅದುಮಿಟ್ಟುಕೊಂಡ ಭಾವನೆಗಳಿಂದ ಬಿಡುಗಡೆ ಪಡೆಯಲು ಪಂಜರದಿಂದ ಗಿಳಿಯನ್ನು ಹಾರಿ ಬಿಡುತ್ತಾಳೆ. 'ಹೆಣ' ಕತೆಯ ನಾಯಕಿ ಪತ್ರಿಕೆಯೊಂದಕ್ಕೆ ಬಹು ದಿನಗಳ ನಂತರ ಕವಿತೆ ಬರೆಯಲು ಹೊರಟಾಗ, ಎದ್ದು ನಿಲ್ಲುವ ಕಾಲ್ಪನಿಕ 'ಹೆಣ' ತನ್ನನ್ನು ಕಾಡುತ್ತದೆ. ಮರೆಯಬೇಕೆಂದಿದ್ದ ಗೆಳೆಯನ ಗೋರಿಯನ್ನು ನೆನಪಿಗೆ ತರುತ್ತದೆ. ಕೊನೆಗೂ ಅಂದುಕೊಂಡ ಕವಿತೆಯನ್ನು ಬರೆಯಲಾಗುವುದೇ ಇಲ್ಲ. 'ನೆರಳು' ಕತೆಯಲ್ಲಿ, ಮಾಲತಿಯ ಅಪ್ಪನ ಮಾನಸಿಕ ಅಸ್ಥಿರತೆಗೆ ಕಾರಣ, ಹಿಂದೆ ತಾರುಣ್ಯದಲ್ಲಿ ಆಕೆಯನ್ನು ಪ್ರೀತಿಯ ಬಲೆಗೆ ಎಳೆದಿದ್ದ ಸದಾಶಿವನ ನೆನಪು. ತನ್ನ ಗಂಡ ಸತ್ತ ಸುದ್ದಿ ಕೇಳಿ ವಿಧವೆಯಾಗುವ ಆಚರಣೆಗಳನ್ನು ಪೂರೈಸುತ್ತಾಳೆ. ಮುಪ್ಪಿನ ಕಾಲದಲ್ಲಿ ಧುತ್ತೆಂದು ಎದ್ದು ನಿಲ್ಲುವ ಸದಾಶಿವನ 'ನೆರಳು' ಮಾಲತಿಯ ತಾಯಿಯನ್ನು ಕಾಡುತ್ತಿದೆ.

'ಮರೀಚಿಕೆ' ಕತೆಯಲ್ಲಿ ಮಿನಿಯು ಬಯಸಿದ ಸ್ವಚ್ಛಂದ ಬದುಕಿನ ಬಯಕೆ ಮರೀಚಿಕೆಯಾಗುಳಿಯುತ್ತದೆ. 'Waiting for godot' ಪುಸ್ತಕದ ಪ್ರಸ್ತಾಪದ ಫ್ರೆಂಚ್ ಕತೆಯಲ್ಲಿ, ಆಕಸ್ಮಿಕವಾಗಿ ಭೇಟಿಯಾಗುವ ಫ್ರೆಂಚ್ ಯುವಕ, ಐರಿಶ್ ಯುವತಿ ಜತೆ ಕಳೆಯುವ ಒಂದು ದಿನರಾತ್ರಿ, ಮತ್ತೆ ಅವರವರ ಗೂಡಿಗೆ ತೆರಳುವ ಘಟನೆಯನ್ನು ಕತೆಯಲ್ಲಿ ಪೂರಕವಾಗಿ ಬಳಸಲಾಗಿದೆ. ಚೌಕಟ್ಟಿನಾಚೆಯ ಜಗತ್ತನ್ನು ಅನುಭವಿಸಲು ಕಾತರಳಾಗಿರುವ ಮಿನಿಗೆ "ಒಮ್ಮೆ ಹೋಗಬೇಕು ರೆಕ್ಕೆ ಬಿಚ್ಚಿಕೊಂಡ ಈ ಎಲ್ಲಾ ಗೋಡೆ ದಾಟಿ ಆಚೆ ಕಡೆ ಏನಿದೆಯೆಂದು ನೋಡಬೇಕು. ಒಂದು ಸಲವಾದರೂ ಹೀಗೆ ಮಾಡಿದರೆ ಹೇಗೆ, ಹಾಗೆ ಮಾಡಿದರೆ ಹೇಗೆ ಅಂತ ವಿಚಾರಿಸಿದ ಮನಸ್ಸಿಗೆ ಬಂದದ್ದು ಮಾಡಬೇಕು. ಸಿಕ್ಕೀತು ತನಗೂ ಒಂದು ಫೇರೀಲ್ಯಾಂಡ್. ಆದೀತು ಕುದುರೆಯೊಂದಿಗಿನ ರಾಜಕುಮಾರನ ಭೆಟ್ಟಿ ಆದರೆ ಛೆ, ಇದರರ್ಥ ಬೇರೆಯದೇ ಆಗುತ್ತದೆ. ಹೀಗಲ್ಲ ತನಗನಿಸುವುದು ಖಂಡಿತ ಹೀಗಲ್ಲ. ತನಗನ್ನಿಸುವುದು ಒಟ್ಟು ಹೀಗೆ: ಏನಾದರೂ ಇಲ್ಲಿಯ ತನಕ ಆಗದೇ ಇದ್ದದ್ದು ಆಗಬೇಕು. ಈ ಎಲ್ಲ ಬೇಸರ ಹೋಗಿಸಿಬಿಡುವಂಥಾದ್ದು ಏನಾದರೂ.. (ಅದೇ,ಪುಟ–೨೭೯) ಎಂದು ಬಯಸಿದ ಮಿನಿಗೆ ಬಸ್ಸಿನಲ್ಲಿ ಭೇಟಿಯಾದ ಯುವಕನಿಂದ ಅಂತಹ ಅವಕಾಶ ಸನ್ನಿಹಿತವಾಗುವ ಸೂಚನೆ ಸಿಗುತ್ತದೆ. ಆದರೆ ವಾಸ್ತವದಲ್ಲಿ ಅದು ಸಾಧ್ಯವಾಗುವುದಿಲ್ಲ. ಮಿನಿಯ ಕನಸು ಕನಸಾಗಿಯೇ ಉಳಿಯುತ್ತದೆ.

'ಹೊರಟು ಹೋದವನು' ಕತೆಯಲ್ಲಿ ಸತೀಶನ ಹೆಂಡತಿ, ತಾನು ಹಿಂದೆ ಪ್ರೀತಿಸಿದವನನ್ನು ನೆನಪಿಸಿಕೊಳ್ಳುವ ವಿಧಾನ ಭಿನ್ನ ರೀತಿಯದು. 'ಮರೀಚಿಕೆ' ಕತೆ ಬಸ್ಸಿನ ಪ್ರಯಾಣದ ಮೂಲಕ ಸಾಗಿದರೆ, ಈ ಕತೆ ಪೂನಾದಿಂದ ಹುಬ್ಬಳ್ಳಿಯವರೆಗೆ ಹೋಗುವ ರೈಲು ಪ್ರಯಾಣದಲ್ಲಿ ನೆನಪುಗಳು ಪ್ರಯಾಣಿಸುತ್ತವೆ. ಸತೀಶನ ಹೆಂಡತಿ, ತನಗೆ ಬೇಕೆನಿಸಿದಾಗ, ಮನೆಯ ಕೆಲಸಗಳನ್ನು ಅಲ್ಲಲ್ಲಿಗೇ ಬಿಟ್ಟು ಹುಬ್ಬಳ್ಳಿಗೆ ಹೋಗುವುದು ತೌರುಮನೆಯ ಹಂಬಲದಿಂದಲ್ಲ ಎನ್ನುವುದು ಅವಳೊಬ್ಬಳಿಗೆ ಗೊತ್ತು. ಪ್ರಯಾಣದ ನಡುವೆ ಸಿಗುವ ಲೋಂಡಾ ಸ್ಟೇಷನ್ನಿನಲ್ಲಿ ಊಟ ತಂದು ಕೊಡುವ ಮಿಠಾಯಿ ವಾಲಾನ ಕಣ್ಣಿನ ಬೆಳಕು ಪ್ರತಿಮೆಯಾಗಿ ನಿಲ್ಲುತ್ತದೆ. "ಆ ಬೆಳಕು ಹಿಂದೆ ಬಹಳ ಹಿಂದೆ, ತಾನು ಕಾಲೇಜಿನಲ್ಲಿದ್ದಾಗ ತನಗೆ ಶೆಲಿ ಕಲಿಸುತ್ತಿದ್ದ ಪ್ರೊಫೆಸರನ ಕಣ್ಣಲ್ಲಿ ಇದ್ದಂತಹದೇ ಬೆಳಕು... ಶೆಲಿ ಕಲಿಸಿದವನು ತನ್ನ ಪಾಲಿಗೆ ಸತ್ತು ಹಾಳಾಗಿ ಹೋದ ನಂತರ ವರ್ಷಗಳ ತುಂಬ ಕವಿದಿದ್ದ ಕತ್ತಲನ್ನು ಹರಿಸಿದ್ದ ಬೆಳಕು ಈ ಮಿಠಾಯಿ ವಾಲಾನ ಕಣ್ಣಲ್ಲಿ" (ಅದೇ, ಪುಟ–೧೨೩) ತುಂಬಿದ್ದನ್ನು ನೋಡಿ ತೃಪ್ತಿ, ಸಮಾಧಾನ ಹೊಂದುತ್ತಾಳೆ. ಆದರೆ ಈ ಬಾರಿ ಲೋಂಡಾ ಸ್ಟೇಷನ್ನಿನಲ್ಲಿ ಕಣ್ಣು ಹಾಯಿಸಿ, ಅವನನ್ನು ಹುಡುಕಿದಾಗ, ಮಿಠಾಯಿವಾಲ ತನ್ನ ಊರಿಗೆ ಹೋದ ಸುದ್ದಿ ಕೇಳಿ, ತನ್ನ ಪ್ರೊಫೆಸರ್ ಮತ್ತೊಮ್ಮೆ ಸತ್ತ ಅನುಭವವಾಗುತ್ತದೆ. ಹುಬ್ಬಳ್ಳಿಯ ಕಡೆಗೆ ಕೈಗೊಳ್ಳುತ್ತಿದ್ದ ಪಯಣ ಅಲ್ಲಿಗೆ ತಟಸ್ಥವಾಗುತ್ತದೆ.

'ಕವಲು' ಕತೆಯಲ್ಲಿ ಬರುವ 'Brave man' ವ್ಯಂಗ್ಯದ ಪ್ರತೀಕವಾಗಿ ಉಳಿಯುತ್ತಾನೆ: ತಿರುಗಿ ಹೋದಳು ಕತೆಯಲ್ಲಿ, ಹಮೀದಳ ಕೆಟ್ಟ ಗಂಡನನ್ನು ಕುರಿತು ಪದೇ ಪದೇ ಹೇಳುವ "ನೀನ್ಯಾಕೆ ಆತನನ್ನು ಒದ್ದು ಕಳಿಸುವುದಿಲ್ಲ ಹಮೀದಾ" ಎನ್ನುವ ಲಕ್ಷ್ಮಿಯ ಮಾತು; ಅವಳ ಸ್ವಾತಂತ್ರ್ಯ ಕತೆಯ

ವಿಮಲಾಳ ವಾಸ್ತವ ಬದುಕು ಮತ್ತು ವೇದಿಕೆಯ ಮೇಲಿನ ಭಾಷಣಗಳ ವೈರುಧ್ಯ ಮನಸ್ಸಿನಲ್ಲಿ ಮಾಸದೆ ಉಳಿಯುತ್ತದೆ. ವೀಣಾ ಶಾಂತೇಶ್ವರ್‌ರವರ ಕತೆಗಳ ಹಿಂದೆ ಹೆಣ್ಣಿನ ಅಸ್ತಿತ್ವದ ಪ್ರಶ್ನೆ ಎದ್ದು ಕಾಣುತ್ತದೆ. ಖಾಸಗಿ ಅನುಭವಗಳನ್ನು ಸಾಂದ್ರೀಕರಿಸಿ ಹೇಳಲು, ಸಶಕ್ತ ಸಂಕೇತ ಪ್ರತಿಮೆಗಳನ್ನು ಬಳಸಿ, ಸಂಕೇತಗಳ ಸುತ್ತ ಕತೆಯನ್ನು ಹೆಣೆಯಬಲ್ಲ ಶಕ್ತ ಕತೆಗಾರರಾಗಿದ್ದಾರೆ.

ಇವರ ಕತೆಗಳಲ್ಲಿ ನೆನಪಿಗೆ ಇನ್ನಿಲ್ಲದ ಆದ್ಯತೆ. ಕತೆ ನಡೆಯುವ ಕಾಲಾವಧಿ ಬೆಳಗಿನಿಂದ ಸಂಜೆಯವರೆಗೆ ಅಥವಾ ಸಂಜೆಯಿಂದ ರಾತ್ರಿಬೆಳಗಿನವರೆಗೆ. ಅರ್ಥ, ಒಂದು ದಿನದಲ್ಲಿ ನಡೆಯುವ ಕತೆಯೊಳಗೆ ಇಪ್ಪತ್ತು ವರ್ಷಗಳಷ್ಟು ಹಿಂದೆ ಓಡಬಲ್ಲವು. ಉದಾ:- ಮುಳ್ಳುಗಳು, ಅತಿಥಿ, ಪ್ರಶ್ನೆ, ಹೊರಟು ಹೋದವನು ಇತ್ಯಾದಿ.

'ನೆನಪು' ಬರಿ ನೆನಪು, ಕತೆಯನ್ನು ಹೊರತುಪಡಿಸಿದರೆ ಉಳಿದ ಕತೆಗಳಲ್ಲಿ ವೀಣಾರವರು ಬಾಲ್ಯದ ನೆನಪಿಗೆ ಜಾರದೆ, ಯೌವ್ವನದ ನೆನಪುಗಳನ್ನು ಹೆಕ್ಕಿ ಮುಂದಿಡುತ್ತಾರೆ. ಕತೆಗಳ ನಿರೂಪಣಾ ವಿಧಾನದಲ್ಲಿ ಸ್ವಗತದ ಧಾಟಿ ಕಂಡುಬರುತ್ತದೆ. ವ್ಯಕ್ತಿ ಕೇಂದ್ರಿತ ಬದುಕಿನ ಶೋಧದಲ್ಲಿ ಸ್ವಗತದ ಧಾಟಿ, ಆತ್ಮಪ್ರತ್ಯಯ ನಿರೂಪಣೆ ಹೆಚ್ಚು ಆಪ್ತವೆನಿಸಿದೆ. 'ದೆವ್ವ', 'ಧೈರ್ಯದ ಮನುಷ್ಯ' ಕತೆಗಳು ಪುರುವಾಚಕದಲ್ಲಿವೆ. 'ಒಂದು ಗಿಡ, ಒಂದು ಬಾವಿ' ಕತೆಯನ್ನು 'ಬಾವಿ'ಯ ಮುಖಾಂತರ ರೂಪಿಸಲಾಗಿದೆ. ಕತೆಗಳ ಸಂಭಾಷಣೆಯಲ್ಲಿ ಧಾರವಾಡ ಭಾಗದ ಆಡುಮಾತಿನ ಶೈಲಿಯ ಭಾಷೆಯನ್ನು ಬಳಸಲಾಗಿದೆ. ಧಾರವಾಡ ಹುಬ್ಬಳ್ಳಿ, ಪೂನಾ ಮುಂಬೈ ಮುಂತಾದ ಸ್ಥಳಗಳಲ್ಲಿ ಕತೆಯ ಆವರಣವನ್ನು ನಿರ್ಮಿಸಲಾಗಿದೆ.

ರಾಜಲಕ್ಷ್ಮಿ ಎನ್ ರಾವ್ ಮತ್ತು ವೀಣಾ ಶಾಂತೇಶ್ವರ್‌ರವರು ಬಳಸಿಕೊಳ್ಳುವ ಸಾಂಕೇತಿಕ ಪ್ರತಿಮೆಗಳಲ್ಲಿ ಕೆಲವು ಭಿನ್ನತೆಗಳಿವೆ-ಸಾಮ್ಯತೆಗಳಿವೆ. ಇಬ್ಬರ ಕತೆಗಳ ಉದ್ದೇಶ, ಹೆಣ್ಣಿನ ಅಸ್ತಿತ್ವದ ಶೋಧವಾಗಿದೆ. ಸ್ವಗತವುಳ್ಳ ನಿರೂಪಣಾ ಧಾಟಿಯಲ್ಲೂ ಸಾಮ್ಯತೆಯಿದೆ. ರಾಜಲಕ್ಷ್ಮಿಯವರ ಕತೆಗಳು ಸಾಂಪ್ರದಾಯಿಕ ಚೌಕಟ್ಟನ್ನು ಪ್ರಶ್ನಿಸಿ ಖಂಡಿಸುವ ನಿಟ್ಟಿನಲ್ಲಿದ್ದರೆ. ವೀಣಾರವರ ಕತೆಗಳು ಅಂತಹ ಚಿಂತನೆಗಳೊಂದಿಗೆ ಮುಕ್ತ ಬದುಕಿನ ಆಯ್ಕೆಯನ್ನು ಆಯ್ದುಕೊಳ್ಳುವಲ್ಲಿ ಹೆಣ್ಣು ಪಾತ್ರಗಳು ಸಫಲವಾಗುತ್ತವೆ. ಉದಾಹರಣೆಗೆ, 'ಕವಲು', 'ಕೊನೆಯ ದಾರಿ', 'ಹೊರಟು ಹೋದವನು' ಇತ್ಯಾದಿ ಕತೆಗಳು.

ವ್ಯಂಗ್ಯವೆಂದರೆ, ಮನಸ್ಸಿನೊಳಗಿರುವ ಅರ್ಥಕ್ಕೆ ವಿರುದ್ಧವಾಗಿ ಮಾತನಾಡುವುದು. ಹೊಗಳುವುದಕ್ಕಾಗಿ ಬೈಯ್ಯುವುದು, ಬೈಯ್ಯುವುದಕ್ಕಾಗಿ ಹೊಗಳುವುದು. ನಟನೆ, ಸೋಗು, ತೋರಿಕೆ ಎಂಬ ಅರ್ಥಗಳೂ ಇವೆ. "ಪ್ರಾಮಾಣಿಕ ಪ್ರಜ್ಞೆ, ಮನಸ್ಸಿನ ನಿಜವಾದ ಎಚ್ಚರ" ನೋವಾಸ್ ಸತ್ಯಕ್ಕೂ ತೋರಿಕೆಗೂ ಇರುವ ವ್ಯತ್ಯಾಸ ವ್ಯಂಗ್ಯಾಕಾರ ಪಾತ್ರವೊಂದರ ಧರ್ಮ ಪರಾಯಣತೆಯನ್ನು ಹೊಗಳುತ್ತ ಪರೋಕ್ಷವಾಗಿ ಧರ್ಮಲಂಪಟತೆಯ ಮೇಲೆ ದಾಳಿ ಮಾಡಬಹುದು. ತನ್ನಲ್ಲಿರುವ ಕಪಟವನ್ನು ತನ್ನ ಮಾತು ಕ್ರಿಯೆಗಳಲ್ಲಿ ಅರಿವಿಲ್ಲದೆ ವ್ಯಕ್ತಪಡಿಸುವಂತೆ ಚಿತ್ರಿಸಬಹುದು. ಇಂಥಲ್ಲಿ ಪಾತ್ರವು ವ್ಯಂಗ್ಯಕಾರನ 'ತೋರಿಕೆಯ' ಅಭಿಪ್ರಾಯದ ಪ್ರತಿನಿಧಿಯಾಗಿರುವಾಗಲೇ ವ್ಯಂಗ್ಯಕಾರ ನಿಜವಾದ ಸ್ಥಿತಿಯ ಬಗ್ಗೆ ತನ್ನ ಅಭಿಪ್ರಾಯಗಳನ್ನು ವ್ಯಂಗ್ಯವಾಗಿ ಮಂಡಿಸಬಹುದು.

'ಅತಿಥಿ' ಕತೆಯಲ್ಲಿ ಲೀಲಾವತಿ ಮೇಲ್ನೋಟಕ್ಕೆ ತೋರುವ ವ್ಯಕ್ತಿತ್ವಕ್ಕೂ, ಒಳಗೆ ಅನುಭವಿಸುವ ಒಂಟಿತನದ ವೈರುಧ್ಯಗಳನ್ನು ಕತೆ ವ್ಯಂಗ್ಯ ಧಾಟಿಯಲ್ಲಿ ವಿಡಂಬಿಸುತ್ತಾ ಹೋಗುತ್ತದೆ. ಕವಲು ಕತೆಯಲ್ಲಿ ಮಿನಿಗೆ ಮಾತಾಡಲು ಅವಕಾಶ ಕೊಡದ ಆತನ ವ್ಯಕ್ತಿತ್ವದ ಡಾಂಬಿಕತೆಗಳು ಕತೆಯುದ್ದಕ್ಕೂ ವ್ಯಕ್ತವಾಗುತ್ತಾ ಹೋಗಿವೆ.

ಒಮ್ಮೊಮ್ಮೆ ನನಗೇನನಸ್ತದ ಗೊತ್ತೇನು ಮಿನಿ? ನಾವು ಹಿಂಗ ಕಳ್ಳತನದಿಂದ ಭೆಟ್ಟಿಯಾಗೋ ಬದಲು ನಾ ಒಮ್ಮೆ ಎಲ್ಲಾರ ಮುಂದ ನಮ್ಮ ಸಂಬಂಧ announce ಮಾಡಿಬಿಡ್ತೀನಿ. ಅದು ಕಾಯ್ದೇಶೀರ ಆಗೋದಿಲ್ಲ ಖರೆ, ಅದರ ಪ್ರೀತಿಗೆ ಯಾವ ಸೂಳೆಮಗ ಕಾಯ್ದೆ ಲಗೂ ಮಾಡ್ತಾನ? ನಾವು ಒಂದ ಮನೀ ಮಾಡೋಣು, ಮಕ್ಕಳ್ನ ಹಡಿಯೋಣು... ನಮ್ಮಿಬ್ಬರ ಮಗಾ ನನ್ಹಾಂಗ brave ಆಗತಾನ, ಮತ್ತ ಅವಗ ನಿನ್ಹಾಂಗ ಛೆಂದ ದೊಡ್ಡ ಕಣ್ಣು ಇರತಾವ... ರಾಜಾರೋಷಾಗಿ ಸಂಸಾರ ಮಾಡೋಣು, ನೀಯಾಕ ಹೆದರತೀ? ನಾಯೇನ ನನ್ನ ಹೆಂಡತಿ ಮಕ್ಕಳಿಗೆ ಅನ್ಯಾಯ ಮಾಡಿಧಾಂಗಾಗದಿಲ್ಲ ಇದರಿಂದ... ಆ ಮಾತಿನಲ್ಲಿಯ ಗಟ್ಟಿ ವಿಶ್ವಾಸದಿಂದ ಆಕೆಗೆ ಎಷ್ಟೊಂದು ಕೃತಕೃತ್ಯತೆಯೆನಿಸಿತ್ತೆಂದರೆ ಅದನ್ನು ಪರೀಕ್ಷೆ ಮಾಡುವ ಅವಶ್ಯಕತೆ ಆಕೆಗೆ ಎಂದೂ ತೋರಿರಲಿಲ್ಲ" (ಅದೇ, ಪುಟ-೧೩೧) ಆತ ಹೇಳುವ ಮಾತುಗಳಲ್ಲಿ ನಡೆದುಕೊಳ್ಳುವ ನಡತೆಗೂ ಇರುವ ಅಗಾಧ ವ್ಯತ್ಯಾಸವನ್ನು ಕತೆ ಮನಗಾಣಿಸಿದೆ.

'ಬಿಡುಗಡೆ' ಕತೆಯಲ್ಲಿ ಸರೂ ಕಾಣುವ ಸುಂದರ ಸಮಾನತೆಯ ಕನಸು ಪೂರ್ವಾರ್ಧದಲ್ಲಿದ್ದರೆ, ಅದಕ್ಕೆ ತದ್ವಿರುದ್ಧವಾದ ಚಿತ್ರವನ್ನು ಕಟ್ಟಿಕೊಡುವ ವಾಸ್ತವ ಚಿತ್ರಣ ಉತ್ತರಾರ್ಧ ಕತೆಯಲ್ಲಿದೆ. ಗಂಡನ ದರ್ಪ, ಒಳ ಹೊರಗಿನ ದುಡಿತದಿಂದ ಬೇಸತ್ತ ಸರೋಜಾಳಿಗೆ ಬಿಡುಗಡೆ ಸಿಕ್ಕಿದ್ದು ಆತನ ಸಾವಿನಿಂದ "ಮೈ ಮನಸ್ಸು ಹಗುರವಾದಂತಹ ಭಾವ-ಅದೆಂಥದೋ ಬಿಡುಗಡೆಯ ಸುಖದ ಭಾವ. ಎಲ್ಲಾ ನೋವುಗಳಿಂದ, ಅಪಮಾನಗಳಿಂದ, ಹಿಂಸೆಯಿಂದ, ನಿರಾಶೆಯಿಂದ, ಅನ್ಯಾಯದಿಂದ, ದಬ್ಬಾಳಿಕೆಯಿಂದ ಕಳಚಿಕೊಂಡಂತಹ ಕಹಿ ಭಾವ. ತನಗೆ ದುಃಖವಾಗುತ್ತಿಲ್ಲ ಎಂದು ಆಕೆಗೆ ತಿಳಿಯುತ್ತಿದೆ. ದುಃಖವೇಕೆ ಆಗುತ್ತಿಲ್ಲವೆಂದು ಕಸಿವಿಸಿಯೂ ಆಗುತ್ತಿಲ್ಲ. ದುಃಖವಾಗುತ್ತಿದ್ದರೆ ಕಸಿವಿಸಿಯಾಗುತ್ತಿದ್ದರೆ ಸಂತಾಪ ವಾಗುತ್ತಿದ್ದರೆ ಅದು ಈ ಗಂಡ ಸತ್ತು ಹೋದದ್ದಕ್ಕಾಗಿ ಅಲ್ಲ, ಆತ ಸಾಯಿಸಿದ ತನ್ನ ಅಸಂಖ್ಯ ಕನಸುಗಳಿಗಾಗಿ" (ಅದೇ,ಪುಟ-೨೨೪) ವರ್ತಮಾನವನ್ನು ಅರಳಿಸಿದ ಭೂತಕಾಲವನ್ನು ನೆನೆದು ಕಟ್ಟಿಕೊಟ್ಟ ಶಬ್ದಚಿತ್ರ ಇದಾಗಿದೆ.

'ಹೀಗೊಂದು ಕತೆ' ಯಲ್ಲಿ ಆಕೆ, ಆತನ ವಿರೋಧದ ಮಧ್ಯೆಯೂ ಆತನಿಂದ ಮಗುವನ್ನು ಪಡೆಯುತ್ತಾಳೆ. ಹತ್ತು ವರ್ಷದಿಂದ ಜತೆಗಿರುವ ಆತ ಮಗು ಪಡೆಯುತ್ತೇನೆಂದು ಆಕೆ ಹೇಳಿದಾಗ, ಆತನ ಮುಖವಾಡಗಳು ಕಳಚಿ ಬೀಳತೊಡಗುತ್ತವೆ. ಹುಟ್ಟಿದ ಮಗುವಿಗೆ ತಂದೆಯ ಸ್ಥಾನ ಒದಗಿಸಲು ಆಕೆಯನ್ನು ಮದುವೆಯಾಗಲು ಬಯಸಿದಾಗ ಆಕೆ ನಿರಾಕರಿಸುತ್ತಾಳೆ. ಮಗು ವಿಶ್ವರೂಪ ದರ್ಶನವನ್ನು ಪಡೆದ ಅನುಮತಿ ಪಡೆಯುವಲ್ಲಿ ಮಗ್ನವಾಗುತ್ತಾಳೆ.

## ೬.೮ ವಾಸ್ತವವಾದಿ ಮಾದರಿ

ಇಪ್ಪತ್ತನೇ ಶತಮಾನದಿಂದೀಚೆಗೆ ಪ್ರಚಲಿತವಾಗಿರುವ ವಾಸ್ತವತಾವಾದಿ ಮಾದರಿಯನ್ನು ಪಾಶ್ಚಾತ್ಯರ ಪರಿಕಲ್ಪನೆಯಿಂದ ಪಡೆಯಲಾಗಿದೆ. ಇಂಗ್ಲಿಶ್‌ನ 'Realism' ಪದಕ್ಕೆ ಪರ್ಯಾಯವಾಗಿ 'ವಾಸ್ತವ' ಎಂಬ ಪದವನ್ನು ಕನ್ನಡದಲ್ಲಿ ಬಳಸಲಾಗಿದೆ. ವಾಸ್ತವಿಕತೆ ಎಂದರೆ, ತಮ್ಮ ಸುತ್ತ-ಮುತ್ತಲಿರುವ ಜಗತ್ತಿನಲ್ಲಿ ಬರಹಗಾರರು ಏನೇನನ್ನು ಕಾಣುವರೋ ಅದನ್ನು ತಮಗೆ ಗೋಚರವಾದಂತೆ ನಿರೂಪಿಸುವುದಾಗಿದೆ.

ವಾಸ್ತವತಾವಾದಿ ಮಾದರಿಯ ಕೆಲವು ಲಕ್ಷಣಗಳು ಹೀಗಿವೆ; ವಾಸ್ತವ ಎನ್ನುವುದು ಭೌತಿಕ ಜಗತ್ತಿನ ಇರುವಿಕೆಯನ್ನು ಸೂಚಿಸುತ್ತದೆ; ವಸ್ತುನಿಷ್ಠತೆ ಇದರ ಪ್ರಮುಖ ಲಕ್ಷಣವೆನ್ನಲಾಗಿದೆ; ಕಲ್ಪನೆಗೆ ಅವಕಾಶವಿರುವುದಿಲ್ಲ; ಪುರಾಣ ಮತ್ತು ಐತಿಹಾಸಿಕ ಕತೆಗಳಿಗೆ ಬದಲಾಗಿ ಸಮಕಾಲೀನ ಜಗತ್ತಿನ, ಕೌಟುಂಬಿಕ ಪರಿಸರದ ಕತೆಗಳನ್ನು ಒಳಗೊಂಡಿರುತ್ತದೆ; ವ್ಯಕ್ತಿ ಬದುಕಿನ ಬಹುರೂಪತೆಗಳನ್ನು ಸಮಗ್ರವಾಗಿ ತೋರುತ್ತದೆ; ಈ ಜಗತ್ತಿನ ಎಲ್ಲ ವ್ಯಕ್ತಿಗಳು, ಅವರ ಎಲ್ಲ ವರ್ತನೆಗಳು, ಭಾವನೆಗಳು, ಚಿಂತನೆಗಳು, ಸಮಸ್ಯೆಗಳು, ಸವಾಲುಗಳು ವಾಸ್ತವವಾದಿಗಳಿಗೆ ಮುಖ್ಯವಾಗುತ್ತದೆ; ವಸ್ತುಗಳನ್ನು ಇದ್ದಕ್ಕಿದ್ದಂತೆ ಬಣ್ಣಿಸುವುದು, ಸಂಗತಿಗಳನ್ನು ಇದ್ದಕ್ಕಿದ್ದಂತೆ ಹೇಳುವುದು; ವೈಯಕ್ತಿಕ ನಿಲುವುಗಳಿಗಿಂತ ಹೆಚ್ಚಾಗಿ ಆರ್ಥಿಕ-ಸಾಮಾಜಿಕ-ರಾಜಕೀಯ ಮತ್ತು ಸಾಂಸ್ಕೃತಿಕ ಸಂರಚನೆಗಳು ಮುಖ್ಯವಾಗುತ್ತವೆ.

ಮೇಲಿನ ಲಕ್ಷಣಗಳು, ಕೆಲವು ಪ್ರಶ್ನೆಗಳಿಗೆ ಎಡೆಮಾಡಿಕೊಟ್ಟಿವೆ. ಕೃತಿ; ಸಾಮಾಜಿಕ ವ್ಯವಸ್ಥೆಯ ಪ್ರತಿಬಿಂಬವಾಗಿರದೆ, ಮರುಸೃಷ್ಟಿಯಾಗಿರುತ್ತದೆ. ಹಾಗಾಗಿ ವಾಸ್ತವದ ವಿವರಗಳು ಕೃತಿಯಲ್ಲಿ ಸಂಘಟಿತಗೊಳ್ಳುವಾಗ, ಕೆಲವು ಮಾರ್ಪಾಡುಗಳು, ಕಾಲ್ಪನಿಕ ಸನ್ನಿವೇಶಗಳು ಹಾಸುಹೊಕ್ಕಾಗಿರುತ್ತವೆ. ವಾಸ್ತವ ಜಗತ್ತಿನಿಂದ ಪಡೆಯುವ ಅನುಭವಗಳು ಕೇವಲ ಭೌತಿಕ ವಸ್ತು-ವಿವರಗಳಿಗೆ ಸೀಮಿತವಾಗಿರದೆ, ಬುದ್ಧಿಪೂರ್ವಕ ವಿಶ್ಲೇಷಣೆಗೆ ಮಾತ್ರ ದಕ್ಕುವ 'ಸತ್ಯ'ಗಳನ್ನು ಆಧರಿಸಿರುವ ಸಾಧ್ಯತೆಗಳೂ ಇರುತ್ತವೆ. ಇನ್ನು ವಸ್ತುನಿಷ್ಠತೆಯ ಪ್ರಶ್ನೆ. ಬದುಕಿನ ವಾಸ್ತವತೆಯನ್ನು ಗ್ರಹಿಸುವ ವಿಧಾನ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತದೆ. ಒಂದು ಘಟನೆಯನ್ನು ಹಲವು ಜನರು ವೀಕ್ಷಿಸಿದ್ದರೂ, ಅದನ್ನು ಗ್ರಹಿಸುವ, ವಿವರಿಸುವ, ವಿಶ್ಲೇಷಿಸುವ ಚಿತ್ರಣಗಳು, ಒಂದೇ ರೀತಿಯಾಗಿರುವುದಿಲ್ಲ. ಸಮಾಜವನ್ನು ಸಮಗ್ರವಾಗಿ ಗ್ರಹಿಸುವುದು ಬರಹಗಾರರಿಗಿರುವ ದೊಡ್ಡ ಸವಾಲು. ಜತೆಗೆ ಅಸಾಧ್ಯ ಕೂಡ. ವಾಸ್ತವ ಜಗತ್ತಿನಿಂದ ಆಯ್ದುಕೊಳ್ಳುವ ಸಂಗತಿಗಳು, ಆಯಾ ಬರಹಗಾರರ ಆಯ್ಕೆ ಮತ್ತು ನಿರಾಕರಣೆಗೆ ಒಳಪಟ್ಟಿರುತ್ತವೆ. ಎಚ್.ಎಸ್. ರಾಘವೇಂದ್ರರಾವ್ ಅವರ ಮಾತುಗಳ ಮೂಲಕ ಮತ್ತಷ್ಟು ಸ್ಪಷ್ಟಪಡಿಸಿಕೊಳ್ಳುವುದಾದರೆ "ಮನಸ್ಸನ್ನು ಹೊಂದಿರುವ ಯಾವ ಸಮಾಜ ಜೀವಿಯಾಗಲೀ, ತಾನು ಚಿತ್ರಿಸುತ್ತಿರುವ ಜಗತ್ತಿನ ಬಗ್ಗೆ ನೂರಕ್ಕೆ ನೂರರಷ್ಟು ನಿರ್ಲಿಪ್ತತೆ ಹೊಂದಿರುವುದು ಅಸಾಧ್ಯ. ಅದೂ ಅಲ್ಲದೆ, ಅಪರಿಮಿತವಾದ ಲೋಕದಿಂದ ಪರಿಮಿತ ವಸ್ತುವನ್ನು ಮಾತ್ರ ಆಯ್ದುಕೊಳ್ಳುವುದು ಕಲಾಕೃತಿಗೆ ಸಾಧ್ಯ. ಆದ್ದರಿಂದ, ಗೊತ್ತಾದ ಅನುಭವಗಳ ಆಯ್ಕೆ ಮತ್ತು ಜೋಡಣೆಗಳು ಕಲಾವಿದನ ತೀರ್ಮಾನಕ್ಕೆ ಬಿಟ್ಟವುಗಳು.

ಇಲ್ಲಂತೂ ವ್ಯಕ್ತಿನಿಷ್ಠ ಅಂಶಗಳು ತಲೆ ಹಾಕುವುದನ್ನು ತಪ್ಪಿಸಲಾಗದು. ಭಾಷೆಯೂ ಸೇರಿದಂತೆ ಪ್ರತಿ ಕಲಾ ಮಾಧ್ಯಮವೂ ತನ್ನದೇ ಆದ ಪರಿಮಿತಿಗಳನ್ನು ಹೊಂದಿರುವುದರಿಂದ ವಾಸ್ತವತೆಯ ಪ್ರತಿನಿಧೀಕರಣದಲ್ಲಿ ಕಲೆಯು ಆಂಶಿಕವಾದ ಯಶಸ್ಸನ್ನು ಮಾತ್ರ ಪಡೆಯಬಲ್ಲುದು. ಎಷ್ಟೋ ಬಾರಿ ವಾಸ್ತವವಲ್ಲದ ತಂತ್ರಗಳನ್ನು ಬಳಸಿಕೊಂಡಾಗ ಮಾತ್ರ ನಿಜವಾದ ವಾಸ್ತವಕ್ಕೆ ರೂಪ ಕೊಡಬಹುದೆಂಬ ವಿಚಿತ್ರ ಸತ್ಯವನ್ನು ಕಲಾವಿದನು ಕಂಡುಕೊಳ್ಳಬೇಕಾಗುತ್ತದೆ" ('ವಾಸ್ತವವಾದ', ನಿಲುವು, ಪುಟ-೬೯). ಮುಂದುವರಿದು, ರಾಘವೇಂದ್ರ ರಾವ್‌ರವರು ವಾಸ್ತವತಾವಾದವನ್ನು ಮೂರು ಪ್ರಭೇದಗಳ ಮೂಲಕ ಚರ್ಚಿಸಿದ್ದಾರೆ.

ಮೊದಲನೆಯದು 'ವಸ್ತುನಿಷ್ಠ ವಾಸ್ತವವಾದ'. ಕತೆ/ಕಾದಂಬರಿಕಾರರು ಆಯ್ದುಕೊಂಡ ವಸ್ತುವಿನ ಸಂಗತಿಯನ್ನು ವಿವರವನ್ನು ದಾಖಲಿಸುವುದು. ಕಲ್ಪನೆಯನ್ನು ಬದಿಗಿಟ್ಟು, ನಿರೂಪಿಸುವ ಸಂಗತಿಯನ್ನು ನೇರ ಅನುಭವಗಳಿಂದ ಪಡೆದಿರಬೇಕು. ಬರಹಗಾರರು ಇಲ್ಲಿ ಸಂಶೋಧಕನ ಸ್ಥಾನ ವಹಿಸಬೇಕಾಗುತ್ತದೆ. ನಶಿಸಿ ಹೋಗುತ್ತಿರುವ ಸಂಗತಿಗಳನ್ನು ದಾಖಲೆ ಮಾಡುವ ಬಯಕೆಯಿರುತ್ತದೆ. ವರದಿಯಾಗುವ ಅಪಾಯವನ್ನು ಗಮನಿಸಬೇಕಾಗುತ್ತದೆ. ಎರಡನೆಯದು 'ವ್ಯಕ್ತಿನಿಷ್ಠ ವಾಸ್ತವವಾದ'. ಬರಹಗಾರರು ಆಯ್ದುಕೊಳ್ಳುವ ಸಂಗತಿಯು ಯಥಾವತ್ತಾದ ಪ್ರತಿಬಿಂಬವಾಗಿರದೆ ಬರಹಗಾರರ ವ್ಯಕ್ತಿತ್ವದ ಮೂಲಕ ಹಾಯ್ದು ಬಂದಿರುತ್ತದೆ. ವೈಯಕ್ತಿಕ ನಿಲುವುಗಳು ಕತೆಯನ್ನು ನಿಯಂತ್ರಿಸುತ್ತಿರುತ್ತದೆ. ಇಂದಿನ ವಾಸ್ತವವನ್ನು ಮನಗಾಣಿಸಲು, ಚರಿತ್ರೆ, ಐತಿಹ್ಯಗಳಿಗೆ ಮೊರೆ ಹೋಗಬಹುದಾದ ಸಾಧ್ಯತೆಗಳಿರುತ್ತವೆ. ವ್ಯಕ್ತಿಯ ಅಂತರಂಗದಲ್ಲಿ ಅಡಗಿರುವ ಪ್ರವೃತ್ತಿಗಳಿಗೆ ಮಹತ್ವ ಕೊಡಬಹುದು. ವಾಸ್ತವವನ್ನು ಗ್ರಹಿಸುವ ಮತ್ತು ಗುರುತಿಸುವ ಬಗೆಗೆ ಅನುಗುಣವಾಗಿ ಬರಹಗಾರರು ಚಿತ್ರಿಸುತ್ತಿರುವ ವಾಸ್ತವತೆಯು ಬದಲಾಗುವ ಆದರೆ ಒಂದಲ್ಲ ಒಂದು ಬಗೆಯ ನಿಜವನ್ನೇ ಹೇಳುವ ಕೃತಿಗಳನ್ನು 'ವ್ಯಕ್ತಿನಿಷ್ಠ ವಾಸ್ತವವಾದ'ಎಂದೂ ನಿರೂಪಿಸಬಹುದಾಗಿದೆ. ಮೂರನೆಯದು 'ವಿಶ್ಲೇಷಣಾತ್ಮಕ ವಾಸ್ತವವಾದ'. ವ್ಯಕ್ತಿ ಮತ್ತು ಸಮಾಜಗಳು ಪರಸ್ಪರ ಪ್ರಭಾವಿತವಾಗುತ್ತವೆ. ವ್ಯಕ್ತಿತ್ವದ ಸಾಮಾಜಿಕ ಸಂಗತಿಗಳು ನಿಜವಾದರೂ ಅದು ಅನನ್ಯ. ಸಾಮಾಜಿಕ ಹೋರಾಟಗಳಲ್ಲಿ ಬರಹಗಾರರು ನೇರವಾಗಿ ಭಾಗವಹಿಸದಿರಬಹುದು. ಆದರೆ, ಸಮಸ್ಯೆಯ ಉದ್ಭವಕ್ಕೆ ಕಾರಣಗಳನ್ನು, ಸಮಸ್ಯೆಗಳಿಂದುಂಟಾಗುವ ಪರಿಣಾಮಗಳನ್ನು ಸೇರಿಸಿ ಜಗತ್ತಿಗೆ ತೋರಿಸಿಕೊಡಬಲ್ಲರು. ಒಂದು ಪ್ರಮುಖ ವಿಚಾರಧಾರೆಯ ನಿಲುವನ್ನು ಸ್ವೀಕರಿಸುವ 'ಸಮಾಜವಾದಿ ವಾಸ್ತವವಾದ'ದ ಬಗೆಯನ್ನು ವಿವರಿಸಿದ್ದಾರೆ.

"ವಾಸ್ತವಿಕತೆ ಎಂಬುದು ಸಾಹಿತ್ಯದಲ್ಲಿ ಒಂದು ಧೋರಣೆಯನ್ನು ಸೂಚಿಸುವ ಪದ. ಸಾಧ್ಯವಾದಷ್ಟು ಪ್ರಾಮಾಣಿಕವಾಗಿ, ಬದುಕಿನ ಮತ್ತು ಪ್ರಕೃತಿಯ ಎಲ್ಲ (ಅಥವಾ ಸಾಧ್ಯವಿರುವಷ್ಟು) ಮುಖಗಳನ್ನು ಚಿತ್ರಿಸುವ, ಪುನಃ ಸೃಷ್ಟಿಸುವ ಪ್ರಯತ್ನವಾಗಿದೆ" (ವಿಮರ್ಶೆಯ ಪರಿಭಾಷೆ, ಪುಟ-೨೨೫) ಎಂಬ ವ್ಯಾಖ್ಯಾನವನ್ನು ವಾಸ್ತವವಾದಿ ಮಾದರಿಯ ಲಕ್ಷಣವಾಗಿ ಸ್ವೀಕರಿಸಿ, ಮಹಿಳಾ ಬರಹಗಾರರ ಕತೆಗಳನ್ನು ಅಧ್ಯಯನ ಮಾಡಲಾಗಿದೆ.

ವಾಸ್ತವವಾದಿ ಮಾದರಿಯಲ್ಲಿ ಪ್ರಾದೇಶಿಕ ವೈವಿಧ್ಯವೂ ಕಾಣಿಸಿಕೊಳ್ಳುತ್ತದೆ. ಮಲೆನಾಡು, ಬಯಲುಸೀಮೆ, ಕರಾವಳಿ ಪ್ರದೇಶಗಳಿಂದ ಬಂದ ಲೇಖಕರು ತಮ್ಮೊಡನೆ ಆಯಾ ಪ್ರದೇಶಗಳ ಭೌಗೋಳಿಕ, ಭಾಷಿಕ ಮತ್ತು ಜೀವನ ಕ್ರಮದ ಭಿನ್ನತೆಗಳನ್ನು ಕೃತಿಯಲ್ಲಿ ಒಡಮೂಡಿಸಿದ್ದಾರೆ. ಕೆಳವರ್ಗ–ಜಾತಿಗಳಿಂದ ಬಂದ ಅನೇಕ ಲೇಖಕರು, ಕನ್ನಡ ಓದುಗರಿಗೆ ಅಪರಿಚಿತವಾಗಿದ್ದ ಲೋಕಗಳನ್ನು, ಅವುಗಳಿಗೇ ವಿಶಿಷ್ಟವಾದ ವಿವರಗಳಲ್ಲಿ ಚಿತ್ರಿಸಿರುವುದನ್ನು ಕಾಣುತ್ತೇವೆ. ವೈದೇಹಿಯವರ ಮತ್ತು ಬಾನುಮುಷ್ತಾಕ್‌ರವರ ಕತೆಗಳಲ್ಲಿರುವ ವಾಸ್ತವ ಚಿತ್ರಣಗಳನ್ನು ಪ್ರಾತಿನಿಧಿಕವಾಗಿ ಆಯ್ದುಕೊಳ್ಳಲಾಗಿದೆ.

### ೬.೮.೧ ಹೆಣ್ಣಿನ ಅಂತರಂಗ ವಾಸ್ತವ ಚಿತ್ರಣ

ಕನ್ನಡ ಸಾಹಿತ್ಯ ಲೋಕಕ್ಕೆ ವೈದೇಹಿಯವರ ಬರಹಗಳು ವಿಶಿಷ್ಟ ಕೊಡುಗೆಯನ್ನು ನೀಡಿವೆ. ಭ್ರಮಾತ್ಮಕ ನೆಲೆ ಮತ್ತು ಆದರ್ಶದ ನಿಲುವುಗಳನ್ನು ಬದಿಗಿಟ್ಟು ವಾಸ್ತವ ಲೋಕದ ಅನುಭವಗಳನ್ನು ವೈದೇಹಿಯವರು ಅನಾವರಣಗೊಳಿಸುತ್ತಾರೆ. ಮಲೆನಾಡಿನ ಸಾಂಸ್ಕೃತಿಕ ದಟ್ಟ ಪರಿಸರದ ಹಿನ್ನೆಲೆಯಲ್ಲಿ ಕತೆಗಳ ಆವರಣ, ತೆರೆದುಕೊಳ್ಳುತ್ತಾ ಹೋಗುತ್ತದೆ. ಈ ಕತೆಗಾರರು ಸಾಮಾಜಿಕ ವ್ಯವಸ್ಥೆಯನ್ನು ಅರ್ಥೈಸಲು, ಅದರ ಅಂಗ ಸಂಸ್ಥೆಯಾದ ಕುಟುಂಬವನ್ನು ಕೇಂದ್ರವಾಗಿಟ್ಟುಕೊಂಡಿದ್ದಾರೆ. ಕೌಟುಂಬಿಕ ವ್ಯವಸ್ಥೆಯನ್ನು ಅದು ಇರುವ ನೆಲೆಯಲ್ಲಿಯೆ ಚಿತ್ರಿಸುತ್ತಾ ಹೋಗುತ್ತಾರೆ. ಬದುಕಿನ ವಿವಿಧ ಆಯಾಮಗಳನ್ನು ಸಂಕೀರ್ಣ ರೂಪದಲ್ಲಿ ದಾಖಲಿಸುವಾಗ ಹೆಣ್ಣಿನ ದೃಷ್ಟಿಕೋನವಿದೆ. ಹೆಣ್ಣು ಕೇಂದ್ರ ಪ್ರಜ್ಞೆಯಲ್ಲಿದ್ದಾಳೆ. ಸಾಂಪ್ರದಾಯಿಕ ಚೌಕಟ್ಟಿನಲ್ಲಿ ಬದುಕುತ್ತಿರುವ ಹೆಣ್ಣಿನ ಬದುಕು–ಬವಣೆ; ಹಿಂಸೆ–ಕ್ರೌರ್ಯ; ಸಂಭ್ರಮ–ಸತ್ಯಗಳನ್ನು ಪ್ರಾದೇಶಿಕ ನೆಲೆಗಟ್ಟಿನಲ್ಲಿ ಕಟ್ಟಿಕೊಡುತ್ತಾರೆ. ಗಂಡಸರು ಊಹಿಸಲು ಸಾಧ್ಯವಾಗದ ಹೆಣ್ಣಿನ ಬದುಕಿನ ಒಳಗುಟ್ಟುಗಳನ್ನು ವೈದೇಹಿಯವರು ಸೆರೆ ಹಿಡಿಯುತ್ತಾರೆ. ಕುಟುಂಬ–ದಾಂಪತ್ಯ–ಮದುವೆ ಮುಂತಾದ ಸಂಸ್ಥೆಗಳಲ್ಲಿ ಸ್ತ್ರೀಯರ ಪಾಲುಗೊಳ್ಳುವಿಕೆಯನ್ನು, ವಿಭಿನ್ನ ದೃಷ್ಟಿಕೋನಗಳಿಂದ ಪರಿಚಯಿಸುತ್ತಾರೆ. ಬಂಡಾಯ–ಶೋಷಣೆಯ ಘೋಷಿತ ಕೂಗುಗಳಿಗೆ ಬದಲಾಗಿ, ತಣ್ಣನೆಯ ದನಿಯಲ್ಲಿ ಅವರು ಅನುಭವಿಸುತ್ತಿರುವ ನೋವು–ಸಂಕಟಗಳನ್ನು, ಅವಮಾನದ ಎಳೆಗಳನ್ನು ಬಯಲಿಗೆಳೆಯುತ್ತಿರುವುದು ಸೂಕ್ಷ್ಮವಾಗಿ ಗೋಚರಿಸುತ್ತದೆ.

ವೈದೇಹಿಯವರ ಕತೆಗಳಲ್ಲಿ ವಾಸ್ತವ ಸಂಗತಿಗಳನ್ನು ಗ್ರಹಿಸುವಾಗ ಕೆಲವು ಅಂಶಗಳನ್ನು ಗಮನದಲ್ಲಿಡಬೇಕಾಗುತ್ತದೆ. ಸಾಂಪ್ರದಾಯಿಕ ವ್ಯವಸ್ಥೆಯ ಮಧ್ಯೆ ತನ್ನದೇ ಆದ ಅಸ್ತಿತ್ವವನ್ನು ಶೋಧಿಸುವ, ಸಶಕ್ತ ಬದುಕಿನ ಕಟ್ಟುವಿಕೆಯ ಕಾರ್ಯದಲ್ಲಿ ನಿರತರಾಗಿರುವ ಹೆಣ್ಣು ಲೋಕವನ್ನು ಅರಿಯುತ್ತಾ ಹೋಗಬೇಕು. ಹೆಣ್ಣಿನ ಅನಿಸಿಕೆ ಅಭಿಪ್ರಾಯ, ಆಲೋಚನೆಗಳನ್ನು ಮನ್ನಿಸದೆ ಮುನ್ನಡೆಯುತ್ತಿರುವ ವ್ಯವಸ್ಥೆಯಲ್ಲಿ ಮೌನ, ಸ್ವಗತಗಳ ರೂಪದಲ್ಲಿ ತೋರುವ ಆಸ್ಫೋಟನಕಾರಿ ಪ್ರತಿಕ್ರಿಯೆಗಳಿವೆ. ಭಾವಪ್ರಜ್ಞೆಯ ಮೂಲಕ, ಭವಿಷ್ಯದ ಬದುಕಿನ ಬಯಕೆಗಳನ್ನು, ಕನಸುಗಳನ್ನು ಹೆಣೆಯುವ ಸಾಮಾಜಿಕ ವಾಸ್ತವವನ್ನು ಸೂಚ್ಯವಾಗಿ ಗ್ರಹಿಸುತ್ತಾ ಸಾಗಬಹುದಾಗಿದೆ.

ಚಿಕ್ಕ ಮಗುವಿನ ಪ್ರಜ್ಞೆಯಲ್ಲಿ ನಿರೂಪಿತವಾಗುವ ದೊಡ್ಡವರ ಲೋಕ; ತರುಣಿಯರು ಅನುಭವಿಸುವ ದ್ವಂದ್ವ ಸ್ಥಿತಿಗಳು, ತಾಕಲಾಟಗಳು; ಕೌಟುಂಬಿಕ ಬದುಕಿನಾಚೆಯ ಜಗತ್ತಿಗೆ ತೆರೆದುಕೊಳ್ಳಲು ಇಚ್ಛಿಸುವ ಗೃಹಿಣಿಯರ ಮನೋಧರ್ಮ; ಹೊರನೋಟದ ಸುಖ ದಾಂಪತ್ಯದ ಒಳಗಿರುವ ಬಿರುಕುಗಳನ್ನು ವಿಶ್ಲೇಷಿಸುವ ಗೃಹಿಣಿ ಪ್ರಜ್ಞೆಯ ನಿರೂಪಣೆ; ವೃದ್ಧಾಪ್ಯ–ಸಾವಿನ ಕ್ಷಣಗಳನ್ನು ಎದುರಿಸುವವರ ಬದುಕಿನ ಅನುಭವ ಪ್ರಜ್ಞೆಯನ್ನು ಕತೆಗಳು ನಿರೂಪಿಸುತ್ತವೆ.

ವೈದೇಹಿಯವರ ಕತೆಗಳನ್ನು ಓದುತ್ತಾ ಹೋದಂತೆ, ಕತೆಯ ಬಂಧ ಕಿರಿದಾದರೂ ಕತೆಗಳ ಮೂಲಕ ತೋರುವ ಬದುಕಿನ ವಿಸ್ತೃತ ದರ್ಶನ ಹಿರಿದಾದುದು. 'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ', 'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು', 'ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು' ಮುಂತಾದ ಕತೆಗಳು ಒಂದು ಸಮುದಾಯದ ಸಂಸ್ಕೃತಿಯಲ್ಲಾಗುವ ಪಲ್ಲಟವನ್ನು ಸೂಚಿಸುತ್ತವೆ. ಜಾತಿಯ ಶ್ರೇಣೀಕರಣ, ಸಾಮಾಜಿಕ ಅಂತಸ್ತು ವರ್ಗಗಳ ಮಧ್ಯೆ ಇರುವ ಅಂತರ ಈ ಕತೆಗಳ ಮೂಲಕ ಗೋಚರಿಸುತ್ತಾ ಹೋಗುತ್ತವೆ. ಮದುವೆಯ ಪ್ರಸ್ತಾಪ, ಮದುವೆಯ ತಯಾರಿ, ಗೃಹಪ್ರವೇಶ, ಬಸಿರು–ಬಾಣಂತನ, ಸಾವು ಸೂತಕದಂತಹ ಘಟನೆಗಳು ಮರುಕಳಿಸುತ್ತವೆ. ಮದುವೆಯಂತಹ ಆಚರಣೆಯಲ್ಲಿ ವೈದೇಹಿಯವರಿಗೆ ತೀವ್ರ ಆಸಕ್ತಿ. ಎಲ್ಲ ಬಗೆಯ ವಯಸ್ಸು–ಮನೋಭಾವದವರನ್ನು ಮುಖಾಮುಖಿಯಾಗಿಸಲು ಮದುವೆ ಮುಹೂರ್ತಗಳು ಒಂದು ರೀತಿಯ ಸಾರ್ವತ್ರಿಕ ವೇದಿಕೆಗಳಾಗಿವೆ ಎಂಬುದನ್ನವರು ಬಲ್ಲರು. ಪರಸ್ಪರ ಕುಶಲೋಪರಿ ವಿಚಾರಿಸುವ, ಕಷ್ಟ–ಸುಖಗಳನ್ನು ಹಂಚಿಕೊಳ್ಳುವ, ಲೋಕ ರೂಢಿಯ ಹೊಸ ಸಂಬಂಧಗಳು ಕೂಡಿ ಬರಲು ಮದುವೆಮನೆ ಕಾರಣವಾಗಿದೆ. ಮದುವೆ ಮತ್ತಿತರ ಆಚರಣೆಗಳ ಮೂಲಕ ಸಾಂಸ್ಕೃತಿಕ ಸ್ಥಿತ್ಯಂತರವನ್ನು ವೈದೇಹಿಯವರು ಸಮರ್ಥವಾಗಿ ಕಟ್ಟಿಕೊಡುತ್ತಾರೆ. 'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ" ಕತೆಯಲ್ಲಿ ಹಳೆಯ ಕಾಲದ ಅಜ್ಜಿಯರಿದ್ದಾರೆ, ವಿಧವೆಯರು, ಗೃಹಿಣಿಯರು, ಹೊಸ ತಲೆಮಾರಿನ ತರುಣಿಯರು ಮದುವೆ ಸಂದರ್ಭದಲ್ಲಿ ನಡೆಯುವ ಘಟನೆಗಳಿಗೆ ಮುಖಾಮುಖಿಯಾಗಿದ್ದಾರೆ. ವಾಗತ್ತೆ, ಮುತ್ತತ್ತೆ, ಕಾಟಜ್ಜಿ, ಹೆಬ್ಬಾಗಿಲಜ್ಜಿ, ಸರಸಜ್ಜಿಯರ ಸಂಭಾಷಣೆಯಲ್ಲಿ, ವಿಧವೆಯರು ವಸ್ತುವಾಗಿದ್ದಾರೆ. ವಿಧವೆಯರು ಕೇಶಮುಂಡನ ಮಾಡಿಸಿಕೊಳ್ಳದಿರುವ ಬಗ್ಗೆ, 'ಜಾರಿದವರ' ಬಗ್ಗೆ, ಬಸುರಿಯಾದವರ ಬಗ್ಗೆ ವಿಶ್ಲೇಷಣೆಯಾಗುತ್ತದೆ. ತೋಳಿಲ್ಲದ ರವಿಕೆ ಧರಿಸಿದ ರಾಮರಾಯರ ಮಗಳನ್ನ ನೋಡಿ 'ನರಕ್ ನರಕ್' ಎನಿಸಿದರೆ, ತಂದೆಯ ಮಾತಿಗೆ ಎದುರಾಡದ ವಾರಿಜ ಈಗಿನವರ ಹಾಗೆ 'ಧಿಮಿಧಿಮಿ ಇಲ್ಲ' ಎಂಬ ಕಾರಣಕ್ಕೆ ಮೆಚ್ಚುಗೆಗೆ ಪಾತ್ರವಾಗಿದ್ದಾಳೆ.

ಹಳೆ ಕಾಲದವರ ಅಭಿಪ್ರಾಯಗಳನ್ನು ಪ್ರತಿಭಟಿಸಲು, ತಿರಸ್ಕರಿಸಲು ಧೈರ್ಯ ಸಾಲದ ಹೊಸ ತಲೆಮಾರಿನ ಲತ, ಸಮಾಜಶಾಸ್ತ್ರ ಓದಿಕೊಂಡ ತಮ್ಮಣ್ಣಯ್ಯನ ತಂಗಿ ಮಗಳು ಸ್ವಗತಗಳಲ್ಲಿ ಮಾತಾಡಿಕೊಳ್ಳುತ್ತಾರೆ. "ಅಲ್ಲ ಹುಡುಗ ಒಪ್ಪಿದ ಮೇಲೆ, ಹುಡುಗಿಗೂ ಒಪ್ಪಿಗೆಯೇ ಎಂದು ವಿಚಾರಿಸಿ, ಆಕೆ ಒಪ್ಪಿದಳೆಂದಾದರೆ; ಸ್ವಸ್ಥ ಮದುವೆ ಮಾಡುವುದನ್ನು ಬಿಟ್ಟು, ಭೀಮರಾಯರಿಗೆ ಮತ್ತು ಆ ವಾಸುದೇವರಾಯರ ಮಗನಿಗೆ ಜಾತಕದ ಸುದ್ದಿಯೇಕೆ?" ('ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ', ಅಲೆಗಳಲ್ಲಿ

ಅಂತರಂಗ ಪುಟ-೩೬೫) ಎಂಬ ಪ್ರಶ್ನೆಯನ್ನು ಎತ್ತಲಾಗಿದೆ. ಮದುವೆಯಲ್ಲಿ ಉತ್ತಮ ಉಡುಗೊರೆಗಳ ಗೌರವಕ್ಕೆ ಪಾತ್ರವಾಗುವ ವರ್ಗಗಳ ಹಿನ್ನೆಲೆಯಲ್ಲಿ ಅವರ ಅಂತಸ್ತು ಕಾರಣವಾಗಿರುವ ಬಗೆಯನ್ನು ಕತೆ ವಿಶ್ಲೇಷಿಸಿದೆ.

'ಒಂದು ಕಳ್ಳ ವೃತ್ತಾಂತ' ಕತೆಯಲ್ಲಿ ಯಜ್ಞೇಶನ ಮದುವೆಯ ಆರತಕ್ಷತೆಯ ಚಪ್ಪರದಲ್ಲಿ ಮಳೆ ಬಂದಾಗ ಸೇರಿದ ಮಹಿಳೆಯರ "ಜರತಾರಿ ಸೀರೆಗಳ ಮೆರವಣಿಗೆಯೇ ಒಳಗೆ ಹೊರಟಿತು. ಆಗ ನರಸಿಂಹ ಅವತಾರ ಹೀಗೆಂದಿತು. ದೊಡ್ಡಂಚಿನ ದೊಡ್ಡ ಕ್ರಯದ ಸೀರೆಯರೆಲ್ಲ ಮೊದಲು ಒಳಗೆ ಹೋಗಲೀ.....! ಈ ಮಾತು ಕೇಳಿ ಕಡ್ಡಿಯಂಚಿನ ಕಡಿಮೆ ಕ್ರಯದ ಸೀರೆಯರು ಗಲಿಬಿಲಿಯಿಂದ ತಂತಾನೆ ಹಿಂದೆ ಸರಿದು ಬಿಟ್ಟರು. ಮುಖದಲ್ಲಿ ಮುಜುಗರದ ಮೋಡ ಕವಿಸಿಕೊಂಡು, ನರಸಿಂಹರಾಯನಿಗೆ ಎದುರಾಡಲು ಹೋಗುವ ಧೈರ್ಯ ಯಾರಿಗಿದೆ? ಅಂದಿನ ಮಟ್ಟಿಗೆ ಹಾಗೆಲ್ಲ ಎದುರಾಡಿ ಗಲಭೆ ಎಬ್ಬಿಸುವುದು ಆ ಹೆಂಗಸರ ಗಂಡಂದಿರಿಗೂ ಮರ್ಯಾದೆಗೆ ಕಡಿಮೆಯೆ" (ಅದೇ, ಪುಟ-೩೮೦) ಎಂಬ ಚಿತ್ರಣ ಸಾಮಾಜಿಕ ಅಂತಸ್ತಿನ ಶ್ರೇಣೀಕರಣವನ್ನು ನರಸಿಂಹನಂತಹವರು ಹೇಗೆ ವಿಭಾಗಿಸುತ್ತಾರೆಂಬ ಸೂಕ್ಷ್ಮತೆಯನ್ನು ಮುಂದಿಡಲಾಗಿದೆ.

ಹಳೆಯ ತಲೆಮಾರು ಮತ್ತು ಹೊಸ ಪೀಳಿಗೆಗಳ ನಡುವಿನ ಸಂಘರ್ಷವನ್ನು 'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು' ಕತೆ ನಿರೂಪಿಸುತ್ತದೆ. ಮನೆಯ ಒಳಗಿನ ಹೆಣ್ಣಿನ ಬದುಕು, ಹೊರ ಜಗತ್ತಿಗೆ ಕಾಲಿರಿಸಿದ ಹೆಣ್ಣು ಮಕ್ಕಳಿಗಿರುವ ಭಿನ್ನತೆಗಳನ್ನು ಪರಿಶೀಲಿಸಲಾಗಿದೆ. ಗಂಡನಿಗೆ ಪ್ರತಿಯಾಡಿದ ಸಣ್ಣ ಮಾತಿಗೆ, ಆ 'ಪುರುಷ ಮೃಗ' ಆಕೆಯನ್ನು ಎತ್ತಿ ಬಾವಿಗೆ ಹಾಕಿದ ತನ್ನ ಅಬ್ಬೆಯ ಪ್ರಸಂಗವನ್ನು ಪುಟ್ಟಮ್ಮತ್ತೆ ನೆನಪಿಸಿಕೊಳ್ಳುತ್ತಾಳೆ. ಪುಟ್ಟಮ್ಮತ್ತೆ ನಲಿವುಗಳಿಗಿಂತ ನೋವನ್ನೇ ಉಂಡು ಬದುಕಿದಾಕೆ. ಸಾಕಿದ ಅಜ್ಜಿ, ಗಂಡ, ಮಗಳನ್ನು ಕಳೆದುಕೊಂಡ ಪುಟ್ಟಮ್ಮತ್ತೆ, ಮೊಮ್ಮಗಳು ಕಮಲಾವತಿಗಾಗಿ ಜೀವ ಹಿಡಿದಿದ್ದಾಳೆ. ಅವರಿವರ ಮನೆಯಲ್ಲಿ ಗೇಯುತ್ತಿರುವ ಅಜ್ಜಿಯ ಕಷ್ಟವನ್ನು ಬಲ್ಲ ಕಮಲಾವತಿ, ಹಿಂದಿನವರಂತೆ ಬದುಕಲು ಇಷ್ಟವಿಲ್ಲದವಳು. "ಸಾಯುವವರೆಗೂ ರಂಗಪ್ಪಯ್ಯನ ಮನೆ ಅರೆಯುವ ಕಲ್ಲಿನ ಪೀಠ ಆತಿರ್‍ಲಿಲ್ಲೆ, ನೆನಪಿಟ್ಕೋ" (ಅದೇ, ಪುಟ-೨೯೫) ಎಂದು ನೇರವಾಗಿ ಹೇಳುತ್ತಾಳೆ. ಹಣ ಸಂಪಾದಿಸಿ, ಬದುಕನ್ನು ಹಸನಾಗಿಸಲು, ಊರಿಂದ ದೂರವಿರುವ ರೆಡಿಮೇಡ್ ಬಟ್ಟೆ ಹೊಲೆಯುವ ಅಂಗಡಿಗೆ ಸೇರುತ್ತಾಳೆ. ಹೊಸ ಉದ್ಯೋಗದ ಅವಕಾಶಗಳು ಹೆಣ್ಣಿನ ಮನಃಸ್ಥಿತಿಯನ್ನು, ಬದಲಾದ ಮನೋಭಾವನೆಗಳನ್ನು ಕತೆ ಮನಗಾಣಿಸುತ್ತಾ ಹೋಗುತ್ತದೆ. ದುಡಿಮೆಗೆ ತಕ್ಕ ಪ್ರತಿಫಲ ಸಿಗದ ಕಾರಣಕ್ಕೆ ಕಮಲಾವತಿಗೆ ಬೇಸರವಿದೆ. ತಾನು ನೋಡಲು ಚೆನ್ನಾಗಿದ್ದರೂ, ಬಡತನ-ಅಂತಸ್ತಿನ ಕಾರಣದಿಂದಾಗಿ ಮದುವೆಗೆ ಗಂಡುಗಳು ಒಪ್ಪದಿರುವ ಕಟುವಾಸ್ತವ ಆಕೆಯನ್ನು ಘಾಸಿಗೊಳಿಸಿದೆ. ಆಕೆಯ ನಿರಾಶೆ-ಬಾವಿಯಿಂದ ನೀರು ಸೇದಿ ಗಿಡಗಳಿಗೆ ಹೊಯ್ಯುವುದು, ರಾಶಿ ಬಟ್ಟೆ ಒಗೆಯುವುದು ಮುಂತಾದ ಕ್ರಿಯೆಯಲ್ಲಿ ಪ್ರಕಟಗೊಳ್ಳುತ್ತದೆ.

ಆಧುನಿಕ ತಂತ್ರಜ್ಞಾನದ ಫಲವಾಗಿ ಮೂಡಿಬಂದ 'ಸಿನಿಮಾ' ಮಾಧ್ಯಮ ಮೂಲೆಯಲ್ಲಿರುವ ಒಂದೂರಿನ ಸಮುದಾಯದ ಮೇಲೆ ಬೀರಿದ ಪರಿಣಾಮವನ್ನು 'ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು' ಕತೆ ಬಿಂಬಿಸಿದೆ. "ಮುತ್ತಜ್ಜನಂತೆ ದೊಡ್ಡಕೆ ಹರಡಿಕೊಂಡು ನಿಂತಿದ್ದ ಧೂಪದ ಮರಕ್ಕೆ ರಪರಪ್ಪನೆ ಪೆಟ್ಟು" (ಅದೇ, ಪುಟ-೩೧೯) ಬಿದ್ದು, ಆ ಸ್ಥಳದಲ್ಲಿ ಎದ್ದ ಗುಲಾಬಿ ಟಾಕೀಸು, ಆ ಊರಿನ ಜನ ಸಮುದಾಯವನ್ನು 'ಆಧುನಿಕ' ಬದುಕಿಗೆ ತಿರುಗಿಸುವ ವಿಶಿಷ್ಟ ಕತೆಯಾಗಿದೆ. ಕತೆಯ ವಸ್ತು, ಭಾರತ  ಸ್ವಾತಂತ್ರ್ಯ ಪಡೆದ ಆಚೆ-ಈಚೆಯ ಕಾಲದ್ದು. ಮನೆಯ ನಾಲ್ಕು ಗೋಡೆಯ ಮಧ್ಯೆ ನರಳುತ್ತಿದ್ದ ಹೆಣ್ಣು ಮಕ್ಕಳು, ಸಿನಿಮಾ ಕಾರಣದಿಂದ ರಸ್ತೆಗಿಳಿಯುವ ಸಣ್ಣ ಸ್ವಾತಂತ್ರ್ಯವನ್ನು ವಹಿಸಲು ಮುಂದಾಗಿದ್ದಾರೆ. 'ಆಧುನಿಕ' ಬದುಕಿನ ಬಾಗಿಲನ್ನು ತೆರೆಯುವುದಕ್ಕೆ ಆ ಊರಿಗೊಬ್ಬಳೇ ಸೂಲಗಿತ್ತಿಯಾಗಿದ್ದ ಲಿಲ್ಲೀಬಾಯಿ ಕಾರಣಕರ್ತಳಾಗಿದ್ದಾಳೆ. ಹೊಸ ಟಾಕೀಸಿನ ಗೇಟ್ ಕೀಪರ್ ಆಗುವ ಮೂಲಕ, ಜಾತಿ-ವರ್ಗಬೇಧ ಎಣಿಸದೆ ಹೆಂಗಸರನ್ನು ಟಾಕೀಸಿನೊಳಗೆ ಒಂದುಗೂಡಿಸುತ್ತಿದ್ದಾಳೆ.

'ಸಿನಿಮಾ' ಮಾಧ್ಯಮದ ಮೂಲಕ ಪ್ರವೇಶಿಸಿದ ಆಧುನಿಕತೆ ಯಾವ ಯಾವ ಕ್ಷೇತ್ರದಲ್ಲಿ ತನ್ನ ಪ್ರಭಾವ ಬೀರಿತು ಎಂಬುದನ್ನು ಕತೆ ವಿವೇಚಿಸುತ್ತದೆ. ಜಾಗತೀಕರಣದ ಪ್ರಭಾವ ಹಳ್ಳಿಯ ಮಾರುಕಟ್ಟೆಗೆ ಪ್ರವೇಶವಾಗಿದೆ. ಪೌಡರು, ಕ್ಲಿಪ್ಪು ಮುಂತಾದ ಅಲಂಕಾರಿಕ ಪ್ರಸಾದನಗಳಿಗೆ ಬೇಡಿಕೆ ಹೆಚ್ಚಾಗಿದೆ. ಫ್ಯಾಶನ್ನಿನ ದಿರಿಸುಗಳನ್ನು ಹೊಲಿಯುವ ದರ್ಜಿಗೆ ಡಿಮಾಂಡು ಬಂದಿದೆ. ಮನೆಯಲ್ಲಿ ಸದಾ ದುಡಿಯುತ್ತಿರುವ ಹೆಂಗಸರಿಗೆ ಲಿಲ್ಲಿಬಾಯಿ ಹೊತ್ತು ತರುವ ಸಿನಿಮಾ ಪೆಟ್ಟಿಗೆಯ ಸುತ್ತಲಿರುವ ಸುದ್ದಿಗಳಿಂದ ತುಸು ವಿರಾಮ ಮತ್ತು ಮನೋರಂಜನೆ ದೊರಕಿದೆ. ಲಿಲ್ಲೀಬಾಯಿ ಇರುವ ಕಾರಣಕ್ಕೆ ಗಂಡುಮಕ್ಕಳ ಸಹಾಯವಿಲ್ಲದೆ, ಹೆಣ್ಣು ಮಕ್ಕಳು ರಸ್ತೆಗಿಳಿಯುವ ಧೈರ್ಯ ಮಾಡಿದ್ದಾರೆ. ಮುಖ್ಯವಾಗಿ ಅಸ್ತಿತ್ವದ ಪ್ರಶ್ನೆ ಎದುರಾಗುತ್ತದೆ. ಬೇಕಾದಾಗ ಸಿನಿಮಾ ನೋಡಲು ತಮ್ಮಲ್ಲಿ ಕಾಸಿಲ್ಲದಿರುವ ಬಗ್ಗೆ ಖೇದ-ವಿಷಾದ ಆವರಿಸಿ, ಗಂಡಂದಿರ ಎದುರಿಗೆ ಎದುರು ಮಾತಾಡುವ, ಅವರಿಂದ ದುಡ್ಡುಗಳಿಸುವ ಜಾಣತನವನ್ನು ವಹಿಸುತ್ತಾರೆ.

ಮದುವೆ ಸಮಾರಂಭಗಳಲ್ಲಿ ಎದ್ದು ಕಾಣುವ ಶ್ರೇಣೀಕರಣದ ವ್ಯವಸ್ಥೆ, ನಿತ್ಯದ ಬದುಕಿನಲ್ಲಿ ಹಾಸುಹೊಕ್ಕಾಗಿರುವುದನ್ನು 'ಅಲ್ಲಲ್ಲಿನ ಲೋಕದವರು' ಮತ್ತು 'ಬಂದು ಹೋಗುವವರು' ಮುಂತಾದ ಕತೆಗಳು ದಾಖಲಿಸುತ್ತವೆ. 'ಅಲ್ಲಲ್ಲಿನ ಲೋಕದವರು' ಕತೆಯಲ್ಲಿ 'ಗಂಡ್‌ಸ್ರನ್ ನನ್ನೆದ್ರ್ ನಿವಾಳ್ಸಿ' ಎನ್ನುವ ಮಂಜಿ, ತಾನು ಕೆಲಸ ಮಾಡುತ್ತಿರುವ ಬ್ರಾಹ್ಮಣರಂತೆ ಇರಲು ಇಷ್ಟಪಡುವವಳು. ಬ್ರಾಹ್ಮಣ ಜಾತಿಯ ಮಾಂಕಾಳಿಯಮ್ಮ ಕುಟುಂಬದ ನಿರ್ವಹಣೆಗಾಗಿ ಶೂದ್ರರ ಹೋಟೆಲಿನಲ್ಲಿ ಉದ್ದು ಅರೆಯುವ ಕೆಲಸಕ್ಕೆ ಹೋಗುವ ಸಿದ್ಧತೆಯಲ್ಲಿದ್ದಾಳೆ.

ಬ್ರಾಹ್ಮಣ ಜಾತಿಯನ್ನು, ಅದರ ಎಲ್ಲ ಸಂಪ್ರದಾಯವನ್ನು ಚಾಚೂ ತಪ್ಪದೆ ಆಚರಿಸುತ್ತಿರುವ ವಿಧವೆ ಗುಂಡಕ್ಕ "ಮಂಜಿ ಗುಲಗಂಜಿ, ನಿಂಗೆ ಬ್ರಾಂಬ್ರ ಜಾತಿಯಂತಕ್ಕಾ? ಒಂದು ಮೀನಾ, ಕೋಳಿಯಾ, ಮಾಂಸವಾ? ಬರೀ ಚಪ್ಪ ಜಾತಿ. ಹೌದನಾ, ಈಗ ನೀನ್ ಯಂತಂತಲ್ಲ ಆದೇ! ಬಾಂಬ್ರ ಜಾತಿಯೊಳ್ಗ್

ಹುಟ್ಕಂಡಿದ್ರೆ ನಿನ್ನ ಬದುಕಾಕೆ ಬಿಡ್‌ತಿದ್ವಾ? ಉಸಿರಿದ್ದ ಹಾಂಗೇ ಸ್ಯಾಸ್ತಿದ್ಯೋ" (ಅದೇ, ಪುಟ-೪೦೫) ಎಂಬ ಮಾತು ಬ್ರಾಹ್ಮಣ ಸಮುದಾಯದ ಸಂಪ್ರದಾಯಗಳನ್ನು ಟೀಕಿಸುತ್ತದೆ. ಬಡತನ-ಸಿರಿತನದ ನಡುವೆ ಉಂಟಾಗುವ ಅಸಮಾನತೆಯ ನೆಲೆಗಳು ಒಂದೇ ಕುಟುಂಬದ ಸದಸ್ಯರಲ್ಲಾಗುವ ಪರಿಣಾಮವನ್ನು 'ಹಕ್ಕಿಲ್ಲದವರು' ಕತೆಯಲ್ಲಿ ಕಾಣಬಹುದು. ವೈದೇಹಿಯವರ ಹೆಚ್ಚು ಕತೆಗಳಲ್ಲಿ ಕುಟುಂಬದ ನಿರ್ವಹಣೆಗಾಗಿ, ಮುಂಜಾನೆಯಿಂದ ಸಂಜೆಯವರೆಗೆ ಗೇಯುತ್ತಲೇ ಇರುವ ಹೆಣ್ಣುಗಳು ಕಣ್ಮುಂದೆ ನಿಲ್ಲುತ್ತಾರೆ. ಪ್ರಸ್ತುತ ಕತೆಯಲ್ಲಿ ಸಿರಿ, ಬೀಳು ಬೀಳುತ್ತಿದ್ದ ತೋಟವನ್ನು ಹಸನು ಮಾಡಿ, ಬೆಳೆ ತೆಗೆಯಲು ಹಗಲಿರುಳು ಶ್ರಮಿಸುತ್ತಿದ್ದಾಳೆ. ಕಣ್ಣು ಕಾಣದ ತಾಯಿಯನ್ನು; ಮಾನಸಿಕ ಅಸ್ವಾಸ್ಥ್ಯದ ತಂಗಿಯನ್ನು ಪೋಷಿಸುತ್ತಿರುವ ಸಿರಿಗೆ ಅಣ್ಣನ ಆಸ್ತಿಯಲ್ಲಿ ಹಕ್ಕಿಲ್ಲದೆ ಹೋಗುತ್ತದೆ. ಸಿರಿಯ ಬಡತನಕ್ಕೆ ಎದುರಾಗಿ ತಾಯಿಯ ತೌರಿನ ಬಳಗದ ಶ್ರೀಮಂತ ಕುಟುಂಬದ ದೌಲತ್ತುಗಳನ್ನು ಮುಖಾಮುಖಿ ಮಾಡಲಾಗಿದೆ. ಬಡತನದ ಬೇಗೆಯಲ್ಲಿರುವ ದೊಡಕನ ಸಹಾಯಕ್ಕೆ ನಿಲ್ಲದ ಪದ್ದ ಮಾವಯ್ಯ, ತಮ್ಮ ಸಿರಿವಂತಿಕೆಯನ್ನು ಮೆರೆಸುವ ಚಪಲವುಳ್ಳವರು. ಇವರಿಗೆ ಈ ಹಕ್ಕನ್ನು ಕೊಟ್ಟವರು ಯಾರು ಎಂಬ ಪ್ರಶ್ನೆ ಓದುಗರನ್ನು ಕಾಡತೊಡಗುತ್ತದೆ. 'ಮದುವೆ' ಎಂಬ ಸಂಸ್ಥೆಯನ್ನು ಕುಟುಂಬದ ಸದಸ್ಯರು ಪರಿಭಾವಿಸುವ ಬಗೆಯನ್ನು 'ಚಿಪ್ಪು', 'ಬೀಳು-ಬೇರು', 'ಅಂತರಂಗದ ಪುಟಗಳು', 'ಸೌಗಂಧಿಯ ಸ್ವಗತ', 'ಚಂದಲೆ' ಮುಂತಾದ ಕತೆಗಳು ವಿಶ್ಲೇಷಿಸುತ್ತವೆ. ವಯಸ್ಸಿಗೆ ಬಂದ ಹುಡುಗಿಯನ್ನು ಮದುವೆ ಮಾಡಿ ಗಂಡನ ಮನೆಗೆ ಕಳಿಸಿ ಕೈ ತೊಳೆದುಕೊಳ್ಳುವ ಪೋಷಕ ವರ್ಗ ಎದುರಾಗುತ್ತದೆ. ಇಂತಹ ಸಾಂಪ್ರದಾಯಿಕ ವಾತಾವರಣದಲ್ಲಿ ಸಿಲುಕಿ, ಹೊರ ಬರಲಾಗದ ಸ್ಥಿತಿಯಲ್ಲಿರುವ ತರುಣಿಯರ ಆಲೋಚನಾ ಲಹರಿಗಳಿವೆ. 'ಚಿಪ್ಪು', 'ಬೀಳು-ಬೇರು' ಕತೆಗಳಲ್ಲಿರುವ ಯಶೋಧಾ, ಇಂದಿಯ ಪ್ರತಿಕ್ರಿಯೆಗಳು ಮನೆಯವರ ಎದುರು ಪ್ರಕಟಗೊಳ್ಳುವುದಿಲ್ಲ. ಬದಲಾಗಿ ಅವರ ಭಾವಪ್ರಜ್ಞೆಯಲ್ಲಿ, ಸ್ವಗತದ ರೂಪದಲ್ಲಿ ಪ್ರತಿಕ್ರಿಯೆಗೊಳ್ಳುತ್ತವೆ. ತಮ್ಮ ಅಂತಸ್ತಿಗೆ ತಕ್ಕ ಅಳಿಯನಾಗುವವನ ನಿರೀಕ್ಷೆಯಲ್ಲಿರುವ ತಂದೆ, ಮಗಳ ಅಭಿಪ್ರಾಯಕ್ಕೆ ಎಡೆ ಕೊಡುವುದಿಲ್ಲ. 'ಚಿಪ್ಪು' ಕತೆ ಯಶೀಯ ಪ್ರಜ್ಞೆಯಲ್ಲಿ ಸಾಗುತ್ತದೆ. ಭವಿಷ್ಯದ ಬದುಕನ್ನು ಕಳೆಯಬೇಕಾಗಿದ್ದ ಸಂಗಾತಿಯ ಆಯ್ಕೆಯಲ್ಲಿ ತನ್ನ ಪಾತ್ರವನ್ನು ಕಡೆಗಣಿಸುವುದರ ಬಗ್ಗೆ ಅಸಮಾಧಾನವಿದೆ. ತನ್ನ ಕುರಿತು ರಂಗಜ್ಜಿ ರೂಪಿಸುವ ವ್ಯಕ್ತಿತ್ವದಲ್ಲಿ ಹಿರಿಯರು ಹೇಳಿದಂತೆ ಕೇಳುವ 'ಒಳ್ಳೆಯ ಹುಡುಗಿ'ಯಾಗಿರುವ ಬಗ್ಗೆ ಆಕೆಗೆ ಕೋಪವಿದೆ. ಆದರೆ ಆ ನಂಬಿಕೆಗಳನ್ನು ಧಿಕ್ಕರಿಸುವ ಧೈರ್ಯವಿಲ್ಲ. ದಾಂಪತ್ಯದ ಯಾಂತ್ರಿಕತೆಯನ್ನು ಒಡೆದು ಹೊಸ ಬದುಕನ್ನು ಕಾಣುವ ಕನಸು ಮಾತ್ರವಿದೆ. ಕತೆಗಾರರು ಸಾಂಪ್ರದಾಯಿಕ ವಿವಾಹದಲ್ಲಿ ಹುಡುಗಿಯ ಅಭಿಪ್ರಾಯವನ್ನು ಕಡೆಗಣಿಸುವ ಸಂಗತಿಯನ್ನು ಯಶೀ ಪಾತ್ರದ ಮೂಲಕ ಪರಿಚಯಿಸಿದರೆ, ಉಷೆಯ ಮೂಲಕ ಪ್ರೇಮ ವಿವಾಹದ ತೊಡಕನ್ನು ಪ್ರಸ್ತಾಪಿಸಿದ್ದಾರೆ.

'ಮದುವೆ' ಎಂಬ ಸಂಸ್ಥೆಯ ಆಯ್ಕೆ ಮತ್ತು ನಿರಾಕರಣೆ ಬಗ್ಗೆ ಯಾವ ನಿಲುವನ್ನು ತೆಗೆದುಕೊಳ್ಳಲಾಗದ ದ್ವಂದ್ವ ಮನಃಸ್ಥಿತಿಯ ಯಶೀ ತನ್ನೊಳಗೆ ತಾನು ಮಂಥಿಸುತ್ತಾಳೆ. 'ಬೀಳು-ಬೇರು' ಕತೆಯಲ್ಲಿನ ಇಂದಿಗೆ ಆ ಅವಕಾಶವೂ ಇಲ್ಲ. ಆಕೆಯ ಮೌನ ಮತ್ತು ಕಣ್ಣೀರು ಪ್ರತಿಭಟನೆಯ

ಅಸ್ತ್ರವಾಗುತ್ತದೆ. ಇಂದಿಯ ತಂದೆಯ ಮೂಲಕ ಕತೆಯನ್ನು ನಿರೂಪಿಸಲಾಗಿದೆ. ಒಂದು ಎಮ್ಮೆಯನ್ನು ಕೊಳ್ಳಲು ಹಿಂದೆ-ಮುಂದೆ ವಿಚಾರಿಸಿ, ಹೆಂಡತಿ-ಮಕ್ಕಳೊಂದಿಗೆ ಸಮಾಲೋಚಿಸುವ ತಂದೆ, ಮಗಳು ಇಂದಿಯನ್ನು 'ಒಪ್ಪಿದವರಿಗೆ' ಕೊಟ್ಟು ಮನೆ ದಾಟಿಸುವ ಯೋಚನೆ ಮಾಡುತ್ತಾನೆ. ಎಮ್ಮೆಯನ್ನು ಕೊಳ್ಳುವಾಗ ಚಾಣಾಕ್ಷತೆ ತೋರುವ ತಂದೆ, ಮಗಳ ಮನಸ್ಸನ್ನು ಅರಿಯುವಲ್ಲಿ ವಿಫಲವಾಗಿದ್ದಾನೆ. ವಸ್ತುವಿನಂತೆ, ಪ್ರಾಣಿಯಂತೆ ತೋರಿಸಿಕೊಳ್ಳಲು ಇಷ್ಟವಿಲ್ಲದ ಇಂದಿ ಬಿಕ್ಕುವಿಕೆಯ ಮೂಲಕ, ದುರುಗುಟ್ಟಿ ನೋಡುವ ಮೂಲಕ ತನ್ನೊಳಗಿನ ಜ್ವಾಲಾಮುಖಿಯನ್ನು ಸ್ಫೋಟಿಸುತ್ತಾಳೆ.

ಮೇಲಿನ ಎರಡೂ ಕತೆಗಳಲ್ಲಿ ಬರುವ ತರುಣಿಯರು ಕೌಟುಂಬಿಕ ನೆಲೆಯ ಸಾಂಪ್ರದಾಯಬದ್ಧ ವಾತಾವರಣದಲ್ಲಿ ಸಿಲುಕಿರುವವರು. ಅದರಿಂದ ಹೊರಬರುವ ಕನಸುಗಳಿದ್ದರೂ ಸಾಕಾರಗೊಳಿಸಿಕೊಳ್ಳಲು ಅಸಹಾಯಕರು. 'ಅಂತರಂಗದ ಪುಟಗಳು' ಕತೆಯ ಅಚಲ ಭಿನ್ನ ವ್ಯಕ್ತಿತ್ವದವಳು. ಹುಡುಗ ಒಪ್ಪಿದರೂ ತನಗೆ ಒಪ್ಪಿಗೆಯಾಗಿಲ್ಲದಿರುವುದನ್ನು ಧೈರ್ಯವಾಗಿ ಹೇಳುತ್ತಾಳೆ. 'ಒರಗಿದರೆ ಸಾಕು, ಆಹ್! ಎನಿಸುವಂತಿರಬೇಕು' ಎಂಬ ಹಂಬಲವುಳ್ಳ ಅಚಲ ಪಾರ್ವತಿ ಈಶ್ವರನಿಗಾಗಿ ತಪಸ್ಸು ಮಾಡುವಂತೆ ಅವನಿಗಾಗಿ ಕಾಯುತ್ತಲೇ ಇದ್ದಾಳೆ. ಅಚಲಳ ಗೆಳತಿಯರಾದ ಸರಿತಾ, ವಿಜಯಾ, ಮಂಜು ಮುಂತಾದವರೆಲ್ಲ ಮದುವೆಯಾಗಿ ಮಕ್ಕಳನ್ನು ಪಡೆದು 'ದೊಡ್ಡ' ಹೆಂಗಸರಾಗಿದ್ದಾರೆ. ಜುಮ್ಮೆನಿಸುವ ಕ್ಷಣಕ್ಕಾಗಿ, ಘಟನೆಗಾಗಿ ಹಂಬಲಿಸಿದ ಅಚಲಗಳಿಗೆ "ಗಂಡನೊಟ್ಟಿಗೆ ಸೂಳೆಗಾರಿಕೆ ಮಾಡುತ್ತಿದ್ದೆ. ಇವನೊಟ್ಟಿಗೆ ಮಲಗಿದಾಗ ಬದುಕುತ್ತಿದ್ದೇನೆ ಎನಿಸಿತು" (ಅದೇ, ಪುಟ-೨೨೬) ಎನ್ನುವ ಮಂಜುವಿನ ನಿರ್ಧಾರ ತನಗೆ ಸೈ ಎನಿಸುತ್ತದೆ. ಮುಂದೆ ಅಂತಹ ಘಟನೆಯ ನೆನಪು ವೆಂಕಟನೊಂದಿಗೆ ನಡೆಯುತ್ತದೆ.

'ಸೌಗಂಧಿಯ ಸ್ವಗತಗಳು' ಕತೆಯಲ್ಲಿಯ ಸೌಗಂಧಿ ಉದ್ಯೋಗಸ್ಥಳಾಗಿದ್ದಾಳೆ. ಇನ್ನೂ ಮದುವೆಯಾಗದಿರುವ ಸೌಗಂಧಿಯನ್ನು ಹೆಜ್ಜೆ ಹೆಜ್ಜೆಗೂ ಕಾವಲು ಕಾಯುವ ತಂದೆಯ ಕೋಟೆಯಿಂದ ಬಿಡುಗಡೆ ಬಯಸಿ, ಬೇರೆ ಊರಿಗೆ ವರ್ಗ ಮಾಡಿಸಿಕೊಳ್ಳುತ್ತಾಳೆ. ತಾಳಿ 'ಬಿಗಿಸಿಕೊಳ್ಳದೆ' ಗಂಡು ಹೆಣ್ಣಿನ ಸಂಬಂಧದ ವಿಶಿಷ್ಟ ಅನುಭವಗಳಿಗಾಗಿ ಕಾತರಿಸುತ್ತಾಳೆ. ಆದರೆ ತಂದೆ-ತಾಯಿಯ 'ಕಾವಲು', ಬಾಡಿಗೆ ಮನೆಯೊಡತಿಯ ಸುಪರ್ದಿಯಲ್ಲಿಯೂ ಮುಂದುವರೆಯುತ್ತದೆ. ಆರ್ಥಿಕ ಸ್ವಾತಂತ್ರ್ಯ ಪಡೆದಿದ್ದರೂ ಹೆಣ್ಣು ಸಾಮಾಜಿಕ ಕಟ್ಟಳೆಗಳ ಮಧ್ಯೆ ಬಂಧಮುಕ್ತವಾಗಿಲ್ಲವೆಂಬುದನ್ನು ಕತೆಗಾರರು ಸಂಕೇತಿಸಿದ್ದಾರೆ. ನಿರ್ಬಂಧಗಳನ್ನು ಸೌಗಂಧಿ ಮುರಿಯಲು ಪ್ರಯತ್ನಿಸುವುದು, ಕನಸುಗಳಲ್ಲಿ, ಕನವರಿಕೆಗಳಲ್ಲಿ; ತನ್ನಲ್ಲೇ ತಾನು ಮಂಥಿಸುವ ಸ್ವಗತಗಳಲ್ಲಿ ಮಾತ್ರ. "ಮರ್ಯಾದಸ್ತ ಮನೆಯವಳು ತಾನು. ಮರ್ಯಾದೆ ಬಿಡುವ ತಾಕತ್ತಿಲ್ಲದವಳು. ಯಾರಾದರೂ ತೆಗೆಯ ಬೇಕಷ್ಟೆ. ತನಗೀಗ ಅನುಭವ ಬೇಕು. ಆವರಣದ ಕಾಪಟ್ಯ ಕಳೆಯಬೇಕು. ಅನಾವರಣಗೊಳ್ಳಬೇಕು – ಹೇಗೆಂದರೆ ಯಾರೂ ತನ್ನ ಬಗ್ಗೆ ಕೆಟ್ಟದೆಣಿಸದಂತೆ. ಆದರೆ 'ಹೋ...... ನೋಡಿ ನಿಮ್ಮೆದುರೇ ಬೀದಿಯಲ್ಲಿ ಸೌಗಂಧಿ ಎಂಬ ಹೆಣ್ಣೊಬ್ಬಳು ಹೋಗುತ್ತಿದ್ದಾಳೆ. ಕೂಡಿಕೊಳ್ಳುವ ತಾಕತ್ತುಂಟೇ ಯಾರಿಗಾದರೂ?' – ಎಂದು ಕೂಗಿ ಕೇಳುವಂತಿಲ್ಲವಲ್ಲ. ಕಾಶಿಯಂತಹ ಊರಿನಲ್ಲಿ ಕೂಡ ಘಾಟಿನಲ್ಲಿ ಹೆಣ್ಣಿನ ಮಾರಾಟ ಆಗಿರಬಹುದು.

ಆದರೆ ಹೆಣ್ಣಿನ ಮಾನಮಾತ್ರದ ಹರಾಜು, ಅವಳ ಅಪೇಕ್ಷೆ ಮೇರೆಗೆ, ಹೀಗೆ ಬಹಿರಂಗವಾಗಿ ಎಂದಾದರೂ ಆಗುವುದುಂಟೆ?..... ಕೇಳಿದವರು ತಟಕ್ಕನೆ ಹೇಳಿಯಾರು–ಹೀಗೆಲ್ಲ ಅಪೇಕ್ಷಿಸುವವರೇ ಇಲ್ಲ–ಎಲ್ಲಿಯೂ. ಅದೂ ಮರ್ಯಾದಸ್ತ ಕುಟುಂಬದಲ್ಲಿ! ಎಂದು" (ಅದೇ, ಪುಟ–೩೩೮) ಎಂಬ ಅಂತರಂಗದ ಅನಿಸಿಕೆಗಳು ಸಾಂಪ್ರದಾಯಿಕ ಮನಸ್ಸುಗಳಿಗೆ ಕಹಿ ಎನಿಸಬಹುದು. ತರುಣಿಯೋರ್ವಳ ಭವಿಷ್ಯದ ಬದುಕಿನ ಬಗ್ಗೆ, ಲೈಂಗಿಕ ಸಂಬಂಧಗಳ ಬಗ್ಗೆ ಹೊಂದಿರುವ ಮನೋಭಾವಗಳನ್ನು ಕತೆ ಹೊರಗೆಡವುತ್ತದೆ.

ಮದುವೆಗೂ ಮುಂಚೆ 'ತೋರಿಸಿಕೊಳ್ಳುವ' ಪ್ರಕ್ರಿಯೆಯನ್ನು ಕತೆಗಾರರು ಮೇಲಿನ ಕತೆಗಳ ಮೂಲಕ ನಿರಾಕರಿಸುವ ಅಭಿಪ್ರಾಯ ಮಂಡಿಸಿದ್ದಾರೆ. ರೂಢಿಯ ನಂಬಿಕೆಯಲ್ಲಿ ಮದುವೆಯಾಗಲು ಗಂಡಿನ ಒಪ್ಪಿಗೆ ಮುಖ್ಯವಾಗಿ, ಹೆಣ್ಣಿನ ಅಪೇಕ್ಷೆಗಳು ಹಿನ್ನೆಲೆಗೆ ಸರಿಯುವ ಪದ್ಧತಿಯ ಹುಳುಕನ್ನು ಹೊರಗೆಡವಲಾಗಿದೆ. 'ಮದುವೆ' ಎಂಬ ಸಂಸ್ಥೆಯ ಬಗ್ಗೆಯೂ ಆಕ್ಷೇಪವನ್ನು ವೈದೇಹಿಯವರ ಪಾತ್ರಗಳು ಎತ್ತುತ್ತವೆ. 'ಚಂದಲೆ' ಕತೆಯಲ್ಲಿ ವೇಶ್ಯೆಯಾದ ಚಂದಲೆಯ ಜೀವನ ಕ್ರಮ ಮತ್ತು 'ಸೂಳೆಯಂತೆ' ಬದುಕುಬೇಕೆನ್ನುವ ಹಂಬಲವುಳ್ಳ ಬೀನಳ ಕತೆಯನ್ನು ನಿಭಾಯಿಸಲಾಗಿದೆ. ಲೈಂಗಿಕ ಸಂಬಂಧಗಳನ್ನು ಶೋಧಿಸಲು ಕತೆಗಾರರು ಬೀನ–ರಮಿ–ಚಂದಲೆ, ಈ ಮೂವರನ್ನು ಮುಖಾಮುಖಿಯಾಗಿಸಿದ್ದಾರೆ. ಮನಸ್ಸು ಮತ್ತು ವಯಸ್ಸುಗಳೆರಡೂ ಪಕ್ವಗೊಳ್ಳದ ಬೀನ ತುಂಟ ಹುಡುಗಿ. ತನ್ನ ಅನಿಸಿಕೆಗಳನ್ನು ಮುಕ್ತವಾಗಿ ಹೇಳುವವಳು. ಈಗ ಗೃಹಿಣಿ ಸ್ಥಾನದ ಜವಾಬ್ದಾರಿಯನ್ನು ನಿಭಾಯಿಸುತ್ತಿರುವ ರಮಿ, ಬೀನಳ ವಯಸ್ಸಿನಲ್ಲಿದ್ದಾಗ, ವೇಶ್ಯೆಯ ಮಗಳಾದ ಚಂದಲೆಯ ಜೀವನ ಕ್ರಮದ ಬಗ್ಗೆ ತನಗಿದ್ದ ಕುತೂಹಲವನ್ನು ನೆನಪಿಸಿಕೊಳ್ಳುತ್ತಾಳೆ. ಚಂದಲೆಯ ಮನೆಗೆ ಬಂದು ಹೋಗುವ ಗಂಡಸರ ಕುರಿತು, ಕೆಲಸದ ಸಣ್ಣಿ ವಿವರಿಸುವಾಗ ಕಣ್ಣರಳಿಸಿ ನೋಡಿದ್ದು, ಆಗ ತಾಯಿ ಕುತೂಹಲಕ್ಕೆ ತಣ್ಣೀರೆರಚಿದ್ದು ನೆನಪಾಗುತ್ತದೆ. ವಯಸ್ಸಿಗೆ ಸಹಜವಾದ ಲೈಂಗಿಕ ಸಂಬಂಧದ ಕುತೂಹಲ ರಮಿ ಮತ್ತು ಬೀನಾ ಇಬ್ಬರಲ್ಲೂ ಇದೆ. ಆದರೆ ಬೀನಾಳ ಲೈಂಗಿಕ ಬಯಕೆ ಸಾಂಪ್ರದಾಯಿಕ ವಿಧಿ ನಿಷೇಧಗಳಿಗೆ ವಿರುದ್ಧವಾದುದು. ಕೇಳಿದವರು ಬೆಚ್ಚಿ ಬೀಳುವಂತಹುದು. ಬೀನಾಳ ಸ್ವಭಾವದಲ್ಲಿ ಸೇರಿ ಹೋಗಿದ್ದ ವೇಶ್ಯೆಯ ಛಾಯೆ, ಆಕೆಗೆ ಮದುವೆಯಾಗಿ ಮಗುವಾದ ಮೇಲೆ ಕಾಣೆಯಾಗಿರುವುದನ್ನು; ಮರಳಿ ಸಾಂಪ್ರದಾಯಿಕ ಬದುಕಿಗೆ ಹೊಂದಿಕೊಂಡಿರುವುದನ್ನು ಕತೆಗಾರರು ದಾಖಲಿಸಿದ್ದಾರೆ. ಹೆಚ್ಚು ಕತೆಗಳಲ್ಲಿ ಬರುವ ಹೆಣ್ಣು ಪಾತ್ರಗಳು ತಮ್ಮ ಸುತ್ತ ಬಂಧಿಸಿರುವ ಗೋಡೆಗಳನ್ನು ಒಡೆಯಲು, ಕೊನೇ ಪಕ್ಷ ಕಿಂಡಿಯನ್ನು ಕೊರೆಯಲು ಹವಣಿಸುವವರು. ಆದರೆ, ಅದನ್ನು ಸಾಕಾರಗೊಳಿಸಲು ಅಸಹಾಯಕರಾಗಿರುವ ಕಾರಣಗಳ ಕಟುವಾಸ್ತವವನ್ನು ಮುಂದಿಡಲಾಗಿದೆ.

ವೈದೇಹಿಯವರು ಕುಟುಂಬಗಳಲ್ಲಿ ನಡೆಯುವ ಸಾಮಾನ್ಯ ಘಟನೆಗಳನ್ನು ಬಳಸಿಕೊಂಡು ಗಂಡು ಹೆಣ್ಣಿನ ಸಂಬಂಧ, ಅವಿಭಕ್ತ ಕುಟುಂಬದಿಂದ ವಿಘಟನೆಗೊಳ್ಳಲು ಬಯಸುತ್ತಿರುವ ಮನಸ್ಸುಗಳನ್ನು ಗ್ರಹಿಸಿದ್ದಾರೆ. ಮತ್ತೊಂದು ವಿಶೇಷವೆಂದರೆ, ಕತೆಗಳಲ್ಲಿ ಬರುವ ಪಾತ್ರಗಳೆಲ್ಲ ಚಿಕ್ಕಪ್ಪಯ್ಯ, ಮಾವಯ್ಯ, ಚಿಕ್ಕ ಮಾಯಿ, ಅತ್ತೆ, ದೊಡ್ಡಮ್ಮ ಮುಂತಾದ ರಕ್ತಸಂಬಂಧಗಳನ್ನು ಒಳಗೊಂಡ ನಾಮ ವಿಶೇಷಣಗಳನ್ನು

ಬಳಸುವ ಮೂಲಕ ಕತೆಯ ಹರಿವು ತುಂಬಿಕೊಳ್ಳುತ್ತದೆ. ಕೌಟುಂಬಿಕ ಸಂಸ್ಥೆಯ ಒಳಹೊಕ್ಕು, ಅದರ ವಿವಿಧ ಆಯಾಮಗಳನ್ನು ವೈದೇಹಿಯವರು ತೀವ್ರ ಶ್ರದ್ಧೆಯಿಂದ ಅಧ್ಯಯನ ಮಾಡಿರುವುದು ಕತೆಗಳ ಮೂಲಕ ವ್ಯಕ್ತವಾಗುತ್ತದೆ. ತರುಣಿಯರ ಲೋಕದ ಬಯಕೆ, ತಲ್ಲಣಗಳು ಒಂದು ರೀತಿಯಾದರೆ, ಮದುವೆ ನಂತರದ ದಾಂಪತ್ಯದ ಬದುಕನ್ನು ಚಿಕಿತ್ಸಕ ನೋಟದಿಂದ ಪರಿಶೀಲಿಸಲಾಗಿದೆ. ಮೇಲ್ನೋಟಕ್ಕೆ ಸುಖವಾಗಿ ಕಾಣುವ ದಾಂಪತ್ಯ ಬದುಕಿನಲ್ಲಿ ಎದುರಾಗುವ ಬಿರುಕುಗಳನ್ನು, ಬಿಕ್ಕುಗಳನ್ನು ಹೆಕ್ಕಿ ತೆಗೆಯುತ್ತಾರೆ. ಗಂಡನಿಂದ ಬೇರಾದ ಪರಿತ್ಯಕ್ತೆಯರು, ವಿಚ್ಛೇದಿತ ಹೆಣ್ಣಿನ ಗುಂಪೂ ಕತೆಗಳಲ್ಲಿ ಸೇರಿವೆ.

'ನಮ್ಮ ಶಾಂತಿಯ ಬಯಕೆ', 'ಸಂಸಾರ', 'ವರ್ತುಲ', 'ಮದುವೆ-ಹೆಣ್ಣು-ಸೀರೆ' ಮುಂತಾದ ಕತೆಗಳಲ್ಲಿ ಸುಖದ ದಾಂಪತ್ಯವಿದೆ. ಕತೆಗಳೊಳಗೆ ಎದುರಾಗುವ ಸಮಸ್ಯೆಗಳು ಶೀಘ್ರದಲ್ಲಿ ಪರಿಹಾರವಾಗುವಂತಹವುಗಳು. 'ಆತ', 'ಅಮ್ಮಚ್ಚಿಯೆಂಬ ನೆನಪು', 'ಭೂತ', 'ಅಕ್ಕು', 'ವಾಣಿಮಾಯಿ', 'ತೆರೆಯದ ಪುಟಗಳು', 'ವಿಲಕ್ಷಣ', 'ಒಂದು ಅಪರಾಧ ತನಿಖೆ' ಮುಂತಾದ ಕತೆಗಳು ದಾಂಪತ್ಯ ಬದುಕಿನ, ಬಿರುಕಿನ ವಿವಿಧ ಆಯಾಮಗಳನ್ನು ಚಿತ್ರಿಸಿದೆ.

ಇನ್ನೂ ಹೊರಡದ ಬಸ್ಸಿನಲ್ಲಿ, ಗಂಡ ಮನೀಷನನ್ನು ಕಾಯುತ್ತ ಕುಳಿತ ಸುಮನ 'ಆತ' ಕತೆಯಲ್ಲಿ ಎದುರಾಗುತ್ತಾಳೆ. ಕಿಟಕಿಯಾಚೆ ನಿಂತು ತನ್ನನ್ನೇ ನೋಡುತ್ತಿರುವ 'ಆತ'ನ ಕಣ್ಣುಗಳಲ್ಲಿ ಪರಿಚಿತರ ನೆನಪು ಮರುಕಳಿಸುತ್ತಾ ಹೋಗುತ್ತದೆ. ಪರಿಚಿತ ಸ್ನೇಹಿತರು; ಎಲ್ಲೋ ಕಂಡು ಮರೆಯಾದವರು; ತನ್ನನ್ನು ಮೆಚ್ಚಿಕೊಂಡವರು ಹೀಗೆ ಅನೇಕರ ನೆನಪುಗಳು ಕಾಡುತ್ತವೆ. ನೆನಪಿಗೆ ಬರುತ್ತಿರುವ ಯಾರೂ ಸುಮನಳನ್ನು ಗಾಢವಾಗಿ ಕಾಡಿದವರಲ್ಲ. ಸ್ವತಃ ಮದುವೆಯಾಗಿರುವ ಮನೀಷನ ಚಿತ್ರವೂ ಮನಸ್ಸಿನಲ್ಲಿ ಸ್ಪಷ್ಟವಾಗಿ ಮೂಡಿಲ್ಲ. "ಮನೀಷನನ್ನು ನೆನಸಿಕೊಂಡರೆ ಯಾಕೆ ತನಗೆ ರೋಮಾಂಚನವಾಗುವುದಿಲ್ಲ? ದೇಹ ಕಂಪಿಸುವುದಿಲ್ಲ? ಮುಖದಲ್ಲಿ ರಕ್ತ ನುಗ್ಗುವುದಿಲ್ಲ?" (ಅದೇ, ಪುಟ-೧೮೩) ಎನ್ನುವ ಪ್ರಶ್ನೆ ಎದುರಾಗುತ್ತದೆ. ತನಗೆ ಸರಿಯಾಗಬಹುದಾಗಿದ್ದ ವಿಮಲಳ ಗಂಡನ ನೆನಪು ಗಾಢವಾಗಿ ಆವರಿಸತೊಡಗುತ್ತದೆ. ಆಯ್ಕೆಯ ಬದುಕು ದಕ್ಕಲಾರದ ವೇದನೆ ಕತೆಯೊಳಗೆ ಕಾಣಿಸಿಕೊಳ್ಳುತ್ತದೆ. ಬಸ್ಸು ಹೊರಟಾಗ ಸುಮನಳ ಕಣ್ಣಿನಿಂದ ನೀರು ಹರಿಯುವ, ಅದು ಸದ್ದಾಗದೆ ಜಾರಿ ಹೋಗುವ ಸನ್ನಿವೇಶ ಅದನ್ನು ಸ್ಪಷ್ಟಪಡಿಸುತ್ತದೆ. ಹೆಣ್ತನದ ಪೂರ್ಣತೆ-ಅಪೂರ್ಣತೆಗೆ ಇರುವ ಕಾರಣವನ್ನೂ ಕತೆ ಶೋಧಿಸಿದೆ. 'ಅಪರಿಚಿತ' ಕತೆಯಲ್ಲಿಯೂ ಈ ಅಪೂರ್ಣತೆಯ ಭಾವ ಕಾಡಿದೆ.

'ಅಮ್ಮಚ್ಚಿಯೆಂಬ ನೆನಪು' ಕತೆಯ ಅಮ್ಮಚ್ಚಿ: ಅಕ್ಕು ('ಅಕ್ಕು'), ಬಾಬಿ ('ಒಂದು ಅಪರಾಧ ತನಿಖೆ'), ವಾಣಿಮಾಯಿ ('ವಾಣಿ ಮಾಯಿ') ಪಾತ್ರಗಳ ಸ್ವಭಾವಗಳನ್ನು ನೆನಪು ತರುವಾಕೆ. ಅಮ್ಮಚ್ಚಿ, ತನಗಿಷ್ಟ ಬಂದಂತೆ ಬದುಕಲು ಹವಣಿಸುವವಳು. ಪೌಡರು, ಎರಡು ಜಡೆ, ನಿಲುಗನ್ನಡಿ, ಹಿಂದುಗುಬ್ಬಿಯ ರವಕೆ ತೊಡುವ ಮುಂತಾದ ಸಣ್ಣಪುಟ್ಟ ಬಯಕೆಗಳಿವೆ ಆಕೆಗೆ. ತಾನು ಬಯಸಿದ ಬದುಕಿನ ಸ್ವಾತಂತ್ರ್ಯಕ್ಕೆ ವೆಂಕಪ್ಪಯ್ಯ ಅಡ್ಡಿಯಾಗಿದ್ದಾನೆ. ವೆಂಕಪ್ಪಯ್ಯ ಹತ್ತಿರದ ನೆಂಟನೇನೂ ಅಲ್ಲ. ಅನಾಥನಾಗಿದ್ದ ವೆಂಕಪ್ಪಯ್ಯ ಅಮ್ಮಚ್ಚಿಯ ತಂದೆ ಸತ್ತಾಗಿನಿಂದ, ಈ ಮನೆಯವನಾಗಿ ಎಲ್ಲರ ಮೇಲೆ ನಿಯಂತ್ರಣ ಸಾಧಿಸುತ್ತಿದ್ದಾನೆ.

ಅದಕ್ಕೆ ಅಮ್ಮಚ್ಚಿ, ಅವನನ್ನು ಕಂಡರೆ ಕೆಂಡ ಕಾರುತ್ತಾಳೆ. ಕತೆಯ ಕೊನೆಯಲ್ಲಿ ಅನಿವಾರ್ಯವಾಗಿ ಆತನನ್ನು ಮದುವೆಯಾಗಿ ತಿರುಪತಿಗೆ ಹೋದ ಅಮ್ಮಚ್ಚಿ, 'ವೆಂಕಪ್ಪಯ್ಯ ನೇಣು ಹಾಕಿಕೊಂಡು ಸತ್ತ' ಎಂಬ ಸುದ್ದಿ ಹೊತ್ತು ಊರಿಗೆ ಮರಳುತ್ತಾಳೆ. ಆಗ ತಾಯಿ-ಮಗಳು ಇಬ್ಬರೂ ಬಿಡುಗಡೆಯ ಭಾವ ಹೊಂದುತ್ತಾರೆ.

'ಅಕ್ಕು' ಕತೆಯಲ್ಲಾಗಲೀ; 'ಅಮ್ಮಚ್ಚಿಯೆಂಬ ನೆನಪು'; 'ಭೂತ'; 'ಬಾಬುಲಿ, ತಾಯಿ ಮತ್ತು ನಸೀಬು', 'ವಾಣಿಮಾಯಿ' ಕತೆಗಳಲ್ಲಿ ಕತೆಗಾರರು ಅನುಸರಿಸುವ ನಿರೂಪಣಾ ತಂತ್ರ ಕುತೂಹಲಕಾರಿಯಾಗಿದೆ. ಹಿನ್ನೋಟ ಕ್ರಮದಲ್ಲಿ ಸಾಗುವ ಈ ಕತೆಗಳಲ್ಲಿ ಸೂಚಿತ ನಿರೂಪಕಿಯಾಗಿರುವವರು ಚಿಕ್ಕ ಹುಡುಗಿಯರು. ಬಾಲ್ಯದ ಅನುಭವಗಳನ್ನು ದಟ್ಟವಾಗಿಸುತ್ತಾ, ಆ ಮೂಲಕ ಮಕ್ಕಳು ದೊಡ್ಡವರ ಬಗ್ಗೆ ಹೊಂದಿರುವ ಮನೋಭಾವಗಳನ್ನು ಈ ಕತೆಗಳು ಪ್ರಕಟಿಸುತ್ತಾ ಹೋಗುತ್ತವೆ. ವಾಸ್ತವವಾಗಿ ಕತೆ ನಿರೂಪಿತವಾಗುತ್ತಿರುವುದು ಪ್ರೌಢಾವಸ್ಥೆಯಲ್ಲಿರುವವರ, ಗೃಹಿಣಿಯರ ಪ್ರಜ್ಞೆಯಲ್ಲಿ. ತಮ್ಮ ಬಾಲ್ಯದ ಘಟನೆಗಳನ್ನು, ನೆನಪುಗಳನ್ನು ಹೆಕ್ಕಿ ತೆಗೆಯುವಾಗ, ಬಾಲಕಿಯ ನಿರೂಪಣಾ ಪ್ರಜ್ಞೆಯ ಹಿಂದೆ ಪ್ರೌಢ ವಯಸ್ಕಳ ಅನುಭವ ಛಾಯೆ ಗೋಚರಿಸುತ್ತದೆ. ವೈದೇಹಿಯವರು ಅನುಸರಿಸುವ ಇಂತಹ ವಿಶಿಷ್ಟ ಶೈಲಿಯಲ್ಲಿ ಗತದ ನೆನಪುಗಳನ್ನು ವರ್ತಮಾನದೊಂದಿಗೆ ತಳುಕು ಹಾಕಿ ನೋಡುವ ಪ್ರಕ್ರಿಯೆ ಕತೆಗಳಿಗೆ ವಿಶೇಷ ಮೆರುಗನ್ನು ತಂದುಕೊಟ್ಟಿವೆ.

'ಅಕ್ಕು' ಕತೆ, ಕಥನ ಸಾಹಿತ್ಯದಲ್ಲಿ ಚಿರಸ್ಥಾಯಿಯಾಗಿ ಉಳಿಯುವ ವಿಶಿಷ್ಟತೆಯುಳ್ಳದ್ದು. ವಾಸ್ತವ ಮತ್ತು ಭ್ರಮಾಲೋಕಗಳಲ್ಲಿ ವಿಹರಿಸುವ ಅಕ್ಕು ಯಾವ ಬಂಧನಗಳಿಗೂ ಒಳಗಾಗದೆ ತನ್ನಿಚ್ಛೆಯಂತೆ ಇರುವವಳು. ಸಾಂಸಾರಿಕ ಸುಖದಿಂದ ವಂಚಿತವಾಗಿರುವ ಅಕ್ಕುವನ್ನು, ಆಕೆಯ ವಿಲಕ್ಷಣ ವ್ಯಕ್ತಿತ್ವಗಳೊಂದಿಗೆ ಚಿತ್ರಿಸಲಾಗಿದೆ. 'ಚಿಪ್ಪು', 'ಬೀಳು-ಬೇರು' ಕತೆಗಳಲ್ಲಿನ ನಾಯಕಿಯರು ಮೂಕ ದನಿಯಲ್ಲಿ ಅಥವಾ ದನಿಯೇ ಇಲ್ಲದವರಂತೆ ವರ್ತಿಸುವವರು. ಈ ಕತೆಯಲ್ಲಿನ ಅಕ್ಕು, ತನ್ನನ್ನು ಕೆಣಕಿದವರ ಚಾರಿತ್ರ್ಯವನ್ನು ಸೇರಿದವರೆಲ್ಲರೆದುರು ಮೂರು ಕಾಸಿಗೆ ಬಯಲು ಮಾಡುವಾಕೆ. 'ಟುವಾಲು' ಬೀಸಿಕೊಂಡು ಬೇಕೆಂದಲ್ಲಿಗೆ ಪ್ರಯಾಣ ಬೆಳೆಸುವವಳು. ಕುಟುಂಬದಲ್ಲಿರುವ ಇತರೆ ಹೆಣ್ಣು ಮಕ್ಕಳಿಗಿರುವಷ್ಟು ನಿಬಂಧನೆಗಳು ಈಕೆಯ ಮೇಲಿಲ್ಲ. ಅದಕ್ಕೆ ಕಾರಣ ಆಕೆಯ 'ಪೊಟ್ಟು'. ಹಾಗೆ ನೋಡಿದರೆ, ಅಕ್ಕುವಿನ ಮನೆ, ಸಾಂಪ್ರದಾಯಿಕ ಶ್ರೇಣೀಕರಣ ಅಧಿಕಾರ ವ್ಯವಸ್ಥೆಗೆ ಒಳಪಟ್ಟಿದೆ. ಕೌಟುಂಬಿಕ ಸಂಸ್ಥೆಯ ಯಾಜಮಾನ್ಯವನ್ನು ವಹಿಸಿರುವ ಅಜ್ಜಯ್ಯನ ಆಣತಿಯನ್ನು ಮನೆಯವರಾರು ಮೀರುವಂತಿಲ್ಲ. ಸಣ್ಣಮಟ್ಟಿನ ಸ್ವಾತಂತ್ರ್ಯವನ್ನು ಹೊಂದಿದ ವಾಸು ಚಿಕ್ಕಪ್ಪಯ್ಯ, ದೊಡ್ಡತ್ತೆಯನ್ನು ಬಿಟ್ಟರೆ, ಉಳಿದ ಸದಸ್ಯರೆಲ್ಲರೂ ಮನೆಯ ಕಾರ್ಯ ಕೆಲಸಗಳಲ್ಲಿ ತೊಡಗಿಸಿಕೊಳ್ಳುವ ಸೇನಾ ಪಡೆಯವರಾಗಿದ್ದಾರೆ. ಇಂತಹ ವಾತಾವರಣದಲ್ಲಿ ಅಕ್ಕು ಎಲ್ಲರ ಅಧಿಕಾರ ಶ್ರೇಣಿಗಳನ್ನು ಬುಡಮೇಲು ಮಾಡಿಬಿಡುತ್ತಾಳೆ. ವಾಸು ಚಿಕ್ಕಪ್ಪಯ್ಯ, ತಮ್ಮಣ್ಣಯ್ಯನ ಹೆಂಡತಿಯೊಡನೆ ಹೊಂದಿದ ದೈಹಿಕ ಸಂಬಂಧವನ್ನು ಮನೆಯವರೆದುರು ಜಗಜ್ಜಾಹೀರು ಮಾಡುತ್ತಾಳೆ. ಉಳಿದಂತೆ ಭ್ರಮಾಧೀನ ಸ್ಥಿತಿಯಲ್ಲಿದ್ದಾಗ ಅಡ್ಡದ

ಮನೆ ತಿಮ್ಮಪ್ಪಯ್ಯನಿಗೆ ಬಸಿರಾದಂತೆ, ಹೆತ್ತ ಕೂಸಿಗೆ ಹಾಲೂಡಿಸುವ ಕ್ರಿಯೆಯಲ್ಲಿ ನಿಜವೆಂಬಂತೆ ಪಾಲುಗೊಳ್ಳುತ್ತಾಳೆ. ಸಾಂಸಾರಿಕ ಸುಖದಿಂದ ವಂಚಿತವಾಗಿರುವುದನ್ನು ಈ ಎರಡು ಸಂಗತಿಗಳು ಸ್ಪಷ್ಟಪಡಿಸುತ್ತವೆ. ಅಕ್ಕುವಿನ ತಂಗಿ ಸಿರಿಯತ್ತೆಯ ಮದುವೆಯಲ್ಲಿ 'ನನ್ ಗಂಡ ಎಲ್ಲಿ ಸತ್ತ? ಈ ಕ್ಷಣ ತಂದು ಕೊಡಿ' ಎಂದು ರಂಪ ಮಾಡಿದ ಅಕ್ಕು, ಗಂಡ ಮರಳಿ ಬಂದಾಗ ತೊಟ್ಟಿಲ ಸರಪಣಿಯಿಂದ ಹೊಡೆದು ಓಡಿಸುತ್ತಾಳೆ. ಅಕ್ಕುವಿಗಿರುವ 'ಪೊಟ್ಟು' ಕೆಲವರ ಕಣ್ಣಲ್ಲಿ ತಮಾಷೆಗೆ– ವ್ಯಂಗ್ಯಕ್ಕೆ ಕಾರಣವಾದರೆ, ಅದು ಆಕೆಯ ಶಕ್ತಿಯ ಕೇಂದ್ರವೂ ಆಗಿರುವುದನ್ನು ಕತೆ ಬಿಚ್ಚಿಡುತ್ತದೆ. ಅಕ್ಕು, ಸಾಮಾಜಿಕ ಸಂಬಂಧಗಳನ್ನು ವಿಶ್ಲೇಷಿಸುವ, ಲೈಂಗಿಕ ತೊಡಕುಗಳನ್ನು ಪ್ರಶ್ನಿಸುವ ಕಾರಣಕ್ಕಾಗಿ, ಆಕೆಯನ್ನು ಕೋಣೆಯಲ್ಲಿ ಕೂಡಿ ಹಾಕಿ ವಾಸು ಚಿಕ್ಕಪ್ಪಯ್ಯ ದಂಡಿಸುವ ಕ್ರಮ ಓದುಗರಲ್ಲಿ ವಿಷಾದ ಛಾಯೆಯನ್ನು ಮೂಡಿಸುತ್ತದೆ.

'ಒಂದು ಅಪರಾಧ ತನಿಖೆ' ಕತೆಯಲ್ಲಿ ವಿಲಕ್ಷಣ ಸ್ವಭಾವದ ಬಾಬಿ ಮತ್ತು ಗಂಡನನ್ನು ಬಿಟ್ಟು ಬಂದಿರುವ ಕುಸುಮಳ ವ್ಯಕ್ತಿತ್ವವನ್ನು ಮುಖಾಮುಖಿ ಮಾಡಲಾಗಿದೆ. ಮನೆಗೆಲಸಕ್ಕಿದ್ದ ನಾಗಮ್ಮನ ಮಗಳು ಬಾಬಿ, ತನಗೆ ಸಿಕ್ಕ ಎರಡನೇ ಮದುವೆಯ ಗಂಡನೊಂದಿಗೆ ಅಷ್ಟೇನೂ ಸುಖಿಯಾಗಿಲ್ಲ. 'ಊರ ತುಂಬ ಮೇವು' ಮೇಯುವ ಗಂಡನೊಂದಿಗೆ ಸಂಸಾರವನ್ನು ಎದುರಿಸಲು ಕಂಡುಕೊಂಡ ಪರ್ಯಾಯ ಮಾರ್ಗಗಳು ಭಿನ್ನ ರೀತಿಯಾಗಿವೆ. ಗಂಡನ ಕಣ್ಣು ತಪ್ಪಿಸಿ, ಹಾಲು ಮಾರಿದ ದುಡ್ಡಿನಲ್ಲಿ ತನಗೆ ಮತ್ತು ಮಗಳಿಗೆ ಚಿನ್ನ ಮಾಡಿಸಿದ್ದಾಳೆ. ವಯಸ್ಸಿಗೆ ಬಂದ ಮೇಲೆ, ಹಿರಿಯರ ಮಾತು ಕೇಳುವುದಿಲ್ಲವೆಂಬ ಕಾರಣಕ್ಕೆ ಚಿಕ್ಕ ವಯಸ್ಸಿನ ಮಗಳಿಗೆ ಮದುವೆ ಗೊತ್ತು ಮಾಡಿದ್ದಾಳೆ. ಕುಸುಮಳ ತಾಯಿ ಮತ್ತು ಬಾಬಿಯ ಮಾತುಕತೆಯಲ್ಲಿ ಗಂಡ ಹೇಗಿದ್ದಿರೂ ಆತನೊಟ್ಟಿಗೆ ಬಾಳಬೇಕಾದುದು ಹೆಣ್ಣಿನ ಕರ್ತವ್ಯ ಎಂಬ ಸಂದೇಶವಿದೆ. ವಿದ್ಯೆ ಕಲಿಯದ ಬಾಬಿ ಸಂಸಾರವನ್ನು ನಿಭಾಯಿಸಿಕೊಂಡು ಹೋಗುತ್ತಿದ್ದಾಳೆ. ವಿದ್ಯೆ ಕಲಿತ ಕುಸುಮ ಬಾಳಲಾರದೆ, ಗಂಡನನ್ನು ಬಿಟ್ಟು ಬಂದಿದ್ದಾಳೆಂಬ ಬಗ್ಗೆ ತಾಯಿಗೆ ಅಸಮಾಧಾನವಿದೆ. ತನ್ನನ್ನು ಮದುವೆಗೆ ಯಾಕೆ ಕರೆಯಲಿಲ್ಲ ಎಂಬ ಕಾರಣದಿಂದ ಹಿಡಿದು ಗಂಡನನ್ನು ಬಿಟ್ಟು ಬಂದುದು ಯಾಕೆ ಎಂದು ಕೇಳುವ ಬಾಬಿಯ ತನಿಖೆಯನ್ನು ಎದುರಿಸುತ್ತಿರುವ ಕುಸುಮಳಿಗೆ ನ್ಯಾಯಾಲಯದ ಕಟಕಟೆಯಲ್ಲಿ ವಿಚಾರಣೆಗೆ ಒಳಪಡಿಸಿದ ಅನುಭವವಾಗುತ್ತದೆ. ಕುಸುಮಳ ಪ್ರಜ್ಞೆಯಲ್ಲಿ ನಿರೂಪಿತವಾಗುತ್ತಿರುವ ಕತೆಯಲ್ಲಿ ಅಸಹಾಯಕಳಾದ ಆಕೆಯ ಪರವಾಗಿ ಸಾಕ್ಷಿ ಹೇಳುವವರು, ತೀರ್ಪು ನೀಡುವವರು ಯಾರೂ ಇಲ್ಲವಾಗುತ್ತಾರೆ.

'ವಾಣಿ ಮಾಯಿ' ಕತೆಯ ವಾಣಿ ಮಾಯಿ, 'ಅಮ್ಮಚ್ಚಿಯೆಂಬ ನೆನಪು' ಕತೆಯ ಅಮ್ಮಚ್ಚಿ, 'ಆಧುನಿಕ' ಜಗತ್ತಿಗೆ ತೆರೆದುಕೊಳ್ಳಲು ಹವಣಿಸುತ್ತಿರುವವರು. ಅಮ್ಮಚ್ಚಿ, ಪೌಡರು, ನಿಲುಗನ್ನಡಿ, ಎರಡು ಜಡೆ, ಹಿಂದುಗುಬ್ಬಿಯ ರವಕೆ ಮುಂತಾದವುಗಳನ್ನು ಬಳಸಲು ಇಚ್ಛಿಸಿದರೆ, ವಾಣಿಮಾಯಿ ಪೇಟೆ ಹುಡುಗಿಯರು ತೊಡುವ ಚಪ್ಪಲಿಗಳನ್ನು ಮೆಟ್ಟುವ ಹಂಬಲವುಳ್ಳವಳು. ಈ ಕತೆಯ ನರಸಿಂಹ, ವೆಂಕಪ್ಪಯ್ಯನ ('ಅಮ್ಮಚ್ಚಿಯೆಂಬ ನೆನಪು') ಮನಃಸ್ಥಿತಿಯವನು. ವಾಣಿಮಾಯಿ ಚಪ್ಪಲಿಯನ್ನು ಮೆಟ್ಟಿ ಹೊರಗೆ ಹೋಗುವುದನ್ನು ಸಹಿಸದವನು. "ಹೆಮ್ಮಕ್ಕಳಿಗೆ ತೀರಾ ಪೇಶನ್ನು ಯಾಕೆ ಬೇಕು? ಇವಳೊಬ್ಬಳಿಗೆ

ಅದೇನು ಗರ್ಜು. ಇವಳು ಹೇಳಿದ ಹಂಗೇ ಕೇಣ್ಣಿ. ಮತ್ತೆ ಆ ಬ್ಯಾರಿನ್ನೇ ಕಟ್ಬಿಂಡ್ ಹಾರ್ತ್ಲ್" (ಅದೇ, ಪುಟ ೪೫೭) ಎಂಬ ದರ್ಪ ತೋರುತ್ತಾನೆ. ತಮ್ಮ ಇಚ್ಛೆಯಂತೆ ಬದುಕುವ ಅವಕಾಶಗಳನ್ನು ಕಸಿಯುವ ನರಸಿಂಹ, ವೆಂಕಪ್ಪಯ್ಯನ ದಾರ್ಷ್ಟ್ಯವನ್ನು ಕತೆಗಾರರು ಪರಿಚಯಿಸಿದ್ದಾರೆ.

ಮೀರಳ ಪ್ರಜ್ಞೆಯಲ್ಲಿ ನಡೆಯುವ 'ಭೂತ' ಕತೆಯಲ್ಲಿ, ದೊಡ್ಡಮ್ಮನ ಮಗಳು ಪಾರ್ವತಿಯ ದುರಂತ ಜೀವನ ಮನಸ್ಸನ್ನು ಕಲಕುತ್ತದೆ. ಜತೆಗೆ ದೊಡ್ಡಮ್ಮನ ದಾರುಣ ಬದುಕು ತಳುಕು ಹಾಕಿಕೊಂಡಿದೆ. ಏಳು ಕೊಪ್ಪರಿಗೆ ಚಿನ್ನವಿರುವ ಮನೆಯೆಂದು ದೂಡ್ಡಮ್ಮನನ್ನು ಬಾಡೂರಿನ ಆ ಮನೆಗೆ ಮದುವೆ ಮಾಡಿಕೊಡಲಾಗುತ್ತದೆ. ಆದರೆ ಭೂತ ಕಾಯುತ್ತಿರುವ ಚಿನ್ನದ ಕೊಪ್ಪರಿಗೆ ಮೇಲೇಳುವುದಿರಲಿ, ಇದ್ದ ಚಿನ್ನವೂ ಖಾಲಿಯಾಗಿ ಬಡತನ ಆವರಿಸಿಕೊಂಡಿದೆ. 'ಭೂತ'ವೆಂಬುದು ಕಾಲ ಸೂಚಕವಾಗಿಯೂ, ಭಯಂಕರವಾಗಿ ಕಾಡುತ್ತಿರುವ ವರ್ತಮಾನದ ಸ್ಥಿತಿಯಾಗಿಯೂ ಗೋಚರಿಸುತ್ತದೆ. ಬಡತನದ ಭೂತದಲ್ಲಿ ನರಳುತ್ತಿರುವ ಪಾರ್ವತಿಯನ್ನು ಮೊದಲೇ ಒಂದು ಮದುವೆಯಾದವನೊಂದಿಗೆ ಮದುವೆ ಮಾಡಿಕೊಡಲಾಗುತ್ತದೆ. ಮುಂದೆ ಆತನ ವರ್ತನೆಗಳಿಗೆ ಬೇಸತ್ತು ತೌರುಮನೆಯಲ್ಲಿಯೇ ನೆಲೆಯೂರಿದ ಪಾರ್ವತಿ, ಬಂದ ಗಂಡನನ್ನು ಹೊಡೆದು ಅಟ್ಟುತ್ತಾಳೆ. ಸೆರಗಿನ ಮರೆಯಲ್ಲಿ ಕಣ್ಣೊರೆಸಿಕೊಳ್ಳುವ ಪಾರ್ವತಿ 'ಗಂಡಿ'ನಂತೆ ದುಡಿದು, ಬದುಕನ್ನ ದಿಟ್ಟವಾಗಿ ಎದುರಿಸುವ ಮನೋಭಾವದವಳು.

'ತೆರೆಯದ ಪುಟಗಳು' ಕತೆಯಲ್ಲಿ ಸುಕನ್ಯಾಳ ಮದುವೆಯಾಗಿದ್ದರೂ ಬೇರೆ ಬೇರೆ ಕಾರಣಗಳಿಗಾಗಿ ಶೋಭನ ಕಾರ್ಯ ನಿಲ್ಲುತ್ತದೆ. ತಿಂಗಳುಗಳು ಕಳೆದರೂ ಗಂಡ ಹೆಂಡತಿ ಮುಕ್ತವಾಗಿ ಏಕಾಂತದಲ್ಲಿ ಮಾತಾಡಲು ಶಾಸ್ತ್ರದ ಅಡ್ಡಿಯುಂಟಾಗುತ್ತದೆ. ಸುಕನ್ಯಾಳ ಶೋಭನ ಕಾರ್ಯದ ಪೀಠಿಕೆಯೊಂದಿಗೆ ರಾಜತ್ತೆಯ ತೆರೆದುಕೊಳ್ಳದ ಬದುಕಿನ ಪುಟಗಳನ್ನು, ಮಗುಚಲು ಕತೆ ಪ್ರಯತ್ನಿಸಿದೆ. ಸಂಗೀತ ಕಲಿಸುತ್ತಿದ್ದ ರಾಮಣ್ಣನನ್ನು ಪ್ರೀತಿಸಿ ಮದುವೆಯಾಗಿ ಹೋದ ರಾಜತ್ತೆ ಆ ನಂತರ ಸುದ್ದಿಯೇ ಇಲ್ಲವಾಗಿದ್ದರು. ಗಂಡನನ್ನು 'ಕಳೆದುಕೊಂಡ' ಮೇಲೆ ಜಮೀನು ಸಾಗುವಳಿಯಲ್ಲಿ ತೊಡಗಿಸಿಕೊಂಡು ಬಂಧುಗಳನ್ನು ಹಚ್ಚಿಕೊಳ್ಳುತ್ತಾಳೆ. ಓದುವ ಹುಡುಗಿಯರಿಗೆ ಆಶ್ರಯ ಕೊಟ್ಟು, ತನ್ನ ಬಳಗವನ್ನು ದೊಡ್ಡದನ್ನಾಗಿ ಮಾಡಿಕೊಂಡಿದ್ದಾಳೆ. ತನ್ನ ಬದುಕಿನ ಗುಟ್ಟನ್ನು ಬಿಟ್ಟು ಕೊಡದ ರಾಜತ್ತೆ, ಕೇಳಿದವರ ಪ್ರಶ್ನೆಗೆ ಕೊಡುವ ಉತ್ತರ ಮುಗುಳ್ನಗೆಯೊಂದೇ. ಆ ಮುಗುಳ್ನಗೆ ಕೊಂಚ ಸಡಿಲಾಗುವುದು ಗಂಡ ರಾಮಣ್ಣ ನುಡಿಸುತ್ತಿದ್ದ ಹಾರ್ಮೋನಿಯಂನ್ನು ಮುಂದಿಟ್ಟಾಗ ಅಸಮಾಧಾನ, ತಳಮಳದ ಛಾಯೆ ಆವರಿಸುತ್ತದೆ. ಟಿ.ವಿ. ಧಾರಾವಾಹಿಯಲ್ಲಿ ಬರುವ ದೃಶ್ಯವನ್ನು ಕುರಿತು "ತಡಿ ತಡಿ. ಅಲ್ಲಿ ನೋಡಿ. ಅವ ಈಗ ಬಲಾತ್ಕಾರ ಮಾಡುತ್ತಾನೆ ನೋಡಿ ಬೇಕಾದರೆ" (ಅದೇ, ಪುಟ–೬೫೨) ರಾಜತ್ತೆ ಬಾಯಿಯಿಂದ ಹೊರಡುವ ಈ ಮಾತು ಆಕೆಯ ಬಲಾತ್ಕಾರಗೊಂಡ ಬದುಕಿನ ಸೂಚನೆ ನೀಡುತ್ತದೆ. ಶೋಭನೆಯ ರಾತ್ರಿಯೂ ರಾಜತ್ತೆಯ ಮೇಲೆ ನಡೆದ ಬಲಾತ್ಕಾರ ಎಂಬುದಕ್ಕೆ ಕತೆಯ ನಡುವೆ ಹುದುಗಿದ ಸಾಲುಗಳು ಸಾಕ್ಷಿ ನುಡಿಯುತ್ತವೆ. "ಅಂದ ಹಾಗೆ ಹಾರ್ಮನಿ ಇಲ್ಲಿ ಯಾಕೆ ಇಟ್ಟಿರಿ ಕವಿತಾ. ಒಂದೋ, ಅಟ್ಟಕ್ಕೆ ಬಿಸಾಕಿ. ಇಲ್ಲ ಒಲೆಗೆ ತುಂಬಿ. ಹಾರ್ಮನಿಯಂತೆ, ಹಾರ್ಮನಿ!" (ಅದೇ, ಪುಟ–

೬೫೭) ಎಂಬ ಮಾತುಗಳು ರಾಮಣ್ಣನೊಂದಿಗೆ ಇದ್ದ ದಿನಗಳು ಸುಖವಾಗಿರಲಿಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತವೆ.

'ಅಂತರಾಳದ ಬದುಕು' ಕತೆಯಲ್ಲಿ ಚಿಕ್ಕಮ್ಮ-ಚಿಕಪ್ಪ ಇಬ್ಬರೂ ಸರಿಯಾಗಿರುವಂತೆ ಕಂಡರೂ ಚಿಕ್ಕಪ್ಪನೊಂದಿಗಿನ ಸಂಸರ್ಗ ವಿಹಿತವಾಗಿಲ್ಲವೆಂಬುದು ವಿಧಿತವಾಗುತ್ತದೆ. ಆದ್ದರಿಂದ ಆಕೆ ನೆಂಟರ ಹುಡುಗಿಯರನ್ನು ತಮ್ಮ ಮನೆಯಲ್ಲಿಟ್ಟುಕೊಂಡು ಓದಿಸುವ ಜವಾಬ್ದಾರಿ ತೆಗೆದುಕೊಳ್ಳುತ್ತಾಳೆ. ವೃಂದಾ ಮತ್ತಿತರಿಗೆ ಚಿಕ್ಕಮ್ಮನು ತಮ್ಮ ಸ್ವಾತಂತ್ರ್ಯವನ್ನು ಕಸಿಯುವುದಲ್ಲದೆ, ದಿನನಿತ್ಯ ತಮ್ಮ ಕೋಣೆಯಲ್ಲಿಯೇ ಬಂದು ಮಲಗುವುದು ಕಿರಿಕಿರಿಯಾಗುತ್ತದೆ. ವರದಿಗಾರ್ತಿಗೆ ಮಾತ್ರ ಚಿಕ್ಕಮ್ಮ, ಚಿಕ್ಕಪ್ಪನ ಕೋಣೆಯಲ್ಲಿ ಮಲಗದೆ ತನ್ನ ಕೋಣೆಗೆ ಬಂದು ಮಲಗುವ ಉದ್ದೇಶ ಗೋಚರಿಸುತ್ತದೆ. ಚಿಕ್ಕಪ್ಪನೊಂದಿಗೆ ಮಲಗಿದಾಗ 'ಬಳಲಿದ ವೇಶ್ಯೆ'ಯಂತಾಗುವುದನ್ನು ಕತೆ ವಿವರಿಸಿದೆ.

'ವಿಲಕ್ಷಣ' ಕತೆಯಲ್ಲಿ ಗರುಡ ಪಕ್ಷಿ ನಾರಾಯಣರ ಪ್ರವಚನಕ್ಕೆ ತಪ್ಪದೇ ಹೋಗುವ ಶಾಂತಕ್ಕ 'ನೋವಿನ ಪಸೆಯಿಂದ ಅವರ ಕಣ್ಣುಗಳು ಮಿನುಗುವುದನ್ನು' ನೋಡುತ್ತಾ ಕುಳಿತುಕೊಳ್ಳುತ್ತಾಳೆ. ಶಾಂತಕ್ಕನ ಗಂಡನ ಮಾತಿನಲ್ಲಿ ಹೇಳುವುದಾದರೆ ನಾರಾಯಣರು ಅವಳ ಪ್ರೇಮಿಯಾಗಿದ್ದಾರೆ. ಸನ್ಯಾಸಿಯ ಮುಖದಲ್ಲಿ ವಿರಹಿಯ ನೋವನ್ನು ಗುರುತಿಸುವ ಶಾಂತಕ್ಕನಿಗೆ ನಾರಾಯಣರ ಮೇಲೆ ಒಂದು ರೀತಿಯ ವಿಲಕ್ಷಣ ಪ್ರೀತಿಯಿದೆ. ಅವರ ಹೆಂಡತಿ ದೇವತ್ತೆ ಬರುವ ಸುದ್ದಿ ಕೇಳಿ ಶಾಂತಕ್ಕನ ಉಮೇದು ಕಳೆದು ಹೋಗುತ್ತದೆ.

ದೇಶ ವಿಭಜನೆಯ ಸಂದರ್ಭದಲ್ಲಿ ರಾಜಕೀಯ ಕೃತ್ಯಕ್ಕೆ ಬಲಿಯಾದ ಹೆಣ್ಣುಮಕ್ಕಳ ದಾರುಣ ಸ್ಥಿತಿಯನ್ನು 'ಕ್ರೌಂಚ ಪಕ್ಷಿಗಳು' ಕತೆ ಅನಾವರಣಗೊಳಿಸುತ್ತದೆ. ಈ ಕತೆ ವಿಶಿಷ್ಟವಾದ, ಅಷ್ಟೇ ಸಂಕೀರ್ಣ ನೆಲೆಯನ್ನು ಹೊಂದಿದೆ. ಬೇಡನ ಬೇಟೆಗೆ ಬಲಿಯಾದ ಹೆಣ್ಣು ಕ್ರೌಂಚ ಪಕ್ಷಿ, ಅದರ ವಿರಹದಲ್ಲಿ ಬೇಯುತ್ತಿರುವ ಗಂಡು ಕ್ರೌಂಚ ಪಕ್ಷಿಯ ರಾಮಾಯಣದ ಕತೆಯನ್ನು, ಕತೆಗಾರರು ಗಂಡು ಹೆಣ್ಣಿನ ಸಂಬಂಧಗಳನ್ನು ವಿಶ್ಲೇಷಿಸಲು ಬಳಸಿಕೊಂಡಿದ್ದಾರೆ.

ಹಿಂದು-ಮುಸ್ಲಿಂ ಕೋಮು ದಾಳಿಯಲ್ಲಿ ಅಪಹರಿಸಿಕೊಂಡು ಹೋದ ಹೆಣ್ಣುಮಕ್ಕಳನ್ನು ನಂತರ ಬಿಡುಗಡೆಗೊಳಿಸಲಾಗುತ್ತದೆ. ಆದರೆ ವರ್ಷದ ಅವಧಿಯಲ್ಲಿ ಅವರ ಮೇಲಾದ ಅತ್ಯಾಚಾರ, ಬಸುರಿ ಬಾಣಂತನಕ್ಕೆ ಈಡಾದುದನ್ನು ಮರೆತು ಸ್ವೀಕರಿಸಲು ಮುಂದೆ ಬಂದವರೆಷ್ಟು ಎಂಬ ಪ್ರಶ್ನೆ ಏಳುತ್ತದೆ. ಜೀವಮಾನವಿಡೀ ಅಪಹರಣವಾದವಳು ಎಂಬ ಅಪವಾದದ ಬೆಂಕಿಯಲ್ಲಿ ಬೇಯಲು ಇಚ್ಛಿಸದೆ, ಮನೆಗೆ ಮರಳಿ ಹೋಗದೆ ಪರ್ಯಾಯ ಮಾರ್ಗಗಳನ್ನು ಕಂಡುಕೊಂಡವರ ಬಗ್ಗೆ ಕತೆಗಾರರು ಅವಲೋಕಿಸುವಂತೆ, ಆಲೋಚಿಸುವಂತೆ ಮಾಡಿದ್ದಾರೆ.

ಉತ್ತರ ಭಾರತದ ದೇಶ ಸಂಚಾರದಲ್ಲಿ, ಅಡುಗೆ ಭಟ್ಟರಾಗಿದ್ದವರು ದೆಹಲಿಯಲ್ಲಿ ಹೋಟೆಲನ್ನು ಇಟ್ಟು, ಲಕ್ಷ್ಮಮ್ಮನ್ನು ಮದುವೆಯಾಗಿ ಹೋದವರು ಬಂದಿದ್ದು ತಾವೊಬ್ಬರೇ. ಅಶ್ವಾರ್ಣಭಟ್ಟರು ಹೇಳುವ ಕತೆಯಲ್ಲಿ ಮಡದಿ ಲಕ್ಷ್ಮಮ್ಮನನ್ನು ಅಪಹರಿಸಿಕೊಂಡು ಹೋದ ಮೇಲೆ ಹುಡುಕಿದರೂ ಸಿಗದೆ ಹೋದಾಗ

ಮರಳಿ ಊರಿಗೆ ಬಂದು ಮತ್ತೊಬ್ಬಾಕೆಯನ್ನು ಮದುವೆಯಾಗುತ್ತಾರೆ. ಕೊನೆಗೆ ಹೊಟ್ಟೆ ನೋವು ತಾಳಲಾರದೆ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ದೆಹಲಿಯಲ್ಲಿ ಸಂಶೋಧನೆ ಮಾಡುತ್ತಿರುವ ಅರುಂಧತಿ ಸ್ವಾತಂತ್ರ್ಯ ಹೋರಾಟಗಾರ್ತಿ ವಿಶಾಖಾ ಬೆನ್‌ರ ಸಂದರ್ಶನಕ್ಕೆ ಹೋದಾಗ ಲಕ್ಷ್ಮಮ್ಮನ ಕತೆಯನ್ನು ಹೊತ್ತು ತರುತ್ತಾಳೆ. ಲಕ್ಷ್ಮಮ್ಮ ಅಪಹರಣವಾದ ಒಂದು ವರ್ಷಕ್ಕೆ ತಾನಿರುವ ಜಾಗಕ್ಕೆ ಬಂದ ಅಶ್ವಾರ್ಣಭಟ್ಟರು "ಮೈಮೇಲಿನ ಬೈರಾಸನ್ನು ತಲೆಯ ಮೇಲೆ ಹಾಕಿಕೊಂಡು ತಲೆಯಡಿ ಮಾಡಿಕೊಂಡು ಕರ್ಮಾಂತರಕ್ಕೆ ಹೊರಟವರ ಹಾಗೆ ವಾಪಾಸ್ಸು ಹೋಗುತ್ತಿದೆ. ಈ ಹೆಂಗಸು ತನಗೆ ಗುರುತೇ ಇಲ್ಲ ಎಂದರಂತೆ! ನನಗೆ ನಂಬಲಿಕ್ಕಾಗದೆ ಹಿಂದೆಯೇ ಓಡಿದೆ, ಕರೆದೆ, ಬೆಂಬತ್ತಿದೆ..... ಊಹೂಂ. ಉಪ್ಪು ಉಪ್ಪಿನ ಕಲ್ಲೆನ್ನದೆ ಜನ ಧಾತುಗಾಲಿನಲ್ಲಿ ಹೊರಟು ಹೋ.... ಗಿದ್ದೆ. ಹಿಂತಿರುಗಿ ಕೂಡ ನೋಡಲಿಲ್ಲ" (ಅದೇ, ಪುಟ–೬೬೮) ಎಂಬ ಮತ್ತೊಂದು ಕತೆಯನ್ನು ಮುಖಾಮುಖಿಯಾಗಿಸಿದ್ದಾರೆ. ವರ್ಷದ ನಂತರ ಏನೆಲ್ಲ ಆಗಿರಬಹುದಾದ ಕಾರಣಗಳಿಗೆ ಲಕ್ಷ್ಮಮ್ಮನನ್ನು ಸ್ವೀಕರಿಸುವ ಮನಃಸ್ಥಿತಿಯಲ್ಲಿಲ್ಲದ ಭಟ್ಟರು 'ಗೋಡೆಗೆ ಮುಖ ಮಾಡಿ ನರಳುತ್ತಿದ್ದಾರೆ'. ಅತ್ತ ಭಟ್ಟರ ಕೃತ್ಯಕ್ಕೆ ಬೇಸತ್ತ ಲಕ್ಷ್ಮಮ್ಮ ವಿಶಾಖಬೆನ್‌ರವರ ಆಶ್ರಯ ಪಡೆದು ಪರ್ಯಾಯ ಮಾರ್ಗ ಕಂಡುಕೊಂಡಿದ್ದಾಳೆ.

'ಗೂಡಿನೊಳಗೊಂದು ಹಕ್ಕಿ' ಕತೆಯಲ್ಲಿನ ಮಾಲತಿ ತನಗೆ ಹೊರಗೆ ದಕ್ಕಲಾರದ ಸ್ವಾತಂತ್ರ್ಯವನ್ನು ಮನೆಯೊಳಗೆ ದಕ್ಕಿಸಿಕೊಳ್ಳಬೇಕೆಂಬ ಹಂಬಲವಾಗುತ್ತದೆ. ಗಂಡ ಕಚೇರಿಗೆ ಹೋಗುವಾಗ, ಮನೆಯ ಹೊರಗಿನಿಂದ ಬೀಗ ಹಾಕಿಸಿಕೊಂಡು ಒಂದು ದಿನವಿಡೀ ಒಬ್ಬಳೇ ತನಗನಿಸಿದಂತೆ ಸ್ವತಂತ್ರವಾಗಿ ಇರಬೇಕೆಂಬ ವಿಚಿತ್ರ ಬಯಕೆಗೆ ಮುಂದಾಗುತ್ತಾಳೆ. ಕತೆಗಾರರು ವ್ಯವಸ್ಥೆಯಲ್ಲಿ ಹುಟ್ಟು ಹಾಕಲಾದ ಮೌಲ್ಯಗಳನ್ನು, ನಂಬಿಕೆಗಳನ್ನು ನೇರವಾಗಿ ಟೀಕಿಸುವುದಿಲ್ಲ. ಬದಲಾಗಿ ಹೆಣ್ಣಿನ ಅಂತರಂಗವನ್ನು ಬಿಡಿ ಬಿಡಿಯಾಗಿ ಚಿತ್ರಿಸುವುದರ ಮೂಲಕ ಭಾವನಾತ್ಮಕ ನೆಲೆಯಲ್ಲಿ ಚುರುಕು ಮುಟ್ಟಿಸುತ್ತಾರೆ. 'ಗೂಡು' ಹಕ್ಕಿಯ ಸುರಕ್ಷಿತ ತಾಣ. ಗೂಡಿನಾಚೆಯ ಬಯಲಿಗಿಳಿದರೆ ಮಾತ್ರ ಹಕ್ಕಿಗೆ ರೆಕ್ಕೆ ಬೀಸಿ ಹಾರುವ ಅವಕಾಶವಿದೆ ಎನ್ನುವ ಧ್ವನಿಯನ್ನು ಕತೆ ಹೊರಡಿಸುತ್ತದೆ. ಮಾಲತಿ ತನಗಿಷ್ಟ ಬಂದಂತೆ ಇರಲು ಬಯಸಿದ್ದು ಹೊರಗಿನಿಂದ ಬೀಗ ಹಾಕಿಸಿಕೊಂಡ ಮನೆಯ ಒಳಗೆ! ಹೊರಗಿನವರಿಗೆ ಒಳಗಿನ ಸದ್ದು ಕೇಳದ ಷರತ್ತಿನೊಂದಿಗೆ ತನ್ನ ಪ್ರಯೋಗಗಳನ್ನು ನಡೆಸಬೇಕು. ತೆರೆದ ಬಚ್ಚಲಿನಲ್ಲಿ ಸ್ನಾನ ಮಾಡುವ ಬಯಕೆಯಿದೆ; ಶಿಳ್ಳೆ ಹೊಡೆಯಬೇಕೆನಿಸಿದೆ; ಟೇಪ್ ರೆಕಾರ್ಡರ್ ಕೇಳಬೇಕೆನಿಸಿದೆ; ತನ್ನಷ್ಟಕ್ಕೆ ಹಾಡಿಕೊಳ್ಳಬೇಕೆನಿಸಿದೆ. ಆದರೆ ಅವೆಲ್ಲ ಸಶಬ್ದವಾದ ಕ್ರಿಯೆಗಳು. "ಈ ನಾಲ್ಕು ಗೋಡೆಯೊಳಗೆ ತಾನು ಹೇಗೆ ತಿರುಗಿದರೇನು?! ತಿರುಗುವ ಸಂತೋಷ, ಬಂಧನವೇ ಇಲ್ಲದ ಸಂತೋಷ ತಾನು ಪಡೆಯಬೇಕಾದರೆ ಬಾಗಿಲು ತೆರೆದು ಬೀದಿಗಿಳಿಯಬೇಕು. ಮೈಬೀಸಾಗಿ ನಡೆದು ಹೋಗಬೇಕು. ಬೇಕಾದಂತೆ ಓಡಿಯಾಡಬೇಕು. ತಾನು ಫ್ರೀಯಾಗಿ ಓಡಾಡುವುದನ್ನು ಹರಿಣ ಮುದುಕಿ ಹುಡುಗ ಎಲ್ಲ ನೋಡಬೇಕು. ಹೀಗೆ ಅವರಿಗೆಲ್ಲ ಹೆದರುತ್ತ ಗುಟ್ಟಿನಲ್ಲಿ ಅನುಭವಿಸಿದ ಭ್ರಾಂತಿಗೊಳಗಾಗುತ್ತ ಹೋದರೆ ಏನು ರುಚಿ? ಯಾವ ಸುಖ?" (ಅದೇ, ಪುಟ ೧೬೪) ಎಂಬ ಪ್ರಜ್ಞೆ ಉಂಟಾಗುತ್ತದೆ.

ಮನೆಯಲ್ಲಿ ಈಗ ತಾನು ಇರಬಯಸಿದ ಅವಕಾಶಗಳು ಹೊರಗಿನ ವಾಸ್ತವ ಪ್ರಪಂಚದಲ್ಲಿ ಸಾಧ್ಯವಾದಾಗ ಮಾತ್ರ ಗೂಡಿನ ಹಕ್ಕಿ ರೆಕ್ಕೆ ಬಿಚ್ಚಿ ಬಾನಿನ ಬಯಲಿನಲ್ಲಿ ಸ್ವಚ್ಛಂದವಾಗಿ ಹಾರಲು ಸಾಧ್ಯ ಎಂಬುದನ್ನು ಕತೆ ಸೂಚಿಸಿದೆ.

'ಅವಲಂಬಿತರು', 'ಯಾರಿದ್ದಾರೆ ಎಲ್ಲಿ' ಕತೆಗಳು, ತಮ್ಮ ಸ್ವಾರ್ಥ ಕೆಲಸ ಕಾರ್ಯಗಳನ್ನು ಸಾಧಿಸಿಕೊಳ್ಳಲು ಬೇರೆಯವರ ಹೆಣ್ಣುಮಕ್ಕಳ ಭವಿಷ್ಯಕ್ಕೆ ಅಡ್ಡಿಯಾಗುವ ಎರಡು ಮುಖಗಳನ್ನು ಪರಿಚಯಿಸುತ್ತದೆ. ಮೊದಲನೇ ಕತೆಯಲ್ಲಿ ಮಗುವನ್ನು ನೋಡಿಕೊಳ್ಳಲು ಶಾರದ, ಅಹಲ್ಯೆಯ ಮೇಲೆ ಅವಲಂಬಿತಳಾಗಿದ್ದಾಳೆ. ಎರಡನೇ ಕತೆಯಲ್ಲಿ ವೃದ್ಧರೊಬ್ಬರು ಬಡ ಹುಡುಗಿಯನ್ನು ಅವಲಂಬಿಸಿದ್ದಾರೆ. ಕೆಲಸ ಮಾಡುವವರು/ಮಾಡಿಸಿಕೊಳ್ಳುವವರಿಬ್ಬರೂ ಪರಸ್ಪರ ಅವಲಂಬಿತರು. 'ಅವಲಂಬಿತರು' ಕತೆಯಲ್ಲಿ ಸೂಕ್ತ ವಯಸ್ಸಿನಲ್ಲಿ ಮೈನೆರೆಯದ ಅಹಲ್ಯೆಯನ್ನು ಆಸ್ಪತ್ರೆಗೆ ತೋರಿಸಿ ಚಿಕಿತ್ಸೆಯ ಖರ್ಚು ನಿಭಾಯಿಸುವ ಹೊಣೆ ಹೊತ್ತ ಶಾರದ, ಯಾವ ಖರ್ಚು ಮಾಡುವುದಿಲ್ಲ. ಎರಡನೇ ಕತೆಯಲ್ಲಿ, ವೃದ್ಧ ತನ್ನನ್ನು ನೋಡಿಕೊಳ್ಳುವ ಸ್ವಾರ್ಥದಿಂದಾಗಿ ಹುಡುಗಿಗೆ ಬಂದ ವರಗಳನ್ನು ಆಕೆಗೆ ಗೊತ್ತಿಲ್ಲದಂತೆ ವಾಪಾಸು ಕಳಿಸುತ್ತಿರುತ್ತಾನೆ. ಕೆಲಸದ ಹುಡುಗಿಯರ ಭವಿಷ್ಯ ಮನೆಯ ಮಾಲೀಕರ ಕೈಯ್ಯಲ್ಲಿ ಸಿಕ್ಕಿ ನರಳುವುದನ್ನು ಕತೆಗಾರರು ಚಿತ್ರಿಸಿದ್ದಾರೆ. 'ಚಿಕ್ಕನ ಸತ್ಯಾಗ್ರಹ' ಕತೆಯು ಮತ್ತೊಂದು ರೀತಿಯ ನರಳುವಿಕೆಯನ್ನು ಚಿತ್ರಿಸುತ್ತದೆ. 'ಬರೀ ಒಂದು ಪೆಟ್ಟಿಗೆ' ಕತೆ ಇಷ್ಟಪಟ್ಟವನೊಂದಿಗೆ ಮದುವೆ ನೇರವೇರದಿದ್ದರೂ, ಅವನು ತನ್ನ ನೆನಪಿಗಾಗಿ ಕೊಟ್ಟ ಪೆಟ್ಟಿಗೆಯನ್ನು ಉಳಿಸಿಕೊಳ್ಳುವ ಸುತ್ತ ಕತೆ ನಡೆಯುತ್ತದೆ.

ಬಾಲ್ಯದ, ತಾರುಣ್ಯದ, ದಾಂಪತ್ಯ ಬದುಕಿನ ಆಯಾಮಗಳನ್ನು ಚಿತ್ರಿಸುವಷ್ಟೇ ಸಲೀಸಲಾಗಿ ವೃದ್ಧಾಪ್ಯದ, ಸಾವಿನ ಅಂಚಿನಲ್ಲಿರುವವರ ನೋವು-ಸಂಕಟಗಳ ದಟ್ಟ ಅನುಭವಗಳನ್ನು, ಕತೆಗಾರರು ಕತೆಗಳ ಮೂಲಕ ಮಂಡಿಸುತ್ತಾರೆ. 'ಮರಗಿಡ ಬಳ್ಳಿ', 'ಸೂತಕ', 'ಯಾತ್ರೆ', 'ಅಳಿವು-ಉಳಿವುಗಳ ನಡುವೆ', 'ಕತ್ತಲೆಯ ಮಾತು' ಮುಂತಾದ ಕತೆಗಳು ಸಾಕ್ಷಿಯಾಗಿವೆ.

ಸಾವಿನ ಅಂಚಿನಲ್ಲಿರುವ, ಮಂದಕ್ಕ ತಾನು ಹಿಂದೆ ಬಳ್ಳಿಯಂತೆ ಅಂಟಿಕೊಂಡ ಮಕ್ಕಳಿಗೆ ಮರದಂತೆ ಆಶ್ರಯ ನೀಡಿದ್ದು, ಇಂದು ಬಳ್ಳಿಯಂತೆ ಅವರನ್ನೇ ನೆಚ್ಚಿಕೊಳ್ಳಬೇಕಾದ ಅನಿವಾರ್ಯ ಸ್ಥಿತಿಯನ್ನು 'ಮರ ಗಿಡಬಳ್ಳಿ' ಕತೆ ನಿರೂಪಿಸುತ್ತದೆ. ವೃದ್ಧೆ ಮಂದಕ್ಕನ ಪ್ರಜ್ಞೆಯಲ್ಲಿ ಬದುಕಿನ ಹಿನ್ನೋಟದ ಗಳಿಗೆಗಳು ಬಿಚ್ಚಿಕೊಳ್ಳುತ್ತವೆ. ಸಂಸಾರವನ್ನು ನಿಭಾಯಿಸಿದ್ದು, ಮಕ್ಕಳನ್ನು ದೊಡ್ಡವರನ್ನಾಗಿ ಮಾಡಲು ಪಟ್ಟ ಶ್ರಮ ಕಣ್ಮುಂದೆ ಹಾಯುತ್ತದೆ. ಮಕ್ಕಳಾದ ಶ್ರೀಧರ, ಸೂರ್ಯ-ಮಾಣಿ, ಶಾರದ ಅವರವರ ಸಂಸಾರದ ಜವಾಬ್ದಾರಿಯಲ್ಲಿ ತೊಡಗಿರುವವರು. ಮಂದಕ್ಕ ಈಗಿನ ತನ್ನ ಸ್ಥಿತಿಗೆ ಮಕ್ಕಳು ಸ್ಪಂದಿಸುತ್ತಿಲ್ಲವೆಂಬ ವೇದನೆಯಲ್ಲಿಯೂ ಹಿಂದೆ ನಡೆದ ಘಟನೆಗಳ ನೆನಪಿನಿಂದ ಮುಂದಿರುವ ಕಟುವಾಸ್ತವವನ್ನು ಅರಿಯುತ್ತಾಳೆ. ತನ್ನ ತಾಯಿ ಸಾವಿನಂಚಿನಲ್ಲಿ ಒದ್ದಾಡುವಾಗ ಆಕೆ ಸತ್ತರೆ ಸಾಕೆಂಬ ಮನೋಭಾವ; 'ವರಳೆ ಹಿಡಿದ' ಗೋವೆ ಮರವನ್ನು ಕಡಿಸಿದ್ದು; ಮುದಿಯಾದ ಕಾಶಿ ದನವನ್ನು

ಚೀಂಕ್ರನೊಡನೆ ಅಟ್ಟಿದ್ದು ಎಲ್ಲ ನೆನಪಾಗುತ್ತದೆ. ವೃದ್ಧಾಪ್ಯ ಮತ್ತು ಸಾವಿನ ಅಂಚಿನಲ್ಲಿರುವವರು ಒಂಟಿತನದ ಬೇಗೆಯನ್ನು ಸಹಿಸುವುದು ಅನಿವಾರ್ಯದ ಸ್ಥಿತಿಯಾಗಿದೆಯೆಂಬುದನ್ನು ಕತೆ ವಿವರಿಸುತ್ತದೆ.

'ಯಾತ್ರೆ' ಕತೆಯಲ್ಲಿ ಬದುಕಿನ ಅನುಭವದ ಯಾತ್ರೆ, ಬದುಕು ಮುಗಿಸಿದವರ ಯಾತ್ರೆಯಿದೆ. ಕತೆಯ ನಿರೂಪಕರು ಬದುಕಿನ ಯಾತ್ರೆಯ ಸುಮಾರು ಇಪ್ಪತ್ತು ವರ್ಷಗಳಲ್ಲಿ, ಆದ ಬದಲಾವಣೆಯನ್ನು ದಾಖಲಿಸಿದ್ದಾರೆ. ಓಡುವ ಬಸ್ಸಿನಲ್ಲಿ ಕುಳಿತು, ಹಿಂದೋಡುವ ನೆನಪುಗಳನ್ನು ಸೆರೆಹಿಡಿಯಲಾಗಿದೆ. ಮುತ್ತೈದೆಯಾಗಿ ಅಲಂಕರಿಸಿಕೊಂಡು ತೌರು ಮನೆಗೆ ಹೋಗುವ ಸಂಭ್ರಮದಲ್ಲಿದ್ದ ಅಮ್ಮ ಇಂದು ವಿಧವೆಯಾಗಿ ಹೊರಡುತ್ತಿದ್ದಾಳೆ; ಮಾಬುಕಳ ಸೀತಾ ನದಿ ದಾಟಲು ಹಿಂದೆ ದೋಣಿಯಿದ್ದರೆ, ಈಗ ನೇರ ಬಸ್ಸು ಹೋಗಲು ಸೇತುವೆಯಾಗಿದೆ; ನಡೆದು ಹೋಗುವ ದಾರಿಗಳಲ್ಲಿ ಆಟೋ ಸೌಲಭ್ಯವಿರುವ ಸಂಗತಿಗಳನ್ನು ದಾಖಲಿಸಿದ್ದಾರೆ. ಅಜ್ಜಯ್ಯ ಸತ್ತಾಗ; ನಾಗಪ್ಪ ಮಾವಯ್ಯನ ಹೆಂಡತಿ ಸತ್ತಾಗ; ಶೇಷ ಮಾವಯ್ಯ ಸತ್ತಾಗ.... ಹೀಗೆ ಯಾರಾದರೂ ಸತ್ತಾಗ ತಾಯಿಯ ತೌರಿಗೆ ಪಯಣ ಬೆಳೆಸುವ ಯಾತ್ರೆಯನ್ನು ಪ್ರಸ್ತಾಪಿಸಲಾಗಿದೆ.

ಗತದ ಬದುಕಿನ ದರ್ಶನ ಮಾಡಿಸುವಲ್ಲಿ ವೈದೇಹಿಯವರ ಲೇಖನಿಗೆ ಹೆಚ್ಚು ಶಕ್ತಿಯಿದೆ. 'ಅಳಿವು ಉಳಿವುಗಳ ಮಧ್ಯೆ' ಕತೆಯಲ್ಲಿ ವಾಸುಮಾಣಿ ಹಳೆಯ ಮನೆ ಕೆಡವಿ, ಹೊಸ ಮನೆ ಕಟ್ಟಿ ಹೇಳಿಕೆ ಕೊಟ್ಟು ಹೋಗಿದ್ದಾನೆ. ಮೂಕತ್ತೆಗೆ ತವರಿನ ಆ ಮನೆಯಲ್ಲಿ ಕಳೆದ ದಿನಗಳು; ಪ್ರತಿಯೊಂದು ವಸ್ತುಗಳು; ವ್ಯಕ್ತಿಗಳು ನೆನಪಿಗೆ ಬರುತ್ತಾರೆ. "ನೀನು ಜಗಲಿ ಅಳಿಸಿದೆ ಎಂದೆ. ಎಲ್ಲಿ ಅಳಿಸಿದೆ? ಇರುವುದು ಎಷ್ಟು ಭ್ರಮೆಯೋ ಅಳಿಸುವುದೂ ಅಷ್ಟೇ ಭ್ರಮೆ ತಿಳಿಕೊ. ಅಳಿಯಿತು ಅಂತ ನನಗೆ ನೋವು. ಅಳಿಸಿದ ಅಂತ ನಿನಗೆ ಹಮ್ಮು" (ಅದೇ, ಪುಟ-೪೬೫) ಎಂಬ ತತ್ವವನ್ನು ಮೂಕತ್ತೆ ಸಾರುತ್ತಾರೆ.

'ಮರೆವು' ಕತೆ, ಅದರ ತಾಂತ್ರಿಕ ಮತ್ತು ತಾತ್ವಿಕ ದೃಷ್ಟಿಯಿಂದ ವಿಶಿಷ್ಟವಾದ ಕತೆ. ವೃದ್ಧಾಪ್ಯ ಒಂದು ವೇದನೆಯ ಅನಿವಾರ್ಯ ಸ್ಥಿತಿಯೆಂಬುದನ್ನು ಇತರ ಕತೆಗಳು ವಿಶ್ಲೇಷಿಸಿದ್ದರೆ, 'ಮರೆವು' ಕತೆ ಗಂಡು-ಹೆಣ್ಣು ಎಂಬ ಭೇದವನ್ನು ಬಾಲ್ಯ-ವೃದ್ಧಾಪ್ಯದ ಅಂತರವನ್ನು ಮೀರುವ ನಿರಾಮಯ ಸ್ಥಿತಿಯನ್ನು ಮನಗಾಣಿಸುತ್ತದೆ. ಬಾಲ್ಯ ಮತ್ತು ವೃದ್ಧಾಪ್ಯದ ಸ್ಥಿತಿಯಲ್ಲಿರುವ ಲಿಂಗಬೇಧವಿಲ್ಲದ ಕೆಲವು ಲಕ್ಷಣಗಳನ್ನು ಸಾಮಾನ್ಯೀಕರಿಸಲಾಗಿದೆ. ಬಾಲ್ಯದಲ್ಲಿರುವ ಯಾವ ಮಕ್ಕಳ ಕೆನ್ನೆ ಸವರಿದರೂ ಹುಡುಗಿಯ ಕೆನ್ನೆ ಮುಟ್ಟಿದಂತಾಗುವುದು; ಕೂದಲು ಕತ್ತರಿಸಿದ ಹೆಣ್ಣು ಹುಡುಗಿಯರಿಗೆ ನಿಕ್ಕರ್-ಷರ್ಟು ಹಾಕಿದರೆ ಗಂಡು ಹುಡುಗರ ಹಾಗೆ ಕಾಣುವುದು; ವೃದ್ಧಾಪ್ಯದಲ್ಲಿ ಗಂಡ-ಹೆಂಡತಿಯರು ಪರಸ್ಪರರಿಗೆ ತಾಯಿಯಾಗುವುದು, ಸ್ನೇಹಿತರಾಗುವ ಸಂಬಂಧಗಳನ್ನು ಸೂಕ್ಷ್ಮವಾಗಿ ವಿಶ್ಲೇಷಿಸಲಾಗಿದೆ. ಪರಸ್ಪರರ ಮರೆವಿನಿಂದ ಅಜ್ಜ ಅಜ್ಜಿಯ ಉಡುಪನ್ನು; ಅಜ್ಜಿ-ಅಜ್ಜನ ಉಡುಪನ್ನು ಧರಿಸಿ ಬೀದಿಗಿಳಿಯುತ್ತಾರೆ. ಉಡುಪಿನ ಬದಲಾವಣೆಯ ತಂತ್ರದ ಮೂಲಕ ವೃದ್ಧಾಪತ್ಯದ ಲಿಂಗಭೇದ ರಹಿತ ಮನಃಸ್ಥಿತಿಯನ್ನು ಪರಿಣಾಮಕಾರಿಯಾಗಿ ಚಿತ್ರಿಸಲಾಗಿದೆ.

ವೈದೇಹಿಯವರು ತಮ್ಮ ಕತೆಗಳಲ್ಲಿ ನಿರ್ದಿಷ್ಟ ವಸ್ತುವನ್ನು ನಿಭಾಯಿಸುವ ವಿಧಾನವನ್ನು ಅನುಸರಿಸುವುದಿಲ್ಲ. ಬದಲಾಗಿ ಬದುಕಿನ ದಟ್ಟ ಅನುಭವಗಳನ್ನು ನಿರೂಪಿಸುವುದರ ಮೂಲಕ ವಸ್ತು ಕರಗಿ ಲೀನವಾಗುವಂತೆ ಎಚ್ಚರಿಕೆ ವಹಿಸುತ್ತಾರೆ. ಭಾವಕ್ಕೆ, ಧ್ವನಿಗೆ, ತಂತ್ರಕ್ಕೆ ಹೆಚ್ಚಿನ ಒತ್ತು ಕೊಟ್ಟಿದ್ದಾರೆ. ಒಂದು ಕತೆಯ ವಸ್ತು ಇಂಥದ್ದೇ ಎಂದು ಗೋಚರಿಸದೇ ಹೋದಾಗ ಅವರ ಇತರ ಕತೆಗಳು ನೆರವಿಗೆ ಬರುತ್ತವೆ. ಕುಂದಾಪುರದ ಕನ್ನಡದ ಆಡುನುಡಿ, ಬಂಟವಾಳ ಪ್ರದೇಶದ ಕನ್ನಡವನ್ನು ಕತೆಯ ಸಂಕೀರ್ಣತೆಗೆ ಸಮರ್ಥವಾಗಿ ಬಳಸಿಕೊಂಡಿದ್ದಾರೆ. ವಾಸ್ತವ ಬದುಕಿನ ಸಂಕೀರ್ಣ ನೆಲೆಗಳನ್ನು ವಾಚ್ಯವಾಗಿಸದೆ, ಧ್ವನಿಪೂರ್ಣತೆ ಮತ್ತು ಕಲಾವಂತಿಕೆಯಲ್ಲಿ ಸೆರೆಹಿಡಿಯುವುದು ವೈದೇಹಿಯವರಿಗೇ ವಿಶಿಷ್ಟವಾದ ಶೈಲಿಯಾಗಿದೆ.

**೬.೮.೨ ಮುಸ್ಲಿಂ ಸಮುದಾಯದ ಸಾಂಸಕೃತಿಕ ಆವರಣ**

ವೈದೇಹಿಯವರು, ತಮ್ಮ ಕತೆಗಳ ಮೂಲಕ ಹೆಣ್ಣಿನ ಅಂತರಂಗದ ವಾಸ್ತವಗಳ ಭಿನ್ನ ಆಯಾಮಗಳನ್ನು ಪರಿಚಯಿಸಿದ್ದರೆ, ಮುಮ್ತಾಜ್ ಬೇಗಂ, ಸಾರಾ ಅಬೂಬಕ್ಕರ್, ಬಾನು ಮುಷ್ತಾಕ್, ಕೆ.ಷರೀಫಾ ಮುಂತಾದವರ ಬರಹಗಳು, ಮುಸ್ಲಿಂ ಸಮುದಾಯದ ಜೀವನ ಕ್ರಮವನ್ನು; ಸಾಂಸ್ಕೃತಿಕ ಆವರಣದಲ್ಲಿ ಮುಸ್ಲಿಂ ಮಹಿಳೆಯರ ನೋವು–ಸಂಕಟ–ತಲ್ಲಣಗಳನ್ನು; ಅನಾವರಣಗೊಳಿಸಿವೆ. ಪ್ರಾತಿನಿಧಿಕವಾಗಿ ಬಾನುಮುಷ್ತಾಕ್‌ರವರ 'ಹೆಜ್ಜೆ ಮೂಡಿದ ಹಾದಿ', 'ಬೆಂಕಿ ಮಳೆ', 'ಎದೆಯ ಹಣತೆ' ಕಥಾ ಸಂಕಲನಗಳನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.

* ಮುಸ್ಲಿಂ ಸಮುದಾಯದ ಸಾಂಸ್ಕೃತಿಕ ಆವರಣ.
* ಧರ್ಮ, ಧಾರ್ಮಿಕ ಗ್ರಂಥದ ಹೆಸರಿನಲ್ಲಿ ಹೆಣ್ಣಿನ ಮೇಲೆ ನಡೆಯುವ ಕ್ರೌರ್ಯಗಳ ಅನಾವರಣ.
* ಪ್ರತಿಭಟನಾತ್ಮಕ ಧೋರಣೆ.

ಮೇಲಿನ ಮೂರು ಮುಖ್ಯ ಆಶಯಗಳನ್ನು ಇಟ್ಟುಕೊಂಡು ಬಾನು ಮುಷ್ತಾಕ್‌ರವರ ಕತೆಗಳನ್ನು ವಿಶ್ಲೇಷಿಸಲಾಗಿದೆ. ವಿಭಿನ್ನ ಜಾತಿ, ಧರ್ಮಗಳಿಂದ ಬಂದ ಬರಹಗಾರರಿಂದ, ಆಯಾ ಸಮುದಾಯದ ಧಾರ್ಮಿಕ, ಸಾಂಸ್ಕೃತಿಕ ಜಗತ್ತು, ಕನ್ನಡ ಸಾಹಿತ್ಯ ಲೋಕಕ್ಕೆ ಪರಿಚಯವಾಗಿದೆ.

'ಶಾಯಿಸ್ತ ಮಹಲ್‌ನ ಕಲ್ಲು ಚಪ್ಪಡಿಗಳು' ಕತೆಯಲ್ಲಿ ಬಾಣಂತಿಯ ಆರೈಕೆಯನ್ನು ಕುರಿತು ಪ್ರಸ್ತಾಪಿಸಲಾಗಿದೆ. ಹೆರಿಗೆಯಾದ ಮೂರು ತಿಂಗಳವರೆಗೆ ಬಾಣಂತಿಗೆ ಕೊಡುವ ಕುರಿಯ ಕಾಲಿನ ಅಥವಾ ತಲೆಯ ಸೂಪ್, ಮಾಂಸದ ಅಡುಗೆ ಇತರೆ ಉಪಚಾರಗಳಿವೆ. ತಣ್ಣನೆಯ ನೀರು, ಗಾಳಿ ಸೋಕದಂತೆ ಬೆಚ್ಚಗಿರಿಸುವ ಉದ್ದೇಶದಲ್ಲಿ "ಬಾಣಂತಿ ಮಗುಗೆ ನಲವತ್ತು ದಿನದವರೆಗೆ ನಲವತ್ತು ಗೋರಿಗಳು ಬಾಯಿ ತೆರೆದುಕೊಂಡಿರುತ್ತವೆ. ಒಂದೊಂದು ದಿನ ಕಳೆದ ಹಾಗೆ ಒಂದೊಂದು ಗೋರಿ ಬಾಯಿ ಮುಚ್ಚುತ್ತದೆ" ಎಂಬ ನಂಬಿಕೆಯಿದೆ (ಹೆಜ್ಜೆ ಮೂಡಿದ ಹಾದಿ, ಪುಟ–೫೬).

ಮುಸ್ಲಿಂ ಗಂಡು ಮಕ್ಕಳಿಗೆ ಮಾತ್ರ ಮಾಡಿಸುವ 'ಖತ್ನಾ' ಪದ್ಧತಿಯ ಆಚರಣೆಯನ್ನು 'ಕೆಂಪು ಲುಂಗಿ' ಕತೆಯಲ್ಲಿ ವಿವರಿಸಲಾಗಿದೆ. ಹನ್ನೊಂದು ವರ್ಷ ತುಂಬುವ ಮೊದಲು ಈ ಕ್ರಿಯಾಚರಣೆಯನ್ನು

ನೆರವೇರಿಸಲಾಗುತ್ತದೆ. ಬೋರಲು ಹಾಕಿದ ತಾಮ್ರದ ಬಿಂದಿಗೆಯ ಮೇಲೆ ಕೂಡಿಸಿ, ಶಿಶ್ನದ ತುದಿಯ ಚರ್ಮವನ್ನು ಕತ್ತರಿಸಲಾಗುತ್ತದೆ. 'ಖತ್ನಾ' ಆದ ಹನ್ನೊಂದನೇ ದಿನಕ್ಕೆ ಬಂಧು-ನೆಂಟರಿಷ್ಟರಿಗೆ ಊತಣ ಕೊಡಲಾಗುತ್ತದೆ. 'ಖತ್ನಾ' ಪದ್ಧತಿಯನ್ನು ಪರಿಚಯಿಸುತ್ತಾ, "ಖಾರ್ ಕು ಖುದಾ ಕ ಯಾರ್, ಗರೀಬ್ ಕು ಪರ್‌ವರ್‌ದಿಗಾರ್" (ಹಣವಂತರಿಗೆ ಜನರ ಸಹಾಯವಾದರೆ, ಬಡವನಿಗೆ ದೇವರ ನೆರವು) ಎಂಬ ಸಂದೇಶವನ್ನು ರವಾನಿಸಿದ್ದಾರೆ.

ಸಾವಿನ ನಂತರದ ಆಚರಣೆಗಳೂ ಮುಸ್ಲಿಂರಲ್ಲಿ ವಿಶಿಷ್ಟವಾದುದಾಗಿದೆ. ಸತ್ತವರ ಹೆಣಕ್ಕೆ ಶೃಂಗಾರ ಮಾಡುವುದನ್ನು 'ಗುಸಲ್' ಎನ್ನುತ್ತಾರೆ. 'ದೇವರು ಮತ್ತು ಅಪಘಾತ' ಕತೆಯಲ್ಲಿ ಅದರ ವಿವರಗಳನ್ನು ದಾಖಲಿಸಲಾಗಿದೆ. ಹೆಣ್ಣುಮಕ್ಕಳು ಸತ್ತರೆ, ಹೆಣ್ಣು ಮಕ್ಕಳೇ ಆ ಶವಕ್ಕೆ 'ಗುಸಲ್' ಮಾಡಿಸಬೇಕು. ಸ್ವತಃ ಆಕೆಯ ಗಂಡ, ತಂದೆ, ಅಣ್ಣ, ತಮ್ಮ ಯಾರೂ ಮುಟ್ಟುವಂತಿಲ್ಲ. ಅದಕ್ಕಿರುವ ಕಾರಣವನ್ನು ಕತೆಯ ಮುಖ್ಯ ಪಾತ್ರವಾದ ಮರಿಯಮ್ ಬೀ "ಒಬ್ಬ ಹೆಂಗಸು ಶೀಲವಂತೆ ಅಂತ ಅನಿಸಿಕೊಳ್ಳಬೇಕಾದರೆ, ಅವಳು ಸತ್ತು ಮೂರು ದಿನ ಆಗ್ಬೇಕು" (ಅದೇ, ಪುಟ- ೬೯) ಎಂಬ ಮಾತನ್ನು ನೆನಪಿಸಿಕೊಂಡು ಹೇಳುತ್ತಾಳೆ. ಆ ಮಾತಿನಾರ್ಥ, ಸತ್ತ ಹೆಣ್ಣಿನ ಮೇಲೆಯೂ ಅತ್ಯಾಚಾರವೆಸಗುವ ವಿಕೃತ ಮನಸ್ಸಿನ ಗಂಡಸರಿದ್ದಾರೆ ಎಂಬ ಕ್ರೂರ ವಾಸ್ತವವನ್ನು ತಿಳಿಸುವುದಾಗಿದೆ. ಶವವನ್ನು ಸ್ನಾನ ಮಾಡಿಸುವಾಗ ಆ ನೀರು ಬೇರೆಡೆ ಹರಿದು ಹೋಗದಂತಿರಲು, ಅಳತೆಗೆ ತಕ್ಕ ಗುಂಡಿ ತೋಡಿ, ಅದರ ಮೇಲೆ ಇಸ್ಲಾಂ ಚಿನ್ಹೆ ಇರುವ 'ಲಹದ್' ಹಲಗೆಯ ಮೇಲೆ ಮಲಗಿಸಲಾಗಿರುತ್ತದೆ. ಹದವಾದ ಬಿಸಿ ನೀರಿಗೆ ಬೇವಿನ ಎಲೆ, ದಾಳಿಂಬೆ ಎಲೆ ಬೆರಸಿ, ಉಗುರಿನಲ್ಲಿರುವ ಮಣ್ಣನ್ನು ಬೆಂಕಿಕಡ್ಡಿಯಿಂದ ತೆಗೆದು, ಅಂಟವಾಳಕಾಯಿ, ಸೋಪಿನಿಂದ ದೇಹವನ್ನು ಶುಭ್ರಗೊಳಿಸಲಾಗುತ್ತದೆ. ನಂತರ ಸುಗಂಧ ದ್ರವ್ಯಗಳನ್ನು ಲೇಪಿಸಿ, ಕಣ್ಣಿಗೆ ಸುರ್ಮಾ ಹಚ್ಚುತ್ತಾರೆ. ಅಳತೆಗೆ ತಕ್ಕಂತೆ ಬಟ್ಟೆಯನ್ನು ಕತ್ತರಿಸಿ 'ದಫನ್' ಕಟ್ಟಲಾಗುತ್ತದೆ. ಹೆಣಕ್ಕೆ ಹಾಗೆ ಶೃಂಗಾರ ಮಾಡುವವರನ್ನು 'ಗಸ್ಸಾಲಿನ್' ಎಂದು ಕರೆಯುತ್ತಾರೆ.

'ಗುಸಲ್' ಮಾಡಿಸುವ ಆಚರಣೆಯನ್ನು ಸಂದರ್ಭೋಚಿತವಾಗಿ ತಿಳಿಸುವುದರೊಂದಿಗೆ ಗಸ್ಸಾಲಿನ್ ವೃತ್ತಿಯಿಂದ ಜೀವನ ಸಾಗಿಸುತ್ತಿರುವ ಮರಿಯಮ್‌ಬೀಯ ಕತೆಯನ್ನು 'ದೇವರು ಮತ್ತು ಅಪಘಾತ' ಕತೆಯಲ್ಲಿ ವಿಶಿಷ್ಟವಾಗಿ ಹೆಣೆಯಲಾಗಿದೆ. ಮುಸ್ಲಿಂ ಹೆಣ್ಣುಗಳ ಸಾವು – ಮರಿಯಮ್ ಬೀ ಕುಟುಂಬದ ಉಳಿವಿಗೆ ಕಾರಣವಾಗಿದೆ. ಇಪ್ಪತ್ತೇಳು ದಿನಗಳ ಕಾಲ ಯಾರೂ ಸಾಯದೇ, ಮರಿಯಮ್ ಬೀ ಮತ್ತು ಆಕೆಯ ಹಸಿ ಬಾಣಂತಿ ಮಗಳು ಹಸಿವಿನಿಂದ ಕಂಗೆಟ್ಟಿದ್ದಾರೆ. ಯಾರಾದರೂ ಸಾಯುವಂತೆ ಮಾಡೆಂದು ದೇವರಲ್ಲಿ ಆಕೆ ಪ್ರಾರ್ಥಿಸುವುದು ವಿಚಿತ್ರವೆಂದು ತೋರಿದರೂ, ಬದುಕಿನ ಅನಿವಾರ್ಯತೆಯನ್ನು ಅದು ಸೂಚಿಸುತ್ತದೆ. ದೇವರು ಪ್ರಾರ್ಥನೆಗೆ ಓಗೊಟ್ಟಂತೆ, ಅಪಘಾತದಲ್ಲಿ ಶ್ರೀಮಂತ ಮನೆತನದ ಮೂವರು ಹೆಣ್ಣು ಮಕ್ಕಳು ಅಸು ನೀಗುತ್ತಾರೆ. ಸುಪ್ರೀತಗೊಂಡ ಮರಿಯಮ್ ಬೀ 'ಗುಸಲ್' ಮಾಡಿಸಲು ಮುಂದಾಗುತ್ತಾಳೆ. ಮರಿಯಮ್ ಬೀ ತ್ಯಾಗ-ಸಹನಶೀಲ ಗುಣದ 'ಆದರ್ಶ' ಪಾತ್ರವಲ್ಲ. ಬದುಕಿನ ಅನಿವಾರ್ಯತೆ ಗಳನ್ನು ಎದುರಿಸುವ ವ್ಯಕ್ತಿಯಾಗಿದ್ದಾಳೆ. ಉದಾಹರಣೆ

ನೀಡುವುದಾದರೆ, ಸತ್ತ ಮನೆಯಲ್ಲಿ ಊಟ ಮಾಡುತ್ತಿರುವಾಗ "ಅವಳ ಮಗಳು ಹಸೀನ ಅವಳ ಗಂಟಲಲ್ಲಿ ಅಡ್ಡಲಾಗಿ ಸಿಲುಕಿಕೊಂಡಳು. ಪಾಪ! ಬಾಣಂತಿ ಮೊದ್ಲೇ ಆ ಮಗೂಗೆ ಕುಡಿಸೋಕ ಹಾಲಿಲ್ಲ. ಇನ್ನು ಊಟ ಬೇರೆ ಇಲ್ಲ ಅಂದ್ರೆ.. ಬರೀ ಹೊಟ್ಟೆಯ ತಾಯಿಯ ಎದೆಯನ್ನು ಮಗುವು ಚೀಪಿದಾಗ ಆಗುವ ಉರಿ, ಸಂಕಟ, ಯಾ ಅಲ್ಲಾಹ್! ನನ್ನ ಮಗಳು ಹಸಿದು ಕೂತಿದ್ದಾಳೆ. ಮನಸ್ಸು ಮಗಳನ್ನು ನೆನೆದು ಬಿಕ್ಕಳಿಸುತ್ತಿರುವಾಗ, ಹಸಿದ ಕರುಳುಗಳೇ ಗೆದ್ದವು. ಅವಳ ಗಂಟಲಿನಲ್ಲಿ ಅಡರಿ ಕುಳಿತ ಹಸೀನಾಳನ್ನು ಮುಲಾಜಿಲ್ಲದೆ ಅವು ಕಿತ್ತೆಸೆದು, ಒಂದರ ಹಿಂದೆ ಒಂದು ತುತ್ತುಗಳನ್ನು ಬರ ಮಾಡಿಕೊಂಡು ನಿರಾಳವಾದವು" (ಬೆಂಕಿ ಮಳೆ, ಪುಟ-೭೨) ಹಸಿವಿನ ಮುಂದೆ ಎಲ್ಲಾ ನೆನಪುಗಳು ಗೌಣವಾಗುತ್ತವೆ ಎನ್ನುವುದನ್ನು ಮೇಲಿನ ವಿವರಣೆಯಿಂದ ತಿಳಿಯಬಹುದಾಗಿದೆ. ಹಂಡೆಯಲ್ಲಿರುವ ಬಿಸಿನೀರು, ಅಂಟವಾಳಕಾಯಿ, ಸೋಪುಗಳನ್ನು ನೋಡಿ ಸ್ನಾನವನ್ನೂ ಮಾಡುತ್ತಾಳೆ. ಸತ್ತವರ ಮನೆ ಮಂದಿಗೆಲ್ಲಾ ದುಃಖದ ಗಾಢ ವಿಷಾದ ಭಾವ ಆವರಿಸಿದರೆ, ಆ ಮನೆಯಿಂದ ಸಿಗುವ ಗೋಧಿ, ಅಕ್ಕಿ, ಉಪ್ಪು, ಊಟ, ಬಟ್ಟೆ, ಹಣವನ್ನು ಹೊತ್ತೊಯ್ಯುವ ಮರಿಯಮ್‌ಬೀ ಮುಖದಲ್ಲಿ ತೃಪ್ತಿಯ ಕಳೆ ಮಿನುಗುತ್ತದೆ. ಕತೆಗಾರರು ನೇರವಾಗಿ, ವೃತ್ತಾಂತ ವಿಧಾನದಲ್ಲಿ ಕತೆಯನ್ನು ಹೇಳಿದ್ದರೂ, ಮರಿಯಮ್ ಬೀಯ ಅಂತರಂಗದ ಸ್ವಗತದಂತೆ ಭಾಸವಾಗುತ್ತದೆ. ನಿರ್ಮಿಸಿಕೊಂಡಿರುವ ಸಾವಿನ ಆಚರಣೆಯ ಸನ್ನಿವೇಶದಲ್ಲಿ ಕತೆ ಪರಿಣಾಮಕಾರಿಯಾಗಿ ಮೂಡಿ ಬಂದಿದೆ. ಗಸ್ಸಾಲಿನ್ ಮರಿಯಮ್ ಬೀ ಮನಸ್ಸಿನಿಂದ ಮರೆಯಾಗದ, ಜೀವಂತ ಪಾತ್ರವಾಗಿದ್ದಾಳೆ.

'ಬೆಂಕಿ ಮಳೆ' ಕತೆಯಲ್ಲಿ ಕೆರೆಯಲ್ಲಿ ಬಿದ್ದು ಸತ್ತ ಮುಸ್ಲಿಂ ಹೆಣವನ್ನು ಪೋಲೀಸರು ಹಿಂದೂಗಳ ಸ್ಮಶಾನದಲ್ಲಿ ಹೂಳಿದ್ದು ಪ್ರಮಾದದ ಅತ್ಯಂತ ಗಂಭೀರವಾದ ಸಂಗತಿಯಾಗುತ್ತದೆ. ಮುತುವಲ್ಲಿ ಉಸ್ಮಾನ್ ನೇತೃತ್ವದಲ್ಲಿ ಜಿಲ್ಲಾದಿಕಾರಿಗಳ ಒಪ್ಪಿಗೆ ಪಡೆದು, ಹೂಳಲಾದ ಹೆಣವನ್ನು, ಹೊರೆಗೆ ತೆಗೆಸಿ, ಮುಸ್ಲಿಂ ಪದ್ಧತಿಯ ಪ್ರಕಾರ 'ಗುಸಲ್' ಮಾಡಿಸಿ, ಕಫನ್ ಕಟ್ಟಿಸಿ, ಖಬರ್ ಸ್ತಾನದಲ್ಲಿ ದಫನ್ ಮಾಡಲಾಗುತ್ತದೆ. ಕತೆಗಾರರು ನೀಡುವ ಕೊನೆಯ ತಿರುವಿನಲ್ಲಿ ಯಾರನ್ನು ತಾವು ಮುಸ್ಲಿಂ ಹೆಣವೆಂದು ಭಾವಿಸಿ, ಕೈಯಿಂದ ಹಣ ವ್ಯಯಿಸಿ, ದಫನ್ ಮಾಡಿದ್ದೇವೆಂದು ಭಾವಿಸಿದ್ದರೋ, ಆ ವ್ಯಕ್ತಿ ಹೆಣದ ಮೆರವಣಿಗೆಯಲ್ಲಿ ಪಾಲುಗೊಳ್ಳುತ್ತಾನೆ. ಬೇರೆ ಸಮಸ್ಯೆಗಳನ್ನು ಕೈಬಿಟ್ಟು, ಹೂತ ಹೆಣವನ್ನು ಧಾರ್ಮಿಕ ಆಚರಣೆ ಹೆಸರಿನಲ್ಲಿ ಮತ್ತೆ ಹೂಳುವುದು ಅರ್ಥಹೀನವೆಂದು ಕತೆ ಪರೋಕ್ಷವಾಗಿ ಸಂದೇಶ ನೀಡಿದೆ.

ಸತ್ತ ಮೂರು ದಿನಕ್ಕೆ ಆಚರಿಸುವ 'ಜಿಯಾರತ್' ಮತ್ತು ಇಪ್ಪತ್ತು-ನಲವತ್ತನೇ ದಿನ ಆಚರಿಸುವ 'ಚಹಲಮ್' ವಿಧಿಯಾಚರಣೆಯ ಪ್ರಸ್ತಾಪ 'ಜೀವಸೆಲೆ' ಕತೆಯಲ್ಲಿದೆ. ಗಂಡಸತ್ತು ನಾಲ್ಕು ತಿಂಗಳು ಹತ್ತು ದಿನದವರೆಗೆ ಶೋಕವನ್ನು ಆಚರಿಸುವಾಗ ಹೆಂಡತಿಯಾದವರು ಹೊರಗೆಲ್ಲೂ ಹೋಗದೇ, ಶೃಂಗರಿಸಿಕೊಳ್ಳದೇ, ಸುವಾಸನಾ ದ್ರವ್ಯಗಳನ್ನು ಲೇಪಿಸಿಕೊಳ್ಳದಿರುವ ನಿಯಮಗಳಿವೆ. ಕುಟುಂಬಕ್ಕೆ ಆಧಾರವಾಗಿದ್ದ ಸಿರಾಜನ ಸಾವು, ಲಬಿದಳ ದುರಂತ ಬದುಕಿಗೆ ನಾಂದಿಯಾದುದನ್ನು ಕತೆ ವಿವರಿಸುತ್ತದೆ.

ಮುಸ್ಲಿಂ ಸಮುದಾಯದ ಸಾಂಸ್ಕೃತಿಕ ಆಚರಣೆಗಳು ಮತ್ತು ಆ ಪದ್ಧತಿಗಳೊಂದಿಗೆ ಬೆಸೆದುಕೊಂಡಿರುವ ವ್ಯಕ್ತಿಗಳ ಸಂಬಂಧವನ್ನು ಮೇಲಿನ ಕತೆಗಳು ತಿಳಿಸುತ್ತವೆ.

ಧರ್ಮದ ಹೆಸರಿನಲ್ಲಿ ಹೆಣ್ಣಿನ ಮೇಲೆ ನಡೆಯುವ ಕ್ರೌರ್ಯಗಳನ್ನು 'ಸರಿದ ಕಾರ್ಮೋಡ', 'ಶಾಯಿಸ್ತ ಮಹಲ್‌ನ ಕಲ್ಲು ಚಪ್ಪಡಿಗಳು', 'ಒಮ್ಮೆ ಹೆಣ್ಣಾಗು ಪ್ರಭುವೆ', 'ಕರಿ ನಾಗರಗಳು', 'ಎದೆಯ ಹಣತೆ' ಮುಂತಾದ ಕತೆಗಳು ತಿಳಿಸುತ್ತವೆ.

'ಸರಿದ ಕಾರ್ಮೋಡ' ಕತೆಯಲ್ಲಿ ಧಾರ್ಮಿಕ ರೂಢಿ, ಸಂಪ್ರದಾಯಗಳನ್ನು ಪಾಲಿಸಲಿಲ್ಲವೆಂಬ ಕಾರಣಕ್ಕೆ ನವಾಬನ ಹಿರಿಯಣ್ಣ, ನವಾಬ್-ಜಬೀನಳನ್ನು ಅಗಲಿಸುವ ಕಾರ್ಯಕ್ಕೆ ಕೈಹಾಕುವ ಕ್ರೂರತನಕ್ಕೆ ಇಳಿಯುತ್ತಾನೆ. ಹಿರಿಯಣ್ಣನ ಅಸಮಾಧಾನಕ್ಕೆ ಹಲವು ಕಾರಣಗಳಿವೆ. "ಆ ಕುಟುಂಬದಲ್ಲಿ ಪ್ರತಿದಿನ ತಲೆ ಸ್ನಾನ ಮಾಡೋದು ಸಾಮಾನ್ಯ ವಿಷಯವಾಗಿರಲಿಲ್ಲ. ಅದರರ್ಥ ಪ್ರತಿ ದಿನ ಆಕೆ ಗಂಡನೊಡನೆ ಕೂಡುತ್ತಿದ್ದಾಳೆಂದು. ಇಂಥ ಲಜ್ಜೆಹೀನ ನಡವಳಿಕೆ ನವಾಬ್ ಮತ್ತು ಜಬೀನಳಿಂದ.. ಥೂ! ಈ ವಿಚಾರವಾಗಿ ಎಚ್ಚರಿಕೆಯಿಂದಿರಬೇಕೆಂದು ಅವನಿಗೆ ಸೂಕ್ಷ್ಮವಾಗಿ ಎಚ್ಚರಿಸಲಾಗಿತ್ತು." (ಹೆಜ್ಜೆ ಮೂಡಿದ ಹಾದಿ, ಪುಟ-೨೪) ಎಂಬ ಸಂಗತಿ ಅಚ್ಚರಿ ಹುಟ್ಟಿಸುತ್ತದೆ. ಅನ್ಯೋನ್ಯವಾಗಿದ್ದ ಗಂಡ-ಹೆಂಡತಿ ಪ್ರತಿ ದಿನ ಕೂಡುವುದೂ ಅಪರಾಧದ ಸಂಗತಿಯಾಗುತ್ತದೆ. ಇದರೊಂದಿಗೆ ಜಬೀನಾ ಕಕ್ಕಸಿಗೆ ಹೋಗುವಾಗ ತಲೆ ತುಂಬಾ ಸೆರಗು ಹೊದೆಯದಿರುವುದು; ಅಂಗಳದಲ್ಲಿ ನಿಂತು ತಲೆಗೂದಲನ್ನು ಒಣಗಿಸುವುದು; ಬುರ್ಕಾ ಇಲ್ಲದೇ ರಸ್ತೆಯಲ್ಲಿ ನಡೆದುದು; ಹಿರಿಯಣ್ಣನ ಮಗಳು ನಜ್ಮಾಳ ಅತ್ತೆ ಜಬೀನಳ ಸೌಂದರ್ಯವನ್ನು ಹೊಗಳಿದ್ದು ಮುಂತಾದವುಗಳು ಜಬೀನಳ ಮೇಲೆ ಹೊರಿಸಿದ ದೋಷದ ಪಟ್ಟಿಗಳಾಗಿವೆ. ಜಬೀನಾ ಹೆರಿಗೆಗೆಂದು ತವರಿಗೆ ಹೋದ ಸಮಯ ಸಾಧಿಸಿ, ನವಾಬನಿಗೆ ಮತ್ತೊಂದು ಮದುವೆ ಮಾಡುವ ಸನ್ನಾಹಕ್ಕೆ ತೊಡಗುತ್ತಾನೆ. ಆದರೆ ಮದುವೆ ದಿನ ಮೌಲ್ವಿಗಳು ಮದುವೆಗೆ ಒಪ್ಪಿಗೆ ಕೇಳಿದಾಗ ಮೈಕಿನಲ್ಲಿ ಎಲ್ಲರೆದುರು 'ಯೆ ನಿಕಾಹ್ ಮ್ಯೆಂನೆ ಖಬೂಲ್ ನಹೀಂ ಕಿಯಾ' ಎಂದು ಹೇಳಿ ಮದುವೆ ಮನೆಯಿಂದ ತಪ್ಪಿಸಿಕೊಂಡು ಜಬೀನಳನ್ನು ಸೇರುತ್ತಾನೆ.

ಬಹುಪತ್ನಿತ್ವದ ಅವಕಾಶವನ್ನು ಮುಸ್ಲಿಂ ಧರ್ಮ ಮನ್ನಿಸಿದೆ. ಹೀಗಾಗಿ ಗಂಡಸರು ಈ ಅವಕಾಶವನ್ನು ಬಳಸಿಕೊಂಡು ಹೆಣ್ಣನ್ನು ನಿಯಂತ್ರಿಸಲು ಯತ್ನಿಸುವುದನ್ನು 'ಶಾಯಿಸ್ತ ಮಹಲ್‌ನ ಕಲ್ಲು ಚಪ್ಪಡಿಗಳು' ಕತೆ ತೋರಿಸಿಕೊಟ್ಟಿದೆ. "ಈ ಸೀಬೆ ಮರಳಗನ್ನು ಶಾಯಿಸ್ತಳಿಗೋಸ್ಕರ ನಾನೇ ನೆಟ್ಟಿದ್ದು. ಇಲ್ಲಿರುವ ಪ್ರತಿಯೊಂದು ಗಿಡವೂ, ಹೂವೂ ಆಕೆಗೆ ಇಷ್ಟವಾದವು. ಈ ಅನಾಬ್ ಷಾಹಿ ದ್ರಾಕ್ಷಿ ಬಳ್ಳಿಯೂ ಆಕೆಗಾಗಿ ನಾನೆ ಕೈಯಾರೆ ಬೆಳೆಸಿದ್ದು. ಈ ಉಯ್ಯಾಲೆಗಳು, ಅವಳಿಗೆ ಪ್ರೀತಿ" (ಅದೇ, ಪುಟ-೪೮) ಎಂದು ಹೇಳುವ ಇಫ್ತಿಕಾರ್ ತನ್ನ ಹೆಂಡತಿ ಶಾಯಿಸ್ತಳ ಪ್ರೀತಿಗೋಸ್ಕರ ಶಾಯಿಸ್ತ ಮಹಲನ್ನು ಕಟ್ಟಲು ತಯಾರಿದ್ದವನು. ಶಾಯಿಸ್ತ ಹೆರಿಗೆಯ ನಂತರ ಸತ್ತು ಹೋದ ನಲವತ್ತನೇ ದಿನಕ್ಕೆ ಮತ್ತೊಬ್ಬಾಕೆಯನ್ನು ಮದುವೆಯಾಗುತ್ತಾನೆ. ಪ್ರೀತಿಯ ನಾಟಕ ಬಯಲಾಗುತ್ತದೆ. 'ಹೆಂಡತಿ ಸತ್ತರೆ

ಮೊಣಕೈ ಎಲುಬಿಗೆ ಪೆಟ್ಟುಬಿದ್ದಂತೆ' ಎಂಬು ರೂಢಿ ಮಾತಿನಂತೆ, ಇದ್ದಾಗ ಹೆಂಡತಿಯನ್ನು ಅಪಾರವಾಗಿ ಪ್ರೀತಿಸುತ್ತಿದ್ದ ಇಫ್ತಿಕಾರ್, ಸತ್ತಾಗ ಮೊಣಕೈಗೆ ಬಡಿದ ಪೆಟ್ಟಿನ ನೋವು ಕ್ಷಣಾರ್ಧದಲ್ಲಿ ಮಾಯವಾಗುವಂತೆ, ಮರೆತು ಮತ್ತೊಂದು ಮದುವೆಯಾಗುತ್ತಾನೆ.

'ಒಮ್ಮೆ ಹೆಣ್ಣಾಗು ಪ್ರಭುವೆ!' ಕತೆಯಲ್ಲಿ ಚಿಕ್ಕ ವಯಸ್ಸಿನಲ್ಲಿ ಮದುವೆಯಾಗಿ ಮಕ್ಕಳನ್ನು ಹೆತ್ತು, ಅನಾರೋಗ್ಯಕ್ಕೆ ತುತ್ತಾದಾಗ, ಅದೇ ನೆಪವನ್ನು ಬಳಸಿಕೊಂಡು, ಗಂಡ ಮತ್ತೊಂದು ಮದುವೆಯಾಗುತ್ತಾನೆ. ಈ ಕತೆಯಲ್ಲಿ ಸ್ವಗತದ ನಿರೂಪಣೆಯಲ್ಲಿ ಹೆಣ್ಣೊಬ್ಬಳ ಆರ್ತನಾದವನ್ನು ಮುಂದಿಡಲಾಗಿದೆ.

ಜಮಾತ್‌ನವರು ಮತ್ತು ಧರ್ಮವನ್ನು ಉಳಿಸುವ-ಬೆಳೆಸುವವರಂತೆ ಕಾಣುವ ಮುತುವಲ್ಲಿಗಳು ಜಾರಿಗೆ ತರುವ ಧಾರ್ಮಿಕ ಸಂಹಿತೆಗಳು ಹೇಗೆ ಪುರುಷ ಪರವಾಗಿವೆಮಯೆಂಬುದನ್ನು 'ಕರಿ ನಾಗರಗಳು' ಕತೆ ವಿಶ್ಲೇಷಿಸುತ್ತದೆ. ಗಂಡುಮಗುವಾಗಲಿಲ್ಲವೆಂಬ ಕಾರಣವನ್ನೊಡ್ಡಿ, ಮತ್ತೊಂದು ಮದುವೆಯಾದ ಯಾಕೂಬನ ಹಿತಾಸಕ್ತಿಗಳನ್ನು ಮಸೀದಿಯ ಮುತಾವಲ್ಲಿಗಳು ಸಮರ್ಥಿಸುತ್ತಾರೆ. ಮೂರು ಹೆಣ್ಣುಮಕ್ಕಳನ್ನು ಕಟ್ಟಿಕೊಂಡು ಪರದಾಡುವ ಅಶ್ರಾಫ್‌ಳ ಮೊರೆ, ಮುತುವಲ್ಲಿಗಳಿಗೆ ಕೇಳುವುದಿಲ್ಲ. ಕಾರಣ, ಯಾಕೂಬನಿಂದ ದೊರೆಯುವ 'ಉಪಚಾರ'ಗಳಿಂದ.

'ಎದೆಯ ಹಣತೆ' ಕತೆಯಲ್ಲಿ ನರ್ಸೊಬ್ಬಳೊಂದಿಗೆ ಸಂಬಂಧ ಹೊಂದಿರುವ ಇನಾಯತ್, ಹೆಂಡತಿ ಮೆಹರುನ್ನಾಳನ್ನು ತಲಾಕಿನ ಬೆದರಿಕೆಯೊಡ್ಡಿ ನಿಯಂತ್ರಣದಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಾನೆ. ಮೆಹರುನ್ನಾಳ ತವರು ಮೆನಯವರೂ ಇನಾಯತನ ವರ್ತನೆಯನ್ನು ಸಮರ್ಥಿಸುತ್ತಾರೆ. ಏಕೆಂದರೆ, ಆಕೆಗೆ ತಲಾಕ್ ದೊರೆತರೆ, ಉಳಿದ ತಂಗಿಯರ ಮದುವೆ ಮಾಡುವುದು ಕಷ್ಟವಾಗುವುದು. ಅಂತಸ್ತಿನ ಪ್ರಶ್ನೆ ಕುಂದುವುದಾಗಿದೆ. ಧರ್ಮದ ಹೆಸರಿನಲ್ಲಿ ಅನೇಕ ಹೆಣ್ಣುಗಳ ಬದುಕು ಕಮರಿ ಹೋಗುವುದನ್ನು ಕತೆಗಾರರು ಮೇಲಿನಂತೆ ಚಿತ್ರಿಸಿದ್ದಾರೆ.

ಬಾನು ಮುಷ್ತಾಕರ ಕತೆಗಳಲ್ಲಿ ಕೆಲವು ಮಹಿಳೆಯರು ತಮ್ಮ ಮೇಲಾಗುವ ಅನ್ಯಾಯಗಳನ್ನು ಬಹಿರಂಗಪಡಿಸುತ್ತಾರೆ. ಧರ್ಮದ ಹೆಸರಿನಲ್ಲಿ ನಡೆಯುವ ಕ್ರೌರ್ಯದ ವಿರುದ್ಧ ಸಿಡಿದೇಳುವ ಪ್ರತಿಭಟಿಸುವ ಮನೋಭಾವನೆಯನ್ನು ಪ್ರಕಟಿಸುತ್ತಾರೆ.

'ನಮ್ಮೊಳಗಿನ ಜರೀನ' ಕತೆಯಲ್ಲಿ ದುಡಿಯುವ ಮುಸ್ಲಿಂ ಮಹಿಳೆ, ತನ್ನ ಧರ್ಮದಲ್ಲಿ ತನಗೆ ನ್ಯಾಯ ಸಿಗದೆಂದು ಬಗೆದು, ನ್ಯಾಯಾಲಯದ ಮೂಲಕ ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳಲು ಹೋರಾಡುವ ಚಿತ್ರಣವಿದೆ. ಹೊರಗೆ ದುಡಿಯಲು ಹೋಗುವ ಜರೀನಾ, ಕುಟುಂಬದ ಜವಾಬ್ದಾರಿಯನ್ನು ಹೊತ್ತಾಕೆ. ರಾತ್ರಿ ತಡವಾಗಿ ಮನೆಗೆ ಬರುವುದರಿಂದ ಹಿಡಿದು ಎಲ್ಲಾ ವಿಷಯದಲ್ಲೂ ಸಂಶಯಪಡುವ ಗಂಡನಿಂದ ಬೇಸತ್ತು, ಆತನಿಂದ ವಿಚ್ಛೇದನ ಪಡೆಯಲು ಮುಂದಾಗಿದ್ದಾಳೆ. ಆಕೆಯ ವಿಚ್ಛೇದನಕ್ಕೆ ದಾರಿ ಮಾಡಿಕೊಡುವ ವಕೀಲಳಾದ ಸುಮತಿಯ ದಾಂಪತ್ಯದ ಬಿರುಕನ್ನು ಕತೆಯ ಮತ್ತೊಂದು ಮಗ್ಗಲು ಬಿಚ್ಚಿಡುತ್ತದೆ. ಕುಟುಂಬದ ಜವಾಬ್ದಾರಿಗಳನ್ನು ನಿಭಾಯಿಸುವಾಗ ಗಂಡ ಮನೋಹರ ನಿರ್ಲಕ್ಷ್ಯ ವಹಿಸುತ್ತಾನೆ. ಪರಿಣಾಮ ಮಕ್ಕಳು ವಸತಿ ಶಾಲೆಗೆ ಸೇರ್ಪಡೆಯಾಗಬೇಕಾಗುತ್ತದೆ. ಆತನ

ಕಾಮವನ್ನು ತಣಿಸಲು ಹಿಂಜರಿದಾಗ ಆಕೆಯನ್ನು ಅಪಮಾನಗೊಳಿಸುವ ಮಾತುಗಳಿಂದ ಇರಿಯುತ್ತಾನೆ. ಆಗ ಸುಮತಿ ಏನೂ ಆಗದವರಂತೆ ಮೌನವಾಗಿದ್ದು, ಆತನ ವರ್ತನೆಗೆ ತನ್ನ ಪ್ರತಿಭಟನೆ ತೋರುತ್ತಾಳೆ.

ತಂದೆಯ ಆಸ್ತಿಯಲ್ಲಿ ಆರನೇ ಒಂದು ಭಾಗದ ಪಾಲಿನ ಹಕ್ಕನ್ನು ಕೇಳುವ ಜಮೀಲಾ 'ಬೆಂಕಿ ಮಳೆ' ಕತೆಯಲ್ಲಿ ಎದುರಾಗುತ್ತಾಳೆ. ಹೆಂಡತಿಯ ತೌರಿನಿಂದ ಮನೆ-ತೋಟವನ್ನು ಆಸ್ತಿಯಾಗಿ ಪಡೆದ ಉಸ್ಮಾನನಿಗೆ ತಂಗಿ ಜಮೀಲಾ, ತಂದೆ ಆಸ್ತಿಯಲ್ಲಿ ಪಾಲು ಕೇಳುತ್ತಿರುವುದು ಅಸಹನೀಯವಾಗಿ ತೋರುತ್ತದೆ. ಮತ್ತೊಬ್ಬ ತಂಗಿ ಸಕೀನ, ಗಂಡನನ್ನು ಕಳೆದುಕೊಂಡು, ಮಗನ ನೌಕರಿಗಾಗಿ ಪರದಾಡುತ್ತಾಳೆ. ಇಬ್ಬರು ತಂಗಿಯರನ್ನು ಅಲಕ್ಷಿಸುವ ಉಸ್ಮಾನ್, ಆಸ್ತಿಯನ್ನು ಅವರಿಗೆ ಕೊಡದಂತೆ ಇರುವ ಉಪಾಯಗಳನ್ನು ಶೋಧಿಸುತ್ತಾನೆ. ಉಸ್ಮಾನನ ಹೆಂಡತಿ ಆರೀಫಳು, ಆಸ್ತಿಯಲ್ಲಿ ಪಾಲು ಕೇಳಲು ಬಂದ ಜಮೀಲಾಳಿಗೆ ಬೆಂಬಲ ಸೂಚಿಸುತ್ತಾಳೆ.

'ಕರಿ ನಾಗರಗಳು' ಕತೆಯಲ್ಲಿ ಕೆಳವರ್ಗದ ಮುಸ್ಲಿಂ ಮಹಿಳೆ, ತನ್ನನ್ನು, ಕಾಯಿಲೆ ಬಿದ್ದಿರುವ ಮಗುವನ್ನು ತಿರಸ್ಕರಿಸಿ, ಗಂಡು ಮಗುವಾಗಲಿಲ್ಲವೆಂಬ ಕಾರಣ ನೀಡಿದ ಗಂಡ ಯಾಕೂಬ್ ಮತ್ತೊಂದು ಮದುವೆಯಾದುದನ್ನು ಪ್ರತಿಭಟಿಸುತ್ತಿದ್ದಾಳೆ. ಮುತುವಲ್ಲಿ, ಅಶ್ರಫ್ ಕೊಟ್ಟ ಅರ್ಜಿಯ ಬಗ್ಗೆ ತಲೆ ಕೆಡಿಸಿಕೊಳ್ಳದಿದ್ದಾಗ, ಮಸೀದಿಯ ಮುಂದೆ ತಾಯಿ-ತಂಗಿ-ಮಕ್ಕಳೊಂದಿಗೆ ಮುಷ್ಕರಕ್ಕೂ ಕುಳಿತುಕೊಳ್ಳುತ್ತಾಳೆ. ಅಶ್ರಫ್ ತೋರುವ ಈ ಪ್ರತಿಭಟನೆಯ ಹಿಂದೆ, ಜುಲೇಖಾಳ ಸ್ಫೂರ್ತಿಯಿದೆ. ಕತೆಯ ಸೂಚಿತ ಲೇಖಕಿಯಾಗಿರುವ ಜುಲೇಖಾ 'ಖುರ್‌ಆನ್'ನನ್ನು ಬಲ್ಲವಳು. ಧಾರ್ಮಿಕ ಗ್ರಂಥದಲ್ಲಿ ಮಹಿಳೆಯರಿಗಿರುವ ಹಕ್ಕುಗಳನ್ನು ತಿಳಿಸಿ, ಮಹಿಳೆಯರನ್ನು ಎಚ್ಚರಿಸುವ ಧೋರಣೆಯುಳ್ಳವಳಾಗಿದ್ದಾಳೆ. ಗಂಡಸಿಗೆ ಲಭ್ಯವಾಗಿರುವ ಬಹುಪತ್ನಿತ್ವದ ಅವಕಾಶವನ್ನು ಕುರಿತು, "ನೋಡು ಯಾವನೇ ಗಂಡಸು ನಾಲ್ಕು ಮದ್ವೆಯಾಗಬೇಕಾದ್ರೂ ಅದಕ್ಕೆ ಸರಿಯಾದ ಕಾರಣ ಇರಬೇಕಾಗುತ್ತದೆ. ಯುದ್ಧದ ಕಾಲವಿದ್ದು, ಅನೇಕ ಜನ ಗಂಡಸರು ಯುದ್ಧದಲ್ಲಿ ಸತ್ತಿದ್ದರೆ... ಆಗ ಗಂಡಸು ಒಂದಕ್ಕಿಂತ ಹೆಚ್ಚು ಮದುವೆಯಾಗಬಹುದು... ಹೆಂಡತಿ ದೀರ್ಘ ಕಾಲದಿಂದ ವಾಸಿಯಾಗದ ಕಾಯಿಲೆಯಿಂದ ನರಳ್ತಾ ಇದ್ರೆ ಅಥವಾ ಬಂಜೆಯಾದ್ರೆ ಇನ್ನೊಂದು ಮದ್ವೆಯಾಗ್ಬಹುದು... ಅಥವಾ ಒಬ್ಳಿಂದ ಸಾಕಷ್ಟು ತೃಪ್ತಿ ಸಿಗದಿದ್ರೆ"(ಅದೇ, ಪುಟ-೨೯) ಹೀಗೆ ಇರುವ ಕಾರಣದಿಂದ ಮಾತ್ರ ಗಂಡಸರು ಬಹುಪತ್ನಿಯರನ್ನು ಹೊಂದುವ ಅವಕಾಶಗಳನ್ನು ಮನಗಾಣಿಸಲಾಗಿದೆ. ಮುಸ್ಲಿಂ ಹುಡುಗಿ ಶಾಲೆಗೆ ಹೋಗುವ, ಅಂಗಡಿಗೆ ಹೋಗುವ, ಉದ್ಯೋಗ ಮಾಡುವ ಹಕ್ಕುಗಳು ಆಕೆಗಿರುವುದನ್ನು ಕತೆಗಾರರು ಒತ್ತಿ ಹೇಳಿದ್ದಾರೆ. ಒಂದು ವೇಳೆ ಗಂಡ ಮತ್ತೊಂದು, ಮಗದೊಂದು ಮದುವೆಯಾದರೆ ಎಲ್ಲಾ ಹೆಂಡತಿಯರಿಗೂ ಸಮಾನ ಸೌಲಭ್ಯಗಳನ್ನು ಕಲ್ಪಿಸಬೇಕೆಂಬ 'ಖುರ್‌ಆನ್' ಒಳಗಿರುವ ಹೆಣ್ಣಿನ ಹಕ್ಕುಗಳನ್ನು ಕತೆಗಾರರು ಜುಲೇಖಾಳ ಮೂಲಕ ಪ್ರತಿಪಾದಿಸಿದ್ದಾರೆ.

ಮುತುವಲ್ಲಿಗಳನ್ನು ಕಂಡ ತಕ್ಷಣ ಮುಸ್ಲಿಂ ಮಹಿಳೆಯರು ಗೌರವ ಸೂಚಿಸುವುದಕ್ಕಾಗಿ ಸೆರಗು ಹೊದ್ದು ಮನೆಯೊಳಗೆ ಸರಿಯುತ್ತಿದ್ದರು. ಯಾವಾಗ ಅಶ್ರಫಳಿಗೆ ನ್ಯಾಯ ಕೊಡಿಸಲಿಲ್ಲವೋ ಆಗ, ಆ

ಮಹಿಳೆಯರು ಬೀದಿಯಲ್ಲಿ ನಿಂತು ಮುತುವಲ್ಲಿಗಳಿಗೆ ಪರೋಕ್ಷವಾಗಿ ಬಯ್ದು ತಮ್ಮ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾರೆ.

'ಕರಿ ನಾಗರಗಳು' ಕತೆಯ ಮತ್ತೊಂದು ಆಯಾಮದಲ್ಲಿ ಧಾರ್ಮಿಕ ನಂಬಿಕೆಗಳನ್ನು ಮುಂದೆ ಮಾಡಿ, ಸಂತಾನ ಹರಣ ಚಿಕಿತ್ಸೆಗೆ ಮುತುವಲ್ಲಿಗಳು ತಡೆಯೊಡ್ಡಿರುತ್ತಾರೆ. ಏಳು ಮಕ್ಕಳನ್ನು ಹೆತ್ತು, ಬೇಸತ್ತ ಮುತುವಲ್ಲಿಗಳ ಹೆಂಡತಿ ಆಮಿನ, ಕೊನೆಗೆ ಎಲ್ಲ ನಂಬಿಕೆಗಳನ್ನು ಬುಡಮೇಲು ಮಾಡುವಂತೆ ಆಪರೇಷನ್ ಮಾಡಿಸಿಕೊಳ್ಳಲು ಹೊರಟು ಹೋಗುತ್ತಾಳೆ. ಕತೆಗಾರರು ತಾಯ್ತನದ ಬಗ್ಗೆ ಇರುವ ಕುರುಡು ನಂಬಿಕೆಗಳನ್ನು ಖಂಡಿಸಿ, ಸಂತಾನ ಹರಣ ಚಿಕಿತ್ಸೆಯ ಅವಕಾಶಕ್ಕೆ ಬೆಂಬಲ ಸೂಚಿಸಿದ್ದಾರೆ.

ಬಾನು ಮುಷ್ತಾಕ್, ಕತೆಗಳ ಮೂಲಕ ತೋರುವ ವಾಸ್ತವ ಜಗತ್ತಿನಲ್ಲಿ ಮುಸ್ಲಿಂ ಧಾರ್ಮಿಕ ನಂಬಿಕೆ, ಆಚರಣೆಗಳು, ಹೆಣ್ಣನ್ನು ಹೇಗೆ ಅಸಹನೀಯವಾಗಿಸಿವೆ ಎಂಬ ಅಂಶವನ್ನು ವಿಶ್ಲೇಷಿಸಿದ್ದಾರೆ. ಹಿಂದೂ ಧರ್ಮದಲ್ಲಿರುವಂತೆ ಮುಸ್ಲಿಂ ಧರ್ಮದಲ್ಲಿಯೂ ಪಿತೃ ಪ್ರಧಾನ ಮೌಲ್ಯಗಳು ಹೆಣ್ಣನ್ನು ನಡೆಸಿಕೊಳ್ಳುವ ಬಗೆಯನ್ನು ಕತೆಗಾರರು ಖಂಡಿಸಿದ್ದಾರೆ. ಶಿಕ್ಷಣ, ಆತ್ಮಸ್ಥೈರ್ಯದ ಮೂಲಕ ವಾಸ್ತವದ ಕ್ರೌರ್ಯಗಳನ್ನು ಎದುರಿಸುವ ಶಕ್ತಿ ಹೆಣ್ಣಿಗಿದೆ ಎಂಬುದನ್ನು ಕತೆಗಾರರು ಮನವರಿಕೆ ಮಾಡಿಕೊಟ್ಟಿದ್ದಾರೆ. ಧಾರ್ಮಿಕ ಚೌಕಟ್ಟಿನಲ್ಲಿಯೇ ಹೆಣ್ಣಿಗೆ ದೊರಕಬಹುದಾದ ಹಕ್ಕುಗಳನ್ನು; ಗಂಡಸರ ಬಾಧ್ಯತೆಗಳನ್ನು ಚರ್ಚಿಸಿದ್ದಾರೆ.

# ಅಧ್ಯಾಯ ಏಳು

# ಕಾದಂಬರಿಯ ಅಭಿವ್ಯಕ್ತಿ

## ೭.೧ ಪ್ರವೇಶ

ಬರಹಗಾರರು ತಮ್ಮ ಧ್ಯೇಯ-ಧೋರಣೆಗಳನ್ನು ಎಳೆಎಳೆಯಾಗಿ, ವಿಸ್ತೃತವಾಗಿ ಬಿಚ್ಚಿಡಲು ಕಾದಂಬರಿ ಪ್ರಕಾರ ಸೂಕ್ತವಾಗಿದೆ. ಮೊದಲ ಪೀಳಿಗೆಯ ಕಾದಂಬರಿಕಾರರಾದ ಶಾಂತಾಬಾಯಿ ನೀಲಗಾರ, ತಿರುಮಲಾಂಬ, ಕಲ್ಯಾಣಮ್ಮನವರಿಗೆ ಆ ಕಾಲದ ಸಾಮಾಜಿಕ ಸುಧಾರಣೆಯ ನಿಲುವುಗಳನ್ನು ವಿರೋಧಿಸುವ ಇಲ್ಲವೇ ಪುರಸ್ಕರಿಸುವಚಿಂತನೆಗಳನ್ನು ಮಂಡಿಸುವುದು ಮುಖ್ಯವಾಗಿತ್ತು. ಅವಗಣನೆಗೆ ಒಳಗಾಗಿದ್ದ ಮಹಿಳೆಯ ಬದುಕು, ಆಕೆ ಅನುಭವಿಸುವ ಹಲವಾರು ಸಮಸ್ಯೆಗಳು ಕೇಂದ್ರಬಿಂದುವಾದವು. ಮೂರನೇ ಅಧ್ಯಾಯದಲ್ಲಿ ಚರ್ಚಿಸಿದಂತೆ ಸಮಾಜ ಸುಧಾರಕರು, ಮಹಿಳೆಯರ ಪರವಾದ ಅನೇಕ ಕಾನೂನುಗಳನ್ನು ಜಾರಿಗೊಳಿಸಿದರು. ಮುಖ್ಯವಾದ ಚರ್ಚೆ ಪ್ರಾರಂಭವಾಗುವುದು ಇಲ್ಲಿಂದಲೇ. ಹೆಣ್ಣಿನ ಬದುಕನ್ನು ಮೇಲ್ನೋಟದಿಂದ ಗ್ರಹಿಸುವ ಸಮಾಜ ಸುಧಾರಕರಿಗೂ, ವಾಸ್ತವ ಚಿತ್ರಣವನ್ನು ಸಮೀಪದಿಂದ ಬಲ್ಲ ಮಹಿಳಾ ಬರಹಗಾರರಿಗೂ ವ್ಯತ್ಯಾಸವಿದೆ. ಹೆಣ್ಣಿನ ದೃಷ್ಟಿಕೋನದಿಂದ ರೂಪಗೊಂಡ ಕಾದಂಬರಿಗಳು ಹಳೆಯ 'ಮೌಢ್ಯ'ಗಳನ್ನು ಕಳಚಿದ 'ಆಧುನಿಕ ಮಹಿಳೆ'ಯ ದೃಷ್ಟಾಂತವನ್ನು ನೀಡುತ್ತವೆ. ಪೌರಾಣಿಕ ಪಾತ್ರಗಳ ಪುನರಾವಲೋಕನ ಮಾದರಿಯಲ್ಲಿ ಎಚ್.ವಿ.ಸಾವಿತ್ರಮ್ಮ ಮತ್ತು ಎಸ್.ವಿ.ಪ್ರಭಾವತಿಯವರು ಕ್ರಮವಾಗಿ ರಾಮಾಯಣ, ಮಹಾಭಾರತದ ಪ್ರಸಂಗಗಳನ್ನು ಚಿಕಿತ್ಸಕ ದೃಷ್ಟಿಕೋನದಿಂದ ಪುನರಾವಲೋಕನಕ್ಕೆ ಒಳಪಡಿಸಿದ್ದಾರೆ. ಅನುಪಮಾರವರು ವ್ಯವಸ್ಥೆಯ ವಿರುದ್ಧ ಸಿಡಿದೆದ್ದ ಮಾಧವಿಯ ಬದುಕನ್ನು ಪರಿಚಯಿಸಿದ್ದಾರೆ. ಆ ಮೂಲಕ ಶೋಷಿತ ಮಹಿಳೆಯರು ಎಚ್ಚೆತ್ತುಕೊಳ್ಳುವ ಸಂದೇಶವನ್ನು ನೀಡಿದ್ದಾರೆ. ತ್ರಿವೇಣಿಯವರು ಮನೋವಿಶ್ಲೇಷಣಾತ್ಮಕ ಮಾದರಿಯಲ್ಲಿ ಸಾಮಾಜಿಕ ವಿಧಿನಿಷೇಧಗಳು, ಸಾಂಪ್ರದಾಯಿಕ ಮನೋಭಾವಗಳು ಹೆಣ್ಣಿನ ಮನೋರೋಗಕ್ಕೆ ಹೇಗೆ ಕಾರಣವಾಗಿದೆಯೆಂಬುದನ್ನು ವಿಶ್ಲೇಷಿಸಿದ್ದಾರೆ. ಸಾರಾ ಅಬೂಬಕ್ಕರ್, ನಾಗವೇಣಿ, ಗೀತಾ ನಾಗಭೂಷಣ್ ರವರ ಪ್ರಾತಿನಿಧಿಕ ಕಾದಂಬರಿಗಳಲ್ಲಿ ಪ್ರಾಮಾಣಿಕವಾಗಿ ಚಿತ್ರಿಸಲಾದ ವಾಸ್ತವ ಬದುಕಿನ ನೆಲೆಗಳನ್ನು ವಿಶ್ಲೇಷಿಸಲಾಗಿದೆ.

## ೭.೨ ದೃಷ್ಟಾಂತ ಮಾದರಿ

ಅನ್ಯೋಕ್ತಿ, ಪರ್ಯಾಯೋಕ್ತಿಯ ಪರಿಕಲ್ಪನೆಯಾಗಿ ದೃಷ್ಟಾಂತ ಮಾದರಿ ವಿಮರ್ಶೆಯಲ್ಲಿ ಬಳಕೆಯಾಗಿದೆ.

ಕೃತಿಯ ದೃಶ್ಯಗಳು, ಸನ್ನಿವೇಶಗಳು, ಪಾತ್ರಗಳು, ಕ್ರಿಯೆ ಮತ್ತು ಕೆಲವು ಸಂದರ್ಭಗಳಲ್ಲಿ ಕೃತಿಯ ವಾತಾವರಣ ಇವು ತಮ್ಮಷ್ಟಕ್ಕೆ ತಾವೇ ಅರ್ಥಪೂರ್ಣವಾಗಿರುತ್ತವೆ. ವಸ್ತುವಿಷಯಕ್ಕೆ ಸಂಬಂಧವಿರುವ ವ್ಯಕ್ತಿ, ತತ್ವ ಮತ್ತು ಘಟನೆಗಳನ್ನು ಸೂಚಿಸುವಂತೆ ನಿರೂಪಿಸಲು ಈ ವಿಧಾನ ಬಳಕೆಯಲ್ಲಿದೆ. ನೀತಿಕತೆ, ಪ್ರಾಣಿ ಕತೆ, ದೃಷ್ಟಾಂತ ಕತೆಗಳಲ್ಲಿ ಸಾಂಕೇತಿಕತೆ ಪ್ರಧಾನವಾದ ನಿರೂಪಣಾ ತಂತ್ರವನ್ನು ಅನುಸರಿಸುತ್ತವೆ. ನಿರೂಪಕರು ಹೇಳಬಯಸುವ ತತ್ವಕ್ಕೂ, ಕತೆಯ ಪ್ರತಿಯೊಂದು ಅಂಶಕ್ಕೂ ನೇರವಾದ ಸಂಬಂಧವನ್ನು ಕಾಣಬಹುದಾಗಿದೆ. ಕೃತಿಯಲ್ಲಿ ಬರುವ ಪಾತ್ರ ಯಾವುದಾದರೊಂದು ವಿಚಾರ–ಚಿಂತನೆಯ ಸಮರ್ಥನೆಗೆ ಉದಾಹರಣೆಯಾಗಿ ಹೇಳುವ ಕತೆ ದೃಷ್ಟಾಂತ ಕತೆ ಎನಿಸಿಕೊಳ್ಳುತ್ತದೆ. ಕತೆಯ ಸಂವಿಧಾನದಲ್ಲಿ ಕತೆಯ ನಾಯಕಿ/ನಾಯಕ ಹಲವಾರು ಸಮಸ್ಯೆಗಳನ್ನು ಎದುರಿಸಿ, ಸುಖಾಂತ್ಯ ಹೊಂದುತ್ತಾರೆ. ಅನುಭವಿಸಿದ ಯಾತನೆ, ನೋವುಗಳ ಹಿನ್ನೆಲೆಯಲ್ಲಿ ವಾಸ್ತವಿಕತೆಯ ವಿಶ್ಲೇಷಣೆ ಪ್ರಧಾನವಾಗಿರುತ್ತದೆ.

ಈ ಅಧ್ಯಾಯದಲ್ಲಿ 'ದೃಷ್ಟಾಂತ' ಮಾದರಿಯನ್ನು; ಸ್ವಾತಂತ್ರ್ಯ ಪೂರ್ವದ ಸುಧಾರಣಾವಾದಿ ಚಿಂತನೆಗಳಾದ ಬಾಲ್ಯ ವಿವಾಹ ನಿಷೇಧ, ವರದಕ್ಷಿಣೆ ವಿರೋಧಿ ನಿಲುವು, ಮಹಿಳೆಯರ ಶಿಕ್ಷಣದ ಪ್ರತಿಪಾದನೆ, ವಿಧವಾ ವಿವಾಹದ ಪುರಸ್ಕಾರದ ಸಂಗತಿಗಳನ್ನು ಸಾಂಕೇತಿಕವಾಗಿ ನಿರೂಪಿಸುವ ಅಗತ್ಯವಿತ್ತು. ಆದ್ದರಿಂದ ಸಂಸಾರವನ್ನು ಸುಲಲಿತವಾಗಿ ನಡೆಸಿಕೊಂಡು ಹೋಗುವ ವಿದ್ಯಾವಂತ 'ಆಧುನಿಕ' ಮಹಿಳೆಯನ್ನು ಪ್ರತಿನಿಧಿಸುವ ಕಾದಂಬರಿಗಳನ್ನು ದೃಷ್ಟಾಂತ ಮಾದರಿಯಲ್ಲಿ ರಚಿಸಲಾಯಿತು. ಈ ಅರ್ಥದಲ್ಲಿ 'ದೃಷ್ಟಾಂತ' ಮಾದರಿಯನ್ನು ಬಳಸಿಕೊಳ್ಳಲಾಗಿದೆ.

ಸ್ವಾತಂತ್ರ್ಯ ಪೂರ್ವದಲ್ಲಿ ಬರಹಕ್ಕೆ ತೊಡಗಿಸಿಕೊಂಡ ಮಹಿಳೆಯರು ಸುಧಾರಣಾದಿ ನಿಲುವುಗಳಿಂದ ಪ್ರಭಾವಿತರಾಗಿದ್ದರು. ಕೆಲವು ಮಹಿಳೆಯರು ಸುಧಾರಣಾ ನಿಲುವುಗಳಿಂದ ಪ್ರಭಾವಿತರಾಗಿದ್ದರು. ಕೆಲವು ಮಹಿಳೆಯರು ಸುಧಾರಣಾ ನಿಲುವುಗಳನ್ನು ಪ್ರತಿಪಾದಿಸುವ ಕೃತಿಗಳನ್ನು ರಚಿಸಿದರೆ, ಮತ್ತೆ ಕೆಲವರು ವಿಧವಾ ವಿವಾಹದಂತೆ ಸುಧಾರಣಾ ಪದ್ಧತಿಗಳನ್ನು ತೀವ್ರವಾಗಿ ವಿರೋಧಿಸುವ ದೃಷ್ಟಾಂತ ಕಾದಂಬರಿಗಳನ್ನು ರಚಿಸಿದರು. ಪ್ರಾರಂಭದ ಮಹಿಳಾ ಬರಹಗಾರ ರೆಲ್ಲರಿಗೂ ಮಹಿಳಾ ಕೇಂದ್ರಿತವಾದ ಸಮಸ್ಯೆಯ ವಸ್ತು ನಿರ್ವಹಣೆ ಮುಖ್ಯವಾಗಿ ಕಂಡಿದೆ. ಮಹಿಳಾ ಸಾಹಿತ್ಯ ಪರಂಪರೆಯ ಮೊದಲ ಘಟ್ಟದ ಕಾದಂಬರಿಕಾರರಾದ ಶಾಂತಾಬಾಯಿ ನೀಲಗಾರ, ನಂಜನಗೂಡಿನ ತಿರುಮಲಾಂಬ, ಆರ್.ಕಲ್ಯಾಣಮ್ಮನವರ ಒಂದೊಂದು ಕಾದಂಬರಿಯನ್ನು ಪ್ರಾತಿನಿಧಿಕ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

### ೭.೨.೧ ವಿದೇಶ ಪ್ರಯಾಣಕ್ಕೂ ಮುಂದಾದ ಮಹಿಳೆಯ ದೃಷ್ಟಾಂತ

ಪ್ರಾರಂಭದ ಮಹಿಳಾ ಬರಹಗಾರರಿಗೆ ಸಾಮಾಜಿಕ ಸುಧಾರಣಾ ನಿಲುವುಗಳ ಪ್ರಭಾವವಿದ್ದರೂ, ಆ ಚಿಂತನೆಗಳನ್ನು ಹಿನ್ನೆಲೆಯಾಗಿಟ್ಟುಕೊಂಡು, ತಮ್ಮದೇ ಆದ ಆಲೋಚನೆಗಳನ್ನು, ಅನೇಕ ಬರಹಗಳಲ್ಲಿ ಕಾಣಿಸಿದ್ದಾರೆ. ತಾವು ಒಬ್ಬ ಮಹಿಳೆಯಾಗಿದ್ದು, ಅಂದಿನ ಸಮಕಾಲೀನ ಸಂದರ್ಭವನ್ನು ಒಳಗೊಂಡ

'ಆಧುನಿಕ' ಮಹಿಳೆಯನ್ನು ದೃಷ್ಟಾಂತವಾಗಿ ಚಿತ್ರಿಸುವುದು ಅನಿವಾರ್ಯವಾಗಿತ್ತು. ಶಾಂತಾಬಾಯಿ ನೀಲಗಾರರ 'ಸದ್ಗುಣಿ ಕೃಷ್ಣಾಬಾಯಿ' (ಉತ್ತಮ ಗೃಹಿಣಿ) ಕಾದಂಬರಿಯಲ್ಲಿ ಕೇಂದ್ರ ಪಾತ್ರವಾದ ಕೃಷ್ಣಾಬಾಯಿ, ಪಾತಿವ್ರತ್ಯ ಪಾಲಿಸುವ ಸಾಂಪ್ರದಾಯಿಕ ಗುಣಗಳನ್ನು ಹೊಂದಿದ್ದರೂ ಕೆಲವು ಹೊಸ ಸಂಗತಿಗಳಿಗೆ ತೆರೆದ ಮನಸ್ಸಿನಿಂದ ಸ್ಪಂದಿಸುವ 'ಆಧುನಿಕ' ಮಹಿಳೆಯಾಗಿ ಕಾಣಿಸಿಕೊಳ್ಳುತ್ತಾಳೆ. ಆದ್ದರಿಂದ ಈ ಕಾದಂಬರಿಗೆ ವಿಶೇಷ ಮಹತ್ವವಿದೆ.

'ಸದ್ಗುಣಿ ಕೃಷ್ಣಾಬಾಯಿ' ಕಾದಂಬರಿಯಲ್ಲಿ, ಕೃಷ್ಣಾಬಾಯಿ ತನ್ನ ಬದುಕಿನಲ್ಲಿ ಉಂಟಾದ ಕಠಿಣ ಸವಾಲುಗಳನ್ನು ಎದುರಿಸಿ, ಸಂಸ್ಕಾರಯುತ ನಡವಳಿಕೆಯಿಂದ ಎಲ್ಲರನ್ನೂ ಗೆಲ್ಲುತ್ತಾಳೆ. ಈ ಪ್ರಕ್ರಿಯೆಗೆ 'ಶಿಕ್ಷಣ' ಪ್ರಮುಖ ತತ್ವವಾಗಿ ಪರಿಗಣಿತವಾಗಿದೆ. ಕೃಷ್ಣಾಬಾಯಿ 'ಆಧುನಿಕ' ಮಹಿಳೆ ಎನ್ನಿಸಿಕೊಳ್ಳಲು, ಕಾದಂಬರಿಯಲ್ಲಿ ಬರುವ ಆಕೆಯ ಚಿಂತನಾ ಕ್ರಮಗಳ ವಿವರಗಳು ಸಾಕ್ಷಿಯೊದಗಿಸುತ್ತವೆ. ಪುರುಷರಂತೆ ಮಹಿಳೆಯರಲ್ಲೂ ಸಮಾನವಾದ ಬುದ್ಧಿಶಕ್ತಿ, ಕಲಿಯುವ ಶಕ್ತಿ ಇದೆ ಎಂಬ ತಿಳುವಳಿಕೆಯನ್ನು ಕೃಷ್ಣಾಬಾಯಿ ಹೊಂದಿದ್ದಾಳೆ–"ಎಷ್ಟೋ ಸ್ತ್ರೀಯರು ಸಕಲ ವಿದ್ಯಾ ಪಾರಂಗತರಾಗಿಯೂ, ಸುಶೀಲೆಯರಾಗಿಯೂ, ಪತಿಗಳೊಡನೆ ಸ್ವಾತಂತ್ರ್ಯದಿಂದ ಮಾತಾಡುತ್ತಲೂ, ಸಭೆಗಳಲ್ಲಿ ಸಹ ವಾದ–ವಿವಾದ ಮಾಡುತ್ತಾ ಕೀರ್ತಿ ಪಡೆಯುತ್ತಿದ್ದಾರೆಂದು ವೇದಗಳಲ್ಲಿಯೂ ಪುರಾಣಗಳಲ್ಲಿಯೂ ಹೇಳಲ್ಪಟ್ಟಿರುತ್ತದೆ" (ಸದ್ಗುಣಿ ಕೃಷ್ಣಾಬಾಯಿ, ಪುಟ–೧೯) ಎಂದು ಕಾದಂಬರಿಯ ಪ್ರಾರಂಭದಲ್ಲಿಯೇ ವೇದ–ಪುರಾಣಗಳ ಸಾಕ್ಷಿಯಿಟ್ಟುಕೊಂಡು, ಕೃಷ್ಣಾಬಾಯಿಯ ಮುಂದಿನ ವಿದ್ಯಾಭ್ಯಾಸಕ್ಕೆ ಕಾದಂಬರಿಕಾರರು ಅಣಿಗೊಳಿಸಿದ್ದಾರೆ. ಮಹಿಳೆಯರ ಪ್ರಗತಿಗೆ ಬ್ರಿಟಿಶ್ ಆಡಳಿತ ಪ್ರೇರಣೆ ನೀಡಿದ ಬಗೆಯನ್ನು ಕೃತಜ್ಞತಾಪೂರ್ವಕವಾಗಿ ನೆನೆಯಲಾಗಿದೆ.

ಸುಧಾರಣಾ ನಿಲುವಿನಲ್ಲಿ ಮೂಡಿದ ಹೊಸ ಎಚ್ಚರದಿಂದಾಗಿ ಶೈಕ್ಷಣಿಕ ವಲಯದಲ್ಲಿ, ಮಹಿಳೆಯರಿಗೆ ಸಮಾನ ಹಕ್ಕು ದೊರಕಬೇಕೆಂಬ ವಾದವನ್ನು ಮಂಡಿಸಲಾಗಿದೆ. ಈ ಪ್ರತಿಪಾದನೆಯಿಂದಾಗಿ ಕೃಷ್ಣಾಬಾಯಿಯು, ಮದುವೆಯ ನಂತರವೂ ಹೆಚ್ಚಿನ ವಿದ್ಯಾಭ್ಯಾಸ ಪಡೆಯುತ್ತಾಳೆ; ಇಂಗ್ಲೆಂಡಿಗೆ ಪ್ರವಾಸ ಬೆಳೆಸುತ್ತಾಳೆ. ಗಂಡ ಮಾಧವರಾಯನನ್ನು ಕರೆತರಲು ವಿದೇಶಕ್ಕೆ ತಾನೊಬ್ಬಳೇ ಹೋಗಿ ಬರುವ ಕಾತರವನ್ನು ವ್ಯಕ್ತಪಡಿಸುತ್ತಾಳೆ. ಮೇಲ್ಜಾತಿಯ ಗಂಡು ಮಕ್ಕಳು ಸಮುದ್ರಯಾನ ಮಾಡುವುದು ಧರ್ಮಬಾಹಿರವೆಂದು ಚರ್ಚೆಯಾಗುತ್ತಿದ್ದ ಕಾಲದಲ್ಲಿ, ಕಾದಂಬರಿಕಾರರು ಮಹಿಳೆಯೋರ್ವಳನ್ನು ಸಮುದ್ರ ಪ್ರಯಾಣದ ಹಡಗಿನಲ್ಲಿ ಕೂರಿಸುತ್ತಾರೆ. ಇಂತಹ ಸಂಗತಿಗಳನ್ನು ಮಂಡಿಸುವುದು ಅಂದಿನ ಕಾಲದಲ್ಲಿ ಸಾಹಸದ ವಿಚಾರವೇ ಆಗಿದೆ.

ವಿದ್ಯಾವಂತೆಯಾದ ಕೃಷ್ಣಾಬಾಯಿ ಬೇರೆಯವರಿಗೆ ಮಾದರಿಯಾಗಿದ್ದಾಳೆ. ಅಕ್ಕ ಯಶೋಧಾ ಬಾಯಿಯ ಮೂವರು ಮಕ್ಕಳ ಮನವೊಲಿಸಿ, ಪ್ರೀತಿ ವಿಶ್ವಾಸದಿಂದ ವಿದ್ಯೆ ಕಲಿಸಿ, ಸರಿದಾರಿಗೆ ತರುತ್ತಾಳೆ. ಅವರ ಆಸಕ್ತಿಯನ್ನು ಗುರುತಿಸಿ, ಆ ನಿಟ್ಟಿನಲ್ಲಿ ನಡೆಯಲು ಪ್ರೋತ್ಸಾಹ ನೀಡುತ್ತಾಳೆ. ಮುಳುಗವ ಹಡಗಿನಿಂದ ಗಂಡ ಮಾಧವ ಕಾಣೆಯಾದಾಗ, ಕೃಷ್ಣಾಬಾಯಿ ಧೃತಿಗೆಡದೆ, ಹುಡುಕಿಸುವ

ಪ್ರಯತ್ನ ಮಾಡುತ್ತಾಳೆ. ಪ್ರಯತ್ನ ವಿಫಲವಾಗದೆ, ಮಾಧವ ಮರಳಿ ಭಾರತಕ್ಕೆ ಬಂದು ಕೃಷ್ಣಾಬಾಯಿಯನ್ನು ಸೇರುತ್ತಾನೆ.

ಕಾದಂಬರಿಯ ಅಭಿವ್ಯಕ್ತಿ ಕ್ರಮದಲ್ಲಿ ಪಾತ್ರಗಳ ಬೆಳವಣಿಗೆಯಲ್ಲಾಗಲಿ, ಕತೆಯ ಹಂದರವನ್ನು ವಿಶಿಷ್ಟ ಶೈಲಿಯಲ್ಲಿ ನಿರೂಪಿಸುವ ತಂತ್ರವನ್ನಾಗಲಿ ಪ್ರಾರಂಭದ ಬರಹಗಳಿಂದ ನಿರೀಕ್ಷಿಸುವುದು ಸಮಂಜಸವಲ್ಲ. ಆದರೆ ಈ ಕಾದಂಬರಿಯಲ್ಲಿ ನೇರ, ಸರಳ ಭಾಷೆಯ ಶೈಲಿಯಲ್ಲಿ, ಸಂಭಾಷಣೆಗಳ ಮೂಲಕ ಕೃಷ್ಣಾಬಾಯಿಯ ದೃಷ್ಟಾಂತವನ್ನು ಪರಿಣಾಮಕಾರಿಯಾಗಿ ನಿರೂಪಿಸಲಾಗಿದೆ.

### ೭.೨.೨ ಸಮಾಜ ಸೇವಕಿಯಾದ ವಿಧವೆಯ ದೃಷ್ಟಾಂತ

ವಿಧವಾ ಸಮಸ್ಯೆ ವಸಾಹತುಶಾಹಿ ಕಾಲದ ಬರಹಗಾರರಿಗೆ ಮುಖ್ಯ ಸಾಮಾಜಿಕ ಸಮಸ್ಯೆಯಾಗಿ ಕಾಡಿತ್ತು. ಕಲ್ಯಾಣಮ್ಮ, ಶ್ಯಾಮಲಾದೇವಿಯವರನ್ನು ಹೊರತುಪಡಿಸಿದರೆ, ಆ ಕಾಲದ ಇತರ ಮಹಿಳಾ ಬರಹಗಾರರು ವಿಧವಾ ಪುನರ್ ವಿವಾಹವನ್ನು ಸಮ್ಮತಿಸದೇ ವಿರೋಧಿಸಿದ್ದಾರೆ. ಕಾರಣ, ಮರುಮದುವೆಯಿಂದ ಉಂಟಾಗಬಹುದಾದ ಪರಿಣಾಮಗಳ ಕುರಿತು ದೂರದೃಷ್ಟಿಯ ಚಿಂತನೆ ಮಾಡಿದ್ದಾರೆ. ನಂಜನಗೂಡಿನ ತಿರುಮಲಾಂಬರವರು ವಿಧವೆಯರ ವಸ್ತುಸ್ಥಿತಿಯನ್ನು ತಾವೂ ಒಬ್ಬ ವಿಧವೆಯಾಗಿ ಅನುಭವಿಸಿ ಬಲ್ಲವರು. ಆದ್ದರಿಂದಲೇ ತಿರುಮಲಾಂಬರವರು ವಿಧವಾ ವಿವಾಹವನ್ನು ವಿರೋಧಿಸಿದ್ದಾರೆ. ಆದರೆ, ವಿಧವೆಯರು ಬದುಕಿಗೆ ವಿಮುಖವಾಗದಿರಲು, ಅನೇಕ ಮಾರ್ಗಗಳನ್ನು ಸೂಚಿಸಿದ್ದಾರೆ. ಪ್ರಕೃತಿ ಸಹಜವಾದ ಕಾಮ-ಕ್ರೋಧಗಳನ್ನು ಜಯಿಸಿ, ನಿಸ್ವಾರ್ಥಪರ ಸೇವೆಯನ್ನು ಕೈಗೊಳ್ಳಲು ಸೂಚಿಸಿದ್ದಾರೆ. ವಿಧವೆಯರು ಅಗತ್ಯ ವಿದ್ಯಾಭ್ಯಾಸವನ್ನು ಪಡೆದು, ಸಮಾಜದಲ್ಲಿರುವ ಅಭಾಗಿನಿಯರ ಮಾರ್ಗದರ್ಶಕರಾಗಿ, ಅವರಿಗೆ ಸೂಕ್ತ ಶಿಕ್ಷಣ ನೀಡುವ ಕಾರ್ಯದಲ್ಲಿ ತೊಡಗಿಸಿಕೊಳ್ಳುವ ಪರ್ಯಾಯ ಮಾರ್ಗವನ್ನು ಶೋಧಿಸಿದ್ದಾರೆ. ಸಮಾಜ ಸೇವೆಯನ್ನು ಮಾಡುವ ವಿಧವೆಯ ದೃಷ್ಟಾಂತವನ್ನು ತಿರುಮಲಾಂಬರವರ 'ನಭಾ' ಮತ್ತು 'ವಿರಾಗಿಣಿ' ಕಾದಂಬರಿಗಳ ಮೂಲಕ ವಿಶ್ಲೇಷಿಸಲಾಗಿದೆ.

ಹದಿನೆಂಟರ ಹರೆಯದಲ್ಲೇ ವಿಧವೆಯಾದ ನಭಾ ತಂದೆ ತಾಯಿಯನ್ನೂ ಕಳೆದುಕೊಂಡು, ಚಿಕ್ಕಮ್ಮನ ಉಪಟಳವನ್ನು ಸಹಿಸುತ್ತಾಳೆ. ಕಷ್ಟಗಳು ಎದುರಾದಾಗ ತಾಳ್ಮೆಯಿಂದ ವರ್ತಿಸುವ ನಭಾ, ಧೈರ್ಯಗೆಡದೆ, ಬದುಕನ್ನು ಎದುರುಗೊಳ್ಳುತ್ತಾಳೆ.

ವಿಧವೆಯರನ್ನು ಕ್ರೂರವಾಗಿ ನಡೆಸಿಕೊಳ್ಳುವ ವ್ಯವಸ್ಥೆಯ ರೀತಿಯನ್ನು ನೆನೆದು ನಭಾಳ ತಾಯಿ, ನಭಾಳ ಸಾವನ್ನು ಬಯಸುತ್ತಾಳೆ. ಆದರೆ ನಭಾ "ಅಮ್ಮ! ಬರುವ ಕಷ್ಟವು ಎಂದಿದ್ದರೂ ತಪ್ಪದು. ನನಗೆ ಪ್ರಾಪ್ತವಾಗಬೇಕಾಗಿದ್ದ-ಭಗವತ್ಸಂಕಲ್ಪದಂತೆ ಬರಬೇಕಾಗಿದ್ದ ವಿರೂಪವೇನೋ ಬಂದುಬಿಟ್ಟಿತು. ಇಂದು ಸತ್ತರೆ ಬರುವ ಲಾಭವೇನು? ಈಗ ಸತ್ತ ಮಾತ್ರಕ್ಕೆ ಅನುಭವವು ತಪ್ಪಿ ಹೋದೀತೆ? (ಹಿತೈಷಿಣಿಯ ಹೆಜ್ಜೆಗಳು, ಪುಟ-೧೦) ಎಂಬ ಮಾತುಗಳು ಆಕೆಯ ದಿಟ್ಟತನವನ್ನು ಕುರಿತು ಸಾಕ್ಷಿಯೊದಗಿಸುತ್ತವೆ.

ವಿಧವೆಯಾದ ನಂತರ ಸತೀತ್ವವನ್ನು ಉಳಿಸಿಕೊಳ್ಳುವ ನಭಾ, ರಾಜಶೇಖರನು, ತನ್ನ ಕಾಮ ಪಿಪಾಸೆಯ ಬಯಕೆಯನ್ನು ತಿಳಿಸಿದಾಗ, ಮನೆಬಿಟ್ಟು ಹೋಗುತ್ತಾಳೆ. 'ನಭಾ' ಕಾದಂಬರಿಯ ಕತೆಯು 'ವಿರಾಗಿಣಿ' ಕಾದಂಬರಿಯಲ್ಲಿ ಮುಂದುವರೆದಿದೆ. ದೂರದ ಊರಿನಲ್ಲಿ ದೂರದ ಸಂಬಂಧಿಯಾದ ರಘುನಾಥನ ಸಹಾಯದಿಂದ ನಭಾ ವಿದ್ಯಾಭ್ಯಾಸವನ್ನು ಮುಂದುವರಿಸುತ್ತಾಳೆ. ಆ ಮನೆಯಲ್ಲಿ ಮಕರಂದನೊಂದಿಗೆ 'ಅನೈತಿಕ' ಸಂಬಂಧ ಹೊಂದಿದ ವಿಧವೆ ತುಂಗೆಯನ್ನು ಸರಿದಾರಿಗೆ ತರುವಲ್ಲಿ ಸಫಲಳಾಗುತ್ತಾಳೆ. ಚಂದ್ರಭಾಗೆ-ಮಕರಂದರ ದಾಂಪತ್ಯ ಸುಲಲಿತವಾಗಲು ನಭಾಳ ಉಪದೇಶ ಕಾರಣವಾಗುತ್ತದೆ.

ವಿದ್ಯಾಭ್ಯಾಸ ಪೂರೈಸಿ, ದೇಶಸೇವೆಯಲ್ಲಿ ತೊಡಗಿಸಿಕೊಳ್ಳುವ ನಭಾಳ ಬದುಕಿನ ಗುರಿ ರಘುನಾಥನ ಸಹಕಾರದಿಂದ ಈಡೇರುತ್ತದೆ. ಕಾದಂಬರಿಕಾರರು ಅವಕಾಶ ಸಿಕ್ಕ ಕಡೆಯಲ್ಲೆಲ್ಲಾ ಸಮಾಜ ಸುಧಾರಕರ ಕೆಲವು ನೀತಿಗಳನ್ನು ಪರಿಶೀಲನೆಗೆ ಒಳಪಡಿಸಿದ್ದಾರೆ "ನಮ್ಮ ಭ್ರಾತೃ ವರ್ಗದಲ್ಲಿ ಸುಧಾರಣೆಗೆಂದು ಹೊಡೆದಾಡುತ್ತಿರುವವರಾರೋ ಅವರೇ ತಮ್ಮ ವಾಂಚಲತೆಯನ್ನು ತಮ್ಮ ನಡೆಯಲ್ಲಿಯೂ ಅನುವರ್ತಿಸಲಾರದೆ ಕೇವಲ ವಾಗಾಡಂಬರದಲ್ಲೇ ನಿಂತಿರುವುದೂ ಅವರು ತಮ್ಮ ತಮ್ಮ ಪೋಷ್ಯ ವರ್ಗಕ್ಕೆ ಸೇರಿದ ಸ್ತ್ರೀ ಜನಾಂಗದಲ್ಲಿ ತೋರುತ್ತಿರುವ ನಿಷ್ಠುರ, ತಿರಸ್ಕಾರಗಳೂ ಕಾರಣವೆಂದು ತಿಳಿಯ ಬರುತ್ತಿದೆ" (ಅದೇ, ಪುಟ-೨೪೭) ಎಂಬ ಸತ್ಯಾಂಶವನ್ನು ಹೊರಗೆಡವಿದ್ದಾರೆ. ಮಹಿಳೆಯರ ಸುಧಾರಣೆಗೆ ದನಿ ಎತ್ತಿದವರ ಮನೆಯಲ್ಲಿಯೇ, ಆ ಮಹಿಳೆಯರ ಅವಗಣೆನೆಯಾಗುತ್ತಿರುವುದನ್ನು ನೋವಿನಿಂದ ಹಂಚಿಕೊಂಡಿದ್ದಾರೆ. ಸುಧಾರಣಾವಾದಿಗಳ ಘೋಷಣೆಗೆ ಮನಸೋಲದೆ, ಮಹಿಳೆಯರು ಅದರಲ್ಲೂ ವಿಧವೆಯರು ತಮ್ಮ ದಾರಿಯನ್ನು ತಾವು ಕಂಡುಕೊಳ್ಳಲು ತಿರುಮಲಾಂಬರವರು ಕರೆ ನೀಡಿದ್ದಾರೆ.

ಕಾದಂಬರಿಕಾರರ ಚಿಂತನೆಗಳ ರೂಪಕವಾದ ನಭಾ, ಕಾದಂಬರಿಯ ಕೊನೆಗೆ ಅಭಾಗಿನಿಯರ ಆಶ್ರಯಧಾಮವಾದ 'ಆನಂದ ಮಂದಿರ'ದ ಮುಖ್ಯ ಅಧಿಕಾರಿಯಾಗಿ ನೇಮಕವಾಗುತ್ತಾಳೆ. ಆ ಸಂಸ್ಥೆಯ ಮೂಲಕ ಸ್ತ್ರೀಯರ ಅಭ್ಯುದಯಕ್ಕೆ, ದೇಶಭಾಷೆಯ ಉನ್ನತಿಗೆ ಸೇವೆ ಸಲ್ಲಿಸಲು ಮುಂದಾಗುತ್ತಾಳೆ. ವಿಧವೆಯರು ತಮಗೊದಗಿದ ದು:ಸ್ಥಿತಿಯನ್ನು ನೆನೆದು ಹಿಂಜರಿಯದೇ, ಧೈರ್ಯದಿಂದ ಬದುಕನ್ನು ಎದುರಿಸುವ ದೃಷ್ಟಾಂತವನ್ನು ಮೇಲಿನ ಎರಡು ಕಾದಂಬರಿಗಳ ಮೂಲಕ ಮನಗಾಣನಲಾಗಿದೆ.

### ೭.೨.೩ ವಿಧವಾ ವಿವಾಹವಾದ ಮಹಿಳೆಯ ದೃಷ್ಟಾಂತ

ಸಾಮಾಜಿಕ ಬದ್ಧತೆ ಮತ್ತು ಸಾಹಿತ್ಯ ರೂಪಗಳೆರಡೂ ಕಾದಂಬರಿಕಾರರ ವಿಚಾರ ಪ್ರಣಾಳಿಕೆ ಯಾದಾಗ ರೂಪಗೊಳ್ಳುವ ಸಾಹಿತ್ಯ ವಿಶಿಷ್ಟ ಲಕ್ಷಣವನ್ನು ಒಳಗೊಂಡಿರುತ್ತದೆ. ಸಾಮಾಜಿಕ ಸುಧಾರಣೆಯ ಗಾಳಿ ಎಲ್ಲೆಡೆ ಹರಡುವಾಗ ಮಹಿಳೆಯರ ಶಿಕ್ಷಣ, ಬಾಲ್ಯ ವಿವಾಹ, ವಿಧವಾ ಪುನರ್ ವಿವಾಹದ ಕುರಿತಂತೆ ವಾದ-ವಿವಾದಗಳ ಚರ್ಚೆಯನ್ನು, ಹಿಂದಿನ ಅಧ್ಯಾಯಗಳಲ್ಲಿ ಬೆಳೆಸಲಾಗಿದೆ. ಆರ್.ಕಲ್ಯಾಣಮ್ಮ ನವರು 'ನಿರ್ಭಾಗ್ಯ ವನಿತೆ' ಕಾದಂಬರಿಯ ಮೂಲಕ ಮಂಡಿಸಿದ ಸಂಗತಿಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

ಕಾದಂಬರಿಯ ಪೂರ್ವಾರ್ಧದಲ್ಲಿ, ಬಾಲ್ಯ ವಿವಾಹದ ವಿರೋಧ, ವರನ ಆಯ್ಕೆಯ ಗೊಂದಲದಿಂದಲೇ ಇಂದಿರೆಯ ಗೋಳಿನ ಕತೆ ಪ್ರಾರಂಭವಾಗಿದೆ. ಇಂದಿರೆ, ಆಕೆಯ ತಾಯಿ, ತಂದೆ, ಸಹೋದರರ ಆಯ್ಕೆಯ ವರ-ಸುಂದರೇಶ, ಆದರೆ ಇದಕ್ಕೆ ವಿರುದ್ಧವಾಗಿ ಇಂದಿರೆಯ ಅಜ್ಜಿ, ತನ್ನ ಮಗಳ ಬುದ್ಧಿಹೀನ ಮಗ ನಾರಾಯಣನೊಂದಿಗೆ ಮದುವೆ ಮಾಡಲು ತಾಕೀತು ಮಾಡುತ್ತಾಳೆ. ತಾಯಿ ಮಾತಿಗೆ ಕಟ್ಟುಬಿದ್ದು, ಶಚೀಂದ್ರನ ವಿರೋಧದ ನಡುವೆಯೂ ಕೇಳಿದಷ್ಟು ವರದಕ್ಷಿಣೆ ನೀಡಿ ಇಂದಿರೆಯ ವಿವಾಹವನ್ನು ಏರ್ಪಡಿಸಲಾಗುತ್ತದೆ. ಇಂದಿರೆಯ ದುರಂತದ ಮುನ್ಸೂಚಕವಾಗಿ ಮದುವೆ ಚಪ್ಪರಕ್ಕೆ, ಮೆರವಣಿಗೆಯಲ್ಲಿ ಸಿಡಿಸಿದ ಮದ್ದು ಹೊತ್ತಿಕೊಳ್ಳುತ್ತದೆ. ಇಷ್ಟವಿಲ್ಲದ ಮದುವೆಯಿಂದಾಗಿ ಇಂದಿರೆ ದುಃಖದ ಕಡಲಲ್ಲಿ ಮುಳುಗುವಂತಾಗುತ್ತದೆ. ಕಾದಂಬರಿಯ ಉತ್ತರಾರ್ಧವು ಕೆಲವು ಆಕಸ್ಮಿಕ ತಿರುವುಗಳನ್ನು ಪಡೆಯುತ್ತದೆ. ಇಂದಿರೆಯ ಪತಿ ನಾರಾಯಣನ ಸಾವು; ಇದೇ ನೋವಿನಲ್ಲಿ ಇಂದಿರೆಯ ತಾಯಿಯ ಸಾವು; ೪೫ ವರ್ಷದ ತಂದೆ, ೧೪ ವರ್ಷದ ಲೀಲೆಯೊಂದಿಗೆ ಮರು ಮದುವೆಯಾಗುವುದು; ಸುಂದರೇಶನ ಪತ್ನಿಯ ಸಾವು, ಈ ಎಲ್ಲ ಘಟನೆಗಳಿಂದ ಇಂದಿರೆ ತತ್ತರಿಸಿ ಹೋಗುತ್ತಾಳೆ. ಮಲತಾಯಿಯ ಕೈಯ್ಯಲ್ಲಿ ಇಂದಿರೆ ಮಾನಸಿಕ ಹಿಂಸೆಯನ್ನು ಅನುಭವಿಸುತ್ತಾಳೆ. ತಾನು ಪ್ರೀತಿಸಿದ ಸುಂದರೇಶನೊಂದಿಗೆ ಮದುವೆಯಾಗಿದ್ದರೆ ಸುಖವಾಗಿರುತ್ತಿದ್ದೆ ಎನ್ನುವ ಹಳಹಳಿಕೆ ಶುರುವಾಗುತ್ತದೆ. ವಿಧುರರಾದರೂ ವಿಧವೆಯನ್ನು ವರಿಸುವಂತಾಗಬೇಕೆಂಬ ಹಂಬಲವನ್ನು ಕಾದಂಬರಿಕಾರರು ಇಂದಿರೆಯ ಮೂಲಕ ಹೇಳಿಸಿದ್ದಾರೆ.

ಕಲ್ಯಾಣಮ್ಮನವರು ವಿಧವೆ ಇಂದಿರೆಯ ಪುನರ್ ವಿವಾಹಕ್ಕೆ ಸಾಕಷ್ಟು ಪೂರ್ವ ತಯಾರಿ ಮಾಡಿಕೊಂಡಿದ್ದಾರೆ. ಜಿ.ಸುಬ್ರಮಣ್ಯ ಅಯ್ಯರ್, ತಮ್ಮ ವಿಧವೆ ಮಗಳಿಗೆ ಬೇರೊಂದು ಮದುವೆ ಮಾಡಿದ ಉದಾಹರಣೆ; ಚಂದ್ರಾವರ್ಕರ್, ವೀರೇಶಲಿಂಗಂ ಪಂತುಲು ಮುಂತಾದ ಸಮಾಜ ಸುಧಾರಕರ ತತ್ವಗಳನ್ನು ಬಳಸಿಕೊಂಡಿದ್ದಾರೆ. 'ವಿವಾಹ ವಿಧಿಗಳನ್ನು ಬೋಧಿಸುವ ಆರ್ಯ ಧರ್ಮಶಾಸ್ತ್ರ'ದಲ್ಲಿನ "ತನ್ನನ್ನು ದಾನವಾಗಿ ಪಡೆದ ಪತಿಯು ಕಾಲವಾಗುವಾಗ, ಪುರುಷ ಸಂಭೋಗ ಹೊಂದದ ಸ್ತ್ರೀಯು ವೇದ ಮಂತ್ರಗಳೊಡನೆಯೂ, ಪುರುಷ ಸಂಭೋಗ ಹೊಂದಿದ ಸ್ತ್ರೀಯು ವೇದ ಮಂತ್ರಗಳಿಲ್ಲದೆಯೂ ಇಷ್ಟವಿದ್ದರೆ ಪುನರ್ವಿವಾಹವಾಗಬಹುದು" (ಕಲ್ಯಾಣ ಸರಸ್ವತಿ, ಪುಟ-೩೩೩) ಎಂಬ ಉಲ್ಲೇಖದೊಡನೆ ಋಗ್ವೇದ, ಅಥರ್ವಣ ವೇದ, ಮನು ಪರಾಶರ, ಯಾಜ್ಞವಲ್ಕ, ಶೃತಿ, ಸ್ಮೃತಿ, ವಸಿಷ್ಠರೂ, ಭೌದ್ಧಾಯನರು, ಕಾತ್ಯಾಯನರೂ, ನಾರದಾದಿ ಸೂತ್ರಗಳು, ಮಹಾಭಾರತ, ಅಗ್ನಿ, ಭಾಗವತ ಮೊದಲಾದ ಶಾಸ್ತ್ರ, ಪುರಾಣ, ಇತಿಹಾಸಗಳನ್ನು ಆಳವಾಗಿ ಅಭ್ಯಾಸ ಮಾಡಿದ್ದಾರೆ. ಅಲ್ಲಿ ಪುನರ್ ವಿವಾಹಕ್ಕೆ ಅವಕಾಶವಿರುವುದನ್ನು ಬಹು ಎಚ್ಚರದಿಂದ ಮಂಡಿಸಿದ್ದಾರೆ. ಶಂಕರಾಚಾರ್ಯರಿಂದ ಅಪ್ಪಣೆ ಪಡೆಯಲು ಹೋದಾಗ, ಜನ ಸಮೂಹದ ಮುಖ್ಯಸ್ಥರು ಸೇರಿ ಬಂದರೆ ಅನುಷ್ಠಾನಕ್ಕೆ ತರಬಹುದೆಂಬ ಅಭಿಪ್ರಾಯ ದೊರೆಯುತ್ತದೆ. ಆದರೆ ಇಂದಿರೆಯ ಪುನರ್ ವಿವಾಹಕ್ಕೆ ಬೇಕಾದ ಬೆಂಬಲ ದೊರೆಯದೆ, ಶಚೀಂದ್ರನ ನೇತೃತ್ವದಲ್ಲಿ ಬ್ರಹ್ಮ ಸಮಾಜಕ್ಕೆ ಸೇರಿದ ಇಂದಿರೆ, ಸುಂದರೇಶನ ಮದುವೆ ಏರ್ಪಡುತ್ತದೆ.

ಸಾಮಾಜಿಕ ಕ್ರಾಂತಿಕಾರಕ ಬದಲಾವಣೆಯನ್ನು ತರಲು ಪಡಬೇಕಾದ ಶ್ರಮ ಅಷ್ಟಿಷ್ಟಲ್ಲ. ಕಲ್ಯಾಣಮ್ಮನವರು ವಿಧವಾ ಪುನರ್ ವಿವಾಹ ಪದ್ಧತಿಯನ್ನು ಸಾಕಾರಗೊಳಿಸಲು, ಸಾಂಪ್ರದಾಯಿಕ ನಂಬಿಕೆ, ಆಚರಣೆಗೆ ಜೋತು ಬಿದ್ದ ಮನಸ್ಸುಗಳನ್ನು ಒಲೈಸುವ ಅಗತ್ಯವಿತ್ತು. ಅದೇ ಸಾಂಪ್ರದಾಯಿಕ ಶಾಸ್ತ್ರಾಧಾರಗಳಿಂದ ವಿಧವಾ ವಿವಾಹಕ್ಕೆ ಬೇಕಾದ ಉಲ್ಲೇಖಗಳನ್ನು ದೃಷ್ಟಾಂತವಾಗಿ ನೀಡುತ್ತಾರೆ. ಜತೆಗೆ ವಿಧವಾವಿವಾಹಕ್ಕೆ ಮಹಿಳೆಯರನ್ನು ಸಿದ್ಧಗೊಳಿಸುವುದೂ ಅಷ್ಟೇ ಮಹತ್ವದ ಕಾರ್ಯವಾಗಿತ್ತು. ಕಾದಂಬರಿಯಲ್ಲಿ ಇಂದಿರೆಯ ಒಪ್ಪಿಗೆಯ ಮೇರೆಗೆ ಮರು ಮದುವೆ ಏರ್ಪಟ್ಟು, ಸುಖಾಂತ್ಯ ಕಾಣಲು ಸಾಧ್ಯ ವಾಗುತ್ತದೆ. ವಿಧವೆಯ ಸಮಸ್ಯೆಗಳನ್ನು ಮತ್ತು ಪರ್ಯಾಯ ಮಾರ್ಗಗಳನ್ನು ಶೋಧಿಸುವಾಗ ಕಲ್ಯಾಣಮ್ಮನವರು ವಿಧವೆಯರ ಮರು ವಿವಾಹಕ್ಕೆ ಪೂರ್ಣ ಬೆಂಬಲವನ್ನು ಕಾದಂಬರಿಯ ಮೂಲಕ ಸಮರ್ಥವಾಗಿ ಮಂಡಿಸಿದ್ದಾರೆ.

### ೭.೩ ಪೌರಾಣಿಕ ಪಾತ್ರಗಳ ಪುನರಾವಲೋಕನ ಮಾದರಿ

ವೇದ, ಉಪನಿಷತ್ತುಗಳು, ರಾಮಾಯಣ, ಮಹಾಭಾರತ ಮುಂತಾದ ಕಾವ್ಯ ಕತೆಗಳು ಪುರುಷ ದೃಷ್ಟಿಕೋನದ ಮೂಲಕ ಸೃಷ್ಟಿಸಲ್ಪಟ್ಟಿವೆ. ಗಂಡಿನ ಅಪೇಕ್ಷೆಗೆ ಅನುಗುಣವಾಗಿ ಹೆಣ್ಣು ಪಾತ್ರಗಳು ಪತಿವ್ರತೆಯರಾಗಿ, ತ್ಯಾಗ-ಸಂಯಮಿಗಳಾಗಿ ರೂಪಿಸಲ್ಪಟ್ಟಿವೆ. ಮಹಿಳೆಯರು ರಚಿಸಿದ ಪೌರಾಣಿಕ ಕಾದಂಬರಿಗಳು, ಹೆಣ್ಣಿಗೆ ಆರೋಪಿಸಲ್ಪಟ್ಟಿರುವ ಸಾಂಪ್ರದಾಯಿಕ ಮನೋಭಾವಗಳನ್ನು ವಿಶ್ಲೇಷಣೆಗೆ ಒಳಪಡಿಸಿವೆ. ಪುರಾಣಗಳಲ್ಲಿ ದೊರೆಯುವ ಉಲ್ಲೇಖಗಳನ್ನು ಬಳಸಿ, ಹೆಣ್ಣು ಅನುಭವಿಸಿದ ಬದುಕಿನ ಯಾತನೆಯ ಎಳೆಗಳನ್ನು ಬಿಡಿಸಿಡಲು ಯತ್ನಿಸಿದ್ದಾರೆ.

#### ೭.೩.೧ ರಾಮಾಯಣ ಪಾತ್ರಗಳ ಚಿಕಿತ್ಸಕ ದೃಷ್ಟಿಕೋನ

ಎಚ್.ವಿ.ಸಾವಿತ್ರಮ್ಮನವರು 'ಸೀತೆ-ರಾಮ-ರಾವಣ' ಮತ್ತು 'ವಿಮುಕ್ತಿ' ಕಾದಂಬರಿಗಳಲ್ಲಿ ರಾಮಾಯಣದ ಘಟನೆಗಳನ್ನು ಪುನರವಲೋಕನಕ್ಕೆ ಒಳಪಡಿಸಿದ್ದಾರೆ. ಮೊದಲ ಕಾದಂಬರಿಯಲ್ಲಿ ದಶರಥನ ಪತ್ನಿಯಾದ ಕೌಸಲ್ಯೆಯ ಅಂತರಂಗದ ತುಮುಲಗಳನ್ನು ಪ್ರಮುಖವಾಗಿ ಪರಿಗಣಿಸಲಾಗಿದೆ. ೩೪೩ ಪುಟಗಳ ಸುದೀರ್ಘ ಕಾದಂಬರಿಯ ಪೂರ್ವಾರ್ಧ ಸಾಗುವುದು ಕೌಸಲ್ಯೆಯ ಅಂತರಂಗ ಸ್ಫೋಟಗೊಳ್ಳುವ ಮೂಲಕ. ನೆನಪು, ಸ್ವಗತಗಳ ತಂತ್ರವನ್ನು ಬಳಸಿ ರಾಮಾಯಣದ ಘಟನೆಗಳನ್ನು ಪುನರವಲೋಕಿಸಲಾಗಿದೆ. ಕಾದಂಬರಿಯ ಉತ್ತರಾರ್ಧದಲ್ಲಿ ಊರ್ಮಿಳೆ, ಸೀತೆ, ರಾಮ, ಕೈಕೇಯ, ರಾವಣ, ಮಂಡೋದರಿ ಮುಂತಾದವರ ಮನೋಭೂಮಿಕೆಯ ವಿಶ್ಲೇಷಣೆಯನ್ನು ಕೈಗೆತ್ತಿಕೊಳ್ಳಲಾಗಿದೆ. ಅರಮನೆಯ ರಾಜರುಗಳ ವಂಶದ ಪ್ರತಿಷ್ಠೆ, ಅಧಿಕಾರದ ಲಾಲಸೆಗೆ ರಾಜಕುಮಾರಿಯರು, ರಾಣಿಯರು ಬಲಿಪಶುವಾಗುವುದನ್ನು ಕಾದಂಬರಿ ಚಿತ್ರಿಸಿದೆ. ಅಯೋಧ್ಯೆಯ ರಾಜ ದಶರಥನನ್ನು ಮದುವೆಯಾಗಿ ಪಟ್ಟದರಸಿಯಾದ ಕೌಸಲ್ಯೆ ಭಿನ್ನ ವ್ಯಕ್ತಿತ್ವವನ್ನು ಹೊಂದಿದವಳು. ಮಕ್ಕಳಾಗಲಿಲ್ಲವೆಂಬ ಕಾರಣಕ್ಕೆ ಸುಮಿತ್ರೆಯನ್ನು ಮತ್ತು ಕೈಕೇಯಿಯನ್ನು ದಶರಥ ಮದುವೆಯಾಗಿ ಬಂದಾಗ, ನೇರವಾಗಿ

ಪ್ರತಿಭಟಿಸಲಾಗಿದ್ದರೂ, "ಹಂಚಿ ತಿನ್ನಲು ಪ್ರೇಮ ಅವಲಕ್ಕಿಯಲ್ಲ, ಅವನಿಗೆ ಬೇಡವಾದರೆ ತನಗೂ ಬೇಡವೆಂದುಕೊಂಡಳು" (ರಾಮ-ಸೀತೆ-ರಾವಣ, ಪುಟ-೧೦) ಎಂಬ ತತ್ವವನ್ನು ಅನುಸರಿಸಿದವಳು. ಕುದುರೆ ಸವಾರಿ, ಕತ್ತಿ ವರಸೆ, ಬಿಲ್ವಿದ್ಯೆ, ಶಸ್ತ್ರಾಭ್ಯಾಸದಲ್ಲಿ ಪರಿಣಿತಳಾಗಿದ್ದ ಕೌಸಲ್ಯೆಗೆ ರಣರಂಗಕ್ಕಿಳಿಯುವುದಕ್ಕೆ ಅವಕಾಶವಿಲ್ಲ. ಕೈಕೇಯಿಗೆ ಆ ಅವಕಾಶ ಲಭ್ಯವಾಗಿದೆ. ಮದುವೆಯಾದಂದಿನಿಂದ ವಿಧವೆಯಾಗಿ ಮುಪ್ಪಿನವರೆಗೆ ಕಿಂಚಿತ್ತೂ ಸುಖ ಕಾಣದೆ, ಅರಮನೆಯಲ್ಲಾಗುವ ಘಟನೆಗಳಿಗೆ ಮೂಕ ಸಾಕ್ಷಿಯಾಗುತ್ತಾಳೆ.

ಕೌಸಲ್ಯೆಯ ಒಪ್ಪಿಗೆ ಪಡೆಯದೆ, ದಶರಥ ಮತ್ತೆರಡು ಮದುವೆಯಾಗುತ್ತಾನೆ. ಬೇಸತ್ತ ಜೀವಕ್ಕೆ ಚೈತನ್ಯ ನೀಡುವ ಮಗ ಬಾಲಕ ರಾಮನನ್ನು, ತಾಯಿಯಾದ ತನ್ನ ಅನುಮತಿ ಪಡೆಯದೆ ವಿಶ್ವಾಮಿತ್ರರು ರಾಕ್ಷಸ ಸಂಹಾರಕ್ಕಾಗಿ ಕರೆದೊಯ್ಯುತ್ತಾರೆ. ರಾಮ ಕೂಡ ಪಿತೃವಾಕ್ಯ ಪರಿಪಾಲಕನಾಗಿ ಕೌಸಲ್ಯೆಯನ್ನು ಉಪೇಕ್ಷಿಸುತ್ತಾನೆ. ಹದಿನಾಲ್ಕು ವರ್ಷ ವನವಾಸಕ್ಕೆ ಹೊರಟ ರಾಮ ತಂದೆಯನ್ನು ಸಂತೈಸುವ ಕಡೆಗೆ ಒತ್ತು ನೀಡಿದಾಗ "ರಾಮಾ, ನೀನೂ ನನಗೆ ಶ್ರೀರಂಗ ನೀತಿಗಳನ್ನು ಹೇಳಲು ಪ್ರಾರಂಭಿಸಿದೆಯಾ? ನೀನು ಗಂಡಸು, ಹೊಟ್ಟೆಯಲ್ಲಿ ಹುಟ್ಟಿದ ಮಗನಾದರೇನು? ಇಷ್ಟು ದಿನ ನಾನು ಅನುಭವಿಸಿದ ಸಂಕಟ, ಅವಮಾನಗಳ ಲವಲೇಶವಾದರೂ ನಿನಗೆ ಅರ್ಥವಾಗಲಾರದು. ಪ್ರೇಮ, ಪಾತಿವ್ರತ್ಯ ಎಂದು ಪುಸ್ತಕದ ಪಾಠ ಹೇಳಿಕೊಡುತ್ತಿದ್ದೀ, ಪ್ರೇಮ ವಿಶ್ವಾಸಗಳನ್ನು ಅಂಗಡಿಯಿಂದ ಕೊಂಡು ತರಲು ಸಾಧ್ಯವಿಲ್ಲ, ರಾಮಾ, ಅಥವಾ ಹಿತ್ತಲ ಗಿಡದಿಂದ ಕಿತ್ತು ತರುವ ವಸ್ತುಗಳಲ್ಲ. ಅವುಗಳಿಗಾಗಿ ತುಂಬಾ ಕೃಷಿಬೇಕು ರಾಮಾ, ನನ್ನಲ್ಲಿ ಆ ಮೃದು ಭಾವನೆಗಳೆಲ್ಲಾ ಕಮರಿ ಹೋಗಿವೆ. ಕಷ್ಟ ಬಂತೆಂದು ಈಗ ನಿನ್ನ ತಂದೆ ನನ್ನ ಬಳಿಗೆ ಬಂದರೆ ಪ್ರತಿಯಾಗಿ ಕೊಡಲು ನನ್ನಲ್ಲಿ ಅನುಕಂಪ, ಪ್ರೇಮ, ವಿಸ್ವಾಸ ಏನೇನೂ ಇಲ್ಲ ರಾಮಾ, ಬರಿಗೈಯಿಂದ ನಿಂತಿದ್ದೇನೆ, ಅವರವರ ಸಂಕಟವನ್ನು ಅವರವರೇ ಅನುಭವಿಸಿ ತೀರಬೇಕು; ತೀರಲಿ" (ಅದೇ, ಪುಟ-೯೩) ಎಂಬ ಕೌಸಲ್ಯೆಯ ಮಾತುಗಳು ದಶರಥನ ಮೇಲಿನ ಸೇಡನ್ನು ತೀರಿಸಿಕೊಳ್ಳಲು ದಾರಿಯಾಗಿದೆ. ರಾಮನ ವನವಾಸದಿಂದಾಗಿ ಕೌಸಲ್ಯೆ ಅಪಾರ ನೋವನ್ನು ಅನುಭವಿಸುತ್ತಾಳೆ. ರಾಮ ವನವಾಸದಿಂದ ಮರಳಿ ಬಂದಾಗ, ಭಾವನೆಗಳೆಲ್ಲ ಮುರುಟಿ ಹೋಗಿರುತ್ತವೆ.

ವನವಾಸದ ಶಿಕ್ಷೆಯನ್ನು ವಿಧಿಸಿದ್ದು ರಾಮನೊಬ್ಬನಿಗೆ. ಆದರೆ ಅದರ ಪರಿಣಾಮ: ದಶರಥನ ಸಾವಿಗೆ; ಕೌಸಲ್ಯೆ, ಸುಮಿತ್ರೆಯರ ಪುತ್ರ ಶೋಕಕ್ಕೆ; ಸೀತೆಯ ಅಪರಹರಣಕ್ಕೆ; ರಾವಣನೊಂದಿಗೆ ಯುದ್ಧಕ್ಕೆ; ಲಕ್ಷ್ಮಣನಿಂದ ಹದಿನಾಲ್ಕು ವರ್ಷ ಅಗಲಿರಬೇಕಾದ ಊರ್ಮಿಳೆಯ ವಿರಹಕ್ಕೆ ಕಾರಣವಾಗುತ್ತದೆ.

ಲಕ್ಷ್ಮಣನ ಹೆಂಡತಿ ಊರ್ಮಿಳೆಯು ಮದುವೆಗಿಂತ ಮುನ್ನ ಕಂಡ ಕನಸುಗಳೇ ಬೇರೆ, ಜೀವನವಿಡೀ ತನ್ನನ್ನು ಆರಾಧಿಸುವ, ಪ್ರೀತಿಸುವ ಸಂಗಾತಿಯನ್ನು ಆಕೆ ಬಯಸಿದ್ದಳು. ಆದರೆ, ರಾಮನ 'ಛತ್ರಿ'ಯಾಗಿ, ರಾಮನ ಕಷ್ಟ-ಸುಖಗಳಲ್ಲಿ ಭಾಗಿಯಾಗುವ ಲಕ್ಷ್ಮಣ, ಊರ್ಮಿಳೆಯ ಭಾವನೆಗಳನ್ನು ಕಡೆಗಣಿಸುತ್ತಾನೆ. ಪ್ರಥಮ ರಾತ್ರಿ ಸಜ್ಜೆ ಮನೆಯಲ್ಲಿ ಕಾದು ಕುಳಿತ ಊರ್ಮಿಳೆಯನ್ನು ಮರೆತು, ಲಕ್ಷ್ಮಣ ರಾಮನೊಂದಿಗೆ ಮಧ್ಯರಾತ್ರಿಯವರೆಗೂ ಮಾತಿಗೆ ಕೂಡುತ್ತಾನೆ. ಊರ್ಮಿಳೆ ಸೀತೆಯ ಹಾಗಲ್ಲ. ನೇರ ಮಾತಿನ, ತನಗನಿಸಿದ್ದನ್ನು ಸ್ಪಷ್ಟವಾಗಿ ಹೇಳುವ, ಬಿಚ್ಚು ಮನಸ್ಸಿನವಳು. ಲಕ್ಷ್ಮಣನಿಗಿರುವ ಅಣ್ಣನ ಅತಿ ವ್ಯಾಮೋಹಕ್ಕೆ

ಬೇಸತ್ತ ಊರ್ಮಿಳೆ, "ಒಂದೊಂದು ವೇಳೆ ಅನಿಸುತ್ತೆ, ನಾನು ರಾವಣನ ಕೈ ಹಿಡಿಯಬೇಕಾಗಿತ್ತೆಂದು. ಈ ಅತೀ ಸಾತ್ವಿಕರೊಡನೆ ಜೀವಿಸುವುದು ಕಷ್ಟ. ಸ್ವಲ್ಪ ರಾಕ್ಷಸ ಸ್ವಭಾವವಿದ್ದರೆ ಕೊಟ್ಟೊಷ್ಟೂ ಪ್ರೇಮ ಕೋರುತ್ತಾರೆ. ಜೀವನ ಸಪ್ತವರ್ಣ ರಂಜಿತವಾಗಿರುತ್ತೆ. ಈ ಸಪ್ಪೆ ದಾಂಪತ್ಯವಲ್ಲ. ಈ ಧರ್ಮ ಸಂಕಟಗಳು ಅವರಿಗಿರುವುದಿಲ್ಲ. ಒಂದು ಕ್ಷಣದ ಮೋಹಕ್ಕಾಗಿ, ಪ್ರೇಮಕ್ಕಾಗಿ ಜೀವವನ್ನೇ ತೆರಲು ಸಿದ್ಧರಾಗಿರುತ್ತಾರೆ. ನನಗೆ ಅಂತಹ ಪ್ರೇಮ ಬೇಕೆಂಬಾಸೆ. ಆ ಆರಾಧನೆಯ ಪಿಪಾಸೆ (ಸೀತೆ-ರಾಮ-ರಾವಣ, ಪುಟ-೯೫) ಎಂಬ ಅಭಿಲಾಷೆಯನ್ನು ವ್ಯಕ್ತಪಡಿಸುತ್ತಾಳೆ.

ರಾಮನ ಜತೆಯಾಗಿ ಲಕ್ಷ್ಮಣನೂ ಹೊರಟು ನಿಂತಾಗ, ಊರ್ಮಿಳೆಯೂ ಅವನೊಂದಿಗೆ ಹೋಗುವ ಅವಕಾಶವಿತ್ತು. ಊರ್ಮಿಳೆಗೆ ಅರಣ್ಯದ ಭಯವೇನೂ ಇರಲಿಲ್ಲ. ಧನುರ್ವಿದ್ಯೆಯಲ್ಲಿ ಪರಿಣಿತಳಾಗಿದ್ದು, ಸೀತೆಯನ್ನು ಅನೇಕ ಪಂಥಗಳಲ್ಲಿ ಸೋಲಿಸಿದ್ದಳು. ಸ್ವಾಭಿಮಾನ, ಧೈರ್ಯವುಳ್ಳವಳಾಗಿದ್ದಳು. ಆದರೆ, ವನವಾಸಕ್ಕೆ ಹೋಗಲು ನಿರಾಕರಿಸುತ್ತಾಳೆ. ಕಾರಣ ತಾನು ಹೋಗುವುದು ಲಕ್ಷ್ಮಣನ ಸಂಗಾತಿಯಂತಲ್ಲ. ರಾಮ-ಸೀತೆಯರ ಪಾದ ಸೇವೆ ಮಾಡುವ ದಾಸಿಯಂತೆ ಇರಬೇಕಾಗುತ್ತದೆಂಬುದಕ್ಕೆ. ಹದಿನಾಲ್ಕು ವರ್ಷ ವಿರಹವನ್ನು ಸಹಿಸಿ, ಸಂಯಮದಿಂದಿರುವುದಾಗಿ ಲಕ್ಷ್ಮಣನಿಗೆ ಭರವಸೆ ನೀಡುತ್ತಾಳೆ. ತನ್ನ ಸುಖವನ್ನು ಕಡೆಗಣಿಸಿ, ರಾಮನ ಸೇವೆಗೆ ತೊಡಗುವ ಲಕ್ಷ್ಮಣನೊಂದಿಗೆ, ಕಾಡಿನ ಹಾದಿಯಲ್ಲಿ ಬದುಕು ಸವೆಸುವುದಕ್ಕಿಂತ, ಹದಿನಾಲ್ಕು ವರ್ಷ ವಿರಹ ಸಹಿಸುವುದೇ ವಿಹಿತವಾಗಿ ಕಾಣುತ್ತದೆ. ಊರ್ಮಿಳೆ ತನ್ನ ಬಗ್ಗೆಯಷ್ಟೇ ಅಲ್ಲ, ಅರಮನೆಯಲ್ಲಿ ಇರುವ ಇತರರ ಬಗ್ಗೆಯೂ ವಸ್ತುನಿಷ್ಠಳಾಗಿ ಯೋಚಿಸಬಲ್ಲವಳು ಎಂಬುದಕ್ಕೆ ಕಾದಂಬರಿಯಲ್ಲಿ ಕೆಲವು ವಿವರಗಳಿವೆ. ಕಾದಂಬರಿಕಾರರು ಊರ್ಮಿಳೆಯ ವಿಶಿಷ್ಟ ವ್ಯಕ್ತಿತ್ವವನ್ನು ಸನ್ನಿವೇಶಕ್ಕನುಗುಣವಾಗಿ ಚಿತ್ರಿಸಿದ್ದಾರೆ. ಒಂಟಿಯಾಗಿ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವ ದಿಟ್ಟ ಪಾತ್ರವಾದ ಊರ್ಮಿಳೆ, ಆಧುನಿಕ ಮಹಿಳಾ ಪರಂಪರೆಗೆ 'ಆದರ್ಶ' ಪಾತ್ರವಾಗಿದ್ದಾಳೆ.

ರಾಮಾಯಣದ ಮುಖ್ಯ ಪಾತ್ರವಾದ ಸೀತೆಯನ್ನು 'ಸೀತೆ-ರಾಮ-ರಾವಣ' ಕೃತಿಯ ಕೊನೆಯಲ್ಲಿ ಮತ್ತು 'ವಿಮುಕ್ತಿ' ಕಾದಂಬರಿಯಲ್ಲಿ ಪುನರಾವಲೋಕನಕ್ಕೆ ಒಳಪಡಿಸಲಾಗಿದೆ. ಮದುವೆಯಾದ ಸ್ವಲ್ಪ ದಿನದಲ್ಲಿಯೇ ರಾಮನಿಗೆ ವನವಾಸ ಪ್ರಾಪ್ತಿಯಾದಾಗ, ಧೃತಿಗೆಡದ ಸೀತೆ, ಅವನೊಂದಿಗೆ ಕಾಡಿಗೆ ನಡೆಯುತ್ತಾಳೆ. ರಾವಣ ಅಪಹರಿಸಿಕೊಂಡು ಹೋದಾಗ, ಸೀತೆಯ ದುರಂತ ಕತೆಯು ಪ್ರಾರಂಭವಾಗುತ್ತದೆ. ರಾಮನಾಮವನ್ನು ಜಪಿಸುತ್ತಾ ಕುಳಿತ ಸೀತೆಗೆ ರಾವಣ ಒಬ್ಬ ಸಜ್ಜನನಾಗಿ ಕಾಣುತ್ತಾನೆ. ಸ್ವಯಂವರದಲ್ಲಿ ರಾಮನ ಬದಲು ರಾವಣನೇ ಶಿವ ಧನಸ್ಸನ್ನು ಮುರಿದಿದ್ದರೆ, ಆತನ ಮಹಾರಾಣಿಯಾಗಿರುತ್ತಿದ್ದನೆಂಬ ಆಲೋಚನೆ ಸುಳಿಯುತ್ತದೆ. ಸೀತೆಯ ಸೌಂದರ್ಯವನ್ನು ಇಷ್ಟಪಟ್ಟರೂ, ಆಕೆಯ ಒಪ್ಪಿಗೆಯಿಲ್ಲದೆ ಮುಂದುವರೆಯುವುದಿಲ್ಲ ಸೀತೆಯ ಮನಸ್ಸಿನಲ್ಲಿ, ರಾಮ-ರಾವಣರ ಗುಣ ಸ್ವಭಾವಗಳ ತುಲನೆ ನಡೆಯುತ್ತದೆ "ರಾಮನಿಗೆ ತನ್ನ ಯಶಸ್ಸು ಪ್ರತಿಷ್ಠೆ ಗೌರವ ಮುಖ್ಯ. ಲೋಕನಿಂದೆಯನ್ನು ಸಹಿಸಿ ತನ್ನನ್ನು ಅವನು ಆದರಿಸುವನೆಂಬ ಆಸೆ ಎಂದಿಗೂ ಇಲ್ಲ. ಲೋಕ ಅಲ್ಲಗಳೆದರೆ, ಅವನು

ಹೃದಯಕ್ಕಾತುಕೊಂಡು ಸಂತಯಿಸುವನೆಂದು ನಿರೀಕ್ಷಿಸುವಂತಿಲ್ಲ. ರಾವಣನಾದರೋ, ತಾನು ಇನ್ನೊಬ್ಬನ ಪತ್ನಿಯೆಂದರಿತಿದ್ದರೂ, ಲೋಕಕ್ಕೆಲ್ಲಾ ಅದು ತಿಳಿದ ವಿಚಾರವಾದರೂ ತನ್ನ ಪ್ರೇಮ ಭಿಕ್ಷೆಗಾಗಿ ಕಾದು ನಿಂತಿದ್ದ. ಅನುನಯದಿಂದ ತನ್ನ ಮನಸ್ಸನ್ನು ಮಾರ್ಪಡಿಸಲು ಪ್ರಯತ್ನಿಸುತ್ತಿದ್ದ" (ವಿಮುಕ್ತಿ, ಪುಟ-೨೩೯) ಎಂಬುದನ್ನು ಸೀತೆ ಮನಗಾಣುತ್ತಾಳೆ. ಆದರೆ ಮುಂದಾಗುವ ಅಪನಿಂದೆ, ಅಪಯಶಸ್ಸನ್ನು ನೆನೆದಾಗ ಇಂತಹ ಆಲೋಚನೆಗೆ ತೊಡಗಬಾರದೆಂದು, ರಾಮ ಗೆದ್ದರೂ, ರಾವಣ ಗೆದ್ದರೂ ತನಗೆ ಸಾವೇ ಗತಿಯೆಂದು ನಿರ್ಧರಿಸುತ್ತಾಳೆ.

ಯುದ್ಧದಲ್ಲಿ ರಾವಣ ಮಡಿದಾಗ ಸೀತೆಯಲ್ಲಿ ವಿಷಾದ ಭಾವನೆಯಾವರಿಸುತ್ತದೆ. ಪ್ರೀತಿ ತುಂಬಿದ ಅವನ ಮಾತುಗಳನ್ನು, ಪ್ರೇಮಯಾಚನೆಯನ್ನು, ಅನುನಯದ ವರ್ತನೆಯನ್ನು ಇನ್ನು ಮುಂದೆ ಕಾಣಲು ಸಾಧ್ಯವಿಲ್ಲದ್ದನ್ನು ನೆನೆಸಿಕೊಂಡ ಸೀತೆಗೆ 'ಜೀವನದಿಂದ ಕೆಲವು ರಸನಿಮಿಷಗಳು ಜಾರಿ ಹೋದಂತೆ' ಭಾಸವಾಗುತ್ತದೆ. ಸೀತೆಯ ಮನಸ್ಸಿನ ವಿಶ್ಲೇಷಣೆಯಲ್ಲಿ ಇಂತಹ ಮಿಂಚು ನೋಟಗಳನ್ನು ನೀಡುವ ಮೂಲಕ ಕಾದಂಬರಿಕಾರರು ಸಂಪ್ರದಾಯವಾದಿಗಳು ಬೆಚ್ಚಿ ಬೀಳುವಂತೆ ಮಾಡಿದ್ದಾರೆ. ಸೀತೆಯ ಬದುಕಿನ ದುರಂತ ಪುಟಗಳನ್ನು ತೆರೆದು ರಾವಣ ಇಹಲೋಕವನ್ನು ತ್ಯಜಿಸಿದನು. ಇನ್ನೇನು ರಾಮ ಬಂದು ತನ್ನನ್ನು ಕರೆದೊಯ್ಯುಬಹುದೆಂಬ ನಿರೀಕ್ಷೆಯಲ್ಲಿದ್ದ ಸೀತೆಗೆ, ರಾಮನ 'ಧರ್ಮದೃಷ್ಟಿ, ರಾಜನೀತಿಗಳು' ಅಡ್ಡಿ ಬರುತ್ತವೆ. ತುಂಬಿದ ಸಭೆಯಲ್ಲಿ ತನ್ನ ಮತ್ತು ಸೀತೆಯ ಸಂಬಂಧವನ್ನು ರಾಮ ಕಡಿದು ಹಾಕಿದುದನ್ನು ಘೋಷಿಸುತ್ತಾನೆ. ರಾಮನ ವರ್ತನೆಯನ್ನು ಕುರಿತು; "ಈ ಯುದ್ಧ, ಆರ್ಭಟ, ಅಟ್ಟಹಾಸಗಳೆಲ್ಲಾ ತನಗಾಗಿ ಅಲ್ಲ! ತನ್ನ ಮೇಲಿನ ಪ್ರೀತಿಯಿಂದ, ಪ್ರೇಮದಿಂದ ರಾಮ ಇಷ್ಟು ದೂರ ಕಷ್ಟಪಟ್ಟು ಬಂದು ಮಹಾಸಾಗರವನ್ನು ದಾಟಿ, ಭಯಂಕರ ಯುದ್ಧದಲ್ಲಿ ವಾನರ ಸೇನೆಯನ್ನು, ರಾಕ್ಷಸ ವೀರರನ್ನೂ ಬಲಿಕೊಟ್ಟನೆಂದು ಭಾವಿಸಿದುದು ತನ್ನ ಹುಚ್ಚುತನ! ಇದೆಲ್ಲಾ ಮಾಡಿದ್ದು ಅಹಂಕಾರದಿಂದ, ಸ್ವಾಭಿಮಾನದಿಂದ! ತನ್ನ ಪ್ರತಿಷ್ಠೆಯನ್ನು ಪ್ರದರ್ಶಿಸಲು!" (ಸೀತೆ-ರಾಮ-ರಾವಣ, ಪುಟ-೩೨೪) ಎಂಬ ಸತ್ಯವನ್ನು ವಿವೇಚಿಸುತ್ತಾಳೆ. ಮೊದಲ ಕಾದಂಬರಿಯಲ್ಲಿ ಅಗ್ನಿಪರೀಕ್ಷೆಯಲ್ಲಿ ಗೆದ್ದು, ಯಂತ್ರದ ಗೊಂಬೆಯಂತೆ ರಾಮನ ಪಟ್ಟಾಭಿಷೇಕದಲ್ಲಿ ಭಾಗಿಯಾಗುವ ಅಸಹಾಯಕ ಸೀತೆ ಎದುರಾಗುತ್ತಾಳೆ.

ಆದರೆ, ಯುದ್ಧಾನಂತರದ ಆತ್ಮಾವಲೋಕನ ಕಾರ್ಯವನ್ನು ಕಾದಂಬರಿಕಾರರು 'ವಿಮುಕ್ತಿ' ಕೃತಿಯಲ್ಲಿ ಕೈಗೊಂಡಿದ್ದಾರೆ. ಸೀತೆ ಇಲ್ಲಿ ರಾಮನೊಡ್ಡುವ ಪರೀಕ್ಷೆಯನ್ನು ತಿರಸ್ಕರಿಸುವ, ಒಂಟಿಯಾಗಿ ಬದುಕುವ ದಿಟ್ಟ ಪಾತ್ರವಾಗಿ ಮೂಡಿ ಬಂದಿದ್ದಾಳೆ. ಹದಿನಾಲ್ಕು ವರ್ಷ ವನವಾಸದಲ್ಲಿ ಪಾತಿವ್ರತ್ಯವನ್ನು ಸಾಬೀತು ಮಾಡಲು ಅಗ್ನಿಯನ್ನು ಹಾದು ಬಂದ ಸೀತೆಗೆ, ಅರಮನೆಗೆ ಬಂದ ಕೆಲ ದಿನಗಳಲ್ಲಿ ಮತ್ತೆ ಕಾಡುಪಾಲಾಗುವ ಸನ್ನಿವೇಶ ಎದುರಾಗುತ್ತದೆ. ಅದುವರೆಗೂ ಕಂಡುಂಡ ಅನುಭವಗಳು ಸೀತೆಯನ್ನು ಅಧೀರಗೊಳಿಸದೆ, ಗಟ್ಟಿಯಾಗುವಂತೆ ಮಾಡಿದ್ದವು. ರಾಮನ ನೆನಪನ್ನು ಹೃದಯದಿಂದ ಕಿತ್ತೊಗೆದು, ವಾಲ್ಮೀಕಿಗಳ ಆಶ್ರಮದಲ್ಲಿ ನೆಮ್ಮದಿಯನ್ನು ಕಂಡಿದ್ದಳು. ಲವ-ಕುಶರು ಬೆಳೆದಾಗ ವಾಲ್ಮೀಕಿ ಮತ್ತೆ

ರಾಮನೊಂದಿಗೆ ಸೀತೆಯನ್ನು ಸೇರಿಸುವ ಪ್ರಯತ್ನ ಮಾಡುತ್ತಾನೆ. ರಾಮ, ಲವ-ಕುಶರು, ತನ್ನ ಮಕ್ಕಳೇ ಎಂದು ಸಮಸ್ತ ಜನರ ಎದುರಿಗೆ ಸೀತೆ ಆಣೆ-ಪ್ರಮಾಣ ಮಾಡಬೇಕೆಂಬ ಷರತ್ತನ್ನು ಕೇಳಿ, ಸೀತೆ ಎಲ್ಲರೆದುರೇ ಆತನ ಮಾತನ್ನು ಧಿಕರಿಸುತ್ತಾಳೆ. ನಂಬಿಕೆಯಿದ್ದರೆ ಮಕ್ಕಳನ್ನು ಕರೆದೊಯ್ಯಲಿ ಇಲ್ಲದಿದ್ದರೆ ಬಿಡಲಿ ಎಂದು ಮತ್ತೆ ಆಶ್ರಮವನ್ನು ಪ್ರವೇಶಿಸುತ್ತಾಳೆ. ಮೂಲ ಕತೆಯಂತೆ ಸೀತೆ ಭೂಮಿಯಲ್ಲಿ ಲೀನವಾಗದೇ, ಒಂಟಿಯಾಗಿ ಬದುಕನ್ನು ಎದುರಿಸುವ, ಬದುಕುವ ಛಲವನ್ನು ವ್ಯಕ್ತಪಡಿಸುತ್ತಾಳೆ.

'ಕರುಣಾಳು ರಾಘವ', 'ಏಕಪತ್ನೀ ವ್ರತಸ್ಥ'ನೆಂದು ಹೆಸರಾದ ರಾಮನ ವರ್ತನೆಗಳನ್ನು ಕಾದಂಬರಿಕಾರರು ಚಿಕಿತ್ಸಕ ದೃಷ್ಟಿಯಿಂದ ವಿಮರ್ಶಿಸಿದ್ದಾರೆ. ಸೀತೆಯನ್ನು ರಾವಣ ಹೊತ್ತೊಯ್ದಾಗ ಪ್ರಾರಂಭದಲ್ಲಿ ಪತ್ನಿಯನ್ನು ಕಳೆದುಕೊಂಡ ಖೇದ ಆವರಿಸಿತ್ತು. ಆದರೆ ದಿನಗಳೆದಂತೆ ಸೀತೆಯ ಪಾತಿವ್ರತ್ಯದ ಬಗ್ಗೆ ಸಂಶಯ ಹೆಮ್ಮರವಾಗಿ ಬೆಳೆಯುತ್ತದೆ. ಇಕ್ಷ್ವಾಕು ವಂಶದ ಪ್ರತಿಷ್ಠೆ, ರಾಜನೀತಿ, ಲೋಕನೀತಿಗಳಿಗೆ ಬೆಲೆಕೊಡುವ ರಾಮನ ಮನಸ್ಸು, ಸೀತೆಯ ಸಂಕಷ್ಟಕ್ಕೆ ಮರುಗುವುದಿರಲಿ, ಗರ್ಭಿಣಿಯಾಗಿದ್ದ ಆಕೆಯನ್ನು ಕಾಡುಪಾಲು ಮಾಡುವ ಕ್ರೌರ್ಯವನ್ನೂ ತೋರುತ್ತಾನೆ.

ರಾವಣನ ರಾಜ್ಯದಲ್ಲಿ ಸೀತೆ ಪಡುತ್ತಿರುವ ಪರಿತಾಪಗಳ ಬಗ್ಗೆ ರಾಮನಿಗೆ ಕಿಂಚಿತ್ತೂ ಕಳಕಳಿಯಿಲ್ಲ. ಬದಲಾಗಿ ಸೀತೆ ರಾವಣನ ಅಂತಃಪುರದಲ್ಲಿ ಸುಖವಾಗಿಯೇ ಇರಬಹುದು, ಕಷ್ಟಪಟ್ಟು ಹುಡುಕಿದಾಗ ತನ್ನೊಂದಿಗೆ ಬರಲು ನಿರಾಕರಿಸಬಹುದೆಂಬ ಸಂಶಯ ಉಂಟಾಗುತ್ತದೆ. "ಸೀತೆ ಸತ್ತೇ ಹೋದಳೆಂಬ ವಾರ್ತೆಯೇ ನನಗೆ ಪ್ರಿಯಬಾಗಬಹುದು. ಇಕ್ಷ್ವಾಕು ವಂಶದ ಸೊಸೆ, ವಂಶದ ಕೀರ್ತಿಗೆ ಕಳಂಕ ತಂದರೆ ನಾನು ಹೇಗೆ ಜೀವಿಸುವುದು" (ಅದೇ, ಪುಟ-೨೧೧) ಎಂಬ ಚಿಂತೆಯಲ್ಲಿ ಮಗ್ನನಾಗುತ್ತಾನೆ. ರಾಮನಿಗುಂಟಾದ ಈ ಸಮಸ್ಯೆಯನ್ನು ಕಾದಂಬರಿಕಾರರು, ವಾಲಿ, ಸುಗ್ರೀವ, ತಾರೆಯರ ಘಟನೆಯೊಂದಿಗೆ ಮುಖಾಮುಖಿಯಾಗಿಸಿದ್ದಾರೆ.

ವಾಲಿಯು ಸುಗ್ರೀವ ತನ್ನ ಅನುಮತಿಯಿಲ್ಲದೆ ಪಟ್ಟಾಭಿಷೇಕ ಮಾಡಿಕೊಂಡಿರುವುದನ್ನು ವಿರೋಧಿಸಿ, ಸುಗ್ರೀವನನ್ನು ರಾಜ್ಯದಿಂದ ಹೊರಗಟ್ಟುತ್ತಾನೆ. ಆತನ ಹೆಂಡತಿ ರುಮೆಯನ್ನು ಅಂತಃಪುರದಲ್ಲಿಟ್ಟು ಕೊಂಡಿರುತ್ತಾನೆ. ರುಮೆ ವಾಲಿಯೊಂದಿಗೆ ಕೂಡಿರುವುದು ಸುಗ್ರೀವನಿಗೆ ಅತೀವ ಬೇಸರದ ಸಂಗತಿ. ಆದರೆ ವಾಲಿಯನ್ನು ಸದೆಬಡಿದ ನಂತರ ರುಮೆಯನ್ನು ಮರಳಿ ಸ್ವೀಕರಿಸುವ ಔದಾರ್ಯ ತೋರುತ್ತಾನೆ. ಇದರಲ್ಲಿ ರುಮೆಯ ತಪ್ಪಿಲ್ಲವೆಂಬ ತಿಳುವಳಿಕೆ ಹೊಂದಿದ್ದಾನೆ. ಒಂದು ಪಕ್ಷ ಯುದ್ಧದಲ್ಲಿ ವಾಲಿ ಸತ್ತರೆ, ಆತನ ಹೆಂಡತಿ ತಾರೆಯನ್ನೂ ತನ್ನವಳನ್ನಾಗಿ ಮಾಡಿಕೊಳ್ಳುವ ನಿರ್ಧಾರ ತಿಳಿಸುತ್ತಾನೆ. ರಾಮ, ಅತ್ತಿಗೆ ತಾಯಿ ಸಮಾನವೆಂದು ಬೋಧಿಸಿದಾಗ; "ಒಳ್ಳೇ ಮಾತು ಹೇಳಿದೆ ರಾಮ! ವಾಲಿಯೂ ಸತ್ತು ತಾನೂ ಆಕೆಯನ್ನು ಪರಿಗ್ರಹಿಸದಿದ್ದರೆ, ಆಕೆಯ ಗತಿಯೇನು? ಆಕೆ ನನಗಿಂತ ಹಿರಿಯಳಲ್ಲ. ಆಕೆಗೆ ಬೇಕಾದದ್ದು ಗೌರವ ಪೂಜೆ ಮರ್ಯಾದೆಗಳಲ್ಲ. ಆಕೆಗೆ ಬೇಕಾದದ್ದು ಪ್ರೇಮ, ದೈಹಿಕ ಸುಖ, ಚಕ್ರವರ್ತಿಯ ಹೆಂಡತಿಯನ್ನು ಚಕ್ರವರ್ತಿಯೇ ಪರಿಗ್ರಹಿಸಬೇಕಲ್ಲದೆ, ಬೇರೆಯುವರಿಗೆ

ಬಿಟ್ಟುಕೊಡಲಾಗುವುದಿಲ್ಲ" (ಅದೇ, ಪುಟ-೨೧೭) ಎಂಬ ಮಾತುಗಳು ರಾಮನಿಗೆ ರುಚಿಸುವುದಿಲ್ಲ. ಲಕ್ಷ್ಮಣನಿಗೆ ಮಾನವ ಸಂಸ್ಕೃತಿಗಿಂತ ವಾನರ ಸಂಸ್ಕೃತಿಯೇ ಶ್ರೇಷ್ಠವೆಂಬ ನಂಬಿಕೆ ಬರುತ್ತದೆ. ಲಕ್ಷ್ಮಣ ಎಷ್ಟೇ ಪ್ರತಿಭಟಿಸಿದರೂ, ಸೀತೆಯನ್ನು ಅಗ್ನಿ ಪರೀಕ್ಷೆಗೆ ಒಳಪಡಿಸುತ್ತಾನೆ. ಸೀತೆ ಪವಿತ್ರಳೆಂದು ಜನ ನಂಬಿದರೂ, ರಾಮನ ಮನಸ್ಸು ಸಂಶಯದ ಪಿಚಾಚಿಯಾವರಿಸಿ, ಮತ್ತೆ ಆಕೆಯನ್ನು ಕಾಡಿಗಟ್ಟುವ ಕ್ರೂರಿಯಾಗುತ್ತಾನೆ.

'ರಾಮಾಯಣ' ನಡೆಯಲು ಕಾರಣಳಾದ ಕೈಕೇಯಿಯ ಬದುಕು, ಪಶ್ಚಾತ್ತಾಪದ ನರಳಿಕೆಯಲ್ಲೇ ಕಳೆದು ಹೋಗುತ್ತದೆ. ಮಂಥರೆಯ ಮಾತಿಗೆ ಮರುಳಾಗಿ ತಾನು ಕೇಳಿದ ವರಗಳು, ಇಕ್ಷ್ವಾಕು ವಂಶದ ದುರಂತಕ್ಕೆ ಕಾರಣವಾಗುತ್ತದೆ. ಹೆತ್ತ ಮಗ ಭರತ ತನ್ನನ್ನು ದ್ವೇಷಿಸಲು ಪ್ರಾರಂಭಿಸುತ್ತಾನೆ. ಕೈಕೇಯಿ ರಾಮನನ್ನು ವನವಾಸಕ್ಕೆ ಕಳುಹಿಸುವ ಕಾರಣ, ಭರತ ಪಟ್ಟವೇರಲು ಸಹಾಯಕವಾಗಲೆಂಬ ಕಾರಣಕ್ಕೆ. ಆದರೆ, ಪಟ್ಟವೇರಲು ಒಪ್ಪದ ಭರತ, ನಾರು ಮಡಿಯುಟ್ಟು, ರಾಮನ ಪಾದುಕೆಗಳನ್ನು ಸಿಂಹಾಸನದಲ್ಲಿರಿಸಿ, ರಾಮನ ಹೆಸರಿನಲ್ಲಿ ರಾಜ್ಯಭಾರ ಮಾಡುತ್ತಾನೆ. ಎಲ್ಲರಿಂದಲೂ ದೂಷಣೆಗೊಳಗಾಗುವ ಕೈಕೇಯಿ ದುರದೃಷ್ಟವಂತ ಮತ್ತು ದುಷ್ಟ ಹೆಂಗಸಾಗಿ ಕಾದಂಬರಿಯಲ್ಲಿ ಮೂಡಿಬಂದಿದ್ದಾಳೆ.

ರಾವಣ ಸೀತೆಯನ್ನು ಅಪಹರಿಸಲು ಕಾರಣವಿದೆ. ಮೊದಲನೆಯದು, ತಂಗಿ ಶೂರ್ಪನಖಿಯನ್ನು ಅಪಮಾನಿಸಿ, ಮೂಗನ್ನು ಕೊಯ್ದು ಕಳಿಸಿದ್ದು. ಎರಡನೆಯದು ಸ್ಫುರದ್ರೂಪಿಯಾದ ಸೀತೆ ಸ್ವಯಂವರದಲ್ಲಿ ತನಗೆ ದಕ್ಕದೇ ಹೋದುದಕ್ಕೆ. ಆದರೆ, ರಾವಣ ಕೊನೆಯವರೆಗೂ ಸಂಯಮದ ಎಲ್ಲೆಯನ್ನು ದಾಟುವುದಿಲ್ಲ. ಸೀತೆಯನ್ನು ಪ್ರತ್ಯೇಕವಾದ ಅಶೋಕ ವನದಲ್ಲಿಟ್ಟು, ಗೌರವಯುತವಾಗಿ ನೋಡಿಕೊಳ್ಳುತ್ತಾನೆ. ರಾವಣ ಸೀತೆಯ ದೇಹವನ್ನಷ್ಟೇ ಬಯಸದೇ ಆಕೆಯ ಅನುರಾಗಕ್ಕಾಗಿ, ಮನಸ್ಸಿನ ಒಪ್ಪಿಗೆಗಾಗಿ ಕಾಯಲು ಸಿದ್ಧನಾಗಿದ್ದಾನೆ.

ಶಬರಿ, ಮಂಡೋದರಿ ಮುಂತಾದ ಪಾತ್ರಗಳು ಕಾದಂಬರಿಯಲ್ಲಿ ಸಾಂದರ್ಭಿಕವಾಗಿ, ಮೂಲ ಕತೆಯಂತೆ ಮೂಡಿ ಬಂದಿವೆ.

'ಸೀತೆ-ರಾಮ-ರಾವಣ', 'ವಿಮುಕ್ತಿ' ಕಾದಂಬರಿಗಳಲ್ಲಿ ಎಚ್.ವಿ.ಸಾವಿತ್ರಮ್ಮನವರು ರಾಮಾಯಣದ ಘಟನೆಗಳನ್ನು ಹೆಣ್ಣಿನ ದೃಷ್ಟಿಕೋನದಿಂದ ಚಿತ್ರಿಸಿದ್ದಾರೆ. ಸೀತೆ-ಊರ್ಮಿಳೆ-ಕೌಸಲ್ಯೆಯಂತಹ ಪಾತ್ರಗಳು ಮೂಲ ಕತೆಯಲ್ಲಿ ತಮ್ಮ ಅಂತರಾಳವನ್ನು ಪ್ರಕಟಿಸದೇ, ಸಂಪ್ರದಾಯಿಕ ಆದರ್ಶ ಪಾತ್ರಗಳಾಗಿದ್ದವು. ಇಂತಹ ಅನೇಕ ಕತೆ, ಕಾದಂಬರಿ ಮೂಲಕ ಮೂಲ ಕತೆಯ ಎಳೆಗಳನ್ನೇ ಬಳಸಿಕೊಂಡು ಹೆಣ್ಣಿನ ಅಂತರಂಗವನ್ನು ಶೋಧಿಸಲು ಪ್ರಯತ್ನಿಸಲಾಗಿದೆ. ಸೀತೆ, ಊರ್ಮಿಳೆಯರನ್ನು ಸೂಚಿತ ನಿರೂಪಕರನ್ನಾಗಿ ಮಾಡಿಕೊಂಡ ಕಾದಂಬರಿಕಾರರು, ತಮ್ಮ ಪ್ರತಿರೋಧದ ಪ್ರತಿಕ್ರಿಯೆಗಳನ್ನು ಸಂದರ್ಭಕ್ಕನುಗುಣವಾಗಿ ಬಿತ್ತರಿಸಿದ್ದಾರೆ.

### ೭.೩.೨ ಪ್ರತಿಭಟನಾತ್ಮಕ ಧೋರಣೆಯ ಮಾಧವಿ ಬದುಕಿನ ಪುನರಾವಲೋಕನ

ಕ್ರಿ.ಶ. ೧೯೭೬ರಲ್ಲಿ ಪ್ರಕಟಗೊಂಡ ಅನುಪಮಾ ನಿರಂಜನ ಅವರ 'ಮಾಧವಿ' ಕೃತಿ ಪೌರಾಣಿಕ ಕಾದಂಬರಿಯಾಗಿದೆ. ಎಪ್ಪತ್ತರ ದಶಕದ ನಂತರ ಮಹಿಳಾ ಬರಹಗಾರರು ಪುರಾಣ ಪಾತ್ರಗಳ ಪುನರವಲೋಕನ ಮಾದರಿಯನ್ನು ಬಳಸಿಕೊಳ್ಳುವ ಮೂಲಕ, ವರ್ತಮಾನದ ಸಾಮಾಜಿಕ ಬದುಕನ್ನು ಅರ್ಥೈಸಿಕೊಳ್ಳಲು, ವಿಶ್ಲೇಷಿಸಲು ಪ್ರಯತ್ನಿಸಿರುವುದನ್ನು ಈ ಹಿಂದೆ ಚರ್ಚಿಸಲಾಗಿದೆ. ಕಾದಂಬರಿಕಾರರು ಸಾಹಿತ್ಯ ಪರಂಪರೆಗೆ, ಮಹಿಳಾ ಪರಂಪರೆಯ ಶೋಧದಲ್ಲಿ-ವ್ಯವಸ್ಥೆಯ ವಿರುದ್ಧ ತನ್ನದೇ ರೀತಿಯಲ್ಲಿ ಸ್ಫೋಟಗೊಂಡು, ಸಿಡಿದೆದ್ದ ಮಾಧವಿಯ ಬದುಕನ್ನು ಉದಾಹರಿಸುತ್ತ, ವರ್ತಮಾನದ ಶೋಷಿತ ಮಹಿಳೆಯರು ಎಚ್ಚೆತ್ತುಕೊಳ್ಳುವ ಪ್ರಜ್ಞೆಗೆ, ಬೆಳಕು ಚೆಲ್ಲುವ ಕೆಲಸ ಮಾಡಿದ್ದಾರೆ. ಪೌರಾಣಿಕ ಮಾಹಿತಿಯನ್ನು ದಾಖಲೆಯಾಗಿ ಬಳಸಿಕೊಂಡು ಇಂದಿಗೂ ಪಿತೃಪ್ರಧಾನ ವ್ಯವಸ್ಥೆಯ ದಾಸ್ಯದ ಸಂಕೋಲೆಗಳಿಂದ ಬಿಡಿಸಿಕೊಳ್ಳಲು ಹೆಣಗುತ್ತಿರುವ ಹೆಣ್ಣಿನ ಬದುಕನ್ನು ಈ ಕಾದಂಬರಿ ಓದುಗರ ಮುಂದಿಟ್ಟಿದೆ. ಶೋಷಿತ ವ್ಯವಸ್ಥೆಯಿಂದ ಮುಕ್ತಿ ಪಡೆಯುವ ಮಾರ್ಗಗಳನ್ನು; ಹೆಣ್ಣು, ತಾನೇ ಕಂಡುಕೊಳ್ಳಬೇಕಾದ ಅಗತ್ಯವನ್ನು ಕಾದಂಬರಿ ಪರೋಕ್ಷವಾಗಿ ಸಂದೇಶ ನೀಡಿರುವುದನ್ನು ಗಮನಿಸಬಹುದಾಗಿದೆ.

ಮಾಧವಿಯ ಬದುಕನ್ನು ಕುರಿತಾದ ಉಲ್ಲೇಖಗಳನ್ನು ಮಹಾಭಾರತದ ಉದ್ಯೋಗ ಪರ್ವದ ೧೧೪, ೧೧೭, ೧೧೮, ೧೧೯, ೧೨೦ನೇ ಶ್ಲೋಕಗಳನ್ನು ಕಾದಂಬರಿಕಾರರು ಬಳಸಿಕೊಂಡಿದ್ದಾರೆ. ಇದರೊಂದಿಗೆ ಉದ್ಯೋಗ ಪರ್ವದ ೧೦೬, ೧೦೭, ೧೦೮, ೧೧೩; ಆದಿಪರ್ವದ ೬೯, ೭೮, ೮೭; ಸಭಾ ಪರ್ವದ ೦೪; ದ್ರೋಣ ಪರ್ವದ ೬೩; ಶಾಂತಿ ಪರ್ವದ ೨೮; ಅನುಶಾಸನ ಪರ್ವದ ೨೭೧ನೇ ಶ್ಲೋಕಗಳ ಉಲ್ಲೇಖಗಳನ್ನು ಕಾದಂಬರಿಯಲ್ಲಿ ಬರುವ ಗಾಲವ, ವಿಶ್ವಾಮಿತ್ರ, ಯಯಾತಿ, ದಿವೋದಾಸ, ಹರ್ಯಶ್ವ, ಉಶೀನರ ಪಾತ್ರಗಳನ್ನು ಹೆಣೆಯಲು ಉಪಯೋಗಿಸಿಕೊಂಡಿದ್ದಾರೆ.

ಅರಮನೆಯಲ್ಲಿ ಸುಖ-ಸಂತೋಷ-ವೈಭವದಿಂದ ಮೆರೆಯಬೇಕಾದಿದ್ದ ರಾಜಕುಮಾರಿ ಮಾಧವಿ, ಹೆಣ್ಣಾಗಿ ಹುಟ್ಟಿರುವುದರಿಂದಲೇ ಪ್ರಾಪ್ತವಾಗುವ ಶೋಷಿತ ಆಯಾಮಗಳನ್ನು, ದುರಂತ ಬದುಕಿನ ಕಹಿ-ಸತ್ಯಗಳನ್ನು ಕಾದಂಬರಿಕಾರರು ಅನಾವರಣಗೊಳಿಸಿದ್ದಾರೆ. ಇದರೊಂದಿಗೆ ಶತಮಾನಗಳ ಹಿಂದೆ, ಮಹಿಳೆಯೊಬ್ಬಳು ತನ್ನ ತಣ್ಣನೆಯ ಪ್ರತಿಭಟನೆಯಿಂದ ರಾಜಪ್ರಭುತ್ವ/ಪಿತೃಪ್ರಧಾನ ವ್ಯವಸ್ಥೆಯನ್ನು ಧಿಕ್ಕರಿಸಿ, ಭವಿಷ್ಯದ ಬದುಕಿನ ಆಯ್ಕೆಯ ಸ್ವಾತಂತ್ರ್ಯವನ್ನು ದಕ್ಕಿಸಿಕೊಳ್ಳುವ ಸಂಗತಿಯನ್ನು ಮನವರಿಕೆ ಮಾಡಿದ್ದಾರೆ.

"ನನ್ನನ್ನು ಅಯ್ಯೋ ಎನಿಸಿದ್ದಕ್ಕೆ ಪ್ರಪಂಚದ ಯಾವ ಹೆಂಗಸೂ ಯಾವ ಕಾಲಕ್ಕೂ ನಿಮ್ಮನ್ನು ಕ್ಷಮಿಸೊಲ್ಲ" (ಮಾಧವಿ, ಪುಟ-೧೭೮) ಎನ್ನುವ ಮಾತನ್ನು ಮಾಧವಿ, ಗಾಲವನಿಗೆ ಹೇಳುವುದರೊಂದಿಗೆ, ಕಾದಂಬರಿಕಾರರು ಪ್ರಭುತ್ವದ ವ್ಯವಸ್ಥೆಯಲ್ಲಿ ಒಂದು ಹೆಣ್ಣನ್ನು ಉಪಭೋಗದ ವಸ್ತುವನ್ನಾಗಿ, ಆಡಿಸಿದಂತೆ ಆಡುವ ಕೈಗೊಂಬೆಯನ್ನಾಗಿ ನಡೆಸಿಕೊಳ್ಳುವುದರ ವಿರುದ್ಧ ಎತ್ತಿದ ಧ್ವನಿಯೂ ಆಗಿದೆ.

ರಾಜಕುಮಾರಿ ಮಾಧವಿ, ಹುಟ್ಟಿನಿಂದಲೇ ಉಪೇಕ್ಷೆಗೆ ಕಾರಣಳಾಗಿದ್ದಾಳೆ. ಪ್ರತಿಷ್ಠಾನ ನಗರದ ಅರಸನಾದ ಯಯಾತಿ, ಮಹಾರಾಣಿ ಹೆತ್ತದ್ದು ಹೆಣ್ಣು ಎಂಬ ವಿಷಯ ತಿಳಿದಾಗ, ಆ ಮಗುವನ್ನು ನೋಡಲೂ ಹೋಗುವುದಿಲ್ಲ. ಜ್ವರ ಮತ್ತು ರಕ್ತಸ್ರಾವದಿಂದ ಮಹಾರಾಣಿ ಅಸುನೀಗಿದಾಗ, ಮಗುವನ್ನು ಅಪಶಕುನವಾಗಿ ಭಾವಿಸುತ್ತಾನೆ.

ಸಖಿ ಚಾರುನೇತ್ರೆ, ತನ್ನನ್ನು ಜತನದಿಂದ ಪೋಷಿಸಿದ ಅವ್ವೆಯನ್ನು ಬಿಟ್ಟರೆ ಮಾಧವಿ ತಂದೆ ಮತ್ತು ಚಿಕ್ಕಮ್ಮ ದೇವಯಾನಿಯರ ಪ್ರೀತಿಯಿಂದ ವಂಚಿತಳಾಗಿ ಬೆಳೆಯುತ್ತಾಳೆ. ಮುಂದೆ ತನ್ನ ಕೈಹಿಡಿಯುವ ರಾಜಕುಮಾರನ ಕನಸು ಕಾಣುತ್ತಿರುವ ತರುಣಿ ಮಾಧವಿಯ ಬದುಕು ವಿಚಿತ್ರ ತಿರುವುಗಳನ್ನು ಕಾಣುತ್ತದೆ. ಅನುಪಮ ಸೌಂದರ್ಯ ಹೊಂದಿದ ಮಗಳ ಸ್ವಯಂವರನ್ನು ಏರ್ಪಡಿಸುವ ಆಲೋಚನೆಯಿದ್ದರೂ, ಹಣದ ಅಡಚಣೆಯಿಂದಾಗಿ ಯಯಾತಿ, ಆ ಕಾರ್ಯವನ್ನು ಮುಂದೂಡಿದ್ದಾನೆ. ಈ ಸಮಯಕ್ಕೆ ಸರಿಯಾಗಿ ಬಂದ ಋಷಿಮುನಿ ಗಾಲವ, ಬೇಡಿದ ಭಿಕ್ಷೆಗೆ ಬದಲಾಗಿ, ಮಗಳು ಮಾಧವಿಯನ್ನೇ ದಾನ ಮಾಡಿದ ಯಯಾತಿಯ ಬಗ್ಗೆ ಜಿಗುಪ್ಸೆಯುಂಟಾಗುತ್ತದೆ.

"ಮಹಾಭಾರತದ ಕಾಲಕ್ಕಾಗಲೇ ಸ್ತ್ರೀಯು ಪುರುಷನ 'ಆಸ್ತಿ' ಎಂಬ ಭಾವನೆ ಬಲವಾಗಿ ಬೇರೂರಿತ್ತು. ಸ್ತ್ರೀಯರನ್ನು ಪ್ರತ್ಯೇಕವಾಗಿರಿಸುವ ಪದ್ಧತಿಯ ಮೊದಲ ಲಿಖಿತ ಉಲ್ಲೇಖ ಕ್ರಿ.ಪೂ.೪ನೇ ಶತಮಾನದಲ್ಲಿ ಪಾಣಿನಿ ರಚಿಸಿದ ಗ್ರಂಥದಲ್ಲಿದೆ. ಈ ಪದ್ಧತಿ ಜಗತ್ತಿನ ಎಲ್ಲ ಊಳಿಗಮಾನ್ಯ ವ್ಯವಸ್ಥೆಗಳ ಸಾಮಾನ್ಯ ಲಕ್ಷಣ ಎನ್ನಬಹುದು. ಸಂಸ್ಥಾನಗಳನ್ನು ಕಟ್ಟಿಕೊಂಡು ಆಳುತ್ತಿದ್ದ ರಾಜರು ಸರ್ವಾಧಿಕಾರಿಗಳಾಗಿದ್ದು ಊರಿನ ಎಲ್ಲ ಹೆಂಗಸರ ಮೇಲೆ ಹಕ್ಕನ್ನು ಚಲಾಯಿಸುತ್ತಿದ್ದರು. ರಾಜ ಮನೆತನದ ಸ್ತ್ರೀಯರನ್ನು ಹೊರಗಿನ ಗಂಡಸರ ಕಣ್ಣಿಗೆ ಬೀಳದಂತೆ ಪ್ರತ್ಯೇಕ ಅಂತಃಪುರದಲ್ಲಿರಿಸಲಾಗುತ್ತಿತ್ತು. ಸಭೆಗಳಲ್ಲಿ ಗಂಡಸಿನೊಂದಿಗೆ ಕೂಡಲು ಆಕೆಗೆ ಹಕ್ಕಿರಲಿಲ್ಲ. ಪುರುಷನ ಕಾಮ ಪೂರೈಕೆಗೆ ಸ್ತ್ರೀ ಒಂದು ವಸ್ತುವಾಗಿದ್ದಳು. ಅವಳ ಅಲಂಕಾರ ಗಂಡಿನ ಕಣ್ಣಿಗೆ ಅವಳು ಅಂದವಾಗಿ ಕಾಮೋತ್ತೇಜಕವಾಗಿ ಕಾಣಬೇಕು ಎಂಬ ಉದ್ದೇಶದಿಂದಲೇ ಇರುತ್ತಿತ್ತು. ಗಂಡ ತನ್ನ ಹೆಂಡತಿಯನ್ನು ಮಾರಬಹುದಾಗಿತ್ತು, ದಾನ ಕೊಡಬಹುದಾಗಿತ್ತು. ಹಸುವಿನಂತೆ ಸ್ತ್ರೀಯ ವಿಕ್ರಯ ನಡೆಯುತ್ತಿತ್ತು. ಇದು ಮಗಳಿಗೂ ಅನ್ವಯವಾಗುತ್ತಿದ್ದ ನೀತಿ. ಆದುದರಿಂದಲೇ ಯಯಾತಿ ತನ್ನ ಮಗಳನ್ನು ಅಷ್ಟು ಸುಲಭವಾಗಿ ದಾನವೀಯುತ್ತಾನೆ ಮತ್ತು ಗಾಲವ ಅವಳನ್ನು ರಾಜರಿಗೆ 'ಎರವಲು' ಕೊಟ್ಟು ತನ್ನ ಗುರುದಕ್ಷಿಣೆಗೆ ಬೇಕಾದದ್ದನ್ನು ದೊರಕಿಸಿಕೊಳ್ಳುತ್ತಾನೆ" ('ಮೊದಲ ಮಾತು', ಅದೇ, ಪುಟ-೦೬) ಎಂಬ ಸಂಗತಿಯನ್ನು ಕಾದಂಬರಿ ಅವಜ್ಞೆಗೆ ಒಳಪಡಿಸಿದೆ.

ಯಜುರ್ವೇದದಲ್ಲಿ ಪಾರಂಗತನಾದ ಮೇಲೆ ಗಾಲವನಿಗೆ ಗುರುಕುಲಾಶ್ರಮದಿಂದ ಹೊರಗೆ ಹೋಗುವ ಅನುಮತಿ ದೊರಕುತ್ತದೆ. ತನ್ನ ಶಿಕ್ಷಣ ಪೂರೈಸಲು ಕಾರಣರಾದ ಗುರು ವಿಶ್ವಾಮಿತ್ರರಿಗೆ ಗುರುದಕ್ಷಿಣೆ ಸಲ್ಲಿಸುವ ಹಂಬಲ ಮಾಧವಿಯ ದುರಂತಕ್ಕೆ ನಾಂದಿಯಾಗುತ್ತದೆ. ವಿಶ್ವಾಮಿತ್ರ ಗುರುದಕ್ಷಿಣೆಯನ್ನು ಅಪೇಕ್ಷಿಸದಿದ್ದರೂ, ಗಾಲವ ಒತ್ತಾಯ ಪಡಿಸುತ್ತಾನೆ. ಗಾಲವನ ಮೊಂಡುತನಕ್ಕೆ ಪಾಠ ಕಲಿಸುವ

ಉದ್ದೇಶದಿಂದ, ಒಂದು ಕಿವಿ ಮಾತ್ರ ಕಪ್ಪಾಗಿದ್ದು, ಉಳಿದ ಮೈ ಬೆಳ್ಳಗಿರುವ ಎಂಟು ನೂರು ಕುದುರೆಗಳನ್ನು ತಂದೊಪ್ಪಿಸಲು ಆಜ್ಞಾಪಿಸುತ್ತಾನೆ. ಇದು ಅಸಾಧ್ಯವೆಂದು ತಿಳಿದಿದ್ದರೂ, ಗಾಲವ ಹೇಗಾದರೂ ಮಾಡಿ ಗುರುದಕ್ಷಿಣೆಯನ್ನು ಸಲ್ಲಿಸಲು, ಅಂತಹ ಕುದುರೆಗಳಿಗಾಗಿ ಶೋಧ ಆರಂಭಿಸುತ್ತಾನೆ. ಮೊದಲ ಹಂತದಲ್ಲಿ ಇದೇನನ್ನೂ ಅರಿಯದ ಕನಸು ಕಂಗಳ ಮಾಧವಿಯ ಬದುಕು ಬಲಿಯಾಗಲು ಗಾಲವ, ವಿಶ್ವಾಮಿತ್ರ, ಯಯಾತಿ ಕಾರಣರಾಗುತ್ತಾರೆ.

ದಾನಶೂರನೆಂದು ಖ್ಯಾತಿಯಾದ ಯಯಾತಿ, ಗಾಲವ ಬೇಡಿದ ವಿಶಿಷ್ಟ ಕುದುರೆಗಳು ತನ್ನ ಬಳಿ ಇಲ್ಲವಾದಾಗ, ಮಗಳು ಮಾಧವಿಯನ್ನು ದಾನ ನೀಡಿ ತನ್ನ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುತ್ತಾನೆ. ಕೇಳಿದವರಿಗೆ ಕೇಳಿದ್ದನ್ನು ನೀಡುವ ರಾಜಧರ್ಮವನ್ನು ಪಾಲಿಸುವುದರೊಂದಿಗೆ, ಸ್ವಯಂವರ ಏರ್ಪಡಿಸುವ ಹಣವೂ ಉಳಿತಾಯವಾಗುತ್ತದೆ ಎನ್ನುವ ಯಯಾತಿಯ ಆಲೋಚನೆಗೆ ದೇವಯಾನಿಯ ಕುಮ್ಮಕ್ಕೂ ದೊರೆಯುತ್ತದೆ. ತನಗೆ ಒಂದು ಮಾತು ತಿಳಿಸದೇ, ದಾನ ಮಾಡಿದ ತಂದೆಯ ಎದುರಿಗೆ ಪ್ರತಿರೋಧಿಸಲು ಮಾಧವಿಗೆ ಅವಕಾಶವೇ ದೊರೆಯುವುದಿಲ್ಲ. "ಒಂದು ವೇಳೆ ತಾನು ಆ ಮುನಿಯ ಹಿಂದೆ ಹೋಗುವುದಿಲ್ಲ ಎಂದರೆ? ತಂದೆ ಮಾತಿಗೆ ತಪ್ಪಿದ ಹಾಗಾಗುತ್ತದೆ ನಿಜ. ಒಬ್ಬ ಮುಗ್ಧೆಯ ಬದುಕಿಗಿಂತ ಮಹಾರಾಜರ ಮಾತು ದೊಡ್ಡದೆ?" (ಅದೇ, ಪುಟ-೩೯) ಎಂಬ ಮಾಧವಿಯ ಆಲೋಚನೆ, ಕಾರ್ಯರೂಪಕ್ಕೆ ಬರಲಾಗದೇ ಸೋಲುತ್ತದೆ.

ಗಾಲವ, ಗುರುದಕ್ಷಿಣೆ ಸಲ್ಲಿಸುವ ದಾರಿ ಕಠಿಣವಾದಂತೆಲ್ಲ ಆತನನ್ನು 'ಯಜ್ಞ ಪಶುವಿನಂತೆ' ಹಿಂಬಾಲಿಸಿದ ಮಾಧವಿಯ ಭವಿಷ್ಯತ್ತಿನ ಬದುಕಿನ ಕನಸುಗಳು, ಕರಕಲಾಗುತ್ತಾ ಹೋಗುತ್ತವೆ. ಒಬ್ಬ ರಾಜನಲ್ಲಿ ಎಂಟು ನೂರು ಕುದುರೆಗಳು ದೊರೆಯಲಾರವು ಎಂದು ತಿಳಿದಾಗ ಮೂವರು ರಾಜರು ಮತ್ತು ಗುರು ವಿಶ್ವಾಮಿತ್ರ ಮುನಿಗಳ ಹತ್ತಿರ ಮಾಧವಿಯನ್ನು ಗಾಲವ 'ಒತ್ತೆ'ಯಿಡುತ್ತಾನೆ. ಐವತ್ತು ವರ್ಷ ಮೀರಿದ ಅಯೋಧ್ಯೆಯ ಅರಸ ಹರ್ಯಶ್ವ; ಪುತ್ರ ಸಂತಾನಕ್ಕಾಗಿ ಅಶ್ವಮೇಧಯಾಗ-ಪುತ್ರ ಕಾಮೇಷ್ಠಿಯಾಗ ಮಾಡಿದ ಕಾಶೀ ನಗರದ ಅರಸ ದಿವೋದಾಸ; ಭೋಜ ದೇಶದ ಅರಸ ಉಶೀನರ ವಶದಲ್ಲಿದ್ದಾಗ ಮಾಧವಿ, ಅವರ ಕಾಮಪಿಪಾಸೆಯನ್ನು ತೀರಿಸುವ ಉಪಭೋಗದ ವಸ್ತುವಾಗುತ್ತಾಳೆ. ಹರ್ಯಶ್ವ ಮತ್ತು ದಿವೋದಾಸ ಅರಸರಿಗೆ ಮಕ್ಕಳಿಲ್ಲದ ಕೊರಗನ್ನು ನೀಗಿಸಿ, ಗಂಡು ಮಕ್ಕಳನ್ನು ಹೆತ್ತುಕೊಡುವ ಸನ್ನಿವೇಶ 'ನಿಯೋಗ' ಪದ್ಧತಿಯನ್ನು ನೆನಪಿಸುತ್ತದೆ. ರಾಜಧರ್ಮದ ಹೆಸರಿನಲ್ಲಿ ಅನೇಕ ಉಪಪತ್ನಿಯರನ್ನು ಹೊಂದುವ, ಅರಸರ ವಿಷಯಲಂಪಟತೆಯನ್ನು ಕಾದಂಬರಿ ಬಯಲುಗೊಳಿಸುತ್ತದೆ. ಬದುಕಿನ ವಿಚಿತ್ರ ತಿರುವುಗಳಿಗೆ ಈಡಾದ ಮಾಧವಿಯ ಪ್ರತಿಕ್ರಿಯೆ-ಪ್ರತಿರೋಧಗಳು ಕೆಲವೊಮ್ಮೆ ಸ್ವಗತ ರೂಪವನ್ನು ಪಡೆದರೆ, ಮಗದೊಮ್ಮೆ ಮಾತಿನ ರೂಪವನ್ನು ಪಡೆದಿವೆ.

ತಂದೆಯ ವಯಸ್ಸಿನ ಹರ್ಯಶ್ವನ ಸಾಂಗತ್ಯದಲ್ಲಿ ಮಾಧವಿ, ಮಂತ್ರಿಯ ಮಗನನ್ನು ನೆನಪಿಸಿಕೊಳ್ಳುತ್ತಾಳೆ. ಸ್ವಯಂವರ ಏರ್ಪಟ್ಟಿದ್ದರೆ ಮಂತ್ರಿಯ ಮಗನನ್ನು ವರಿಸುವ ಅಪೇಕ್ಷೆಯನ್ನು

ತನಗೆ ತಾನೇ ಹೇಳಿಕೊಳ್ಳುತ್ತಾಳೆ. ವಯೋ ಸಹಜವಾದ ಬಯಕೆಗಳು, ಅರಸರ ಕಾಮಕೇಳಿಯಲ್ಲಿ ಸಿಕ್ಕು ಸುಟ್ಟು ಹೋಗುತ್ತವೆ. ಮನಸ್ಸು ದಿನದಿಂದ ದಿನಕ್ಕೆ ಕಲ್ಲಾಗುತ್ತಾ ಹೋಗುತ್ತದೆ.

ಅರಸ ದಿವೋದಾಸ ವಂಶಕ್ಕೆ ಪವಿತ್ರತೆ ಬರಬೇಕಾದರೆ, ಮಾಧವಿಯನ್ನು ಶಾಸ್ತ್ರೋಕ್ತವಾಗಿ ಪಾಣಿಗ್ರಹಣ ಮಾಡುವುದಾಗಿ ತಿಳಿಸಿದಾಗ "ಆಹಾ! ಎಂಥಾ ದೊಡ್ಡ ಮಾತುಗಳು. ಅಗ್ನಿ ಸಾಕ್ಷಿಯಾಗಿ ಕೈ ಹಿಡಿದ ಮಡದಿಯರು ಎಷ್ಟಿರುವರೋ ಈ ರಾಜನಿಗೆ ಮಹಾರಾಜ ಪವಿತ್ರನೇ? ಹರ್ಯಶ್ವನೊಂದಿಗೆ ಮಲಗಿ ಈಗ ಇವನ ಜೊತೆ ಬಾಳಲು ಬಂದಿರುವ ತಾನು ಪವಿತ್ರಳೇ?" (ಅದೇ, ಪುಟ-೮೬) ಎಂಬ ಪ್ರಶ್ನೆಯನ್ನು ಮಾಧವಿ ಹಾಕಿಕೊಳ್ಳುತ್ತಾಳೆ.

ಉತ್ತರ ಸಿಗದ ಪ್ರಶ್ನೆಗಳನ್ನು ಕೇಳಿಕೊಳ್ಳುತ್ತಾ ಹೋಗುವ ಮಾಧವಿಗೆ ಇತರ ಹೆಣ್ಣುಮಕ್ಕಳ ಸಮಸ್ಯೆಗಳೂ ಮುಖಾಮುಖಿಯಾಗುತ್ತವೆ. ಬಡತನದ ಕಾರಣದಿಂದ ದಾಸಿಯರಾಗುವುದು, ಇಂತಿಷ್ಟು ಹಣಕ್ಕೆ ಮಾರಾಟವಾದ ದಾಸಿಯರ ಮೇಲೆ ಆಗುವ ಅತ್ಯಾಚಾರಗಳನ್ನು ಕೇಳಿದ ಮಾಧವಿ, ದುಃಖ-ನೋವು-ಸಂಕಟಗಳು ತನಗೊಬ್ಬಳಿಗೇ ಇಲ್ಲ. ತನಗಿಂತಲೂ ಕಷ್ಟವಾದ ಪರಿಸ್ಥಿತಿಯನ್ನು ಎದುರಿಸುವವರಿದ್ದಾರೆಂಬುದು ಅರಿವಿಗೆ ಬರುತ್ತದೆ. ಉಶೀನರ ಮತ್ತು ಮಹಿಷ್ಮತಿಯ ಮಧ್ಯೆ ನಡೆಯುವ ಯುದ್ಧದ ಸಂದರ್ಭವನ್ನು ಪ್ರಸ್ತಾಪಿಸುವ ಕಾದಂಬರಿಕಾರರು, ಯುದ್ಧದಿಂದ ಹೆಣ್ಣಿನ ಮೇಲಾಗುವ ಪರಿಣಾಮಗಳನ್ನು ವಿವೇಚಿಸಿದ್ದಾರೆ. ಒತ್ತಾಯ ಪೂರ್ವಕವಾಗಿ ಯುವಕರನ್ನು ಸೇನೆಗೆ ಸೇರಿಸಿಕೊಳ್ಳುವುದು, ಉಡುಗೊರೆ-ಬಹುಮಾನಗಳ ಆಸೆ ತೋರಿಸಿ ರಣರಂಗದಲ್ಲಿ ಕಾದಾಡಲು ಹುರಿದುಂಬಿಸುವುದು. ಅವರು ಸತ್ತಾಗ, ಮನೆಯ ಹೆಂಗಸರ ಅಸಹಾಯಕ ಸ್ಥಿತಿಯ ಅರಿವಾಗುತ್ತದೆ. ಆಸರೆಯಾಗಿದ್ದ ಮಕ್ಕಳನ್ನು ಕಳೆದುಕೊಂಡ ದಾಸಿಯರ ದುಃಖವೂ ಸೇರಿಕೊಂಡಿದೆ.

ದಿವೋದಾಸ ನಡೆಸುವ ಅಶ್ವಮೇಧಯಾಗ, ಪುತ್ರ ಕಾಮೇಷ್ಟಿಯಾಗವನ್ನು ಮಾಡುವಾಗ, ಬಡ ಪ್ರಜೆಗಳ ಮೇಲೆ ಹೇರುವ ತೆರಿಗೆ-ಸುಲಿಗೆಗಳ ಕುರಿತು; ಯಜ್ಞಕ್ಕಾಗಿ ಹಾವು, ಪಕ್ಷಿ, ಪಶು, ಕುದುರೆ, ಆಮೆ ಮುಂತಾದ ಮೂಕ ಪ್ರಾಣಿಗಳನ್ನು ಬಲಿ ಕೊಡುವ ಸಂಪ್ರದಾಯವನ್ನು ಮಾಧವಿಯ ಮೂಲಕ ಕಾದಂಬರಿಕಾರರು ಖಂಡಿಸಿದ್ದಾರೆ.

ಮುನಿಗಳು, ಋಷಿ ಪತ್ನಿಯರು, ಮಾಧವಿ, ಶಿಷ್ಯಂದಿರ ಮಧ್ಯೆ ನಡೆಯುವ ಸಂಭಾಷಣೆಗಳಲ್ಲಿ, ಪರಲೋಕ ತತ್ವದ ಮತ್ತು ಇಹಲೋಕದ ವಾಸ್ತವವನ್ನು ಕುರಿತಂತೆ; ಬೋಧನೆಗೂ ಆಚರಣೆಗೂ ನಡುವೆ ಇರುವ ವ್ಯತ್ಯಾಸವನ್ನು ಕುರಿತಂತೆ; ಮತ್ತಿತರ ಕರ್ತವ್ಯಗಳ ಬಗ್ಗೆ ಪರಾಮರ್ಶನ ನಡೆದಿದೆ. ಗಾಲವ, ವಿಶ್ವಾಮಿತ್ರರು ಪರಲೋಕದಲ್ಲಿ ದಕ್ಕುವ ಮುಕ್ತಿಯ ಬಗ್ಗೆ ಬೋಧಿಸುತ್ತಿದ್ದರೆ, ಮಾಧವಿ ತಾನಿರುವ ಲೋಕದ ಬಗ್ಗೆ ಕಾಳಜಿ ತೋರುತ್ತಾಳೆ. ಋಷಿಮುನಿಗಳು ನೀಡುವ ಬೋಧನೆಗೂ, ಆಚರಣೆಯಲ್ಲಿ ತರುವ ಕ್ರಿಯೆಗಳಿಗೆ ಸಂಬಂಧವಿಲ್ಲದಿರುವುದನ್ನು ಕಾದಂಬರಿಯಲ್ಲಿ ಚರ್ಚಿಸಲಾಗಿದೆ. ರಾಜರು ಮತ್ತು ಋಷಿಗಳು ತಮಗೆ ವಹಿಸಿದ ಧರ್ಮಸಂಹಿತೆಗಳನ್ನು ಪಾಲಿಸದಿದ್ದರೂ ಅದು ಕ್ಷಮಾರ್ಹವಾಗುತ್ತದೆ. ಕಾರಣ ಪ್ರಜೆಗಳ ಹಿತದೃಷ್ಟಿ. ಇಂತಹ ಅಸಂಬದ್ಧ ಬೋಧನೆಗಳನ್ನು ಆಲಿಸುತ್ತಿದ್ದ ಮಾಧವಿಗೆ –

"ಅವಳ ಮನಸ್ಸಿನಲ್ಲಿ ಪ್ರಶ್ನೆ ಎದ್ದಿತು.

ಸ್ತ್ರೀ ಧರ್ಮ ಏನು?

ಮೌನವಾಗಿ ಚಕಾರವೆತ್ತದೆ ನಡೆಯುವುದೊಂದೇ ಏನು? ಮಕ್ಕಳನ್ನು ಹೆತ್ತು ಬೆಳೆಸುವುದೊಂದೇ ಅವಳ ಧರ್ಮವೇನು? ಯಾವ ಅನ್ಯಾಯಗಳಾದರೂ ಪ್ರತಿಭಟಿಸದೆ ಇರುವುದೇ ಏನು?

ಆ ಪ್ರಶ್ನೆಗಳಿಗೆ ಉತ್ತರವಿಲ್ಲ.

ಅವಳಿಗೆನಿಸಿತು; ತನಗೆಷ್ಟೇ ಅನ್ಯಾಯವಾದರೂ ಋಷಿಗಳಾಗಲೀ ಋಷಿ ಪತ್ನಿಯರಾಗಲೀ ಇನ್ನೊಬ್ಬರಾಗಲೀ ತನ್ನ ಪರವಾಗಿ ಯಾರೂ ಮಾತಾಡುವುದಿಲ್ಲ; ಮಾತನಾಡದಿರುವುದೇ ಧರ್ಮವೆಂದು ಕಾಣುತ್ತದೆ" (ಅದೇ, ಪುಟ-೧೨೧) ಎನ್ನುವ ಆಲೋಚನೆಗಳು ಮಾಧವಿಯ ಅಸ್ತಿತ್ವದ ಪ್ರಶ್ನೆಯೊಂದಿಗೆ ಪ್ರತಿ ಹೆಣ್ಣಿನ ಸ್ಥಾನಮಾನದ ಇರುವಿಕೆಯ ಪ್ರಶ್ನೆಯನ್ನು ಎತ್ತುತ್ತವೆ.

ಮೂರು ಜನ ಅರಸರೊಟ್ಟಿಗೆ ಅನುಭವಿಸಿದ ಯಾತನೆಯೊಂದಿಗೆ, ಅರಿಷಡ್ವರ್ಗಗಳನ್ನು ಜಯಿಸಿದ ರಾಜರ್ಷಿ ವಿಶ್ವಾಮಿತ್ರನ ವಿಷಯ ಲೋಲುಪತೆಯನ್ನು ಕಂಡು ಮಾಧವಿ ಜಿಗುಪ್ಸೆಗೊಳ್ಳುತ್ತಾಳೆ. ಎಂಟು ನೂರು ಕುದುರೆಗಳಿಗೆ ಬದಲಾಗಿ, ಮೊದಲೇ ಮಾಧವಿಯನ್ನು ತನಗೊಪ್ಪಿಸಿದ್ದರೆ, ಜೀವನ ಪರ್ಯಂತ ಆಕೆಯನ್ನು ಉಪಭೋಗಿಸಿ, ಮಕ್ಕಳನ್ನು ಪಡೆಯುವ ಮೋಹವನ್ನು ವ್ಯಕ್ತಪಡಿಸುತ್ತಾನೆ. ಗಾಲವ, ವಿಶ್ವಾಮಿತ್ರನಿಗೆ ಮಾಧವಿಯನ್ನು ಪರಿಚಯಿಸಿದಾಗ "ಈ ವಿಶ್ವಾಮಿತ್ರನಿಂದಲ್ಲವೇ ತನಗೆ ಈ ಸ್ಥಿತಿ ಬಂದುದು? ಎಂದು ಬಗೆದ ಮಾಧವಿ, ಗಾಲವನ ಬಗ್ಗೆ ಬೆಳೆಸಿಕೊಂಡಿದ್ದ ಕ್ರೋಧವನ್ನೆಲ್ಲಾ ತನ್ನ ಕಣ್ಣುಗಳಿಂದ ಮಿಶ್ವಾಮಿತ್ರನೆಡೆಗೆ" (ಅದೇ, ಪುಟ-೧೫೬) ಹರಿಸುತ್ತಾಳೆ. ಎಷ್ಟೇ ಪ್ರತಿಭಟಿಸಿದರೂ ಮಣಿಯದ ವಿಶ್ವಾಮಿತ್ರ ಹುಲ್ಲೆಯ ಮೇಲೆ ಹುಲಿ ಎರಗುವಂತೆ ಎರಗಿ ತನ್ನ ಹಲವು ವರ್ಷದ ಕಾಮತೃಷ್ಣೆಯನ್ನು ತೀರಿಸಿಕೊಳ್ಳುತ್ತಾನೆ. ಭೋಗದಿಂದ ತಪಸ್ಸಿಗೆ ಹಾನಿಯಾಗುವುದಿಲ್ಲವೇ ಎಂಬ ಮಾಧವಿಯ ಪ್ರಶ್ನೆಗೆ ವಿಶ್ವಾಮಿತ್ರ, ಯಾವ ಬಾಧಕವಿಲ್ಲವೆಂದು ಹೇಳುತ್ತಾ, ಭೋಗದಿಂದ ಅಹಂಕಾರ, ಅಹಂಕಾರದಿಂದ ಮಹತ್ಕಾರ್ಯಗಳೂ ಸಿದ್ಧಿಸುತ್ತವೆಯೆಂಬ ಹಲವಾರು ನುಣುಚಿಕೊಳ್ಳುವ ಉತ್ತರಗಳು ದೊರೆಯುತ್ತವೆ.

ಒಂದು ಮಗುವನ್ನಾದರೂ ತನ್ನಲ್ಲಿಟ್ಟುಕೊಳ್ಳಬೇಕೆಂಬ ಬಯಕೆಗೆ ಪ್ರತಿಸಾರಿಯೂ ಕಲ್ಲು ಬೀಳುತ್ತದೆ. ಕೊನೆಯಬಾರಿಗೆಂಬಂತೆ, ಆಶ್ರಮದಲ್ಲಿ ಮಗುವನ್ನು ನೋಡಿಕೊಳ್ಳುವವರು ಯಾರೂ ಇಲ್ಲದಿರುವುದನ್ನು ಗಮನಿಸಿ, ಮಗುವನ್ನು ತನ್ನೊಂದಿಗೆ ಕರೆದೊಯ್ಯಲು ಅನುಮತಿ ಕೇಳಿದಾಗ "ನೀನು ಬರೀ ಪಾತ್ರವಾಗಿದ್ದೋಳು. ಜೀವಕ್ಕೆ ಬೇರು ಮುಖ್ಯ. ಬೇರು ಬೆಳೆಯೋವರ್ಗೂ ಮಣ್ಣುಬೇಕು. ಆಮೇಲೆ ಒಂದು ಮಣ್ಣಿನಿಂದ ಇನ್ನೊಂದಕ್ಕೆ ಬದಲಾಯಿಸಿದ್ರೂ ಬೇರು ಜೀವಂತವಾಗೇ ಇರುತ್ತೆ. ನೀನು ಬರಿ ಮಣ್ಣು. ಮಣ್ಣಿಗೆ ಚಿಗುರಿನ ಮೇಲೆ ಅಧಿಕಾರವಿಲ್ಲ" (ಅದೇ, ಪುಟ-೧೭೭) ಎಂಬ ವಿಶ್ವಾಮಿತ್ರನ ಮಾತುಗಳು ಹೆಣ್ಣಿನ ಅಸ್ತಿತ್ವವನ್ನೇ ಕಡೆಗಾಣಿಸಿವೆ. ಕಾಮ ಪಿಪಾಸೆಯನ್ನು ತೀರಿಸಿಕೊಳ್ಳಲು; ಒಂಭತ್ತು

ತಿಂಗಳು ಬಿತ್ತಿದ ಬೀಜವನ್ನು ಹೊತ್ತು, ಹೆರಲು ಹೆಣ್ಣು ಬೇಕು. ಆದರೆ ಮಗುವಿನ ಮೇಲೆ ಮಾತ್ರ ತಾಯಿಗೆ ಹಕ್ಕಿಲ್ಲ ಎನ್ನುವುದು ಯಾವ ನ್ಯಾಯ? ಎಂಬ ಪ್ರಶ್ನೆ ಮಾಧವಿಯ ಮೂಲಕ ಎದುರಾಗುತ್ತದೆ. ಮಾಧವಿಗೆ ಯಾವುದರ ಮೇಲೂ ಅಧಿಕಾರವಿಲ್ಲ. ತಂದೆ ತನ್ನನ್ನು ಗಾಲವನಿಗೆ ದಾನವಾಗಿ ಕೊಡುವಾಗ; ಗಾಲವ ಬೇರೆ ಬೇರೆ ರಾಜರುಗಳಲ್ಲಿ ಒತ್ತೆ ಇಡುವಾಗ ಪ್ರತಿಕ್ರಿಯಿಸುವ ಹಕ್ಕನ್ನು ಕಸಿದುಕೊಳ್ಳಲಾಗಿದೆ. ಕನ್ಯಾಶುಲ್ಕ ನೀಡುವ ರಾಜರುಗಳ ದಾಸಿಯಾಗಿ, ಭೋಗದ ವಸ್ತುವಾಗಿಸಿ, ಭವಿಷ್ಯದ ಬದುಕಿನ ಅಸ್ತಿತ್ವವನ್ನು ಮರೆಯಿಸಿದ ವ್ಯವಸ್ಥೆಯ ಬಗ್ಗೆ ಮಾಧವಿಗಿರುವ ಜಿಗುಪ್ಸೆ–ಅಸಹನೆಗಳು, ತಂದೆ ಸ್ವಯಂವರ ಏರ್ಪಡಿಸಿದಾಗ ಸ್ಫೋಟಿಸುತ್ತವೆ.

ಮಾಧವಿಯ ಬದುಕನ್ನು ಬಲಿಗೊಟ್ಟು, ಗಾಲವ ಸಂಪಾದಿಸಿದ ಆರು ನೂರು ಕುದುರೆಗಳನ್ನು ವಿಶ್ವಾಮಿತ್ರ ಯಾವ ಸತ್ಕಾರ್ಯಕ್ಕೂ ಬಳಸದಿರುವುದು ಸೋಜಿಗದ ಸಂಗತಿಯಾಗುತ್ತದೆ. ಗಾಲವ, ಗುರುದಕ್ಷಿಣೆಯನ್ನು ಸಲ್ಲಿಸಿದ ನಂತರ, ಮಾಧವಿಯನ್ನು ಮರಳಿ ಯಯಾತಿ ಬಳಿಗೆ ತಲುಪಿಸುತ್ತಾನೆ. ಗಾಲವನ ಕೃತ್ಯಕ್ಕಾಗಿ ಕ್ರೋಧ ಮತ್ತು ಮಾಧವಿಯ ಮುಂದಿನ ಯೋಚನೆಗಳೆರಡೂ ಯಯಾತಿಯಲ್ಲಿ ಒಟ್ಟಿಗೇ ನಡೆಯುತ್ತವೆ. ನಾಲ್ಕು ಮಕ್ಕಳ ತಾಯಿಯಾಗಿದ್ದರೂ, ಹೊರನೋಟಕ್ಕೆ ನವಯುವತಿಯ ಲಾವಣ್ಯ ಹೊಂದಿದ್ದ ಮಾಧವಿ ಮನಸ್ಸಿನೊಳಗೆ 'ಛಿದ್ರಛಿದ್ರ'ವಾಗಿ ಹೋಗಿರುತ್ತಾಳೆ. ಮಾಧವಿಯ ಹಿಂದಿನ ಘಟನೆಗಳನ್ನು ಮುಚ್ಚಿಟ್ಟು ಯಯಾತಿ ಸ್ವಯಂವರವೇರ್ಪಡಿಸುತ್ತಾನೆ.

ತನ್ನ ಮೇಲಾದ ಕ್ರೌರ್ಯಗಳನ್ನು ಸಹಿಸಿ–ಸಹಿಸಿ, ಮನಸ್ಸಿನಲ್ಲಿ ಅಸಹನೆಯ ಜ್ವಾಲಾಮುಖಿ ಬೆಳೆಯುತ್ತಲೇ ಹೋಗುತ್ತದೆ. ಅದು ಸ್ಫೋಟಗೊಳ್ಳುವ ಸಂದರ್ಭ ಸ್ವಯಂವರದ ಏರ್ಪಾಟಿನ ದಿನ. "ಅಪ್ಪಾ, ಹಿಂದೆ ಒಂದು ಸಾರಿಯೂ ನನ್ನ ಭವಿಷ್ಯ ನಿರ್ಧರಿಸಿಕೊಳ್ಳೋಕೆ ನನಗೆ ಅವಕಾಶವಿರ್ಲಿಲ್ಲ. ಈಗ ಆ ಹಕ್ಕನ್ನು ಕೊಟ್ಟಿದ್ದೀರಿ. ನಂಗಿಷ್ಟ ಬಂದ ಹಾಗೆ ನಾನು ಮಾಡಬಹುದಲ್ಲವೇ? ತಂದೆಯೇ ತನಗೆ ಸ್ವಯಂವರ ಬೇಡ. ನಾನು ಯಾರನ್ನೂ ಪತಿಯಾಗಿ ವರಿಸಲಾರೆ. ನನ್ನ ದೇಹವನ್ನು ನಾಲ್ಕು ಮಂದಿ ಭೋಗಿಸಿ ಸುಖಪಟ್ಟಿದ್ದಾರೆ. ಪರಲೋಕದ ಬಾಧೆ ನನಗಿಲ್ಲ. ನಾನು ಆತ್ಮೋದ್ಧಾರಕ್ಕಾಗಿ ಅರಣ್ಯಕ್ಕೆ ಹೋಗಿ ತಪಸ್ಸು ಮಾಡ್ತೀನಿ. ವನವೇ ನನ್ನ ವರ! ನನ್ನನ್ನು ಬೀಡಿ" (ಅದೇ, ಪುಟ–೧೮೯) ಎಂದು ಹೇಳಿದ ಮಾಧವಿ, ಎಲ್ಲ ರಾಜರನ್ನು ತಿರಸ್ಕರಿಸಿ, ಕಾಡಿನ ಕಡೆಗೆ ಪಯಣ ಬೆಳೆಸುತ್ತಾಳೆ.

ವೃತ್ತಾಂತ ವಿಧಾನದಲ್ಲಿ ನಿರೂಪಿತಗೊಂಡ 'ಮಾಧವಿ' ಕಾದಂಬರಿಯಲ್ಲಿ ಲೇಖಕರು ಮಾಧವಿಯ ಮೂಲಕ ತಮ್ಮ ಮುಕ್ತ ವಿಚಾರಗಳನ್ನು ಮಂಡಿಸಿದ್ದಾರೆ. ಬಳಕೆಯಲ್ಲಿರುವ ಭಾಷೆಯನ್ನು ಪೌರಾಣಿಕ ಕತೆಗೆ ತಕ್ಕಂತೆ ಹೊಂದಿಸಿದ್ದಾರೆ. ಪೌರಾಣಿಕ ಎಳೆಗಳನ್ನು ತೆಗೆದುಕೊಂಡಿದ್ದರೂ, ಪವಾಡ ಕತೆಯಾಗದಂತೆ ಕಾದಂಬರಿಕಾರರು ಎಚ್ಚರಿಕೆ ವಹಿಸಿದ್ದಾರೆ. ನಂಬಲು ಸಾಧ್ಯವಾಗದ ಸಂಗತಿಗಳನ್ನು ನಗಣ್ಯಗೊಳಿಸಿದ್ದಾರೆ. ಹಿನ್ನೋಟದ ತಂತ್ರವನ್ನು ಕ್ವಚಿತ್ತಾಗಿ ಬಳಸಿಕೊಂಡ, ಈ ಕಾದಂಬರಿಯ ಅಂತಿಮ ಭಾಗ ತೀವ್ರ ಪರಿಣಾಮಕಾರಿಯಾಗಿ ಮೂಡಿಬಂದಿದೆ.

### ೭.೩.೩ ಮಹಾಭಾರತ ಪ್ರಸಂಗಗಳ ಪುನರಾವಲೋಕನ

ಪುರಾಣವೂ, ಕಾವ್ಯವೂ, ಇತಿಹಾಸದ ದಾಖಲೆಯಾಗಿಯೂ ಪರಿಗಣಿಸಲ್ಪಡುವ 'ಮಹಾಭಾರತ'ದ ಉಲ್ಲೇಖಗಳಲ್ಲಿ ದ್ರೌಪದಿಯ ಪಾತ್ರ ವಿಶಿಷ್ಟವಾಗಿದೆ. 'ಕನ್ನಡ ಸಾಹಿತ್ಯದಲ್ಲಿ ದ್ರೌಪದಿ' ಎಂಬ ಸಂಶೋಧನ ಪ್ರಬಂಧ ಪ್ರಕಟಿಸಿರುವ ಎಸ್.ವಿ.ಪ್ರಭಾವತಿಯವರು 'ದ್ರೌಪದಿ' ಎಂಬ ಕಾದಂಬರಿಯನ್ನು ರಚಿಸಿದ್ದಾರೆ. ಹಿಂದೂಗಳ ಪವಿತ್ರ ಧರ್ಮಗ್ರಂಥವೆಂದು ಪ್ರತಿಪಾದಿಸುವ 'ಮಹಾಭಾರತ' ಕೃತಿಯಲ್ಲಿ ಹೆಣ್ಣುಗಳು, ರಾಜಕುಮಾರಿಯರು ಅನುಭವಿಸಿದ ಬದುಕಿನ ವೇದನೆ-ಸಂಕಟ-ಶೋಷಣೆಗಳನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ಅನಾವರಣಗೊಳಿಸುವ ಉದ್ದೇಶವನ್ನು ಪ್ರಭಾವತಿಯವರು ಹೊಂದಿದ್ದಾರೆ. 'ಕುಂತಿ', 'ಅಹಲ್ಯೆ' 'ಯಶೋಧರೆ' ಮುಂತಾದ ಕೃತಿಗಳನ್ನು ಇಲ್ಲಿ ಹೆಸರಿಸಬಹುದಾಗಿದೆ. ದ್ರೌಪದಿಯ ದೃಷ್ಟಿಕೋನದಲ್ಲಿ ಮಹಾಭಾರತದ ಪ್ರಸಂಗಗಳು ಹೇಗೆ ಕಂಡಿರಬಹುದೆಂಬ ವಿಶ್ಲೇಷಣೆಯಲ್ಲಿ 'ದ್ರೌಪದಿ' ಕಾದಂಬರಿ ಸೃಷ್ಟಿಯಾಗಿದೆ. ಈ ವಿಶ್ಲೇಷಣೆಯ ಮನೋಭಾವ ಕಾದಂಬರಿಕಾರರದೂ ಆಗಿದೆ. ಅಲ್ಪಸ್ವಲ್ಪ ಬದಲಾವಣೆಗಳನ್ನು ಹೊರತುಪಡಿಸಿದರೆ, ಮೂಲ ಕತೆಯ ಆಶಯಗಳನ್ನು, ಪವಾಡ ಸದೃಶ ಸನ್ನಿವೇಶಗಳನ್ನು ಹಾಗೆಯೇ ಉಳಿಸಿಕೊಂಡಿರುವುದಾಗಿ ಕಾದಂಬರಿಕಾರರು ಸ್ಪಷ್ಟಪಡಿಸಿದ್ದಾರೆ. ದ್ರೌಪದಿಯನ್ನು ಕೇಂದ್ರವಾಗಿಟ್ಟುಕೊಂಡು, 'ಮಹಾಭಾರತ'ದ ಕೆಲವು ಪ್ರಸಂಗಗಳನ್ನು ಪುನರವಲೋಕನಕ್ಕೆ ಒಳಪಡಿಸಲಾಗಿದೆ.

ಕಾದಂಬರಿಯಲ್ಲಿ ಮುಖ್ಯವಾಗಿ ಯುದ್ಧ ಪ್ರಕರಣ; ಸ್ವಯಂವರ ಪ್ರಕರಣ; ವಸ್ತ್ರಾಪಹರಣ ಪ್ರಕರಣ; ವನವಾಸ ಪ್ರಕರಣ; ಕುಂತಿಯ ಪ್ರಕರಣವನ್ನು ಪುನರವಲೋಕನಕ್ಕೆ ಒಳಪಡಿಸಲಾಗಿದೆ. ಹತ್ತೊಂಬತ್ತು ದಿನಗಳಿಂದ ನಡೆದ ಕುರುಕ್ಷೇತ್ರದ ಯುದ್ಧದ ರಣರಂಗದ ಬಯಲಿನಲ್ಲಿ ದ್ರೌಪದಿ, ಹೆಣವಾಗಿ ಬಿದ್ದಿರುವ ಅಣ್ಣ-ದೃಷ್ಟದ್ಯುಮ್ನ, ಮಕ್ಕಳಾದ ಪ್ರತಿವಿಂಧ್ಯ, ಶ್ರುತಸೋಮ, ಶ್ರುತ ಕೀರ್ತಿ, ಶ್ರುತ ಕರ್ಮ ಮತ್ತು ಶತಾನಿಕರ ಮುಂದೆ ರೋಧಿಸುತ್ತಾ ಕುಳಿತಿರುವ ದೃಶ್ಯದಿಂದ ಕಾದಂಬರಿ ಪ್ರಾರಂಭವಾಗಿದೆ. ಸ್ವಗತದ ಮಾದರಿಯ ತಂತ್ರವನ್ನು ಅನುಸರಿಸಿ, ಹಿನ್ನೋಟ-ನೆನಪುಗಳ ಮೂಲಕ ಕಾದಂಬರಿಯನ್ನು ಬೆಳೆಸಲಾಗಿದೆ. ಕೌರವರಿಗೆ ನಿಷ್ಠನಾದ ಅಶ್ವತ್ಥಾಮ, ಪಾಂಡವರು ಎಂದೇ ಭಾವಿಸಿ, ತನ್ನ ಮಕ್ಕಳೈವರನ್ನೂ ಕೊಂದಿದ್ದಾನೆ. 'ಪಾಂಡವರು ನನ್ನ ಪ್ರಾಣ' ಎನ್ನುವ ಕೃಷ್ಣ, ಪಾಂಡವರನ್ನು ಪ್ರಾಣಾಪಾಯದಿಂದ ರಕ್ಷಿಸಲು, ತನ್ನ ಮಕ್ಕಳನ್ನು ಬಲಿಪಶುವಾಗುವಂತೆ ಮಾಡಿದ್ದಕ್ಕೆ ದ್ರೌಪದಿಗೆ ಅಪಾರ ಖೇದವಿದೆ. ಎಲ್ಲವನ್ನೂ ತಿಳಿದ ಕೃಷ್ಣ, ತನ್ನ ಮಕ್ಕಳು ಹೀಗೆ ಸಾವಿಗೀಡಾಗುತ್ತಾರೆಂಬ ಸೂಚನೆ ಮೊದಲೇ ನೀಡಿದ್ದರೆ, ಯುದ್ಧವನ್ನು ತಪ್ಪಿಸಬಹುದಾಗಿತ್ತೆಂಬ ಆಲೋಚನೆಗೊಳಗಾಗುತ್ತಾಳೆ. ದ್ರೌಪದಿಯ ವಸ್ತ್ರಾಪಹರಣ ಪ್ರಸಂಗ ಕುರುಕ್ಷೇತ್ರ ಯುದ್ಧಕ್ಕೆ ಒಂದು ನೆಪವಾಯಿತು. ಕರ್ಣ-ದುರ್ಯೋಧನರು ಯುದ್ಧವನ್ನು ಹೂಡಿಯೇ ಹೂಡುತ್ತಿದ್ದರು ಎಂಬ ಸತ್ಯ ಆಕೆಗೆ ಗೊತ್ತಿದೆ.

"ತಪ್ಪು ಮಾಡಿದವರನ್ನು ಅಲ್ಲೇ ಆ ಕ್ಷಣದಲ್ಲೇ ಕೊಲ್ಲಬೇಕು. ಕಂಸನನ್ನು, ಶಿಶುಪಾಲನನ್ನು ಕೃಷ್ಣ ಹಾಗೆ ಕೊಲ್ಲಲಿಲ್ಲವೆ? ಜರಾಸಂಧನನ್ನು ಭೀಮನಿಂದ ಕೊಲ್ಲಿಸಲಿಲ್ಲವೆ? ಇವರೇಕೆ ಯಾವುದೋ

ಯುದ್ಧಕ್ಕಾಗಿ ಕಾಯುತ್ತಾರೆ? ಎಂದು ಯೋಚಿಸುತ್ತಿದ್ದ ನನಗೆ ಈಗೀಗ ಎಲ್ಲ....ಎಲ್ಲ ಅರಿವಾಗುತ್ತಿದೆ. ಎಲ್ಲಾ... ಆದ್ದರಿಂದ ಈ ಯುದ್ಧ ನನ್ನಿಂದ ನಡೆಯಿತು, ನನಗಾಗಿ ನಡೆಯಿತು ಎಂದು ಕೆಲವರು ಅನ್ನುವುದು ಸರಿಯಿಲ್ಲ. ಇದು ಪೂರ್ವನಿಶ್ಚಿತ, ಕೃಷ್ಣನ ಪ್ರಕಾರ ನಡೆಯಲೇಬೇಕಾಗಿದ್ದ ಒಂದು ಘಟನೆ. ಇದರಲ್ಲಿ ನನ್ನ ಮಕ್ಕಳು ಭಸ್ಮವಾಗುವರೆಂದು ಕೃಷ್ಣನಿಗೆ ತಿಳಿದಿತ್ತು ಮತ್ತು ಹಾಗೆ ಆಗಲೇಬೆಕೆಂದೂ ಅವನು ಬಯಸಿದ್ದ" (ದ್ರೌಪದಿ, ಪುಟ-೮೧) ಎಂಬ ಕೃಷ್ಣನ ತಂತ್ರವನ್ನು ಟೀಕಿಸುತ್ತಾಳೆ. ಮನಸ್ಸು ಮಾಡಿದ್ದರೆ, ಭೀಷ್ಮ, ಕೃಷ್ಣರಿಬ್ಬರೂ ಯುದ್ಧವನ್ನು ತಪ್ಪಿಸಬಹುದಾಗಿತ್ತು ಎನ್ನುವುದನ್ನು ಗ್ರಹಿಸುತ್ತಾಳೆ. ಎಲ್ಲದಕ್ಕೂ ಪಾಂಡವರು ಕೃಷ್ಣನನ್ನೇ ಅವಲಂಬಿಸುವುದನ್ನು ಗೇಲಿ ಮಾಡುತ್ತಾಳೆ. ಧರ್ಮರಾಯನಿಂದ ನಡೆಸಿದ ರಾಜಸೂಯ ಯಾಗದ ಹಿಂದೆ, ಪೂತನಿ, ಕಂಸ, ಶಿಶುಪಾಲ, ಜರಾಸಂಧ, ಬಹುಶಃ ದುಶ್ಯಾಸನ, ದುರ್ಯೋಧನರನ್ನು ದಮನಿಸುವ ತಂತ್ರವಿದೆ. ಅದನ್ನು ಈಡೇರಿಸಿಕೊಳ್ಳುತ್ತಾನೆ ಕೂಡ. ಐದು ವರ್ಷಗಳ ಪೂರ್ವ ತಯಾರಿಯಲ್ಲಿ ನಡೆದ ರಾಜಸೂಯ ಯಾಗದಿಂದಾಗಿ ದ್ರೌಪದಿ ಮತ್ತೆ ಗರ್ಭವತಿಯಾಗುವ ಅವಕಾಶದಿಂದ ವಂಚಿತಳಾಗಿದ್ದಾಳೆ.

ಯುದ್ಧದ ಪರಿಣಾಮ ಏಕಮುಖವಾಗಿರಲಿಲ್ಲ. ಅತ್ತ ಸಾಯದೆ, ಇತ್ತ ಬದುಕದೆ ಶರಶಯ್ಯೆಯಲ್ಲಿ ನರಳುತ್ತಿರುವ ಭೀಷ್ಮ; ಚಕ್ರವ್ಯೂಹದಲ್ಲಿ ಸಿಲುಕಿ ಸತ್ತ ಅಭಿಮನ್ಯು; ಗ್ರಹಣದ ಸಮಯವನ್ನು ಉಪಯೋಗಿಸಿ ಕೊಲ್ಲಲ್ಪಟ್ಟ ಜಯದ್ರಥ; ದೃಷ್ಟದ್ಯುಮ್ನನಿಂದ ಹತನಾದ ದ್ರೋಣ; ಕರ್ಣನಿಂದ ಪ್ರಾಣಬಿಟ್ಟ ಭೀಮನ ಮಗ ಘಟೋತ್ಕಜ; ಅರ್ಜುನನಿಂದ ಹತನಾದ ಕರ್ಣ; ಭೀಮನೊಂದಿಗೆ ಸೆಣಸಾಡಿ ಸತ್ತ ದುಶ್ಯಾಸನ ಮತ್ತು ದುರ್ಯೋಧನರೊಂದಿಗೆ ಸಾವಿರಾರು ಸೈನಿಕರು ಹತರಾಗಿದ್ದಾರೆ. ಯುದ್ಧ, ಶತ್ರು ಪಕ್ಷ ಮಿತ್ರ ಪಕ್ಷಗಳೆರಡಲ್ಲೂ ಬದುಕಿನ ಬಗ್ಗೆ ಜಿಗುಪ್ಸೆ ಮೂಡಿಸಿರುವುದನ್ನು ದ್ರೌಪದಿ ಅವಲೋಕಿಸುತ್ತಾಳೆ. ಪ್ರತಿವಿಂಧ್ಯ ರಾಜನಾಗಿ ಮೆರೆಯುವ, ಮಕ್ಕಳಿಗೆಲ್ಲ ಮದುವೆ ಮಾಡುವ ದ್ರೌಪದಿಯ ಕನಸು ನುಚ್ಚು ನೂರಾಗಿದೆ. ತನ್ನ ಮಕ್ಕಳನ್ನು ಪಾಂಡವರು ತಮ್ಮ ಸ್ವಂತ ಮಕ್ಕಳಂತೆ ಭಾವಿಸದೇ 'ಹಾದರಕ್ಕೆ ಹುಟ್ಟಿದವರಂತೆ' ಕಾಣುತ್ತಾರೆ. ಅಭಿಮನ್ಯು ಸತ್ತಾಗ ಅರ್ಜುನನಿಗಾಗುವ ಸಂತಾಪ; ಘಟೋತ್ಕಜ ಸತ್ತಾಗ ಉಂಟಾಗುವ ಭೀಮನ ರೋಧನವಿದೆ. ಆದರೆ ತನ್ನ ಮಕ್ಕಳು ಸತ್ತಾಗ ಯಾರ ಸಂತಾಪವೂ ದೊರೆಯುವುದಿಲ್ಲ. ಇದರಿಂದ ರೊಚ್ಚಿಗೆದ್ದ ದ್ರೌಪದಿ ಮಕ್ಕಳ ಶವದ ಚಿತೆಗೆ ತಾನೇ ಬೆಂಕಿಯಿಟ್ಟು, ತನ್ನ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾಳೆ.

ಸ್ವಯಂವರ ಪ್ರಕರಣದಲ್ಲಿ, ತಂದೆ ದ್ರುಪದ, ದ್ರೌಪದಿಯನ್ನು ಅರ್ಜುನನಿಗೆ ರಾಣಿಯಾಗಬೇಕೆಂಬ ಬಯಕೆಯಿಂದ ಬೆಳೆಸಿದ ಬಗೆಯನ್ನು, ಆ ಬಯಕೆ ಮತ್ತೊಂದು ತಿರುವನ್ನು ಪಡೆದುದ್ದನ್ನು ಕಾಣಬಹುದು. ಮತ್ಸ್ಯಯಂತ್ರವನ್ನು ಅರ್ಜುನನೇ ಬೇಧಿಸಿದ್ದರೂ, 'ಹಂಚಿಕೊಳ್ಳಿರೆಂಬ' ಕುಂತಿಯ ಮಾತಿನಿಂದಾಗಿ ಪಾಂಡವರೈವರೂ ದ್ರೌಪದಿಯನ್ನು ಮದುವೆಯಾಗಲು ಮುಂದಾಗುತ್ತಾರೆ. ಭಿನ್ನ ವ್ಯಕ್ತಿತ್ವವುಳ್ಳ ಐದು ಜನರನ್ನೂ ವರಿಸಲು ದ್ರೌಪದಿಯ ಸಮ್ಮತಿಯಿದೆ. ಆದರೆ, "ಕೊನೇ ಗಳಿಗೆಯಲ್ಲಿ ಇಂತಹ ವಿಷಮ ಸನ್ನಿವೇಶವದಲ್ಲಿ ಧರ್ಮರಾಯನೋ, ಕುಂತಿಯೋ, ತಂದೆಯೋ ಸೌಜನ್ಯಕ್ಕಾದರೂ "ದ್ರೌಪದೀ,

ನಿನಗೆ ಇಂತಹ ಮದುವೆ ಸಮ್ಮತವೆ? ಐದು ಜನರನ್ನು ವರಿಸಲು ನೀನು ಸಿದ್ಧಳಿರುವೆಯಾ" ಎಂದು ಎಲ್ಲರೆದುರು ಚರ್ಚೆಯಾಗುವಾಗ ಒಂದು ಮಾತು, ಒಂದೇ ಒಂದು ಮಾತು ಕೇಳಿದ್ದರೂ ಸಾಕಿತ್ತು ನನಗೆ. ಧನ್ಯತೆಯ ಭಾವ ಮೂಡುತ್ತಿತ್ತು..... ಆಗ ಪಂಚಪತಿತ್ವವು ದ್ರೌಪದಿಯ ಮೇಲೆ ಹೇರಲ್ಪಡಲಿಲ್ಲ. ಅದನ್ನು ಅವಳು ತಾನಾಗಿ ಬಯಸಿ ಸ್ವೀಕರಿಸಿದಳು ಎಂದು ಎಲ್ಲರಿಗೂ ತಿಳಿಯುತ್ತಿತ್ತು. ಆಗ ಎಲ್ಲರೂ 'ಅಯ್ಯೋ ದ್ರೌಪದಿ' ಎಂದು ಮರುಗುವ ಬದಲು 'ಭೇಷ್ ದ್ರೌಪದಿ' ಅನ್ನುತ್ತಿದ್ದರು. ಬೇರೆ ಎಲ್ಲಾ ಹೆಂಗಸರಿಗಿಂತ ನಾನು ಬೇರೆಯೇ ಎಂದು ಭಾವಿಸಿದ್ದ ನನಗೆ ಈ ಮುಕ್ತ ಅಭಿಪ್ರಾಯದ ಅಗತ್ಯವಿತ್ತು. ಈ ದೇಶದಲ್ಲಿ ರಾಜಕುಮಾರಿಯಾದರೇನು, ಸಾಮಾನ್ಯ ಸ್ತ್ರೀಯಾದರೇನು ಎಲ್ಲಾ ಹೆಂಗಸರ ಸ್ಥಿತಿಯೂ ಒಂದೇ ಅನ್ನಿಸಿತು" (ಅದೇ, ಪುಟ-೩೧,೩೨) ಎಂಬ ವಿಷಾದ ಭಾವ ಆವರಿಸುತ್ತದೆ.

ಐದು ಜನರನ್ನು ಮದುವೆಯಾಗುವುದರಿಂದ, ಮುಂದೆ ಜನರಲ್ಲಿ ಏಳಬಹುದಾದ ಗೊಂದಲಗಳನ್ನು ನಿವಾರಿಸಲು ಋಷಿಗಳಾದ ವೇದವ್ಯಾಸರು ಹಿಂದಿನ ಜನ್ಮದ ಕತೆಗಳನ್ನು ಸೃಷ್ಟಿಸಿರುವುದಕ್ಕೆ ಕಾದಂಬರಿಕಾರರು ವ್ಯಂಗ್ಯದ ಧ್ವನಿಯಲ್ಲಿ ಪ್ರತಿಕ್ರಿಯಿಸಿದ್ದಾರೆ. ಪವಾಡ ಸದೃಶ ಕತೆಗಳನ್ನು ಹೇಳಿ, ದ್ರೌಪದಿ ಪಾಂಡವರನ್ನು ದೈವಾಂಶ ಸಂಭೂತರೆಂದು ನಂಬಿಸಿ, ಬಂದೊದಗಿದ ವಿಷಮ ಪರಿಸ್ಥಿತಿಯನ್ನು ನಿಭಾಯಿಸಲಾಗುತ್ತದೆ. ಮುಂದೆ, ಪ್ರತಿರಾತ್ರಿ ದಿನಕ್ಕೊಬ್ಬರನ್ನಂತೆ ತಣಿಸುವುದು ಮನಸ್ಸಿಗೆ ಹಿತವೆನಿಸಿದರೂ, ದೇಹ ಬಳಲುತ್ತದೆ.

ದ್ರೌಪದಿ, ಧರ್ಮರಾಯನ ವ್ಯಕ್ತಿತ್ವದಲ್ಲಿ ಸೌಮ್ಯ ಗುಣವನ್ನು, ತಾಳ್ಮೆಯನ್ನು, ತಾಯಿಯ ಮಡಿಲಲ್ಲಿ ಸಿಗುವ ರಕ್ಷಣಾ ಭಾವವನ್ನು ಕಂಡುಕೊಳ್ಳುತ್ತಾಳೆ. ಸ್ವಲ್ಪ ಆತುರ ಬುದ್ಧಿಯುಳ್ಳ, ಆದರೆ ಒಳಗೊಂದು ಹೊರಗೊಂದು ಗುಣವನ್ನರಿಯದ ನಿಷ್ಕಪಟಿ, ಒರಟು ಸ್ವಭಾವವನ್ನು ಭೀಮನಲ್ಲಿ ಕಾಣುತ್ತಾಳೆ. ಮತ್ಸ್ಯಯಂತ್ರವನ್ನು ಭೇದಿಸಿ ತನ್ನನ್ನು ಗೆದ್ದ ಅರ್ಜುನನಲ್ಲಿ ಅಹಮ್ಮಿಕೆಯನ್ನು, ಚಾಣಾಕ್ಷತನದ ಗುಣವನ್ನು ಗ್ರಹಿಸುತ್ತಾಳೆ. ನಕುಲ ಸಹದೇವರಲ್ಲಿ ಮಕ್ಕಳ ಮುಗ್ಧತೆಯನ್ನು ಕಾಣುತ್ತಾಳೆ.

ನಾರದರ ಸೂತ್ರದಂತೆ ದ್ರೌಪದಿಯ ಬಳಿ ವರ್ಷಕ್ಕೊಬ್ಬರಂತೆ ಸಂಸಾರ ನಡೆಸುವ ಒಪ್ಪಂದವಾಗುತ್ತದೆ. ಆಗ ಹುಟ್ಟುವ ಮಗು ಇಂತಹವರದ್ದೆಂದು ಗುರುತಿಸಲು ಅನುಕೂಲವಾಗುತ್ತದೆ ಎಂಬ ಸೂತ್ರ ದ್ರೌಪದಿಯ ದೇಹಕ್ಕೆ ವಿಶ್ರಾಂತಿ ಸಿಗುತ್ತದೆ. ಆದರೆ, ಅರ್ಜುನನಿಂದ ದೂರವಿರಲು ಬಯಸದ ಅವಳ ಮನಸ್ಸು ವಿಹ್ವಲಗೊಳ್ಳುತ್ತದೆ. ಅಕಸ್ಮಾತ್ತಾಗಿ ದ್ರೌಪದಿ-ಧರ್ಮ ರಾಯನೊಂದಿಗಿರುವಾಗ ಅರ್ಜುನ ಅಂತಃಪುರವನ್ನು ಪ್ರವೇಶಿಸುತ್ತಾನೆ. ಅದರಿಂದ ಮೊದಲೇ ಒಪ್ಪಂದವಾಗಿದ್ದಂತೆ ಹನ್ನೆರಡು ತಿಂಗಳ ಗಡೀಪಾರು ಶಿಕ್ಷೆಗೆ ತಯಾರಾಗುತ್ತಾನೆ. ತೀರ್ಥಯಾತ್ರೆಯಿಂದ ಮರಳಿ ಬರುವಾಗ ಅರ್ಜುನ ನಾಗಕನ್ಯೆಯಾದ ಉಲೂಪಿ; ಮಣಿಪುರದ ಚಿತ್ರಾಂಗದೆ; ಕೃಷ್ಣನ ತಂಗಿ ಸುಭದ್ರೆಯರನ್ನು ವರಿಸಿರುತ್ತಾನೆ. ಈ ಮೂವರಿಗೂ ಇಳಾವಂತ, ಬಭ್ರುವಾಹನ, ಅಭಿಮನ್ಯು ಎಂಬ ಮಕ್ಕಳು ಜನಿಸುತ್ತಾರೆ.

ದ್ರೌಪದಿಯನ್ನು ಮದುವೆಯಾಗಿ ಬಂದ ನಂತರ ಕಾಣಿಸಿಕೊಂಡ ಪಾಂಡವರನ್ನು, ನೋಡಿ ದುರ್ಯೋಧನನಿಗೆ ನಿರಾಸೆಯಾಗುತ್ತದೆ. ಅದಕ್ಕೆ ಎರಡು ಕಾರಣಗಳಿವೆ. ಸ್ವಯಂವರದಲ್ಲಿ ದ್ರೌಪದಿ

ತನಗೆ ದಕ್ಕದೇ ಹೋದದ್ದು ಮತ್ತು ಅರಗಿನ ಅರಮನೆಯಲ್ಲಿ ಸುಟ್ಟು ಹೋಗಿರಬಹುದೆಂದು ಭಾವಿಸಿದ್ಧ ಪಾಂಡವರು ಹಸ್ತಿನಾವತಿಗೆ ಮರಳಿ ಬಂದದ್ದು. ಹಸ್ತಿನಾವತಿಯಲ್ಲಿ ಅವರಿಗೆ ಜಾಗ ಕೊಡದೇ, ಖಾಂಡವ ವನದಲ್ಲಿ ವಾಸಿಸಲು ಅನುಮತಿ ನೀಡುತ್ತಾನೆ. ಇಂದ್ರಪ್ರಸ್ಥದಲ್ಲಿ ಕೃತಕವಾಗಿ ನಿರ್ಮಿಸಿದ ಅರಮನೆಯಲ್ಲಿ, ನೆಲವೆಂದು ಬಗೆದು, ಕೊಳದಲ್ಲಿ ಜಾರಿಬಿದ್ದ ದುರ್ಯೋಧನನ್ನು ಕಂಡು ದ್ರೌಪದಿ ನಕ್ಕದ್ದೇ ವಸ್ತ್ರಾಪಹರಣ ಕ್ರಿಯೆಗೆ ಕಾರಣವಾಗುತ್ತದೆ. ಅವಮಾನದ ಸೇಡನ್ನು ತೀರಿಸಿಕೊಳ್ಳಲು ಪಗಡೆಯಾಟ ಬರದ ಪಾಂಡವರನ್ನು ಬೇಕೆಂದೇ ಆಹ್ವಾನಿಸಿ ಸೋಲುವಂತೆ ಮಾಡುತ್ತಾನೆ. ಧರ್ಮರಾಯ ಆ ಜೂಜಿನಲ್ಲಿ ದ್ರೌಪದಿಯನ್ನೂ ಒತ್ತೆಯಿಡುತ್ತಾನೆ. ಇದನ್ನು ಪ್ರತಿಭಟಿಸಿದ ದ್ರೌಪದಿ-ಧರ್ಮರಾಯ ಮೊದಲು ತನ್ನನ್ನು ಒಡ್ಡಿಕೊಂಡಿದ್ದರಿಂದ ನಂತರ ಬೇರೆಯವರನ್ನು ಒತ್ತೆಯಿಡಲು ಬರುವುದಿಲ್ಲವೆಂಬ ನಿಯಮವನ್ನು ಮನಗಾಣಿಸಲು ಪ್ರಯತ್ನಿಸುತ್ತಾಳೆ. ಅದು ತಿಳಿದಿದ್ದರೂ 'ಅಡ್ಡಗೋಡೆಯ ಮೇಲೆ ದೀಪವಿಟ್ಟಂತೆ' ಮಾತನಾಡುವ ಭೀಷ್ಮ, ಗಾಂಧಾರಿ, ಧೃತರಾಷ್ಟ್ರ ಮುಂತಾದವರ ತುಂಬಿದ ಸಭೆಯಲ್ಲಿ ದುಶ್ಯಾಸನ ದ್ರೌಪದಿಯ ಸೀರೆಯನ್ನು ಸೆಳೆಯುತ್ತಾನೆ. ಕೃಷ್ಣನ ಸಹಾಯದಿಂದ ಆಗುವ ಅನಾಹುತ ತಪ್ಪುತ್ತದೆ. ತನ್ನ ಆತ್ಮಸ್ಥೈರ್ಯದಿಂದ ವಸ್ತ್ರಾಪಹರಣದಂತಹ ಗಂಭೀರ ಪರಿಸ್ಥಿತಿಯನ್ನು ಎದುರಿಸುವಾಗ ಗಂಡರು, ಷಂಡರಂತೆ ಗೋಚರಿಸುತ್ತಾರೆ. ಮುಂದಿನ ಕುರುಕ್ಷೇತ್ರ ಯುದ್ಧ ನಡೆಯಲು ವಸ್ತ್ರಾಪಹರಣ ಪ್ರಕರಣವೂ ಒಂದು ಕಾರಣವಾಗುತ್ತದೆ.

ಪಗಡೆಯಾಟದಲ್ಲಿ ಸೋತದ್ದಕ್ಕೆ ಹನ್ನೆರಡು ವರ್ಷ ವನವಾಸ-ಒಂದು ವರ್ಷ ಅಜ್ಞಾನತವಾಸ ವಿಧಿಸಲಾಗುತ್ತದೆ. ಏಕಲವ್ಯನ ಕತೆಯನ್ನು ಅರ್ಜುನ-ಭೀಮ-ಧರ್ಮರಾಯನ ಮೂಲಕ ವಿವಿಧ ನೆಲೆಗಳಲ್ಲಿ ಪರಿಶೀಲಿಸಲಾಗಿದೆ. ಅಕ್ಷಯ ಪಾತ್ರೆಯ ಪ್ರಸಂಗವನ್ನು ಬದಲಾಯಿಸದೇ ಹಾಗೇ ಉಳಿಸಿಕೊಳ್ಳಲಾಗಿದೆ. ಜಯದ್ರಥನು ದ್ರೌಪದಿಯ ರೂಪಕ್ಕೆ ಮರುಳಾಗಿ ಹೊತ್ತೊಯ್ಯುವಾಗ, ಅರ್ಜುನ ಅವನನ್ನು ಕತ್ತರಿಸಲು ಮುಂದಾಗುತ್ತಾನೆ. ಆದರೆ ಧರ್ಮರಾಯ ತಡೆಯುತ್ತಾನೆ. 'ಋಷಿಯ ಜಂಬೂ ಫಲ' ಪ್ರಸಂಗದಲ್ಲಿ ಮನಸ್ಸಿನಲ್ಲಿದ್ದುದನ್ನು ಹೇಳುವಾಗ "ಈ ಐದು ಮಂದಿ ಕೈಲಾಗದವರನ್ನು ಪಡೆದ ಮನಸ್ಸು ಆರನೆಯವನನ್ನು ಬಯಸುತ್ತದೆ" ಎಂಬ ಬಯಕೆಯನ್ನು ದ್ರೌಪದಿ ಎಲ್ಲರ ಮುಂದೆ ಪ್ರಕಟಿಸುತ್ತಾಳೆ. ಆ ಆರನೆಯವನು ಕರ್ಣನಾಗಿದ್ದಾನೆ. ಸ್ವಯಂವರದಲ್ಲಿ, ಅರ್ಜುನನಿಗಿಂತ ಮುಂಚೆ ಹದೆಯೇರಿಸಿದ್ದ ಕರ್ಣನನ್ನು ಸೂತಪುತ್ರನೆಂದು ಜರಿದ ದ್ರೌಪದಿಗೆ ಪ್ರೀತಿ-ದ್ವೇಷಗಳೆರಡೂ ಇವೆ. ತನಗನಿಸಿದ್ದನ್ನು ನೇರವಾಗಿ ಹೇಳುವ ಗುಣವನ್ನು ಆಕೆ ಪ್ರಕಟಿಸುತ್ತಾಳೆ.

ಒಂದು ವರ್ಷದ ಅಜ್ಞಾತ ವಾಸವನ್ನು ಕಳೆಯಲು ಮತ್ಸ್ಯದೇಶವೆಂಬ ರಾಜ್ಯಕ್ಕೆ ತೆರಳುತ್ತಾರೆ. ವಿರಾಟ ರಾಜನ ಅರಮನೆಯಲ್ಲಿ ಒಬ್ಬೊಬ್ಬರು ಒಂದೊಂದು ಕೆಲಸಕ್ಕೆ ಸೇರುತ್ತಾರೆ. ಸುದೇಷ್ಣೆಯ ದಾಸಿಯಾದ ದ್ರೌಪದಿ ಆಕೆಯ ತಮ್ಮ ಕೀಚಕನ ಲೈಂಗಿಕ ಕಿರುಕುಳಕ್ಕೆ ಒಳಗಾಗುತ್ತಾಳೆ. ಭೀಮ, ಕೀಚಕನನ್ನು-ಆತನ ತಮ್ಮಂದಿರನ್ನು ಕೊಲ್ಲುತ್ತಾನೆ. ದುರ್ಯೋಧನ ತನ್ನ ಸೈನ್ಯದೊಂದಿಗೆ ದಾಳಿಯಿಟ್ಟಾಗ ಬೃಹನ್ನಳೆ ವೇಷದಲ್ಲಿದ್ದ ಅರ್ಜುನ ಸೋಲಿಸುತ್ತಾನೆ. ಅಜ್ಞಾತವಾಸ ಮುಗಿದ ಮೇಲೆ ವಿರಾಟರಾಜನ

ಮಗಳು ಉತ್ತರೆಯೊಂದಿಗೆ ಅಭಿಮನ್ಯುವಿನ ವಿವಾಹವೇರ್ಪಡುತ್ತದೆ. ವನವಾಸ ಮುಗಿದ ನಂತರ ರಾಜ್ಯದಲ್ಲಿ ಪಾಲು ಕೊಡಲು ದುರ್ಯೋಧನ ಒಪ್ಪದಿದ್ದಾಗ ಯುದ್ಧ ಶುರುವಾಗುತ್ತದೆ.

ಕುಂತಿಯ ಪ್ರಕರಣದಲ್ಲಿ ಕುಂತಿಯ ಬದುಕನ್ನು ಪುನರವಲೋಕಿಸಿದ್ದನ್ನೂ ಕಾಣಬಹುದು. ಬೃಹನ್ಮತಿ–ಬೃಹತ್ಸೇನರ ಮಗಳಾದ ಕುಂತಿಯನ್ನು ಮಕ್ಕಳಿಲ್ಲದ ಕುಂತೀಭೋಜ ಸಾಕಿ ಬೆಳೆಸಿದ್ದನು. ಕುಂತಿಯ ಸಂಭಾಷಣೆಯ ಮೂಲಕ ಆಕೆಯ ಹಿಂದಿನ ಬದುಕು ಬಿಚ್ಚಿಕೊಂಡಿದೆ. ಷಂಡನಾದ ಪಾಂಡುಮಹಾರಾಜನನ್ನು ಕಟ್ಟಿಕೊಂಡು ಪಡಬಾರದ ಪಾಡುಪಟ್ಟ ಕುಂತಿ "ಸಿಂಹಾಸನದಲ್ಲಿ ಕುಳಿತ ಮಾತ್ರಕ್ಕೆ ತಾವು ವೀರಾಧಿವೀರರೆಂದು ತಿಳಿಯುತ್ತಾರೆ. ಬುದ್ಧಿ ಬಲಿಯುವ ಮೊದಲೇ ರಾಣಿವಾಸದಲ್ಲಿ ಅಂತಃಪುರದಲ್ಲಿ ದಾಸಿಯರೊಂದಿಗಿನ ಅತಿ ಸಲುಗೆಯಿಂದ ತಮ್ಮ ಪೌರುಷತ್ವವನ್ನೆಲ್ಲಾ ನಾಶ ಮಾಡಿಕೊಳ್ಳುತ್ತಾರೆ. ಅದನ್ನು ಮುಚ್ಚಿಟ್ಟು ಹೆಣ್ಣಿನ ಮೇಲೆ ಹೆಣ್ಣು ತಂದು ವಿಜೃಂಭಿಸುತ್ತಾರೆ. ಆ ಹೆಣ್ಣುಗಳನ್ನು ಜೀವಂತ ನರಕಕ್ಕೆ ತಳ್ಳುತ್ತಾರೆ" (ಅದೇ, ಪುಟ–೪೧) ಎಂಬ ಕುಂತಿಯ ಮಾತುಗಳು, ಗಂಡಿನ ದೌರ್ಬಲ್ಯ, ಹೆಣ್ಣಿನ ದುರಂತ ಬದುಕಿಗೆ ಹೇಗೆ ಕಾರಣವಾಗುತ್ತದೆ ಎಂಬುದನ್ನು ವಿವೇಚಿಸಿವೆ.

ಕುಂತಿಯ ಮಕ್ಕಳಾದ ಧರ್ಮರಾಯ, ಭೀಮ, ಅರ್ಜುನರು ನಿಯೋಗ ಪದ್ಧತಿಯಿಂದ ಹುಟ್ಟಿದವರೆಂಬ ಸತ್ಯವನ್ನು, ಕುಂತಿಯೇ ದ್ರೌಪದಿಗೆ ತಿಳಿಸುತ್ತಾಳೆ. ವಿವಾಹ ಪೂರ್ವದಲ್ಲಿ ಹುಟ್ಟಿದ ಕರ್ಣನ ವಿಷಯನನ್ನು ಮುಚ್ಚಿಡುತ್ತಾಳೆ.

ಕರ್ಣ ಸತ್ತ ನಂತರ ಗೋಳಿಡುವ ಕುಂತಿ ಹೇಡಿಯಾಗದೆ, ಪಾಂಡವರೊಂದಿಗೆ ಅವನನ್ನೂ ಸಾಕಿದ್ದರೆ, ಈ ದುರ್ಗತಿಯೊದಗುತ್ತಿರಲಿಲ್ಲವೆಂದು ದ್ರೌಪದಿಗೆ ಅನಿಸುತ್ತಿದೆ. ಕುಂತಿ ದ್ರೌಪದಿಗೆ ಸದಾ ಹೇಳುತ್ತಿದ್ದ ಮಾತು–ಸೀತೆಯಂತಿರಬೇಕೆಂದು. ಸೀತೆಯ ದುರಂತ ಬದುಕನ್ನು ಮನಗಂಡು "ಸೀತೆಯು ಒಮ್ಮೆಯೂ ಯಾರನ್ನೂ ಅಣಕಿಸಿ ನಗಲಿಲ್ಲ. ಆದರೂ ರಾಮಾಯಣ ಯುದ್ಧ ನಡೆಯಿತಲ್ಲ. ಬಾಯೇ ಬಿಡದೇ ಎಲ್ಲವನ್ನೂ ಸಹಿಸಿದ ಅವಳಿಗೆ ಸಿಕ್ಕ ಪ್ರತಿಫಲಕ್ಕೂ, ಎಲ್ಲವನ್ನೂ ಪ್ರತಿಭಟಿಸುತ್ತಾ ಹೋದ ನನಗೆ ಸಿಕ್ಕ ಪ್ರತಿಫಲಕ್ಕೂ ಅಂತಹ ಅಂತರವೇನಿಲ್ಲವೆನ್ನಿಸಿತು. ಒಂದೊಮ್ಮೆ ತಾನು ಸೀತೆಯಂತೆ ಬಾಯಿ ಮುಚ್ಚಿಕೊಂಡಿದ್ದರೆ ಇಂದು ಇಷ್ಟೆಲ್ಲಾ ಮಾತನಾಡಲು ಇವರು ಯಾರೂ ಇರುತ್ತಿರಲಿಲ್ಲ. ಇವರನ್ನೆಲ್ಲಾ ಈ ಭೀಷ್ಮರನ್ನೂ ಸೇರಿ ಎಂದೋ ಸದೆ ಬಡಿಯುತ್ತಿದ್ದ ಅನ್ನಿಸಿತು" (ಅದೇ, ಪುಟ–೧೩೪) ಎಂಬ ಹೋಲಿಕೆಯ ಮೂಲಕ ಕಾದಂಬರಿಕಾರರ ನಿಲುವೂ ಸ್ಪಷ್ಟವಾಗಿದೆ. ಎಲ್ಲವನ್ನೂ ಮೌನವಾಗಿ ಸಹಿಸಿಕೊಂಡ ಸೀತೆಯ ಬದುಕು, ತನಗೆ ಸರಿ ಕಾಣದ್ದನ್ನು ನೇರ ಮಾತಿನಿಂದ ಪ್ರತಿಭಟಿಸುತ್ತ ಬಂದ ದ್ರೌಪದಿ ಬದುಕಿಗೂ ಯಾವ ವ್ಯತ್ಯಾಸವೂ ಇಲ್ಲ. ಇಬ್ಬರೂ ಅಸಹಾಯಕರು. 'ಧರ್ಮದ' ಹೆಸರಿನಲ್ಲಿ ರಾಜ್ಯಭಾರ ಮಾಡುತ್ತಿರುವ ಮುದುಕ ಧರ್ಮರಾಯ–ಭೀಮ–ಅರ್ಜುನರಿಗೆ ದ್ರೌಪದಿಯ ಕಡೆ ಗಮನ ನೀಡಲು ಪುರುಸೊತ್ತಿಲ್ಲ. ಯುದ್ಧದ ಭೀಕರ ಕರಿನೆರಳಲ್ಲಿ ಹೆತ್ತ ಮಕ್ಕಳನ್ನು ಕಳೆದುಕೊಂಡ ದ್ರೌಪದಿಯ ಅಳಲು, ವಿಷಾದ ಛಾಯೆಯನ್ನು ಮೂಡಿಸುತ್ತದೆ. ಯುದ್ಧದ ಪರಿಣಾಮ ತೀವ್ರತೆ, ಘಾಸಿಗೊಂಡ ಕುಂತಿ, ಗಾಂಧಾರಿ–ಧೃತರಾಷ್ಟ್ರನೊಂದಿಗೆ ಕಾಡಿಗೆ ತೆರಳಿ, ಕಾಳ್ಗಿಚ್ಚಿಗೆ ಸಿಕ್ಕು ಸಾಯುತ್ತಾಳೆ.

ನಕುಲ–ಸಹೇದವರ ಸಾಂಗತ್ಯದಲ್ಲಿ ದ್ರೌಪದಿಗೆ ಮತ್ತೆ ತಾಯ್ತನದ ಕನಸು ಕುಡಿಯೊಡೆಯುವುದರೊಂದಿಗೆ ಕಾದಂಬರಿ ಮುಕ್ತಾಯಗೊಂಡಿದೆ.

ಮೇಲೆ ಚರ್ಚಿಸಿದ ಐದು ಪ್ರಕರಣಗಳಲ್ಲಿಯೂ ದ್ರೌಪದಿ, ಸಂದರ್ಭ ಒದಗಿದಾಗಲೆಲ್ಲ ಪ್ರತಿಭಟಿಸಿದರೂ, ಪುರುಷಪ್ರಧಾನ ವ್ಯವಸ್ಥೆಯಲ್ಲಿ ಆ ಪ್ರತಿಭಟನೆಯ ಕಾವು ತಗ್ಗಿ, ಅಸಹಾಯಕತೆಯ ನೆರಳು ಚಾಚಿಕೊಳ್ಳುತ್ತದೆ. ದ್ರೌಪದಿಯನ್ನು ಕೇಂದ್ರವಾಗಿಟ್ಟುಕೊಂಡು ಒಂದು ಹೆಣ್ಣಿನ ದೃಷ್ಟಿಕೋನದಿಂದ ರಾಮಾಯಣದ ಘಟನೆಗಳನ್ನು ಪುನರವಲೋಕಿಸಲಾಗಿದೆ.

## ೭.೪ ಮನೋವಿಶ್ಲೇಷಣಾತ್ಮಕ ಮಾದರಿ

ಯಾವುದಾದರೂ ತತ್ವವಾದವನ್ನು 'ಸೃಜನಶೀಲ' ಕೃತಿಗೆ ಅಳವಡಿಸಿಕೊಳ್ಳುವುದು ಸಾಹಸದ ಸಂಗತಿಯಾಗಿದೆ. ಮನಃಶಾಸ್ತ್ರದ ತತ್ವಗಳನ್ನು ಕತೆಕಾದಂಬರಿಗಳಲ್ಲಿ ಬಳಸಿಕೊಂಡಿರುವುದು, ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ತ್ರಿವೇಣಿಯವರದು ಮೊದಲ ಪ್ರಯತ್ನವಾಗಿದೆ. ಸಣ್ಣಕತೆಗಳಲ್ಲಿ ಬಿಡಿಬಿಡಿಯಾದ ಸಮಸ್ಯೆಗಳನ್ನು ಕೈಗೆತ್ತಿಕೊಂಡಿದ್ದರೆ, ಕಾದಂಬರಿಗಳಲ್ಲಿ ಕೇಂದ್ರಪ್ರಜ್ಞೆಯ ಸುತ್ತ ಮಾನಸಿಕ ಸ್ಥಿರತೆಯನ್ನು ಕಳೆದುಕೊಂಡ ಅವಸ್ಥೆಯನ್ನು ಪರಿಣಾಮಕಾರಿಯಾಗಿ ಚಿತ್ರಿಸಲಾಗಿದೆ. ಮನಃಶಾಸ್ತ್ರದ ತಳಹದಿಯೊಂದಿಗೆ ನಿರೂಪಿಸಲ್ಪಡುವ 'ಬೆಕ್ಕಿನ ಕಣ್ಣು' ಮತ್ತು 'ಶರಪಂಜರ' ಕಾದಂಬರಿಗಳು ಹೆಣ್ಣಿನ ಬದುಕನ್ನು ಶೋಧಿಸುವ ಕ್ರಿಯೆಯಲ್ಲಿ ತೊಡಗಿದ ವಿಶಿಷ್ಟ ಕೃತಿಗಳಾಗಿವೆ. ಉಲ್ಲೇಖಿತ ಕಾದಂಬರಿಗಳೊಂದಿಗೆ 'ದೂರದ ಬೆಟ್ಟ' ಮತ್ತು 'ಮುಚ್ಚಿದ ಬಾಗಿಲು' ಕೃತಿಗಳಲ್ಲಿಯೂ ಮನಃಶ್ಯಾಸ್ತ್ರದ ವಿಶ್ಲೇಷಣೆಗಳಿವೆ.

### ೭.೪.೧ ಅನಾಥಭಾವ ಹುಟ್ಟುಹಾಕಿದ ಮನ:ಕ್ಲೇಷದ ವಿಶ್ಲೇಷಣೆ

'ಬೆಕ್ಕಿನ ಕಣ್ಣು' ಕೃತಿಯಲ್ಲಿ ಕಿಶೋರಾವಸ್ಥೆಯಿಂದ ಹದಿನೇಳು ವರ್ಷದ ತಾರುಣ್ಯದವರೆಗೆ ಕುಸುಮಳ ದೈಹಿಕ ಮತ್ತು ಮಾನಸಿಕ ಬದಲಾವಣೆಯ ತಿರುವುಗಳನ್ನು ಹಂತ ಹಂತವಾಗಿ ನಿರೂಪಿಸಲಾಗಿದೆ. ಬಹು ದಿನಗಳ ಅಪೇಕ್ಷೆಯ ಬಳಿಕ ಹುಟ್ಟಿಬಂದ ಕುಸುಮಾ ಮನೆಯವರೆಲ್ಲರ ಅತಿಮುದ್ದಿನ ಕಣ್ಮಣಿ. ಪ್ರತಿ ವರ್ಷದಂತೆ, ತನ್ನ ಏಳನೇ ವರ್ಷದ ಹುಟ್ಟಿದ ಹಬ್ಬದ ಸಂಭ್ರಮಾಚರಣೆಯಲ್ಲಿರುವ ಕುಸುಮಳಿಗೆ, ತಾಯಿ ರಾಜಮ್ಮನ ಆಕಸ್ಮಿಕ ಸಾವು ದೊಡ್ಡ ಆಘಾತವನ್ನುಂಟು ಮಾಡುತ್ತದೆ. ತಾಯಿಯ ಸ್ಥಾನದ ತೆರವಿನಿಂದ ಕಂಗೆಟ್ಟ ಕುಸುಮ ತಂದೆಯನ್ನು ಹೊಂದಿಕೊಳ್ಳುತ್ತಾಳೆ. ನಂತರದ ಮೂರು ವರ್ಷಗಳು ಯಾವ ಆತಂಕವೂ ಇಲ್ಲದೆ ನಡೆದು ಹೋಗುತ್ತದೆ. ತಂದೆಯ ಮರುಮದುವೆ, ಚಿಕ್ಕಮ್ಮನಾಗಿ ಪದ್ಮಳ ಆಗಮನ, ಕುಸುಮಳಲ್ಲಿ ಒಂಟಿ ಭಾವಕ್ಕೆ, ಅನಾಥ ಪ್ರಜ್ಞೆಗೆ ಕಾರಣವಾಯಿತು. ತಾಯಿಯ ಸ್ಥಾನ ವಹಿಸಬೇಕಾಗಿದ್ದ ಪದ್ಮ ಮತ್ತು ಆಕೆಯನ್ನು ಒಪ್ಪಿಕೊಳ್ಳಬೇಕಾಗಿದ್ದ ಕುಸುಮಳ ಪ್ರಥಮ ಭೇಟಿ ಇಬ್ಬರಲ್ಲೂ ಮಾತ್ಸರ್ಯವನ್ನು ಸೃಷ್ಟಿಸಿದೆ. ತೊಡೆಯ ಮೇಲೆ ಕೂಡಿಸಿದ ಕುಸುಮಳನ್ನು, ಪದ್ಮ ನೂಕುವುದರ ಮೂಲಕ ಎರಡನೇ ವರನೊಂದಿಗೆ ನಡೆಯುತ್ತಿರುವ ತನ್ನ ಮದುವೆಯನ್ನು ವಿರೋಧಿಸುತ್ತಾಳೆ. ತಂದೆಯಿಂದ ತನ್ನನ್ನು ಬೇರ್ಪಡಿಸಲು ಕಾರಣವಾದ ಪದ್ಮಳನ್ನು ದ್ವೇಷಿಸಲು ಪ್ರಾರಂಭಿಸಿದ ಕುಸುಮ, ಆ ಆಕ್ರೋಶವನ್ನು

ಬೇರೆ ರೀತಿಯಲ್ಲಿ ತೀರಿಸಿಕೊಳ್ಳತೊಡಗುತ್ತಾಳೆ. ಪದ್ಮಳ ಕಣ್ಣುಗಳು, ಮುದ್ದಿನಿಂದ ಸಾಕಿದ್ದ ಬೆಕ್ಕು 'ಪಾಲಿ'ಯ ಕಣ್ಣುಗಳೆರಡು ಪರಸ್ಪರ ಸಾಮ್ಯತೆ ಹೊಂದಿರುವುದರಿಂದ, 'ಪಾಲಿ' ಕುಸುಮಳ ದ್ವೇಷಕ್ಕೆ, ಶಿಕ್ಷೆಗೆ ಒಳಗಾಗುತ್ತದೆ. ಬೆಕ್ಕಿನಂತೆ ಹಸಿರು ಕಣ್ಣನ್ನು ಹೊಂದಿರುವ ಮಲತಾಯಿಯನ್ನು ನೇರವಾಗಿ ಎದುರಿಸಲು ಕುಸುಮಳಿಗೆ ಭಯ ಆತಂಕವಿದೆ. ಆದ್ದರಿಂದ ಕುಸುಮಳ ಆಕ್ರೋಶ ಬೆಕ್ಕಿಗೆ ಸ್ಥಾನಾಂತರವಾಗಿದೆ. ಕೇಳಿದ್ದೆಲ್ಲವನ್ನು ಪೂರೈಸುವ, ತಂದೆ-ತಾಯಿ-ಅಜ್ಜಿಯರ ಅತೀ ಮುದ್ದಿನಲ್ಲಿ ಬೆಳೆದ ಕುಸುಮಳಿಗೆ ಚಿಕ್ಕಮ್ಮ ತೋರುವ ಉಪೇಕ್ಷೆ, ಸಿಟ್ಟು ಆಘಾತವಾಗಿ ಪರಿಣಮಿಸುತ್ತದೆ.

ತಂದೆ-ತಾಯಿಯ ಬೆಚ್ಚಗಿನ ರಕ್ಷಣೆಯಲ್ಲಿ ಬೆಳೆಯಬೇಕಾಗಿದ್ದ ಕುಸುಮ ಇಬ್ಬರಿಂದಲೂ ದೂರವಾದ ಅನಾಥ ಭಾವನ್ನು ಅನುಭವಿಸುತ್ತಾಳೆ. ಗುಡುಗು ಸಿಡಿಲಿನ ರಾತ್ರಿಯಲ್ಲಿ ಒಬ್ಬಳೇ ಮಲಗಬೇಕಾದಾಗ-

"ಕುಸುಮ ಗಟ್ಟಿಯಾಗಿ ಚೀರಿದಳು:

"ಅಣ್ಣಾ....ಅಣ್ಣಾ....ಅಣ್ಣಾ"

ಅವಳ ಕರೆಗೆ ಯಾರೂ 'ಓ' ಗೊಡಲಿಲ್ಲ. ತಂದೆ ತನ್ನನ್ನು ಈ ರೀತಿ ಮೋಸಗೊಳಿಸಬಹುದೆಂದು ಕುಸುಮ ಕನಸಿನಲ್ಲಿಯೂ ಎಣಿಸಿರಲಿಲ್ಲ. ಹೃದಯವನ್ನು ನಡುಗಿಸುತ್ತಿದ್ದ ಹೆದರಿಕೆಯೊಡನೆ, ತಂದೆಯ ಮೋಸವೂ ಸೇರಿದುದರಿಂದ ಕುಸುಮ ಮತ್ತೊಮ್ಮೆ ಹುಚ್ಚಿಯಂತೆ ಚೀರಿದಳು-ಅಬ್ಬರಿಸುತ್ತಿದ್ದ ಗುಡುಗಿನ ಸದ್ದನ್ನೂ ಮೆಟ್ಟಿ ತುಳಿಯುವಂತೆ.

.....ಪದ್ಮ ಕುಸುಮಳ ಹತ್ತಿರ ಬಂದು ಮೊಳಕಾಲೂರಿ ಕುಳಿತು ತನ್ನ ಮುಖವನ್ನು ಕುಸುಮಳ ಹತ್ತಿರ ತಂದು,

"ಸುಮ್ಮನೆ ಮಲಗಿಕೊಳ್ಳದಿದ್ದರೆ ಬಾಗಿಲು ತೆಗೆದು ಬೀದಿಗೆ ತಳ್ಳುತ್ತೇನೆ" ಎಂದಳು. ಕೋಪ, ದ್ವೇಷದಿಂದ ಬಿಗಿದು ಬಂದ ಬಿರುಸಾದ ದನಿಯಲ್ಲಿ

ಕುಸುಮಳಿಗೆ ಮಾತನಾಡುವ ಶಕ್ತಿಯಿರಲಿಲ್ಲ. ಮಂತ್ರಮುಗ್ಧಳಂತೆ ಸ್ವಪ್ನದಲ್ಲಿರುವವಳಂತೆ, ತನ್ನ ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಿದ್ದ ಒಂದು ಜೊತೆ ಹಸಿರು ಕಣ್ಣುಗಳನ್ನೇ ಭೂತ ಹಿಡಿದವಳಂತೆ ನೋಡಿದಳು.

ಪದ್ಮನ ಕಣ್ಣುಗಳು ಚಕ್ರಾಕಾರವಾಗಿ ನೋಡುವವರನ್ನು ಬೆದರಿಸುವಂತೆ ಗಿರಗಿರನೆ ತಿರುಗುತ್ತಿದ್ದವು.

ತೀಕ್ಷ್ಣ, ನೋಟ, ಕೆಂಚು ಕೂದಲು, ಉಬ್ಬು ಹಲ್ಲು, ಕತ್ತಿಯ ಮೊನೆಯಂತೆ ಹೃದಯವನ್ನು ಸೀಳುತ್ತಿದ್ದ ದನಿ.... ಕುಸುಮಳ ಶರೀರ ಬಿರುಗಾಳಿಗೆ ಸಿಕ್ಕಿದ ತರಗೆಲೆಯಂತೆ ನಡುಗಿತು" (ಬೆಕ್ಕಿನ ಕಣ್ಣು, ಪುಟ-೬೦,೬೧).

ಈ ಅನುಭವ ಕುಸುಮಳನ್ನು ಅಧೀರಳನ್ನಾಗಿ ಮಾಡುತ್ತದೆ. ದಿನದಿಂದ ದಿನಕ್ಕೆ ಪದ್ಮಳ ಮೇಲಿನ ಆಕ್ರೋಶ ಹೆಚ್ಚಾಗುತ್ತಾ ಹೋಗುತ್ತದೆ. ಕಾದಂಬರಿಕಾರರು ಕುಸುಮಳ ಮನಸ್ಥಿತಿಯನ್ನು ಚಿತ್ರಿಸುವುದರೊಂದಿಗೆ, ಮಲತಾಯಿಯ ಸ್ಥಾನ ತುಂಬಲು ನಿರಾಕರಿಸುವ ಪದ್ಮಳ ಮಾನಸಿಕ ತಳಮಳದ ಬಗ್ಗೆಯೂ ಕಾಳಜಿ ವ್ಯಕ್ತಪಡಿಸಿದ್ದಾರೆ. ಪದ್ಮ ತಾನು ಮದುವೆಯಾಗುವವನೊಂದಿಗೆ ಹೊಸ ಅನುಭವ ಪಡೆಯಲು ಕಾತರವಿರುವವಳು. ಆದರೆ ಆಕೆಯ ಕುಟುಂಬದ ಆರ್ಥಿಕ ದುಃಸ್ಥಿತಿ ಅದಕ್ಕೆ ಅವಕಾಶ

ನೀಡಿಲ್ಲ. ವರದಕ್ಷಿಣೆ ಕೊಡಲು ಅಶಕ್ತನಾದ ತಂದೆ, ಅನಿವಾರ್ಯವಾಗಿ ವಿದುರನೊಂದಿಗೆ ಪದ್ಮಳ ವಿವಾಹವನ್ನು ನೆರವೇರಿಸುತ್ತಾನೆ. ನಿರಾಶಳಾದ ಪದ್ಮಳ ಸ್ವಗತವನ್ನು "ರಾಯರು ಎರಡನೇ ವರ ಎಂದು ತಿಳಿದಾಗ ಪದ್ಮಳ ಕನಸು ಕತ್ತರಿಸಿತು. ಹೊಸದೊಂದು ಜಗತ್ತಿನಲ್ಲಿ, ಹೆಜ್ಜೆಯಿಡಲು ತವಕಿಸುತ್ತಿದ್ದ ಕನಸುಗಾತಿ ತಾನು. ಆದರೆ ತಾನು ಹೆಜ್ಜೆಯಿಡಲಿರುವ ಜಗತ್ತು ತನ್ನ ಪತಿಯಾಗುವವರ ಪಾಲಿಗೆ ಹಳೆಯದು. ಅವರ ಹೃದಯದ ಬಟ್ಟಲಿನಲ್ಲಿರುವ ಪ್ರೇಮಾಮೃತವನ್ನು ಈ ಮೊದಲೇ ಹೆಣ್ಣೊಬ್ಬಳು ಸವಿದಿದ್ದಳಲ್ಲವೇ? ಅವಳು ಬಿಟ್ಟ ಆ ಎಂಜಲು ಪ್ರೇಮ ತನಗೆ ಸಿಕ್ಕಬೇಕೆ? ರಾಯರು ತನ್ನೊಡನೆ ಏಕಾಂತದಲ್ಲಿ ಆಡಬಹುದಾದ ಪ್ರೀತಿಯ ನುಡಿಗಳು ಹಳೆಯ ರಾಗವಲ್ಲವೆ? ಈ ಮೊದಲೇ ಹೆಣ್ಣೊಬ್ಬಳು ಅದೇ ಮಾತುಗಳನ್ನು ಅದೇ ಬಾಯಿಂದ ಕೇಳಿಲ್ಲವೇ? ಬೆಳದಿಂಗಳಿನ ರಾತ್ರಿಯಲ್ಲಿ ನಲ್ಲನ ತೋಳ ತೆಕ್ಕೆಯಲ್ಲಿ ಮಲಗಿ ಪ್ರಣಯಗೀತೆ ಕೇಳುವ ಕನಸು ಕಾಣುತ್ತಿದ್ದಳು. ರಸಿಕ ಹೆಣ್ಣು ಪದ್ಮಾ" (ಅದೇ, ಪುಟ-೨೨) ಎಂದು ಕಾದಂಬರಿಕಾರರು ಪ್ರಥಮ ಪುರುಷದ ನಿರೂಪಣೆಯಲ್ಲಿ ವ್ಯಕ್ತಪಡಿಸಿದ್ದಾರೆ. ಜಗನ್ನಾಥರಾಯರನ್ನು ಮದುವೆಯಾಗಲು ಪದ್ಮಾ ಪ್ರತಿಭಟಿಸಿದರೂ, ಅದು ಸಾಧ್ಯವಾಗುವುದಿಲ್ಲ. ಕುಸುಮಳ ಮೇಲೆ ತೋರುವ ಕ್ರೋಧಕ್ಕೆ ಕಾರಣ, ಆಕೆ ಸವತಿಯನ್ನು ನೆನಪಿಸುವ ಪ್ರತಿನಿಧಿಯಾಗಿರುವುದಕ್ಕೆ. ಹಾಗಾಗಿಯೇ ಮನೆಯ ಖರ್ಚು ನಿಭಾಯಿಸುವಾಗ, ಕುಸುಮಳಿಗೆ ಕೊಡುವ ಐದು ರೂಪಾಯಿಗಳ ಪಾಕೆಟ್‌ಮನಿ ಹೆಚ್ಚಿನದಾಗಿ ಕಾಣುತ್ತದೆ. ಆದರೆ, ಕುಸುಮಳ ಮೇಲೆ ಇದು ಬೇರೆ ತೆರನಾದ ಪರಿಣಾಮ ಬೀರುತ್ತದೆ. ಪಾಕೆಟ್‌ಮನಿ ಕಡಿತಗೊಂಡಾಗ, ತನ್ನ ಅಗತ್ಯಗಳನ್ನು ಪೂರೈಸಿಕೊಳ್ಳಲು ಸಣ್ಣಪುಟ್ಟ ಕಳ್ಳತನಕ್ಕೂ ಮುಂದಾಗುತ್ತಾಳೆ. ಕದಿಯುವುದನ್ನು ನಿಯಂತ್ರಿಸಲು ಪದ್ಮ, ಕುಸುಮಳಿಗೆ ಉಪವಾಸದ ಶಿಕ್ಷೆ ವಿಧಿಸಿದರೆ, ಆಕೆ ಬೇರೆಯವರ ಮನೆಗೆ ಹೋಗಿ ಊಟ ಮಾಡಿ ಬರುತ್ತಾಳೆ. ವ್ಯತಿರಿಕ್ತ ಘಟನೆಗಳಿಂದಾಗಿ, ಕುಸುಮ ಹುಚ್ಚಾಸ್ಪತ್ರೆಗೆ ಸೇರಿದಾಗ, ಪದ್ಮ ಪಶ್ಚಾತ್ತಾಪ ಪಡುತ್ತಾಳೆ. ಆಕೆ ಗುಣಮುಖವಾಗಲು ರಾಜಶೇಖರನೊಂದಿಗೆ ಸಹಕಾರ ನೀಡುತ್ತಾಳೆ.

ಕುಸುಮ ಮನೆಯ ವಾತಾವರಣದಲ್ಲಿ ಅಷ್ಟೇ ಅಲ್ಲದೇ ಶಾಲೆಯಲ್ಲಿಯೂ ಸಹಪಾಠಿಗಳ ಹಣವನ್ನು ಕದಿಯಲು ಪ್ರಾರಂಭಿಸುತ್ತಾಳೆ. ಶಿಕ್ಷಕರು ಕೊಡುವ ಶಿಕ್ಷೆಗೆ ಪ್ರತಿಯಾಗಿ, ಹಸಿರು ಕಣ್ಣುಳ್ಳ ಸೂಸಾನ್‌ಳ ಮೇಲೆರಗಿ ಪರಚುತ್ತಾಳೆ. ಮುಂದೆ ಇಂತಹ ಪ್ರಕರಣಗಳಿಂದ ಕುಸುಮ ಶಾಲೆಯಿಂದ ಹೊರ ಹಾಕಲ್ಪಡುತ್ತಾಳೆ.

ದ್ವೇಷ-ಸೇಡು-ಉನ್ಮಾದದಿಂದ ಕುಸುಮಳಿಗೆ ಬಿಡುಗಡೆ ಸಿಗುವುದು ಪದ್ಮಳ ತಮ್ಮ, ರಾಜಶೇಖರನ ಪ್ರವೇಶದಿಂದ. ರಾಜಶೇಖರನ್ನು ಹಚ್ಚಿಕೊಳ್ಳಲು ಇರುವ ಮೊದಲನೇ ಕಾರಣ, ಅವನ ಹೆಸರಿನಲ್ಲಿ ಕುಸುಮಳ ತಾಯಿಯ ಹೆಸರಿನ ಪೂರ್ವಾರ್ಧ ಸೇರ್ಪಡೆಯಾದುದು. ಮತ್ತೊಂದು ಕಾರಣ, ತನ್ನನ್ನು ಆತ್ಮೀಯತೆಯಿಂದ, ಪ್ರೀತಿ ವಿಶ್ವಾಸದಿಂದ ನೋಡಿಕೊಳ್ಳುತ್ತಿರುವುದಾಗಿದೆ. ಮನಃಶ್ಯಾಸ್ತ್ರವನ್ನು ಅಭ್ಯಾಸ ಮಾಡಿದ ರಾಜಶೇಖರನ ಮೂಲಕ ಕಾದಂಬರಿಕಾರರು ಭೂತ-ಪಿಶಾಚಿ ಬಿಡಿಸುವ ಮಾಂತ್ರಿಕರ ಮೌಢ್ಯತನವನ್ನು ಖಂಡಿಸಿದ್ದಾರೆ. ಕುಸುಮಳ ಉನ್ಮಾದ ದಿನದಿಂದ ದಿನಕ್ಕೆ ಹೆಚ್ಚಾದಾಗ, ರಾಜಶೇಖರ ಆಕೆಯನ್ನು ಕರೆದೊಯ್ದು ಮಾನಸಿಕ ರೋಗಿಗಳ ಆಸ್ಪತ್ರೆಗೆ ಸೇರಿಸಿ ಚಿಕಿತ್ಸೆ ಮಾಡಿಸುತ್ತಾನೆ.

ಆಸ್ಪತ್ರೆಯಲ್ಲಿರುವ ಮನೋರೋಗಿಗಳ ಮಾನಸಿಕ ವಿಕಲ್ಪಕ್ಕೆ ಮನೋವಿಜ್ಞಾನ ಮತ್ತು ಸಾಮಾಜಿಕ ಕ್ರೌರ್ಯದ ಕಾರಣಗಳೆರಡರ ತಾತ್ವಿಕ ತಳಹದಿ ನೀಡಿ ಪೂರಕ ಸನ್ನಿವೇಶವನ್ನು ಕೃತಿಕಾರರು ನಿರ್ಮಿಸಿದ್ದಾರೆ. ಹೆಂಗಸರ ಖಯಾಲಿಯಿರುವ ಗಂಡನ ಕೊರಗಿನಿಂದ ಮೂರು ತಿಂಗಳ ಬಾಣಂತಿಯಾದ ವೆಂಕಟಮ್ಮ ಮಾನಸಿಕ ದೌರ್ಬಲ್ಯಕ್ಕೆ ಒಳಗಾಗಿದ್ದಾಳೆ. ತಂದೆ–ತಾಯಿಯ ಜಗಳದಲ್ಲಿ ಬಡವಾದ ವಿನುತ ಬಾಣಂತಿತನದಲ್ಲಿ ಹಿಸ್ಟೀರಿಯಾಕ್ಕೆ ಒಳಗಾಗಿದ್ದಾಳೆ. ಮಕ್ಕಳಾಗದಿರುವ ಕಾರಣಕ್ಕೆ ಗಂಡ ಬೇರೊಂದು ಮದುವೆಯಾದದ್ದೂ ಅಲ್ಲದೆ, ಮೋಹನಾಂಬಳನ್ನು ಹೊರದೂಡಿದ್ದಕ್ಕೆ ಆಕೆ ಮಾನಸಿಕವಾಗಿ ಆಘಾತಗೊಂಡಿದ್ದಾಳೆ. ಕುಟುಂಬದ ಆರ್ಥಿಕ ದುಃಸ್ಥಿತಿಯಲ್ಲಿ ವರದಕ್ಷಿಣೆ ಕೊಡದ ಕಾರಣಕ್ಕೆ ಮದುವೆಯಾಗದೆ ಉಳಿದ ಸುಶೀಲ, ತನ್ನ ಭಾವನಾತ್ಮಕ್ಕೆ ಧಕ್ಕೆಯುಂಟಾಗಿ ಆಸ್ಪತ್ರೆ ಸೇರಿದ್ದಾಳೆ. 'ಮೆನೋಪಾಸ್' ಸ್ಟೇಜಿನಲ್ಲಿರುವ ಲಕ್ಷ್ಮಮ್ಮ ಇರುವ ಒಬ್ಬಳೇ ಮಗಳು ಮದುವೆ ನಂತರ ಸಾವಿಗೀಡಾದಾಗ, ಮಾನಸಿಕವಾಗಿ ದುರ್ಬಲಗೊಂಡಿದ್ದಾಳೆ. ಕುಸುಮಳ ಮುಖದಲ್ಲಿ ತಮ್ಮ ಮಗಳು ನಾಗುವನ್ನು ಕಂಡು, ಆಕೆಯ ಆರೈಕೆಗೆ ತೊಡಗುತ್ತಾರೆ. ವಿಧವೆ ಸಾವಿತ್ರಮ್ಮ ತಮ್ಮ ದುಡಿದ ಹಣವನ್ನು ಕಳೆದುಕೊಂಡು, ಆ ಭ್ರಮೆಯಲ್ಲಿಯೇ ಕಾಲ ನೂಕುತ್ತಿರುವರು. ಮೇಲಿನ ಮನೋರೋಗಿಗಳ ಅಸ್ವಾಸ್ಥ್ಯಕ್ಕೆ ಸಮಾಜದ ವರ್ತನೆಗಳು ಹೇಗೆ ಕಾರಣವಾಗಿದೆಯೆನ್ನುವುದನ್ನು ಕಾದಂಬರಿಕಾರರು ವಿಶ್ಲೇಷಿಸಿದ್ದಾರೆ.

ಕುಸುಮ ಏಳು ತಿಂಗಳ ನಂತರ ಗುಣಮುಖಳಾಗಿ ಆಸ್ಪತ್ರೆಯಿಂದ ಬಿಡುಗಡೆಗೊಳ್ಳುತ್ತಾಳೆ. ತನ್ನನ್ನು ಪ್ರೀತಿಸುತ್ತಿರುವ ರಾಜಶೇಖರನೊಂದಿಗೆ ಮದುವೆಯ ಮಾತುಕತೆಯೂ ನಡೆಯುತ್ತದೆ. ಪದ್ಮಳೂ ಮಾತ್ಸರ್ಯದಿಂದ ಕುದಿಯುತ್ತಿದ್ದ ಮನಸ್ಸನ್ನು ಪರಿವರ್ತಿಸಿಕೊಂಡು ಕುಸುಮಳನ್ನು ಪ್ರೀತಿಯಿಂದ ಕಾಣತೊಡಗುತ್ತಾಳೆ.

### ೭.೪.೨ ಸಾಮಾಜಿಕ ವಿಧಿನಿಷೇಧಗಳ ಪರಿಣಾಮದ ಮಾನಸಿಕ ದೌರ್ಬಲ್ಯ

ಕುಟುಂಬ ಮತ್ತು ಸುತ್ತಮುತ್ತಲಿನವರ ಸಹಕಾರ–ಔದಾರ್ಯವಿಲ್ಲದೆ ಮತ್ತೆ ಮಾನಸಿಕ ರೋಗಿಯಾಗುವ ಕಾವೇರಿ 'ಶರಪಂಜರ' ಕಾದಂಬರಿಯಲ್ಲಿ ಎದುರಾಗುತ್ತಾಳೆ. 'ಶರಪಂಜರ' ಕೃತಿಯ ಮನೋವಿಶ್ಲೇಷಣೆಯನ್ನು, ಅದರ ನಿರೂಪಣಾ ತಂತ್ರದಿಂದಲೇ ಪ್ರಾರಂಭಿಸುವುದು ಸೂಕ್ತವಾಗಿದೆ. ಕಾದಂಬರಿ ಪ್ರಾರಂಭವಾಗುವುದು ಕಾವೇರಿ ಮನೋರೋಗಿಗಳ ಆಸ್ಪತ್ರೆಯಿಂದ ಗುಣಮುಖವಾಗಿ ಮನೆಗೆ ಮರಳುವ ದೃಶ್ಯದ ಮೂಲಕ. ಸುಖಸಂಸಾರದ ಕನಸು ಹೊತ್ತು ಬೆಂಗಳೂರಿನಿಂದ ಮೈಸೂರಿಗೆ ಗಂಡ ಸತೀಶನೊಂದಿಗೆ ಕಾರಿನಲ್ಲಿ ಪ್ರಯಾಣ ಬೆಳೆಸುತ್ತಿದ್ದಾಳೆ. ಕಾದಂಬರಿಕಾರರು ಹಿನ್ನೋಟದ ತಂತ್ರವನ್ನು ಬಳಸಿ ಕಾವೇರಿಯ ಬದುಕಿನ ಚಿತ್ರಣ ನೀಡಿದ್ದಾರೆ. ಸತೀಶ, ಸುಂದರಮ್ಮ, ಮಕ್ಕಳಾದ ಅರವಿಂದ–ಅಶೋಕರ ಪ್ರಜ್ಞೆಯಲ್ಲಿಯೂ ಕಾವೇರಿಯ ಸಮಸ್ಯೆಯನ್ನು ನಿರ್ವಚಿಸಲಾಗಿದೆ.

ಹಿನ್ನೋಟದಲ್ಲಿ ದೊರಕುವ ಚಿತ್ರಗಳಲ್ಲಿ ಶ್ರೀಮಂತ ಮನೆತನದ ಕಾವೇರಿ, ಸಂತೃಪ್ತ ಕುಟುಂಬದಲ್ಲಿ ನೆಮ್ಮದಿಯ ಬದುಕು ಕಂಡಾಕೆ. ಸೌಂದರ್ಯದಲ್ಲಿ ಅಚ್ಚುಕಟ್ಟಿನಲ್ಲಿ ಆಕೆಯನ್ನು ಸರಿಗಟ್ಟುವವರಿಲ್ಲ.

ಸತೀಶ ಆ ಸೌಂದರ್ಯದ ಆರಾಧಕ. ಯಾವುದಕ್ಕೂ ಕಡಿಮೆಯಿಲ್ಲದ ಕಾವೇರಿಯ ಬದುಕಿನ ಆಶಾ ಸೌಧಗಳು ಕುಸಿದು ಬೀಳುವಂತೆ ಮಾಡಿದ್ದು, ಎರಡನೇ ಹೆರಿಗೆಯ ಬಾಣಂತಿತನ. ಅಶೋಕನ ಹೆರಿಗೆಯಾದ ನಂತರ ಉಂಟಾದ ದೈಹಿಕ ದುರ್ಬಲತೆಯಲ್ಲಿ, ಭೂತಕಾಲದ ಘಟನೆಯೊಂದು ಮರುಕಳಿಸುತ್ತದೆ. ಯಾರಲ್ಲೂ ಹೇಳಿಕೊಳ್ಳಲಾರದ ಪಾಪಪ್ರಜ್ಞೆ, ಮಾನಸಿಕ ವಿಕಾರವಾಗಿ ಪರಿವರ್ತನೆ ಹೊಂದುತ್ತದೆ. ಸೋದರತ್ತೆಯ ಮಗನಾದ ವಿವೇಕ ಕಾವೇರಿಯನ್ನು ಮದುವೆಯಾಗಲು ಇಚ್ಛಿಸಿದವನು. ಆದರೆ ಆಕೆಯ ತಂದೆ-ತಾಯಿರ ಅಸಮ್ಮತಿ ವಿವೇಕನ ಸೇಡಿಗೆ ಕಾರಣವಾಗುತ್ತದೆ. ಶ್ರೀರಂಗಪಟ್ಟಣಕ್ಕೆ ಕಾವೇರಿಯನ್ನು ಉಪಾಯವಾಗಿ ಕರೆದೊಯ್ದು 'ಅತ್ಯಾಚಾರ'ವೆಸಗುತ್ತಾನೆ. ಮರೆತು ಹಳತಾದ ಈ ಘಟನೆಯ ಮರುಕಳಿಕೆಯಿಂದ ನರಳತೊಡಗುತ್ತಾಳೆ. ವರ್ತಮಾನದ ಕೆಲವು ಸಂಗತಿಗಳು ಮೆದುಳಿನ ಪರದೆಯಿಂದ ಮಾಸಿ, ಶ್ರೀರಂಗಪಟ್ಟಣದಲ್ಲಿ 'ಕಳೆದುಕೊಂಡ' ನೆನಪು ಆವರಿಸಿಕೊಳ್ಳುತ್ತದೆ. ಕಾವೇರಿಯನ್ನು ಈ ಸ್ಥಿತಿಗೆ ತಳ್ಳಲು ಕಾರಣನಾದ ವಿವೇಕನಿಗೆ ಯಾವ ಶಿಕ್ಷೆಯೂ ಇಲ್ಲ. ಪುರುಷ ಪ್ರಧಾನತೆ ಹೇರಲ್ಪಟ್ಟ 'ಶೀಲ', 'ಪಾತಿವ್ರತ್ಯ'ದ ಕಲ್ಪನೆಗಳು ಹೆಣ್ಣಿನಲ್ಲಿ ಬೇರೂರಿರುವ ಬಗೆಯನ್ನು ಕಾದಂಬರಿ ಪರೋಕ್ಷವಾಗಿ ಸೂಚಿಸುತ್ತದೆ. ವಿವೇಕ ಮತ್ತು ಕಾವೇರಿಯ ಸಂಬಂಧವನ್ನು ಕಾದಂಬರಿಕಾರರು ಬಹುಸೂಕ್ಷ್ಮವಾಗಿ, ಸೂಚ್ಯವಾಗಿ ಪರಿಚಯಿಸಿದ್ದಾರೆ. ಕಾವೇರಿಯ ಸುಪ್ತಪ್ರಜ್ಞೆಯಲ್ಲಿ ಮಾತ್ರ ನಡೆದ ಘಟನೆಯ ಸುಳಿವು ಗೋಚರಿಸುತ್ತದೆಯೇ ವಿನಃ ಬೇರಾರಿಗೂ ತಿಳಿಯುವುದಿಲ್ಲ.

ಕಾವೇರಿ ಎರಡು ವರ್ಷಗಳ ದೀರ್ಘಾವಧಿಯ ಚಿಕಿತ್ಸೆ ಬಳಿಕ ಚೇರಿಸಿಕೊಂಡು ಹೊಸ ಜೀವನಕ್ಕಾಗಿ ಕಾತರಿಸುತ್ತಿದ್ದಾಳೆ. ಆದರೆ, ಸತೀಶ ಕಾವೇರಿಯ ಘಟನೆಯಿಂದ, ಇನ್ನೂ ಹೊರಬಂದಿಲ್ಲ.

"ಎಲ್ಲರಿಗಿಂತಲೂ ಹೆಚ್ಚು ಗಾಸಿಗೊಂಡವನು ಸತೀಶ. ಹೆಂಡತಿಯ ಖಾಯಿಲೆಯಿಂದಾಗಿ ಸತೀಶನ ದೇಹ, ಮನಸ್ಸುಗಳಿಗೆ ತುಕ್ಕು ಹಿಡಿದಂತಾಯಿತು. ಹೆಂಡತಿಯೇ ಅವನಿಗೆ ಸರ್ವಸ್ವವಾಗಿದ್ದಳು. ಆಫೀಸಿಗೆ ಪುಣ್ಯಾತ್ಮ ಹೇಗೆ ಹೋಗಿ ಬರುತ್ತಿದ್ದನೋ ದೇವರೇ ಬಲ್ಲ. ಆಮೇಲೆ ಅವನು ಒಂದು ಗಳಿಗೆಯೂ ಕಾವೇರಿಯನ್ನು ಬಿಟ್ಟಿರುತ್ತಿರಲಿಲ್ಲ. ....ಸತೀಶನಿಗೆ ಹೆಂಡತಿಯ ಮೇಲೆ ಒಂದು ರೀತಿಯಿಂದ ಕೋಪವಿತ್ತು. ತಾನು ಅವಳಿಗೆ ಏನನ್ನೂ ಕಡಿಮೆ ಮಾಡಿರಲಿಲ್ಲ, ಇತರರು 'ಅತೀ' ಎಂದು ಭಾವಿಸುವಷ್ಟು ಅವನು ಅವಳನ್ನು ಪ್ರೀತಿಸುತ್ತಿದ್ದ, ಮೆರೆಸುತ್ತಿದ್ದ, ಕಾವೇರಿ ಜೀವನದಲ್ಲಿ ಯಾವ ಕೊರತೆಯೂ ಇರಲಿಲ್ಲ. ಅಂತಹದರಲ್ಲಿ ಅವಳು ಮನಸ್ಸಿನ ಸ್ವಾಸ್ಥ್ಯ ಕೆಡಿಸಿಕೊಂಡರೆ?

ತಾನು ಅವಳಿಗೆ ಕೊಟ್ಟ ಸುಖ ಜೀವನಕ್ಕೆ ಪ್ರತಿಫಲ ಇದೇ ಏನು? ಉಳಿದವರು ತನ್ನ ವಿಷಯವಾಗಿ ಏನೆಂದು ಭಾವಿಸಬಹುದು? 'ಗಂಡ ಹೆಂಡತೀನ ಸರಿಯಾಗಿ ನೋಡಿಕೊಳ್ಳುತ್ತಿರಲಿಲ್ಲವೇನೋ? ಆದುದರಿಂದ ಕಾವೇರಿಗೆ ಬುದ್ಧಿ ಭ್ರಮಣೆಯಾಯಿತು' ಎಂದು ಜನ ಒಂದೇ ಮಾತಿನಲ್ಲಿ ತನಗೆ ಬೆಲೆ ಕಟ್ಟಬಹುದು" (ಶರಪಂಜರ, ಪುಟ-೫೭,೫೮) ಎಂಬ ಮಾನಸಿಕ ಕ್ಲೇಷೆಗೆ ಒಳಗಾಗುತ್ತಾನೆ. ಆದರೆ ಕಾವೇರಿಯ ಮನಸ್ಸು ಹೊಸ ಜಗತ್ತಿಗೆ ಹೊಂದಿಕೊಳ್ಳಲು ಸಹಕರಿಸಬೇಕಿದ್ದ ಸತೀಶ ಹಿಂಜರಿಯುತ್ತಾನೆ.

ಕಾವೇರಿಯನ್ನು ತನ್ನಿಂದ ದೂರವಿಡುತ್ತಾನೆ. ಅದುವರೆಗೂ ಅಗಲಿದ್ದ ಮಕ್ಕಳು ಕಾವೇರಿಯ ಸಾನಿಧ್ಯವನ್ನು, ನಿರಾಕರಿಸುತ್ತವೆ. ಸತೀಶನ ಅಕ್ಕ ವಿಜಯಾಳನ್ನು ಅವಲಂಬಿಸುತ್ತವೆ. ನೆರೆಹೊರೆಯವರ ಕುಹಕ, ಅಡಿಗೆ ಭಟ್ಟರು ಮತ್ತು ಕೆಲಸದಾಳುಗಳು ಕಾವೇರಿಯ ಸಹಜ ಕ್ರಿಯೆಗಳಿಗೆ ಇಲ್ಲದ್ದನ್ನು ಆರೋಪಿಸಿ 'ಹುಚ್ಚಿ'ಯ ಪಟ್ಟವನ್ನು ಭದ್ರಗೊಳಿಸುತ್ತಾರೆ. ಕಾವೇರಿಯನ್ನು ಮೊದಲಿನಂತೆ ಸ್ವೀಕರಿಸಲು ಮನಸ್ಸು ಮಾಡಲು ಯಾರೂ ಮುಂದಾಗದಿರುವುದನ್ನು ಕಾದಂಬರಿಕಾರರು ವಿಷಾದದಿಂದ ದಾಖಲಿಸುತ್ತಾರೆ. ಕಾವೇರಿಯಂತಹವರು ಅನುಕಂಪ ಸಂತಾಪವನ್ನು ನಿರೀಕ್ಷಿಸುವುದಿಲ್ಲ. ಬದಲಾಗಿ ಇತರರೊಂದಿಗೆ ಬೆರೆಯಲು ಸಹಕಾರವನ್ನು ಅಪೇಕ್ಷಿಸುತ್ತಾರೆ ಎಂಬ ಸಂದೇಶವನ್ನು ಕಾದಂಬರಿಕಾರರು ಸಮಾಜಕ್ಕೆ ನೀಡಿದ್ದಾರೆ. "ನನ್ನನ್ನು ಯಾಕೆ ಎಲ್ಲರೂ ಮೊದಲಿನ ಹಾಗೆ ಕಾಣಬಾರದು? ಯಾರೂ ಮಾಡದ ತಪ್ಪು ನಾನೇನು ಮಾಡಿದೀನಿ? ಕ್ಷಯ, ಕ್ಯಾನ್ಸರ್, ಎಂತೆಂಥಹ ಭೀಕರ ರೋಗಗಳಿಂದ ನರಳುವವರು ಇದ್ದಾರೆ. ಅದಕ್ಕಿಂತಲೂ ನನಗಾಗಿದ್ದ ಕಾಯಿಲೆ ಭಯಂಕರವಾದುದೇ? ನನ್ನ ಯಾಕೆ ನನ್ನ ಪಾಡಿಗೆ ಇರಗೊಡುವುದಿಲ್ಲ. ನನಗೆ ಯಾರ ಕರುಣೆ, ಕೊಂಕುನೋಟ, ಪಿಸುಮಾತು ಯಾವುದೂ ಬೇಡ. ಆದರೂ ಜನ ಯಾಕೆ ಅವುಗಳಿಂದ ನನ್ನನ್ನು ನೋಯಿಸುತ್ತಾರೆ" (ಅದೇ, ಪುಟ-೧೭೯) ಎನ್ನುವುದು ಕಾವೇರಿಯೊಂದಿಗೆ ಲೇಖಕರ ಪ್ರಶ್ನೆಯೂ ಆಗಿದೆ.

ಕಾವೇರಿ ಸೌಮ್ಯವಾಗಿ ಸತೀಶನಾದಿಯಾಗಿ ಎಲ್ಲರನ್ನು ಗೆಲ್ಲಲು ಪ್ರಯತ್ನಿಸುತ್ತಾಳೆ. ಅದರಿಂದ ಯಾವ ಪರಿಣಾಮ ಬೀರದಾದಾಗ ಹಠದಿಂದ ತನ್ನ ಅಸ್ತಿತ್ವದಿಂದ ಸ್ಥಾಪಿಸಿಕೊಳ್ಳಲು ಮುಂದಾಗುತ್ತಾಳೆ. ಅದೂ ಫಲಕಾರಿಯಾಗುವುದಿಲ್ಲ. ಇದರೊಂದಿಗೆ ತನ್ನ ಕಾರಣದಿಂದ ತಪ್ಪಿ ಹೋದ ತಂಗಿಯ ಮದುವೆಯನ್ನು ಬೇರೊಬ್ಬರೊಂದಿಗೆ ನಿಶ್ಚಯಿಸಲು ಪ್ರಯತ್ನಿಸಿ ವಿಫಲಳಾಗುತ್ತಾಳೆ. ಇವೆಲ್ಲ ಕಾರಣಗಳೊಂದಿಗೆ ತನ್ನನ್ನು ಅಸ್ಪೃಶ್ಯಳಂತೆ ಕಾಣುವ ಸತೀಶ, ಕಚೇರಿಯಲ್ಲಿ ಕೆಲಸ ಮಾಡುವ ವಿಮಲಳೊಂದಿಗೆ ಸಂಪರ್ಕ ಹೊಂದಿದಾಗ ಕಾವೇರಿ ಧೃತಿಗೆಡುತ್ತಾಳೆ. ಆತ್ಮಹತ್ಯೆಗೂ ಯತ್ನಿಸಿ ಸೋಲುತ್ತಾಳೆ. ಮನೆಯ ವಾತಾವರಣಕ್ಕಿಂತ ಆಸ್ಪತ್ರೆಯೇ ಹಿತವೆನ್ನಿಸುವುದು ಅಚ್ಚರಿಯ ಪ್ರಶ್ನೆಯಾಗುಳಿಯುವುದಿಲ್ಲ.

ಕುಟುಂಬ ಮತ್ತು ಸಮಾಜದ ಕ್ರೂರ ದೃಷ್ಟಿ, ಕುಹಕದ ಮಾತುಗಳು ಬಾಣಗಳ ಪಂಜರವಾಗಿ, ಕಾವೇರಿಯ ಭವಿಷ್ಯದಲ್ಲಿ ಮುಕ್ತ ಬದುಕಿನ ಬಾಗಿಲನ್ನು ಶಾಶ್ವತವಾಗಿ ಮುಚ್ಚಿ ಬಿಟ್ಟಿತು. ಎರಡು ವರ್ಷದ ದೀರ್ಘ ಅವಧಿಯಲ್ಲಿ ಗುಣಮುಖ ಹೊಂದಿ ಬಂದ ಕಾವೇರಿಯನ್ನು ಆರು ತಿಂಗಳ ನಂತರ ಮತ್ತೆ ಹುಚ್ಚಿಯನ್ನಾಗಿ ಮಾಡಲು ಕಾರಣ, ಸಮಾಜವಾಗಿದೆ ಎಂಬುದನ್ನು ಕಾದಂಬರಿಕಾರರು ತೋರಿಸಿದ್ದಾರೆ. ಮಾನಸಿಕ ಅಸ್ವಾಸ್ಥ್ಯವನ್ನು ಹೊಂದಿದವರನ್ನು ಸಹನೆಯಿಂದ ಕಾಣಬೇಕೆಂಬ ಕಾಳಜಿಯನ್ನು ವ್ಯಕ್ತಪಡಿಸಿದ್ದಾರೆ. ಬೆಂಗಳೂರಿನಿಂದ ಮೈಸೂರಿಗೆ ಆರಂಭವಾದ ಪಯಣ ಮತ್ತೆ ಮೈಸೂರಿನಿಂದ ಬೆಂಗಳೂರಿನ ಹುಚ್ಚಾಸ್ಪತ್ರೆಯ ಕಡೆಗೆ ಸಾಗುತ್ತದೆ.

೭.೪.೩ ಸಾಂಪ್ರದಾಯಿಕ ಧೋರಣೆಯಿಂದ ಉಂಟಾದ ಮಾನಸಿಕ ಸ್ಥಿತಿ

'ದೂರದ ಬೆಟ್ಟ' ಕಾದಂಬರಿಯಲ್ಲಿ ವಿಧವೆಯೊಬ್ಬಳು ಪುನರ್ ವಿವಾಹಕ್ಕೆ ಸಮ್ಮತಿಸಿದ್ದರೂ, ಸುಪ್ತ ಮನಸ್ಸಿನಲ್ಲಿ, ಸಾಂಪ್ರದಾಯಿಕ ಧೋರಣೆಗೆ ವಿರುದ್ಧವಾದ ಕಾರ್ಯವನ್ನು ತಾನು ಮಾಡುತ್ತಿರುವ ಪಾಪ ಪ್ರಜ್ಞೆ ಕಾಡತೊಡಗುತ್ತದೆ. ಮೊದಲ ಗಂಡ ತೀರಿ ಹೋದ ಮೇಲೆ ಸುನಂದಳನ್ನು ಮುಂದೆ ಓದಿಸಲು, ಉಪಾಧ್ಯಾಯಿನಿಯಾಗಿ ಕೆಲಸ ನಿರ್ವಹಿಸಲು, ಅವಳ ಅಣ್ಣ ಸೀತಾರಾಮ ಕಾರಣವಾಗಿದ್ದಾನೆ. ತಂದೆ-ತಾಯಿಯ ಉತ್ತೇಜನವೂ ದೊರೆಯುತ್ತದೆ. ಕಾದಂಬರಿಯ ಮುಕ್ಕಾಲು ಭಾಗ ಸರಳ ಸೂತ್ರಗಳಿಂದ ಸಾಗುತ್ತದೆ. ಕೊನೆಯ ಭಾಗದಲ್ಲಿ ಸುನಂದಳ ಸಮಸ್ಯೆಯನ್ನು ಕೇಂದ್ರೀಕರಿಸಿಕೊಂಡಿದೆ. ಸುನಂದಳ ಅರಿವಿಗೆ ಬಾರದೆ, ರಾತ್ರಿ ನಿದ್ರೆಯಲ್ಲಿ ಓಡಾಡುವ ಪ್ರಕ್ರಿಯೆ ಆರಂಭವಾಗುತ್ತದೆ. ಮೊದಲ ಗಂಡನಿಗೆ ಸಂಬಂಧಿಸಿದ ವಸ್ತುಗಳನ್ನು ತನಗರಿವಿಲ್ಲದೆ ಬಾವಿಗೆ ಹಾಕಿ ಬರುತ್ತಿರುತ್ತಾಳೆ. ಮನಸ್ಸಿನೊಳಗೆ ಏನೋ ವ್ಯತ್ಯಾಸವಾಗುತ್ತಿರುವುದನ್ನು ಕಂಡುಕೊಂಡ ಸುನಂದ ಮನಃಶಾಸ್ತ್ರಜ್ಞರನ್ನು ಭೇಟಿಯಾಗುತ್ತಾಳೆ. ಆಕೆಯಿಂದ, ಸೀತಾರಾಮುವಿನಿಂದ ಅನೇಕ ಮಾಹಿತಿಗಳನ್ನು ಸಂಗ್ರಹಿಸಿದ ಮನಃಶಾಸ್ತ್ರಜ್ಞರು ಸುಪ್ತ ಮನಸ್ಸಿನಲ್ಲಿ ಬೇರೂರಿದ್ದ ಸಾಂಪ್ರದಾಯಿಕ ಮೌಲ್ಯಗಳು ಕಾರಣವಾಗಿರುವುದನ್ನು ಅರ್ಥೈಸುತ್ತಾರೆ. ಮನಸ್ಸಿನಲ್ಲಿ ಅಡಗಿದ್ದ ಭಯವನ್ನು ಹೋಗಲಾಡಿಸುತ್ತಾರೆ.

ಸಾಂಪ್ರದಾಯಿಕ ಆಚರಣೆಗಳನ್ನು ಪಾಲಿಸುವ ಮತ್ತು ಬೋಧಿಸುವ ಸೋದರತ್ತೆಯ ಆರೈಕೆಯಲ್ಲಿ ಬೆಳೆದ ಸುನಂದಳ ಸುಪ್ತ ಮನಸ್ಸಿನಲ್ಲಿ ಸಾಂಪ್ರದಾಯಿಕತೆ ಮತ್ತು ಆಧುನಿಕ ವಿಚಾರದ ಸಂಘರ್ಷ ಏರ್ಪಡುವುದನ್ನು ಕಾದಂಬರಿ ಚಿತ್ರಿಸುತ್ತದೆ. ದೂರದ ಬೆಟ್ಟವನ್ನು ನೋಡುವಾಗ ನುಣ್ಣಗೆ ಕಾಣಿಸಿದರೂ ಅದರ ಹತ್ತಿರ ಹೋದಾಗ ಕಲ್ಲುಮುಳ್ಳುಗಳ ಅನುಭವವಾಗುತ್ತದೆ. ಹಾಗೆಯೇ ಮೇಲ್ನೋಟಕ್ಕೆ ಸುನಂದ ತನ್ನ ದುಃಖಗಳನ್ನು ಮರೆತಿರುವಂತೆ, ಸುಖವಾಗಿರುವಂತೆ ಕಾಣಿಸಿದರೂ ಅವಳೊಳಗಿನ ಮನಸ್ಸು ಅನುಭವಿಸುವ ಸಂಕಟಗಳು ಗೋಚರವಾಗದೇ ಹೋಗುತ್ತವೆ. ಸುಪ್ತ ಮನಸ್ಸಿನ ಭೀತಿಯಿಂದ ವಿಮುಕ್ತಿ ಪಡೆದ ಮೇಲೆ ಶ್ರೀಧರನೊಂದಿಗೆ ಮದುವೆಯಾಗಲು ಮುಕ್ತ ಮನಸ್ಸಿನಿಂದ ಮುಂದಾಗುತ್ತಾಳೆ.

ಮೇಲಿನ ಕಾದಂಬರಿಗಳಲ್ಲಿ ಮನಃಶಾಸ್ತ್ರಜ್ಞರು ಕಾದಂಬರಿಯ ಪೂರಕ ಪಾತ್ರವಾಗಿ ಬಂದರೆ 'ಮುಚ್ಚಿದ ಬಾಗಿಲು' ಕಾದಂಬರಿಯು ಮನಃಶ್ಯಾಸ್ತ್ರಜ್ಞನ ಪ್ರಜ್ಞೆಯಲ್ಲಿಯೇ ನಿರೂಪಿತವಾಗಿವೆ. ತನ್ನಲ್ಲಿಗೆ ಬರುವ ವಿವಿಧ ಮನೋರೋಗಿಗಳ ಬಿಡಿಬಿಡಿಯಾದ ಸಮಸ್ಯೆಗಳ ಆವರಣವನ್ನು ಅನಾವರಣ ಗೊಳಿಸಲಾಗಿದೆ.

ಮೊದಲನೇ ಘಟನೆಯಲ್ಲಿ ಸೋಮು, ಗಿರಿಜಾಳನ್ನು ಮನಸಾರೆ ಪ್ರೀತಿಸಿದರೂ ಮದುವೆಯಾಗಲು ಒಪ್ಪುತ್ತಿಲ್ಲ. ಕಾರಣ, ತನಗೆ ಮೀಸೆ-ಗಡ್ಡ ಮೂಡದ್ದರಿಂದ ಪುರುಷತ್ವ ಕಳೆದುಕೊಂಡಿರುವ ಭ್ರಮೆಗೆ ಒಳಗಾಗಿ, ಆಕೆಯನ್ನು ತಿರಸ್ಕರಿಸಿದ್ದಾನೆ. ಎರಡನೇ ಘಟನೆಯಲ್ಲಿ ಸುಂದರರಾಜು, ತಾನು ಪಾಸಾದರೆ, ಅನೈತಿಕ ಸಂಬಂಧ ಹೊಂದಿರುವ ಹುಡುಗಿಯೊಂದಿಗೆ ಮದುವೆಯಾಗಬೇಕಾಗುತ್ತದೆಂಬ ಕಾರಣದಿಂದ

ಪರೀಕ್ಷೆಯಲ್ಲಿ ಪದೇ ಪದೇ ಫೇಲಾಗುವ ಉಪಾಯ ಕಂಡುಕೊಂಡು ಕೊರಗ ತೊಡಗಿದ್ದಾನೆ. ವಿದ್ಯಾಭ್ಯಾಸದ ಖರ್ಚನ್ನು ನಿಭಾಯಿಸಿದ ಕಾರಣಕ್ಕೆ, ಅಂತಹ ಹುಡುಗಿಯನ್ನು ಮದುವೆಯಾಗಲು ಸುಂದರರಾಜುವಿಗೆ ಇಷ್ಟವಿಲ್ಲದೆ, ಫೇಲಾಗುವ ಪರ್ಯಾಯ ಮಾರ್ಗಕ್ಕೆ ಕಟ್ಟುಬಿದ್ದಿದ್ದಾನೆ. ಮೂರನೇ ಘಟನೆಯಲ್ಲಿ ಅಕ್ಬರ್‌ನೆಂಬ ಪರಿಚಿತ ತರುಣನ ಬಲಾತ್ಕಾರದ ಚುಂಬನದಿಂದ ತನ್ನ ಪಾವಿತ್ರ್ಯ ಹಾಳಾಯಿತೆಂಬ ಭ್ರಮೆಗೆ ಒಳಗಾಗಿದ್ದಾಳೆ. ಪಾವಿತ್ರ್ಯದ ಸಂಕೇತವಾದ ನೀರನ್ನು ಬಳಸದಿರುವ ಮನಃಸ್ಥಿತಿಗೆ ತಲುಪಿರುವ ತಾರಾಳ ಸಮಸ್ಯೆಯಿದೆ. ನಾಲ್ಕನೇ ಘಟನೆಯಲ್ಲಿ ಗಂಡನ ದೌರ್ಜನ್ಯ-ಹಿಂಸೆಗೆ ಒಳಗಾದ ಶಾರದೆ ಹಿಸ್ಟೀರಿಯಾಕ್ಕೆ ಒಳಗಾಗಿದ್ದಾಳೆ. ಐದನೇ ಘಟನೆಯಲ್ಲಿ ಸಂತಾನ ನಿರೋಧ ಮಾರ್ಗವನ್ನು ಕಂಡುಕೊಂಡ ರೀಟಾ, ಅದರಿಂದ ಪಾಪ ಪ್ರಜ್ಞೆಗೆ ಒಳಗಾಗಿದ್ದಾಳೆ. ಕಾರಣ, ಕ್ಯಾಥೊಲಿಕ್ ಧರ್ಮದಲ್ಲಿ ಸಂತಾನವನ್ನು ನಿರೋಧಿಸುವ ಕ್ರಿಯೆ ಪಾಪವೆಂಬ ನೀತಿ. ಈ ಎಲ್ಲ ಸಮಸ್ಯೆಗಳನ್ನು ನಿವಾರಿಸಲು ಪ್ರಯತ್ನಿಸುತ್ತಿರುವ ಮನಃಶಾಸ್ತ್ರಜ್ಞನ ಕುಟುಂಬದ ಸಮಸ್ಯೆಯನ್ನು ಕಾದಂಬರಿ ಒಳಗೊಂಡಿದೆ.

ನೀರಿನಿಂದ ದೂರವಿರುವ ತಾರಾಳ ಸಮಸ್ಯೆಯನ್ನು ಬೇರೆ ಘಟನೆಗಳಿಗಿಂತ ಹೆಚ್ಚು ಗಾಢವಾಗಿ ಚಿತ್ರಿಸಲಾಗಿದೆ. 'ಶರಪಂಜರ' ಕಾದಂಬರಿಯಲ್ಲಿ ಕಾವೇರಿ ವಿವೇಕನ 'ಅತ್ಯಾಚಾರ'ಕ್ಕೆ ಬಲಿಯಾಗಿ, ಮಾನಸಿಕ ರೋಗದಿಂದ ನರಳಿದರೆ, ಈ ಕಾದಂಬರಿಯಲ್ಲಿ, ಅಕ್ಬರ್‌ನು ಆಕಸ್ಮಿಕ ಘಟನೆಯನ್ನು ಬಳಸಿಕೊಂಡು ತಾರಾಳನ್ನು ಚುಂಬಿಸಿ ಆಘಾತ ನೀಡಿದ್ದಾನೆ. ಸಾಂಪ್ರದಾಯಿಕ ಚೌಕಟ್ಟುಗಳಲ್ಲಿ ಬೆಳೆಯುವ ತಾರಾಳಂತಹ ಹುಡುಗಿಯರು ಭ್ರಮೆಗೆ ಒಳಗಾಗುವ ಘಟನೆಗಳು ಕೆಲವೊಮ್ಮೆ ವಿಚಿತ್ರವಾಗಿರುತ್ತವೆ ಯೆಂಬುದಕ್ಕೆ ಕಾದಂಬರಿ ಸಾಕ್ಷಿಯಾಗಿದೆ.

ತ್ರಿವೇಣಿಯವರು ರಚಿಸಿದ ಮನೋವಿಶ್ಲೇಷಣಾತ್ಮಕ ಕಾದಂಬರಿಗಳ ಹಿನ್ನೆಲೆಯಲ್ಲಿ, ಮನೋರೋಗಿಗಳ ಬಗ್ಗೆ ಅವರಿಗಿರುವ ಆಸ್ಥೆ ಮತ್ತು ಕಾಳಜಿಗಳನ್ನು ಗುರುತಿಸಬಹುದಾಗಿದೆ. ಬದುಕಿನ ವಿನ್ಯಾಸವನ್ನು ಗುರುತಿಸಲು ಮನಃಶಾಸ್ತ್ರದ ಆಯಾಮದೊಂದಿಗೆ ಸಾಮಾಜಿಕ ವಿಧಿನಿಷೇಧಗಳ ಆಯಾಮವನ್ನು ಗುರುತಿಸಲು ಕಾದಂಬರಿಗಳು ಪ್ರಯತ್ನಿಸಿವೆ ಎಂಬುದು ಮುಖ್ಯವಾಗಿದೆ.

## ೭.೫ ವಾಸ್ತವವಾದ ಮಾದರಿ

ಮಹಿಳೆಯರು ಬರವಣಿಗೆ ಪ್ರಾರಂಭಿಸಿದ ಮೊದಲ ಹಂತದಲ್ಲಿ ಬ್ರಾಹ್ಮಣ ಮನೆತನದ ಮಹಿಳೆಯರ ಸಮಸ್ಯೆಗಳು, ಸಾಹಿತ್ಯದ ಕೇಂದ್ರ ಪ್ರಜ್ಞೆಯಲ್ಲಿದ್ದವು. ಎಪ್ಪತ್ತೈದರ ದಶಕದ ನಂತರ ಹಿಂದುಳಿದ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದ ವರ್ಗದಿಂದ; ಅಲ್ಪಸಂಖ್ಯಾತ ವರ್ಗದಿಂದ ಬಂದ ಕೆಲವು ಮಹಿಳೆಯರು ಬರಹಕ್ಕೆ ತೊಡಗಿಸಿಕೊಂಡರು. ಆಯಾ ವರ್ಗದ ಸಾಂಸ್ಕೃತಿಕ ಒಳ ಆವರಣವನ್ನು ಗ್ರಹಿಸಲು ಲೇಖಕಿಯರ ಕೃತಿಗಳು ಮಹತ್ವದ ಪಾತ್ರವಹಿಸಿವೆ.

### ೭.೫.೧ ಧಾರ್ಮಿಕ ಚೌಕಟ್ಟಿನಲ್ಲಿ ತಲಾಖ್ ತಂದೊಡ್ಡುವ ವಾಸ್ತವ ಚಿತ್ರಣ

ಮುಸ್ಲಿಂ ಜನಾಂಗದ ಮಹಿಳೆಯರು ಸಾಹಿತ್ಯ ಲೋಕಕ್ಕೆ ಪ್ರವೇಶಿಸಿರುವುದರಿಂದ, ಕನ್ನಡ ಸಾಹಿತ್ಯಕ್ಕೆ

ಮುಸ್ಲಿಂ ಜನಾಂಗದ ಬದುಕು ಮತ್ತು ಧಾರ್ಮಿಕ ಸಂಸ್ಥೆಯಲ್ಲಿ ಹೆಣ್ಣಿನ ತಲ್ಲಣಗಳು ಪರಿಚಯವಾದಂತಾಗಿದೆ. ಬಂಡಾಯ ಮನೋಭೂಮಿಕೆಯನ್ನು ಹಿನ್ನೆಲೆಯಾಗಿಟ್ಟುಕೊಂಡು, ಹೆಣ್ಣಿನ ಮೇಲಾಗುವ ಶೋಷಣೆ, ಕ್ರೌರ್ಯ, ಹಿಂಸೆ, ಸಂಕಟಗಳನ್ನು ಮುಸ್ಲಿಂ ಲೇಖಕಿಯರು ಅನಾವರಣ ಗೊಳಿಸಿದ್ದಾರೆ. ಜತೆಗೆ ಬದುಕಿನ ಅದಮ್ಯ ಚೈತನ್ಯವನ್ನು, ಪ್ರೀತಿಯನ್ನು ಅವರ ಕೃತಿಗಳು ಹುಟ್ಟು ಹಾಕಿವೆ. ಮುಸ್ಲಿಂ ಜನಾಂಗದ ಕೆಲವು ವಾಸ್ತವ ಸಂಗತಿಗಳನ್ನು ಚರ್ಚಿಸಲು ಸಾರಾ ಅಬೂಬ್‌ಕರ್‌ವರ 'ಚಂದ್ರಗಿರಿಯ ತೀರದಲ್ಲಿ' ಮತ್ತು 'ಸಹನಾ' ಕಾದಂಬರಿಗಳೆರಡನ್ನು ಪ್ರಾತಿನಿಧಿಕವಾಗಿ ಆಯ್ದುಕೊಳ್ಳಲಾಗಿದೆ.

ಎಲ್ಲ ಧರ್ಮ-ಜಾತಿಗಳಲ್ಲಿಯೂ ಹೆಣ್ಣಿಗಿರುವ ಸಾಮಾಜಿಕ ನಿಬಂಧನೆಗಳೊಂದಿಗೆ, ಮುಸ್ಲಿಂ ಮಹಿಳೆಯರಿಗಿರುವ ಭಿನ್ನ ಸಮಸ್ಯೆಗಳನ್ನು ಸಾರಾ ಅಬೂಬಕ್ಕರ್ ಅವರು ತಮ್ಮ ಕೃತಿಗಳಿಗೆ ವಸ್ತುವನ್ನಾಗಿ ಆಯ್ದುಕೊಂಡಿದ್ದಾರೆ. ಸಾರಾರವರು ಸೇರಿದಂತೆ ಅನೇಕ ಮುಸ್ಲಿಂ ಬರಹಗಾರರು, ಧಾರ್ಮಿಕ ಶೋಷಣೆಯನ್ನು ಬಹಿರಂಗಗೊಳಿಸಿದ ಕಾರಣಕ್ಕೆ, ಇಸ್ಲಾಂಧರ್ಮ ಬಾಂಧವರಿಂದ ನಿಂದನೆಗೆ, ಧಾರ್ಮಿಕ ಬಹಿಷ್ಕಾರಕ್ಕೂ ಒಳಗಾಗಿದ್ದಾರೆ. ಒಂದು ದೇಶದ ಸಂವಿಧಾನ ಕಾನೂನುಗಳಿಗಿಂತ, ಧಾರ್ಮಿಕ ಮತ್ತು ಸಾಂಪ್ರದಾಯಿಕ ನಂಬಿಕೆ-ಆಚರಣೆಗಳು ಜನರ ಮೇಲೆ ಹೆಚ್ಚು ಪ್ರಭಾವ-ಪರಿಣಾಮವನ್ನು ಬೀರುತ್ತವೆ. ಸಾರಾರವರು ತಮ್ಮ ಪ್ರಾಮಾಣಿಕತೆಯ ಬರಹಗಳಿಂದ ಗಮನ ಸೆಳೆಯುತ್ತಾರೆ. ಪಿತೃಪ್ರಧಾನ ವ್ಯವಸ್ಥೆ ಮತ್ತು ಧಾರ್ಮಿಕ ಸಂಸ್ಥೆಯ ಸಂಕೋಲೆಗಳ ಸರಮಾಲೆಯಲ್ಲಿ ಸಿಕ್ಕಿ ನರಳುವ ಹೆಣ್ಣುಗಳ ಬದುಕನ್ನು ಸಾರಾರವರು ಮುಂದಿಟ್ಟಿದ್ದಾರೆ.

ಗಂಡಿಗೆ ಅನ್ವಯಿಸದ ಕಟ್ಟುಪಾಡು-ಆಚರಣೆಗಳು ಹೆಣ್ಣಿಗಷ್ಟೇ ಅನ್ವಯಿಸುವ ಅಸಮಾನತೆಯನ್ನು ಕಾದಂಬರಿಕಾರರು ಪ್ರಶ್ನಿಸುತ್ತಾರೆ. 'ಚಂದ್ರಗಿರಿಯ ತೀರದಲ್ಲಿ' ಕಾದಂಬರಿಯು 'ತಲಾಖ್' ತಂದೊಡ್ಡುವ ಸಮಸ್ಯೆಯನ್ನು ಕೇಂದ್ರವಾಗಿರಿಸಿಕೊಂಡಿದ್ದರೆ, 'ಸಹನಾ' ಕಾದಂಬರಿಯಲ್ಲಿ ಹೆಣ್ಣು ಬಯಸಿದರೂ ಗಂಡು ತಲಾಖ್ ನೀಡದೆ, ಆಕೆಯನ್ನು ನಿಯಂತ್ರಣದಲ್ಲಿಟ್ಟುಕೊಳ್ಳುವ, ಸತಾಯಿಸುವ ಕೃತ್ಯವನ್ನು ಮನಗಾಣಿಸಲಾಗಿದೆ.

ಮೊದಲ ಕಾದಂಬರಿಯಲ್ಲಿ ದುರಂತ ನಾಯಕಿ ನಾದಿರಾ ಧಾರ್ಮಿಕ ಸಂಪ್ರದಾಯಗಳನ್ನು, ತಂದೆಯ ಯಜಮಾನಿಕೆಯ ಆಜ್ಞೆಯನ್ನು ಮೀರಲಾಗದೆ ಸಂದಿಗ್ಧಕ್ಕೆ ಸಿಲುಕಿ ಚಂದ್ರಗಿರಿ ನದಿಗೆ ತನ್ನನ್ನು ಒಪ್ಪಿಸಿಕೊಳ್ಳುತ್ತಾಳೆ. ಕಾದಂಬರಿಯು, ಮೊದಲ ಗಂಡನಿಂದ ತಲಾಖ್ ಪಡೆದು, ನಂತರ ಮತ್ತೆ ಅದೇ ಗಂಡನನ್ನು ಮದುವೆಯಾಗಲು ಇರುವ ಧಾರ್ಮಿಕ ತೊಡಕುಗಳು ಹೆಣ್ಣಿಗೆ ಮಾರಕವಾಗಿರುವುದನ್ನು ಪರಿಣಾಮಕಾರಿಯಾಗಿ ನಿರೂಪಿಸಿದೆ. ನಾದಿರಾ ಮತ್ತು ರಶೀದ್ ಇವರಿಬ್ಬರದು ಅನುರೂಪದ ದಾಂಪತ್ಯ. ನಾದಿರಾಳ ಸುಖಸಂಸಾರಕ್ಕೆ ಹುಳಿ ಹಿಂಡುವ ಕ್ರಿಯೆ, ಅವಳ ತಂದೆ ಮಹಮದ್ ಖಾನ್‌ರಿಂದ ಶುರುವಾಗಿದೆ. ನಾದಿರಾಳ ತಂಗಿ ಜುಲೇಕಾಳ ಮದುವೆಗಾಗಿ ಎರಡು ಸಾವಿರ ಜೋಡಿಸಿಕೊಡಲು ಖಾನರು ಕೇಳಿದಾಗ, ರಶೀದ್‌ಗೆ ಅಷ್ಟು ಮೊತ್ತದ ಹಣವನ್ನು ದೊರಕಿಸುವುದು ತನ್ನಿಂದಾಗದೆಂದು ತಿಳಿಸುತ್ತಾನೆ. ನಿರಾಸೆಯೊಂದಿಗೆ ಕೋಪವುಕ್ಕಿದ ಖಾನರು ನಾದಿರಾಳನ್ನು-ಮಗುವನ್ನು,

ಅವನಿಗೆ ತಿಳಿಸದಂತೆ ಮನೆಗೆ ಕರೆದೊಯ್ಯುತ್ತಾರೆ. ತಮ್ಮ ಸೇಡನ್ನು ಸಾಧಿಸಲು, ಕರೆತಂದ ಮಗಳನ್ನು ಮರಳಿ ಗಂಡನ ಮನೆಗೆ ಕಳಿಸುವುದಿಲ್ಲ. ನಾದಿರಾಳ ಒಡವೆಯನ್ನು ಒತ್ತೆಯಿಟ್ಟು ಜುಲೇಕಾಳ ಮದುವೆ ಮಾಡಲಾಗುತ್ತದೆ. ಕಾದಂಬರಿಯಲ್ಲಿ ನಾದಿರಾ ತಂದೆಯ ಸಿಟ್ಟು-ಕ್ರೌರ್ಯಗಳನ್ನು ಬಲ್ಲವಳು. ರಶೀದ್ ಪತ್ರದ ಮುಖೇನ ತಂದೆ ಮನೆ ಬಿಟ್ಟುಬರಲು ಸೂಚಿಸಿದರೂ, ನಾದಿರಾ ಹಾಗೆ ಮಾಡದಿರಲು ಇರುವ ಕಾರಣವನ್ನು ಆಲೋಚಿಸುತ್ತಾಳೆ. "ಎಂದಾದರೂ ಸಾಧ್ಯವೇ? ತಾನು ತನ್ನ ತಂದೆಗೆ ತಿಳಿಯದೆ ಈ ಚಂದ್ರಗಿರಿಯನ್ನು ದಾಟುವುದು ಎಂದಾದರೂ ಸಾಧ್ಯವೆ? ಮುಸ್ಲಿಂ ಹೆಣ್ಣುಮಕ್ಕಳು ಹೆಂಗಸರು ಎಷ್ಟೊಂದು ಅಬಲೆಯರೂ ಅಸಹಾಯಕರೂ ಆಗಿದ್ದಾರೆ? ತನ್ನ ಗಂಡನೇ ಬಂದು ನದಿಯಾಚೆ ನಿಂತು ಕರೆಯುತ್ತಿದ್ದರೂ ತಾನು ತನ್ನ ತಂದೆಯ ಕಣ್ಣು ತಪ್ಪಿಸಿ ಆತನ ಬಳಿ ಹೋಗುವಂತಿಲ್ಲ" (ಚಂದ್ರಗಿರಿಯ ತೀರದಲ್ಲಿ, ಪುಟ-೨೩) ಎಂಬುದನ್ನು ಅರಿತು ಕೊರಗಲು ಶುರು ಮಾಡುತ್ತಾಳೆ.

ಇದಾವುದನ್ನು ಲೆಕ್ಕಿಸದ ಮಹಮದ್ ಖಾನರು, ಮಗುವನ್ನು ಕರೆದೊಯ್ದ ನೆಪದಿಂದ, ನಾದಿರಾಳಿಗೆ ತಿಳಿಸದಂತೆ ರಶೀದನ ತಲಾಖ್‌ನ್ನು ಪಡೆದು ಬರುತ್ತಾನೆ. ಕಾದಂಬರಿಯ ಮುಖ್ಯ ಸಮಸ್ಯೆ ಪ್ರಾರಂಭವಾಗುವುದು ಇಲ್ಲಿಂದಲೇ. ನಾದಿರಾಳಿಗೆ ತಲಾಖ್ ನೀಡಿದ ರಶೀದನ ಮೇಲೆ, ತಂದೆಯ ಮೇಲೆ ಜಿಗುಪ್ಸೆಯುಂಟಾಗುತ್ತದೆ. ಸುಂದರ ಬದುಕಿನ ಕನಸುಗಳ ಮಧುರ ಭಾವನೆಗಳು ಮುರುಟಿ ಹೋಗುತ್ತವೆ. ಮತ್ತೊಂದು ಮದುವೆಯ ಮಾತೆತ್ತಿದಾಗ, ಮೊದಲ ಬಾರಿಗೆ ತಂದೆಯ ಎದುರಿಗೆ ನಿಂತು, ಆ ಮದುವೆಯನ್ನು ನಿರಾಕರಿಸುವ ಧ್ವನಿ ಎತ್ತುತ್ತಾಳೆ. ಕೊನೆಗೆ ಅನಾರೋಗ್ಯದಿಂದ ನರಳುವ ಖಾನರ ಮನಸ್ಸೂ ಪ್ರಾಯಶ್ಚಿತ್ತಕ್ಕೆ ತಿರುಗುತ್ತದೆ. ಅವಳ ಒಪ್ಪಿಗೆ ಇಲ್ಲದೆ ಮತ್ತೊಂದು ಮದುವೆ ಮಾಡುವಂತಿಲ್ಲ. ಬೇರಾರನ್ನು ಮದುವೆಯಾಗದೆ ತನಗಾಗಿ ಕಾಯುತ್ತಿರುವ ರಶೀದನೊಂದಿಗೆ ಸೇರಲು ನಾದಿರಾಳಿಗೆ ಮನೆಯವರ ಒಪ್ಪಿಗೆ ದೊರೆಯುತ್ತದೆ. ಆದರೆ ಒಮ್ಮೆ ತಲಾಖ್‌ನ್ನು ಪಡೆದ ಗಂಡನೊಂದಿಗೆ ಮರುಮದುವೆಯಾಗಲು ಇರುವ ಧಾರ್ಮಿಕ ತೊಡಕು ಎದುರಾಗುತ್ತದೆ.

"ಕುರ್‌ಆನಿನಲ್ಲಿ ಏನಿದೆಯೆಂದರೆ ಒಮ್ಮೆ ಒಬ್ಬನು ತನ್ನ ಹೆಂಡತಿಯ ತಲಾಕನ್ನು ಮೂರು ಸಲ ಹೇಳಿದರೆ ಅಲ್ಲಿಗೆ ಆ ಗಂಡ ಹೆಂಡತಿಯ ಸಂಬಂಧ ಸಂಪೂರ್ಣ ಕೊನೆಗೊಂಡಿತು. ಪುನಃ ಅವರು ಒಂದಾಗಬೇಕಾದರೆ ಆಕೆ ಬೇರೊಬ್ಬನನ್ನು ಮದುವೆಯಾಗಿ ಅವನಿಂದಲೂ ತಲಾಕ್ ಪಡೆದಿರಬೇಕು. ಹಾಗೆ ಅವಳು ಬೇರೊಬ್ಬನನ್ನು ಮದುವೆಯಾಗಿಲ್ಲದಿದ್ದರೆ ಒಂದು ದಿನಕ್ಕಾದರೂ ಒಬ್ಬನನ್ನು ಮದುವೆಯಾಗಬೇಕು; ಒಂದು ರಾತ್ರಿಯನ್ನು ಅವನ ಜೊತೆಯಲ್ಲಿ ಕಳೆಯಬೇಕು. ಮರುದಿನ ಅವನಿಂದ ತಲಾಕ್ ಹೇಳಿಸಿಕೊಂಡು ಮೂರು ತಿಂಗಳು ಕಾಯಬೇಕು. ಗರ್ಭವೇನಾದರೂ ನಿಂತಿದೆಯೋ ಎಂದು ರುಜುವಾತುಪಡಿಸಿಕೊಳ್ಳಲು. ಇಲ್ಲ ಎಂದು ನಿಶ್ಚಯವಾದ ಮೇಲೆ ಆ ಮೊದಲ ಗಂಡನು ಅವಳನ್ನು ಮದುವೆಯಾಗಬಹುದು. ಇದು ಇಸ್ಲಾಂ ಧರ್ಮಶಾಸ್ತ್ರ. ಇದನ್ನು ಮೀರುವಂತೆಯೇ ಇಲ್ಲ" (ಅದೇ, ಪುಟ-೪೯) ಎಂಬ ಕಟ್ಟಳೆ ನಾದಿರಾಳ ಬದುಕನ್ನು ಕೊನೆಗಾಣಿಸುವಂತೆ ಮಾಡುತ್ತದೆ.

ಮದುವೆಯಾದ ಒಂದು ರಾತ್ರಿಯ ನೆನಪಿಗೆ ತತ್ತರಿಸಿದ ನಾದಿರಾಗೆ ಬಸಿರಾಗಿ ಮಗುವಾದರೆ ಹೇಗೆಂಬ ಆತಂಕವಾಗುತ್ತದೆ. ಅಕಸ್ಮಾತ್ ಬಸಿರಾದರೆ, ಮಗು ಹುಟ್ಟುವವರೆಗೂ ಮತ್ತೊಂದು ಮದುವೆಯಾಗಲು ಸಾಧ್ಯವಿಲ್ಲವೆಂಬ ಮಾತಿಗೆ ಮತ್ತಷ್ಟು ಕುಸಿದು, ಚಡಪಡಿಸತೊಡಗುತ್ತಾಳೆ. ರಶೀದನನ್ನು ಸೇರಬಹುದೆಂಬ ಬಯಕೆಯಿಂದ ಎರಡನೇ ಮದುವೆಗೆ ಒತ್ತಾಯಪೂರ್ವಕವಾಗಿ ಒಪ್ಪುತ್ತಾಳೆ. ಆದರೆ, ತನಗೊಪ್ಪಿಗೆಯಿಲ್ಲದ ಗಂಡಿನೊಡನೆ ಒಂದು ರಾತ್ರಿ ಕಳೆಯುವ ಯೋಚನೆ ಅಸಹನೀಯವಾಗಿ ತೋರುತ್ತದೆ. ಆ ಯೋಚನೆಯಿಂದ ನಡುಗಿ ಹೋದ ನಾದಿರಾ ಬೇರೊಬ್ಬನನ್ನು ಮದುವೆಯಾದ ರಾತ್ರಿ ಚಂದ್ರಗಿರಿ ನದಿಗೆ ಹಾರಿ ಬದುಕಿಗೆ ಅಂತ್ಯವನ್ನು ಹಾಡುತ್ತಾಳೆ. ಚಂದ್ರಗಿರಿ ನದಿ ನಾದಿರಾಳ ಸುಖ-ದುಃಖಗಳಿಗೆ ಸಾಕ್ಷಿಯಾಗುತ್ತದೆ. ಯಾವ ತಪ್ಪೂ ಮಾಡದೆ, ತಂದೆಯ ಕ್ರೌರ್ಯ ಮತ್ತು ಧಾರ್ಮಿಕ ಕಟ್ಟಳೆಗೆ ಸಿಲುಕಿದ ನಾದಿರಾಳ ಅಸಹಾಯಕತೆ, ಆತ್ಮಹತ್ಯೆ ಪ್ರಕರಣ ಗಾಢ ವಿಷಾದವನ್ನು ಮೂಡಿಸುತ್ತದೆ.

'ಮುಸ್ಲಿಂ ಹುಡುಗಿ ಶಾಲೆ ಕಲಿತದ್ದು' ಎಂಬ ಲೇಖನದಲ್ಲಿ ಸಾರಾರವರು ತಮ್ಮ ಪ್ರಾಯದವಳೇ ಆದ ಮನೆಯ ಕೆಲಸದ ಹುಡುಗಿಯ ವಾಸ್ತವ ಬದುಕಿನ ಕತೆಯನ್ನು ಆಧರಿಸಿ 'ಚಂದ್ರಗಿರಿಯ ತೀರದಲ್ಲಿ' ಎಂಬ ಕಾದಂಬರಿಯನ್ನಾಗಿ ರಚಿಸಿರುವುದಾಗಿ ಹೇಳಿಕೊಂಡಿದ್ದಾರೆ. ಕಾದಂಬರಿಕಾರರು 'ಖುರ್‌ಆನ್' ಶ್ಲೋಕಗಳ ಉಲ್ಲೇಖಗಳ್ನು ಸಮರ್ಥನೀಯವಾಗಿ ಬಳಸಿಕೊಂಡಿದ್ದಾರೆ.

'ಸಹನಾ' ಕಾದಂಬರಿಯಲ್ಲಿ ಕೂಡ ಕಾದಂಬರಿಕಾರರು ತಮ್ಮೂರಿನಲ್ಲಿ ನಡೆದ ರೋಗಿಷ್ಟ ಹೆಣ್ಣಿನ ಕತೆಯನ್ನು ಆಧರಿಸಿದ್ದಾರೆ. ನಿಜ ಜೀವನದಲ್ಲಿ 'ನಸೀಮಾ' ಅಸುನೀಗಿದರೆ, ಕಾದಂಬರಿಯಲ್ಲಿ ಬದುಕನ್ನು ದಿಟ್ಟವಾಗಿ ಎದುರಿಸುವ ಎದೆಗಾರಿಕೆಯ ಹೆಣ್ಣನ್ನಾಗಿ, ಕೊಂಚ ಬದಲಾವಣೆಯನ್ನು ಮಾಡಿಕೊಂಡಿರುವುದನ್ನು 'ಮುನ್ನುಡಿ'ಯಲ್ಲಿ ಪ್ರಸ್ತಾಪಿಸಿದ್ದಾರೆ. 'ಖುರ್‌ಆನ್'ನಲ್ಲಿ ಪ್ರಸ್ತಾಪಿಸಲ್ಪಡುವ ಬಹುಪತ್ನಿತ್ವದ ಅವಕಾಶದಿಂದಾಗಿ, ಗಂಡು ಹೆಣ್ಣಿನ ಮೇಲೆ ನಡೆಸುವ ದಬ್ಬಾಳಿಕೆಯ ಚಿತ್ರಣವಿದೆ. ಹೆಂಡತಿ ರೋಗಿಷ್ಟೆಯಾಗಿದ್ದಾಗ, ಗಂಡ ಮತ್ತೊಂದು ಮದುವೆಯಾಗಬಹುದು. ಆದರೆ ಅದೇ ಅವಕಾಶ ಹೆಣ್ಣಿನ ಪಾಲಿಗೆ ಇಲ್ಲದಿರುವುದನ್ನು ಕಾದಂಬರಿಕಾರರು ಪ್ರಶ್ನಿಸಿದ್ದಾರೆ. 'ಖುರ್‌ಆನ್'ನ್ನು ಬಳಸಿಕೊಂಡು ಹೇಗೆ ಹೆಣ್ಣಿನ ಮೇಲೆ ದಬ್ಬಾಳಿಕೆ ನಡೆಸುತ್ತಾರೋ, ಹಾಗೇ ಅದೇ ಗ್ರಂಥದ ಉಲ್ಲೇಖಗಳನ್ನು ಬಳಸಿಕೊಂಡು, ಗಂಡನಿಗಿರುವ ಬಾಧ್ಯತೆಗಳನ್ನು, ಕರ್ತವ್ಯಗಳನ್ನು ಕಾದಂಬರಿಕಾರರು ಮನವರಿಕೆ ಮಾಡಲು ಯತ್ನಿಸಿದ್ದಾರೆ.

ಆಯ್ಕೆ ಮಾಡಿಕೊಂಡಿರುವ ಎರಡು ಕಾದಂಬರಿಗಳಲ್ಲೂ ಕೃತಿಕಾರರು ಬಡ-ಕೂಲಿ ಕಾರ್ಮಿಕ ವರ್ಗದಲ್ಲಿರುವ ಮುಸ್ಲಿಂ ಹೆಣ್ಣುಗಳ ಸಮಸ್ಯೆಯನ್ನು ಕೈಗೆತ್ತಿಕೊಂಡಿದ್ದಾರೆ. ಕುಟುಂಬದ ಜವಾಬ್ದಾರಿಯನ್ನು ನಿರ್ವಹಿಸುವುದು, ಮಕ್ಕಳನ್ನು ಸಾಕಿ-ಸಲಹುವ ಕ್ರಿಯೆ ಹೆಣ್ಣುಮಕ್ಕಳದೇ ಆಗಿದೆ. ಬಡ-ಕುಟುಂಬಗಳ ಆರ್ಥಿಕ ಚಟುವಟಿಕೆಗಳಲ್ಲಿ, ಮನೆಯಲ್ಲಿಯೇ ಕುಳಿತು ಬೀಡಿ ಕಟ್ಟುವ ಮಹಿಳೆಯರು ಕುಟುಂಬದ ಆರ್ಥಿಕ ಹೊಣೆ ನಿಭಾಯಿಸುವ ಬಹುಮುಖ್ಯ ಆಧಾರ ಸ್ತಂಭವಾಗಿದ್ದಾರೆ. 'ಚಂದ್ರಗಿರಿಯ ತೀರದಲ್ಲಿ' ಕಾದಂಬರಿಯಲ್ಲಿ ನಾದಿರಾ, ಇನ್ನು ತನ್ನನ್ನು ಗಂಡನ ಮನೆಗೆ ತಂದೆ ಕಳಿಸುವುದಿಲ್ಲವೆಂಬ ಸಂಗತಿ

ತಿಳಿದಾಗ, ನೋವು ಮರೆಯಲು ಮತ್ತು ಸಮಯ ಕಳೆಯಲು ಬೀಡಿ ಕಟ್ಟತೊಡಗುತ್ತಾಳೆ. ಇದರಿಂದ ಖಾನರಿಗೆ ಆರ್ಥಿಕ ಬಲವುಂಟಾಗುತ್ತದೆ. 'ಸಹನಾ' ಕೃತಿಯಲ್ಲಿ ನಸೀಮಾ ಮದುವೆಯಾಗಲು, ಬೀಡಿ ಕಟ್ಟುವುದು ಒಂದು ಪ್ರಮುಖ ಅರ್ಹತೆಯ ಆದ್ಯತೆಯಾಗುತ್ತದೆ. ಮುಂದೆ ಹಾಸಿಗೆ ಹಿಡಿದು, ಬೀಡಿ ಕಟ್ಟುವ ಕೆಲಸ ಬಿಟ್ಟಾಗ, ಮನೆಯಲ್ಲಿ ಅತ್ತೆಯ ತಿರಸ್ಕಾರಕ್ಕೆ; ಪಾಷಾನು ಮತ್ತೊಂದು ಮದುವೆಯಾಗಲು ಕಾರಣವಾಗುತ್ತದೆ.

'ಸಹನಾ' ಕಾದಂಬರಿಯಲ್ಲಿ ನಾಯಕಿ ನಸೀಮಾ, ಬಡತನದ ವಾತಾವರಣದಲ್ಲಿಯೂ ಸ್ವಚ್ಛಂದವಾಗಿ ಬೆಳೆದವಳು. ಗೇರುಬೀಜ, ಮಾವಿನಕಾಯಿ ಕಿತ್ತು ತಿನ್ನುವುದು, ಮರವಾಯಿ ಚಿಪ್ಪಿನಿಂದ ಮೀನನ್ನು ಬೇರ್ಪಡಿಸಿ ಸಾರು ಮಾಡುವುದು, ನಸೀಮಾಳಿಗೆ ಬಹು ಇಷ್ಟವಾದ ಸಂಗತಿ. ನಾಲ್ಕನೇ ತರಗತಿಗೆ ನಸೀಮಾಳ ತಾಯಿ ಸಕೀನ ಶಾಲೆ ಬಿಡಿಸುತ್ತಾಳೆ. ಹದಿಮೂರು ವರ್ಷಕ್ಕೆ ಮದುವೆಯಾಗಿ, ಹದಿನಾಲ್ಕನೇ ವರ್ಷಕ್ಕೆ ನಸೀಮಾ ತಾಯಿಯೂ ಆಗುತ್ತಾಳೆ. ಮಗುವಿನೊಡನೆ ಆಡಲು, ಮೊಲೆಯೂಡಿಸಲು ಆಕೆಗೆ ಸಮಯವೇ ಇಲ್ಲ. ಮನೆ ಕೆಲಸ, ಬೀಡಿಕಟ್ಟುವ ಕೆಲಸದ ಮಧ್ಯೆ ಬಿಡುವಿಲ್ಲದ ದುಡಿತ. ಅತ್ತೆ ಕತೀಜಮ್ಮಳ ಮೌಢ್ಯತನದಿಂದಾಗಿ ಮಗು ಬೀಬಿಗೆ ಜ್ವರ ಬಂದಾಗ, ಚಿಕಿತ್ಸೆ ಕೊಡಿಸದೆ ಅದು ಸತ್ತು ಹೋಗುತ್ತದೆ. ಮುಂದೆ ನಸೀಮಾಳ ಕ್ಷಯ ರೋಗದ ಉಲ್ಬಣಕ್ಕೂ, ಅಂತಹ ಅಜ್ಞಾನವೇ ಅಡಿಪಾಯವಾಗಿರುವುದನ್ನು ಕಾದಂಬರಿ ಸೂಕ್ಷ್ಮವಾಗಿ ಅವಲೋಕಿಸಿದೆ. ಸರಿಯಾದ ಸಮಯಕ್ಕೆ ಆಸ್ಪತ್ರೆಗೆ ಸೇರಿಸದೇ, ಚಿಕಿತ್ಸೆ ಕೊಡಿಸದೇ, ಮೌಲ್ವಿಯವರಿಂದ 'ತಟ್ಟೆಯಲ್ಲಿ ಬರೆಸಿ' ಕುಡಿಸುವುದರಿಂದ ಆಗುವ ಅನಾಹುತನವನ್ನು ಮುಂದಿಡಲಾಗಿದೆ.

ಮಗುವನ್ನು ಕಳೆದುಕೊಂಡು ನೋವಿನಲ್ಲಿಯೇ ಮತ್ತೆ ಎರಡು ಮಕ್ಕಳ ತಾಯಿಯಾಗುತ್ತಾಳೆ. ಮಗಳು ರೋಸಿಯನ್ನು ಮತ್ತು ಮಗ ಇಕ್ಬಾಲನನ್ನೂ ನೋಡಿಕೊಳ್ಳುವಾಗ, ಕತೀಜಮ್ಮ ತಾರತಮ್ಯವೆಸಗುತ್ತಾರೆ. ಹೆಣ್ಣು ಎಂಬ ಕಾರಣಕ್ಕೆ ರೋಸಿಗೆ ತನ್ನ ಪಾಲು ದೊರೆಯುವುದಿಲ್ಲ. ವಂಶೋದ್ಧಾರಕನೆಂಬ ನೆಪದಲ್ಲಿ ಗಂಡು ಮಗುವಿಗೆ ವಿಶೇಷ ಉಪಚಾರ ಲಭ್ಯವಾಗುತ್ತದೆ. ಚಿಕ್ಕ ವಯಸ್ಸಿನಲ್ಲಿ ತಾಯಿಯಾದ ನಸೀಮಾ ದೆಹಿಕ ದುರ್ಬಲತೆ ಮತ್ತು ಮಗುವನ್ನು ಕಳೆದುಕೊಂಡ ಮಾನಸಿಕ ವೇದನೆಯಿಂದ ನರಳುತ್ತಾ ಹೋಗುತ್ತಾಳೆ. ಆಸ್ಪತ್ರೆಗೆ ತೋರಿಸದೆ, ಕ್ಷಯರೋಗ ಉಲ್ಬಣಿಸುತ್ತಾ ಹೋದಾಗ ಪಾಷಾ ಮತ್ತೊಂದು ಮದುವೆಯಾಗುತ್ತಾನೆ. ಕಾದಂಬರಿಯ ಉತ್ತರಾರ್ಧದಲ್ಲಿ ಸತ್ತು ಬದುಕಿದ ನಸೀಮಾ ಕೈಗೊಳ್ಳುವ ನಿರ್ಧಾರ, ಕ್ರೂರ ವ್ಯವಸ್ಥೆಗೆ ಎದುರಾಗಿ ನಿಂತು ಪ್ರತಿಭಟಿಸುವ ನಿಲುವು ಪರಿಣಾಮಕಾರಿಯಾಗಿ ಮೂಡಿಬಂದಿದೆ.

ತಾಯಿ ಸಕೀನ, ನಸೀಮಾಳನ್ನು ಆಸ್ಪತ್ರೆಗೆ ಸೇರಿಸಿ, ಸೂಕ್ತ ಆರೈಕೆ ಮಾಡಿದ ಮೇಲೆ ಚೇತರಿಸಿಕೊಂಡು ನವ ತರುಣಿಯಂತಾಗುತ್ತಾಳೆ. ತನ್ನನ್ನು ಕಡೆಗಣಿಸಿ, ಮತ್ತೊಬ್ಬಳನ್ನು ಪಾಷಾ ಮದುವೆಯಾಗಿ ಬಂದಾಗಿನಿಂದ ನಸೀಮಾ ಆತನ ಬಗ್ಗೆ ಜಿಗುಪ್ಸೆ ತಾಳುತ್ತಾಳೆ. ಸೌಜನ್ಯಕ್ಕಾದರೂ ಆತ ಆರೋಗ್ಯದ

ಬಗ್ಗೆ ಕಾಳಜಿಯನ್ನು ವ್ಯಕ್ತಪಡಿಸುವುದಿಲ್ಲ. ಮಗಳು ರೋಸಿಯನ್ನು ಮಾತಾಡಿಸಲೂ ಬಂದಿರುವುದಿಲ್ಲ. ಈಗ ಆಕೆಯ ಕನಸು, ರೋಸಿಯನ್ನು ವಿದ್ಯಾವಂತಳನ್ನಾಗಿ ಮಾಡಿ ಶಿಕ್ಷಕಿಯನ್ನಾಗಿ ಮಾಡುವುದು.

ಮದುವೆಯಿಂದ ತನಗಾದ ಉಪಯೋಗವೇನು ಎಂಬ ಪ್ರಶ್ನೆ ಆಕೆಯನ್ನು ಕಾಡುತ್ತಲೇ ಇರುತ್ತದೆ. ತಾನು ಚಿಕ್ಕವಳಿದ್ದಾಗ ಕಂಡ ಮೂರು ಕನಸುಗಳಲ್ಲಿ "ಮೊದಲನೆಯದೇನೆಂದರೆ ತಾನು ಒಮ್ಮೆ ದೂರದಿಂದ ಕಂಡ ರೈಲುಗಾಡಿಯಲ್ಲಿ ಕುಳಿತು ಪ್ರಯಾಣ ಮಾಡಿ ಮಂಗಳೂರಿನ ಹತ್ತಿರದ ಉಳ್ಳಾಲದ ಸೈಯದ್ ಮದನಿಯವರ ದರ್ಗಕ್ಕೆ ಹೋಗಬೇಕು. ತಾನು ಶಾಲೆಗೆ ಹೋಗುತ್ತಿದ್ದಾಗ, ತನ್ನ ಗೆಳತಿಯರಲ್ಲಿ ಕೆಲವರು ಅಲ್ಲಿಗೆ ಹೋಗಿ ಬಂದು ತಮ್ಮ ಅನುಭವಗಳನ್ನು ವಿವರಿಸಿದಾಗ ಆಕೆಯ ಮನದಲ್ಲಿ ಚಿಗುರೊಡೆದ ಆಸೆಯದು. ಎರಡನೆಯದು ತಾವೊಂದು ಆಡನ್ನು ಸಾಕಬೇಕು. ಅದರ ಹಾಲನ್ನು ತಾನೇ ಕರೆಯಬೇಕು. ಅದರ ಮರಿಗಳ ಕತ್ತಿಗೆ ಪುಟ್ಟ ಗಂಟೆಗಳನ್ನು ಕಟ್ಟಿ, ಅವು ಅಂಗಳದ ತುಂಬ ಗಂಟೆಗಳ ಸದ್ದು ಮಾಡುತ್ತಾ ಓಡಾಡುವಾಗ ಕೇಳಲು ಎಷ್ಟು ಹಿತವಾಗಿರುತ್ತದೆ! ಮೂರನೆಯ ಆಸೆಯೇನೆಂದರೆ ತನಗೊಂದು ಕೆಂಪು ರೇಷ್ಮೆಯ ಜರಿಯ ಹೂವಿನ ಲಂಗ ಹೊಲಿಸಬೇಕು" (ಸಹನಾ, ಪುಟ–೧೩) ಎಂಬ ಆಸೆಗಳು ಮದುವೆಯ ನಂತರವೂ ಈಡೇರುವುದಿಲ್ಲ.

ಎರಡನೆಯ ಹೆಂಡತಿಯ ನಡವಳಿಕೆಯಿಂದ ಬೇಸತ್ತ ಪಾಷಾ ಆಕೆಗೆ ತಲಾಕ್ ಕೊಟ್ಟು, ಇನ್ನೂ ತಲಾಕ್ ನೀಡದಿದ್ದ ನಸೀಮಾಳನ್ನು ಆರು ವರ್ಷದ ನಂತರ ಮನೆಗೆ ಕರೆದೊಯ್ಯಲು ಬರುತ್ತಾನೆ. ಮೈಕೈ ತುಂಬಿಕೊಂಡು ಮೊದಲಿಗಿಂತ ಆಕರ್ಷಕವಾಗಿ ಕಾಣುತ್ತಿರುವ ಇಪ್ಪತ್ತು ವರ್ಷದ ನಸೀಮಾಳನ್ನು ತೌರು ಮನೆಯಲ್ಲಿಟ್ಟುಕೊಳ್ಳುವುದು ತಾಯಿಗೂ ಸರಿಕಾಣದೆ, ಮರಳಿ ಪಾಷಾನೊಂದಿಗೆ ಕಳಿಸಲು ಹಾತೊರೆದಾಗ "ಉಮ್ಮ, ಅಲ್ಲಿ ಹೋಗಿ ಇನ್ನೊಮ್ಮೆ ನಾನು ಮೇಲೆ ಮೇಲೆ ಗರ್ಭಿಣಿಯಾಗಿ, ಮಕ್ಕಳಾಗಿ, ರೋಗಿಯಾಗಿ ಆಗ ಅಲ್ಲಿ ನೀನೂ ಇಲ್ಲದಿದ್ದರೆ ನನ್ನ ಅವಸ್ಥೆ ಏನಾದೀತೆಂದು ನೀನು ಯೋಚಿಸಿದ್ದೀಯಾ? ಇಲ್ಲ. ನೀವ್ಯಾರೂ ಹಾಗೆ ಯೋಚಿಸಲಾರಿರಿ. ಹೆಣ್ಣಿಗೆ ಭೂಮಿಯಷ್ಟು ಸಹನೆಯಿರಬೇಕೆಂದು ಮಾತ್ರ ನೀವು ಬೋಧಿಸುತ್ತೀರಿ. ಆ ಗಂಡಿನಿಂದಲೇ ಆ ಹೆಣ್ಣು ರೋಗಿಯಾಗಿ ಸತ್ತರೂ ನಿಮ್ಮ ಸಹಾನುಭೂತಿ ಇರುವುದು ಆ ಗಂಡಿನೆಡೆಗೆ. ಹೆಣ್ಣಿನ ಸಂಪರ್ಕವಿಲ್ಲದೆ ಗಂಡು ಎಷ್ಟು ಸಮಯ ತಾನೇ ಬಾಳಲು ಸಾಧ್ಯ ಎಂದು ತಾನೇ ನೀವನ್ನುವುದು? ಯಾಕೆ? ಅವನು ಗಂಡಾಗಿ ಹುಟ್ಟಿದ ಒಂದೇ ಕಾರಣಕ್ಕಾಗಿ, ಇನ್ನೊಮ್ಮೆ ನಾನು ಆ ಮನೆಗೆ ಹೋಗಿ ಅವರ ಜೊತೆ ಬಾಳುವುದು ಸಾಧ್ಯವೇ ಇಲ್ಲ" (ಅದೇ, ಪುಟ–೧೭೦) ಎಂಬ ದೃಢನಿರ್ಧಾರವನ್ನು ಪ್ರಕಟಿಸುತ್ತಾಳೆ. ಎದುರಾಗಿರುವ ಸಮಸ್ಯೆಯನ್ನು ಪರಿಹರಿಸಲು ಕಾನೂನಿನ ಸಹಾಯವನ್ನು ಅಪೇಕ್ಷಿಸಿದರೆ, ಮಕ್ಕಳ ಮೇಲೆ ತಂದೆಗೆ ಸರ್ವಾಧಿಕಾರವಿದ್ದು, ತಲಾಕ್ ನೀಡದಿದ್ದಾಗ, ಮೊದಲನೇ ಹೆಂಡತಿಯನ್ನು ಗಂಡ ಕರೆದಾಗ, ಆತನ ಹಿಂದೆ ಹೋಗಬೇಕೆಂಬ ನಿರಾಶೆಯ ಉತ್ತರ ದೊರೆಯುತ್ತದೆ. ಪಾಷಾನ ಕರೆಯನ್ನು ತಿರಸ್ಕರಿಸುವ ನಸೀಮಾ ಕೆರಳಿದ ಸಿಂಹಿಣಿಯಾಗುತ್ತಾಳೆ. ರೋಗಿಯಾಗಿದ್ದಾಗ ತಿರುಗಿ ನೋಡದೆ, ಈಗ ತಾಯಿ ಮಕ್ಕಳನ್ನು ನೋಡಿಕೊಳ್ಳಲು,

ಪಕ್ಕಕ್ಕೆ ಮಲಗಲು ಒಂದು ಹೆಣ್ಣಿನ ಅಗತ್ಯವಿರುವುದನ್ನು ಕಂಡುಕೊಂಡ ಆತನ ವರ್ತನೆಯನ್ನು ಖಡಾಖಂಡಿತವಾಗಿ ಖಂಡಿಸುತ್ತಾಳೆ.

ಒಂದು ತಿಂಗಳೊಳಗೆ ಬರದಿದ್ದರೆ, ತಾನು ಮತ್ತೊಬ್ಬಳನ್ನು ಮದುವೆಯಾಗುವುದಾಗಿಯೂ ಮತ್ತು ತಲಾಕ್‌ನ್ನು ನೀಡುವುದಿಲ್ಲವೆಂಬ ಬೆದರಿಕೆಯನ್ನು ನಸೀಮಾಳಿಗೆ ಹಾಕಿದಾಗಲೂ ಆಕೆ ಬೆಚ್ಚುವುದಿಲ್ಲ. ಗಂಡು "ತಲಾಕ್ ಎಂದು ಮೂರು ಸಲ ಅಂದು ಬಿಟ್ಟು ಆಕೆಯಿಂದ ಎಲ್ಲ ಬಂಧನವನ್ನು ಕಳಚಿ ಕೊಳ್ಳಬಹುದು. ಆದರೆ ಹೆಂಡತಿಯಾದವಳು ಮಾತ್ರ ಗಂಡನು ಎಂತಹ ತಪ್ಪು ಮಾಡಿದ್ದರೂ, ಆಕೆಗೆ ಎರಡು ಮೂರು ವರ್ಷಗಳವರೆಗೆ ಅನ್ನ ಹಾಕದೇ ಹೋದರೂ ಆ ಬಂಧನದಿಂದ ಕಳಚಿಕೊಳ್ಳುವುದು ಸುಲಭ ಸಾಧ್ಯವಿಲ್ಲ" (ಅದೇ, ಪುಟ-೧೭೬) ಎಂಬ ವಿಶ್ಲೇಷಣೆಯನ್ನು ಕಾದಂಬರಿಕಾರರು ನಸೀಮಾಳ ಮೂಲಕ ಮಂಡಿಸಿದ್ದಾರೆ.

ಹೆಣ್ಣುಮಕ್ಕಳು ತಮ್ಮ ಬಯಕೆಗಳನ್ನು ಬದಿಗೊತ್ತಿ ಜೀವನವಿಡೀ ಗಂಡನಿಗಾಗಿ, ಮನೆಗಾಗಿ ಸಹನೆಯಿಂದ ದುಡಿಯುವುದನ್ನು; ಅನಾರೋಗ್ಯ ಉಂಟಾದಾಗ ಗಂಡ ಮತ್ತು ಮನೆಯವರು ಉಪೇಕ್ಷಿಸುವ ನೀತಿಯನ್ನು ಕಾದಂಬರಿಕಾರರು ಖಂಡಿಸಿದ್ದಾರೆ. ನಸೀಮಾ ಚಿಕ್ಕಂದಿನಲ್ಲಿ ಇಷ್ಟಪಟ್ಟ ಎರಡು ಆಸೆಗಳಲ್ಲಿ; ಉಳ್ಳಾಲದ ದರ್ಗಾಕ್ಕೆ ತಾಯಿ, ಮಾವ, ಮಗಳು, ರೋಸಿಯೊಂದಿಗೆ ರೈಲುಗಾಡಿಯಲ್ಲಿ ಕುಳಿತು ಪುಲಕಗೊಳ್ಳುತ್ತಾಳೆ. ತಾಯಿ ಮನೆಯಲ್ಲಿ ಆಡನ್ನೂ ಸಾಕಿಕೊಳ್ಳುತ್ತಾಳೆ. ಆದರೆ, ಗಂಡನು ತರುವನೆಂದು ಬಯಸಿದ ಜರಿ ಸೀರೆಯ ಕನಸು ನನಸಾಗುವುದಿಲ್ಲ.

ನಸೀಮಾ, ತಾಯಿಯ ರಾಜಿಸೂತ್ರವನ್ನು, ಗಂಡನ ಬೆದರಿಕೆಯನ್ನು ಧಿಕ್ಕರಿಸಿ, ಒಂಟಿಯಾಗಿದ್ದು, ಮಗಳ ಭವಿಷತ್ತನ್ನು ಕಟ್ಟುವ ಛಲ ತೊಡುತ್ತಾಳೆ. ಚಿಕ್ಕದೊಂದು ವ್ಯಾಪಾರದ ಅಂಗಡಿಯನ್ನು ಪ್ರಾರಂಭಿಸಿ, ಮಾವ ಅಬ್ದುಲ್ ಖಾದಿರ್‌ನನ್ನು ಉಸ್ತುವಾರಿಗೆ ಕೂರಿಸಿದ್ದಾಳೆ. ಬೀಡಿ ಕಟ್ಟುತ್ತಾಳೆ. ಪಾಷಾನ ನೆನಪನ್ನು ಮನಸ್ಸಿನಿಂದ ಕಿತ್ತೆಸೆದು ಬದುಕುವ ದಿಟ್ಟ ಹೆಂಗಸಾಗಿ, ಆದರ್ಶ ಪಾತ್ರವಾಗಿ ಕಾಣಿಸಿಕೊಳ್ಳುತ್ತಾಳೆ. ಎಲ್ಲ ನೋವು-ಸಂಕಟಗಳನ್ನು 'ಸಹನಾ'ಮಯಿಯಾಗಿ ಸಹಿಸಿಕೊಳ್ಳದೇ, ಸಾಮಾಜಿಕ-ಧಾರ್ಮಿಕ ತಾರತಮ್ಯದ ವಿರುದ್ಧ ಸಿಡಿದೆದ್ದಾಗ ಮಾತ್ರ, ಹೆಣ್ಣಿಗೆ ನಿಜವಾದ ನ್ಯಾಯ ದೊರಕುತ್ತದೆಂಬ ಸಂದೇಶವನ್ನು 'ಸಹನಾ' ಕಾದಂಬರಿ ಮೂಲಕ ನೀಡಿದ್ದಾರೆ.

ಎರಡು ಕಾದಂಬರಿಗಳಲ್ಲಿ, ತಾವು ಕಂಡ ವಾಸ್ತವ ಘಟನೆಗಳ ಸಮಸ್ಯೆಯನ್ನು ಕೇಂದ್ರ ವಾಗಿರಿಸಿಕೊಂಡ, ಸರಳ-ನೇರ ನಿರೂಪಣೆಯನ್ನು ಕಾಣಬಹುದು. ಮುಖ್ಯ ಪಾತ್ರಗಳ ಮೂಲಕ ತಮ್ಮ ಆಲೋಚನೆಗಳನ್ನು ಸಾಂಪ್ರದಾಯಿಕ ಕಟ್ಟುಪಾಡುಗಳನ್ನು ಪ್ರತಿರೋಧಿಸುವ ಬಂಡಾಯ ಮನೋಭಾವವನ್ನು ಸಾರಾ ಅಬೂಬಕ್ಕರ್‌ರವರು ಪ್ರಕಟಿಸಿದ್ದಾರೆ.

### ೮.೫.೨ ಪ್ರಾದೇಶಿಕ ಚಿತ್ರಣ

ವ್ಯವಸ್ಥೆಯ ವಾಸ್ತವ ಚಿತ್ರಣವನ್ನು ನೀಡುವಾಗ ಬರಹಗಾರರು ಆಯ್ದುಕೊಳ್ಳುವ ವಸ್ತು-ತಂತ್ರ-

ಶೈಲಿಯು ಅವರ ದೃಷ್ಟಿಕೋನವನ್ನು ಅವಲಂಬಿಸಿರುತ್ತದೆ. ಸಾರಾ ಅಬೂಬಕ್ಕರ್‌ರವರು ಮುಸ್ಲಿಂ ಸಮುದಾಯದ ಹೆಣ್ಣು ಮಕ್ಕಳ ವಾಸ್ತವ ಚಿತ್ರಣವನ್ನು ನೀಡಿದರೆ, ಗೀತಾ ನಾಗಭೂಷಣ್‌ರವರು ಕೆಳಜಾತಿ–ವರ್ಗದ ಹೆಣ್ಣುಮಕ್ಕಳ ಶೋಷಣೆಯ ಚಿತ್ರಣವನ್ನು ನೀಡಿದ್ದಾರೆ. ಮತ್ತೊಂದು ನೆಲೆಯಲ್ಲಿ ವೈದೇಹಿಯವರು ಮಲೆನಾಡಿನ ತುಳು ಪರಿಸರವನ್ನು ಹಿನ್ನೆಲೆಯಾಗಿ ಬಳಸಿಕೊಂಡು, ಹೆಣ್ಣಿನ ಅಂತರಾಳದ ವಾಸ್ತವವನ್ನು ಅವಲೋಕಿಸಿದರೆ, ಎಚ್.ನಾಗವೇಣಿಯವರು 'ಗಾಂಧಿ ಬಂದ' ಕಾದಂಬರಿಯ ಮೂಲಕ ಗಾಂಧಿ ಬರುವ/ಬಂದ ಸನ್ನಿವೇಶವನ್ನು ಹಿನ್ನೆಲೆಯಾಗಿಟ್ಟುಕೊಂಡು, ತುಳು ನಾಡಿನ ಸಾಂಸ್ಕೃತಿಕ ಆಚರಣೆಗಳನ್ನು ಮುನ್ನೆಲೆಗೆ ತಂದಿದ್ದಾರೆ. ೩೫೮ ಪುಟಗಳ ಈ ಸುದೀರ್ಘ ಕಾದಂಬರಿಯಲ್ಲಿ, ಶ್ರಮಿಕ ವರ್ಗ ಮತ್ತು ಶೋಷಿತ–ಶೋಷಕ ವರ್ಗಗಳು ಪಾಲ್ಗೊಳ್ಳುವ ಅನೇಕ ಸಾಂಪ್ರದಾಯಿಕ ಆಚರಣೆಗಳು ಹೆಚ್ಚಿನ ಪಾಲು ಪಡೆದಿವೆ. ಮಲೆನಾಡಿನ ಪ್ರಾದೇಶಿಕ ಆವರಣವನ್ನು ಸಂಶೋಧಕರಂತೆ ಸುಮಗ್ರವಾಗಿ ಗ್ರಹಿಸಿ ಆ ಚಿತ್ರಣವನ್ನು ಜೀವಂತಿಕೆಯಿಂದ ಹಿಡಿದಿಟ್ಟಿರುವುದು ಕೃತಿಯ ವಿಶಿಷ್ಟ ಶೈಲಿಯಾಗಿದೆ.

ಕಾದಂಬರಿಯ ಚೌಕಟ್ಟಿಗೆ ಆಯ್ದುಕೊಂಡ ವಸ್ತುವಿನಲ್ಲಿ ಸ್ವಾತಂತ್ರ್ಯ ಪೂರ್ವದ ಸುಧಾರಣಾ ನಿಲುವಾದ ವಿಧವಾ ವಿವಾಹವನ್ನು ಪ್ರತಿಪಾದಿಸಲಾಗಿದೆ. ಇಂದಿನ ಬದಲಾದ ಸನ್ನಿವೇಶಗಳಿಗೆ ಕಾದಂಬರಿ ಕಿಂಚಿತ್ತೂ ಗಮನ ನೀಡಿಲ್ಲವೆಂಬುದು ಸಿ.ಎನ್.ರಾಮಚಂದ್ರನ್‌ರವರ ಆಕ್ಷೇಪ ('ಗಾಂಧಿ ಬಂದ', ಪರಂಪರೆ ಪ್ರತಿರೋಧ, ಪುಟ–೧೬೭) ಆದರೆ, ಸಮಕಾಲೀನ ಸಮಸ್ಯೆಯ ಮೂಲವನ್ನು ಕೆದಕಲು, ಬರಹಗಾರರು ಭೂತಕಾಲದ ಮೊರೆ ಹೋಗುವುದು ಹೊಸದೇನೂ ಅಲ್ಲ. ಜತೆಗೆ ಬರಹಗಾರರ ಮನಸ್ಸನ್ನು ಗಾಢವಾಗಿ ಕಾಡುವ ವಸ್ತುವಿಗೆ ಕಾಲ ಸ್ಥಳದ ನಿರ್ಬಂಧವಿರುವುದಿಲ್ಲ. ಹಿಂದೆ ಮುಚ್ಚಿ ಹೋಗಿರಬಹುದಾದ ವಾಸ್ತವ ಸಂಗತಿಗಳ ಮರು ಶೋಧನೆಯೂ ಕೃತಿಯ ಆಶಯವಾಗಿದೆ. ಪ್ರಥಮ ಪುರುಷ ನಿರೂಪಣೆಯಲ್ಲಿ, ಹದಿನಾಲ್ಕು ಸಂವತ್ಸರಗಳಲ್ಲಿ ಕತೆಯ ಎಳೆಗಳನ್ನು ಜಿಡಿಸಿಡಲಾಗಿದೆ. ತುಳು ನಾಡಿನ ರೂಢಿ ಮಾತು, ಗಾದೆ, ನುಡಿಗಟ್ಟು, ತುಳು ತಿಂಗಳು, ಬ್ರಾಹ್ಮಣರು ಅನುಸರಿಸುವ ಸಂವತ್ಸರಗಳ ಲೆಕ್ಕಾಚಾರವನ್ನು ಬಳಸಿಕೊಂಡ ಕೃತಿಯಲ್ಲಿ, ನೇರ ನಿರೂಪಣೆಯನ್ನು ಕಾಣಬಹುದಾಗಿದೆ. 'ಗಾಂಧಿ ಬಂದ' ಕೃತಿಯನ್ನು ಕೆಳಗಿನ ಆಯಾಮಗಳಲ್ಲಿ ಅಧ್ಯಯನ ಮಾಡಲಾಗಿದೆ.

- ಸಾಂಸ್ಕೃತಿಕ ಆಚರಣೆಗಳ ನೆಲೆಗಟ್ಟು,
- ಗಾಂಧಿ ಬರುವ/ ಬಂದ ಸನ್ನಿವೇಶ.
- ಊಳಿಗಮಾನ್ಯ ಪದ್ಧತಿಯ ಅನಾವರಣ.
- ಹೆಣ್ಣು ಪಾತ್ರಗಳ ಲೋಕ.

**ಅ) ಸಾಂಸ್ಕೃತಿಕ ಆಚರಣೆಗಳ ನೆಲೆಗಟ್ಟು**

ತುಳುನಾಡಿನ ಸಾಂಸ್ಕೃತಿಕ ಲೋಕವನ್ನು ಬಲ್ಲವರಿಗೆ 'ಗಾಂಧಿ ಬಂದ' ಕಾದಂಬರಿಯ ವಿವರಗಳು

'ಸಮೀಪ ಚಿತ್ರ'ವನ್ನು ದೊರಕಿಸಿದರೆ, ಬೇರೆ ಪ್ರಾದೇಶಿಕ ಭಾಗಗಳ ಓದುಗರಿಗೆ, ಕುತೂಹಲದ ಚಿತ್ರಣ ಲಭ್ಯವಾಗುತ್ತದೆ. ಕಾದಂಬರಿಯ ಆರಂಭ ಮತ್ತು ಕೊನೆಯು ಪಟೇಲನಾದ ಬ್ರಾಹ್ಮಣ ಸೀನಪ್ಪಯ್ಯ ಹೆಬ್ಬಾರರು ಏರ್ಪಡಿಸುವ, ಮನೆ ದೈವ ಜುಮಾದಿಯ ಹರಕೆಯ ಕಂಬಳದ ಆಚರಣೆಯ ಮೂಲಕ ನೆರವೇರುತ್ತದೆ. ಕೆಸರು ಗದ್ದೆಯಲ್ಲಿ ಓಡುವ ಕೋಣಗಳಿಗೆ ವಿಶೇಷ ಪ್ರಾಶಸ್ತ್ಯವಿದೆ. ಅರೆ ಬೇಯಿಸಿದ ಹುರುಳಿಕಾಳು, ಅನ್ನದ ಅಂಬಲಿ, ತೆಂಗಿನಕಾಯಿ, ಕಡ್ಲೆಕಾಳು, ಅವಲಕ್ಕಿ ಬೆರಸಿದ ಭತ್ತದ ತೌಡು, ಎಳೆನೀರು, ಸಾರಾಯಿಯ ಸಮಾರಾಧನೆಯಾಗುತ್ತದೆ. "ಕಂಬಳದ ಕೋಣಗಳನ್ನು ಸಾಕುವುದೆಂದರೆ ಗುತ್ತಿನ ಶೆಟ್ಟರ ಹೆಂಡ್ತಿಯರನ್ನು ಸಾಕಿದಂತೆ!"(ಗಾಂಧಿ ಬಂದ, ಪುಟ-೧೨) ಎಂಬ ಹೋಲಿಕೆ ನೀಡಲಾಗಿದೆ. ತುಳು ನಾಡಿನಲ್ಲಿ ಪ್ರಚಲಿತವಿದ್ದ ಅಳಿಯಕಟ್ಟು ಸಂತಾನದಲ್ಲಿ ಶೆಡ್ತಿಯರದು ಐಷಾರಾಮದ ಬದುಕು. ಗಂಡು ಮಕ್ಕಳು ಅವರ ಶ್ರೇಯೋಭಿವೃದ್ಧಿಗಾಗಿ ಶ್ರಮಿಸಬೇಕಾದುದು ಅನಿವಾರ್ಯ. ಕಂಬಳದಲ್ಲಿ ಓಡುವ ಕೋಣಗಳಿಗೂ ಇಂತಹ ಶೆಡ್ತಿಯರ ಉಪಚಾರ ಒದಗುತ್ತದೆ. ಈ ದುಬಾರಿ ಬಾಬತ್ತಿನ ಕಂಬಳದ ಆಚರಣೆಯನ್ನು, ಊರಿನ ಉನ್ನತ ಸ್ಥಾನದಲ್ಲಿರುವವರು, ಉಳ್ಳವರು ಏರ್ಪಡಿಸುತ್ತಾರೆ.

ಕೆಳವರ್ಗ ಜಾತಿಯವರು ತಮ್ಮ ತಾಕತ್ತಿಗೆ ತಕ್ಕಂತೆ ಬೆಳೆಸಿದ ಹುಂಜಗಳ 'ಕೋಳಿ ಕಟ್ಟ' ಏರ್ಪಡಿಸುತ್ತಾರೆ. ಮೇಲು-ಕೀಳೆನ್ನದೆ ಬೇಧವಿಲ್ಲದೆ ಆಚರಿಸುವ ಭೂತ ಕೋಲು; ಭೂತಾಯಿ ಮುಟ್ಟು ಕಳೆಯುವ 'ಕೆಡ್ಡಸ'ದ ಆಚರಣೆ; ಕಷ್ಟ ಅನಿಷ್ಟಗಳ ಮಾರಿಯನ್ನು ಓಡಿಸುವ 'ಕಂಗಿಲ' ಹಬ್ಬದ ಕುಣಿತ; ಭ್ರಾತೃವಾತ್ಸಲ್ಯದ 'ಮಾಯಿದ ಪುರುಷ' ಕುಣಿತ; ಕಂಡೇವು ಸಂಕ್ರಾಂತಿಗೆ ಮೀನು ಹಿಡಿಯುವ ಸಂಭ್ರಮ; ಯುಗಾದಿಗೆ ಪ್ರಕೃತಿ ಪೂಜೆ; ದೀಪಾವಳಿಗೆ 'ಮಾದಿರ ಕುಣಿತ'; ಮೂರು ದಿನ ಕಡಲಿಗಿಳಿಯದೆ ಆಚರಿಸುವ 'ಜಾರಂದಾಯ ನೇಮ'ದ ಆಚರಣೆಗಳು ಕೃತಿಯಲ್ಲಿ ಒಡಮೂಡಿವೆ. ಊರಿನ ಗಂಡಸರು ಆಟಿ ಅಮಾಸೆಯಂದು ಬೆತ್ತಲೆ-ಅರೆ ಬೆತ್ತಲೆಯಾಗಿ ಹೋಗಿ ಪಾಲೆ ಮರದ 'ಕೆತ್ತೆ'ಯನ್ನು ತಂದು 'ಆಟಿ ಅಮಾಸೆಯ ಮದ್ದು' ತಯಾರಿಸುವ ವಿಧಾನವಿದೆ. ಮಳೆಗಾಲದಲ್ಲಿ ಉಂಟಾಗುವ ಸರ್ವ ರೋಗಕ್ಕೆ ನಿರೋಧಕ ಶಕ್ತಿಯನ್ನು ಈ ಮದ್ದು ನೀಡುವ ಬಗ್ಗೆ ಪ್ರಸ್ತಾಪಿಸಲಾಗಿದೆ.

ಹಿರಿಯರನ್ನು ನೆನಪಿಸಿಕೊಳ್ಳುವ 'ಭೂತಕ್ಕೆ ಅಗೆಲು ಬಡಿಸುವ ದಿನ', ಸತ್ತ ನಂತರ ಆಚರಿಸುವ ಬೊಜ್ಜ, ಬಂದ್ಯೊಪ್ಪದ ವಿಧಿ ವಿಧಾನಗಳ ಆಚರಣೆ ಕೃತಿಯೊಂದಿಗೆ ಹೆಣೆದುಕೊಂಡಿವೆ. ಮನೋರಂಜನೆಗಾಗಿ ತಾಳ ಮದ್ದಲೆ, ಬಯಲಾಟ, ಕಬಿತೆಗಳು, ಸಿರಿಪಾಡ್ದನಗಳ ವಾಚನವಿದೆ.

ಆಯಾ ಹಬ್ಬಕ್ಕೆ ತಯಾರಾಗುವ ಪತ್ರೊಡೆ, ಮೂಡೆ, ಗುಂಡ, ನೀರುದೋಸೆ, ಚಟ್ನಿ, ಕೊದ್ದೆಲು, ಪರಮಾನ್ನ, ಪಾಯಸ, ಅಕ್ಕಿಪುಂಡಿ, ಕೋಳಿಸಾರು, ಮಾಂಸದೂಟ, ಮೀನಿನ ಗಸಿ, ಮಣ್ಣಿನ ಘಮ್ಮೆನ್ನುವ ಪರಿಮಳ ಕಾದಂಬರಿಯುದ್ದಕ್ಕೂ ಹರಡಿದೆ.

ಈ ಎಲ್ಲ ಆಚರಣೆಗಳನ್ನು ಗಮನಿಸಿದಾಗ ಒಂದು ಅಂಶ ಸ್ಪಷ್ಟವಾಗುತ್ತದೆ. ಪ್ರಕೃತಿಯಲ್ಲಾಗುವ ಬದಲಾವಣೆಗಳಿಗೆ ತಕ್ಕಂತೆ ತುಳು ನಾಡಿನ ಆಚರಣೆ ಹಬ್ಬ ಹರಿದಿನಗಳು ಏರ್ಪಡುತ್ತವೆ. ಇಂತಹ ನೂರಾರು ವಿಧಿ ವಿಧಾನ, ಆಚರಣೆಗಳ ಮೂಲಕ ತುಳು ನಾಡಿನ ಬದುಕಿನ ಕ್ರಮ ನಿರಂತರವಾಗಿ

ಸಾಗುತ್ತದೆ. ಒಡೆಯರ ಹಬ್ಬದಲ್ಲಿ ಆಳುಗಳು ಹಾಕುವ ವೇಷ, ಕುಣಿತಗಳಿಗೆ ಬೆಂಬಲ ನೀಡುವ ಒಡೆಯರ 'ಧಾರಾಳ' ಮನಸ್ಸು ಇದೆ. ಮೇಲು ಕೆಳ ಜಾತಿಯ ನಡುವಿರುವ ಅಸ್ಪೃಶ್ಯತೆಯಂತಹ ಕಂದಕಗಳೂ ಸೂಕ್ಷ್ಮವಾಗಿ ಗೋಚರಿಸುತ್ತವೆ. ಸಾಮರಸ್ಯ-ವಿರಸ; ಸಂಭ್ರಮ-ವಿಷಾದಗಳು, ಉಳಿದ ಸಂಗತಿಗಳು ಸಾಂಸ್ಕೃತಿಕ ಆಚರಣೆ ಗಳೊಂದಿಗೆ ಹಾದು ಹೋಗುತ್ತವೆ.

**ಆ) ಗಾಂಧಿ ಬರುವ/ಬಂದ ಸನ್ನಿವೇಶ**

ಮಂಗಳೂರಿನ ಪೇಟೆಗೆ ಗಾಂಧಿ ಬರುವುದು ಒಂದು ಮುಖ್ಯ ಸಂಗತಿಯಾದರೂ, ಮುಖ್ಯವಲ್ಲದ ಸುದ್ದಿಯೂ ಆಗಿದೆ ಎಂಬುದನ್ನು ಕಾದಂಬರಿಯ ವಿವರಗಳು ತಿಳಿಸುತ್ತವೆ. ಗಾಂಧಿ ತತ್ವಗಳಾದ ಪರದೇಶಿ ವಸ್ತ್ರ ಬಹಿಷ್ಕಾರ, ಖಾದಿ ಧಾರಣೆ, ಸತ್ಯ, ಅಹಿಂಸೆ, ಪಾನ ನಿರೋಧ ಮುಂತಾದವುಗಳ ಪ್ರಚಾರ ಮಾಡುವ, ಅನುಷ್ಠಾನಕ್ಕೆ ತರುವ ಕೈಂಕರ್ಯದಲ್ಲಿ ಖಾದಿ ಮಾರಪ್ಪ, ಕಾರ್ನಾಡ ಸದಾಶಿವರಾಯರು, ಬೆಸ್ತರ ಗುರಿಕಾರ ತಿಂಗಳಾಯರು, ಕುದ್ಮಲ್ ರಂಗರಾಯರು, ಜಟಕಾ ಓಡಿಸುವ ಅದ್ರಾಮ ತಮ್ಮ ವೈಯಕ್ತಿಕ ಜೀವನವನ್ನು ಮುಡಿಪಾಗಿಟ್ಟಿದ್ದಾರೆ. ವಿಧವಾ ವಿವಾಹಕ್ಕೆ ಮನ್ನಣೆ, ಅಸ್ಪೃಶ್ಯತೆ, ಜಾತಿ ತಾರತಮ್ಯದ ನಿವಾರಣೆಗೆ ಕರೆ ನೀಡುವ ಗಾಂಧಿ, ಹಿಂದುಳಿದ ಜಾತಿ, ವರ್ಗಗಳ, ಶೋಷಿತ ಸಮುದಾಯದವರಿಗೆ ಪರಿಹಾರ ರೂಪದ ಪ್ರೇರಕ ಶಕ್ತಿಯಾಗಿದ್ದಾರೆ. ಸನಾತನ ಹಿಂದೂ ಧರ್ಮದ ದೋಷಗಳನ್ನು ತೋರಿಸಿಕೊಟ್ಟು ಬ್ರಾಹ್ಮಣ್ಯದ ಮೂಲ ಬೇರಿಗೆ ಕೊಡಲಿ ಏಟು ನೀಡಿದ ಗಾಂಧಿ ಬ್ರಾಹ್ಮಣ ಕುಲದವರಿಗೆ 'ಧರ್ಮದ್ರೋಹಿ'ಯಾಗಿ ಗೋಚರಿಸುತ್ತಾರೆ.

ಗಾಂಧಿ ತತ್ವಗಳನ್ನು ಅನುಷ್ಠಾನಕ್ಕೆ ತರುವುದು ಸುಲಭ ಸಂಗತಿಯಲ್ಲ. ಮೇಲ್ಜಾತಿಯವರು ಕಡಿಮೆ ದರಕ್ಕೆ ಸಿಗುವ ಮೃದುವಾದ ಪರದೇಶಿ ಬಟ್ಟೆಗಳನ್ನು ಬಿಟ್ಟು, ದುಬಾರಿಯ ದಪ್ಪ ಅರಿವೆಯನ್ನು ಉಡಲು ಸಿದ್ಧವಿಲ್ಲ. ಬೆಸ್ತರ ಕೇರಿಯಲ್ಲಿ ಪರದೇಶಿ ವಸ್ತ್ರ ಧರಿಸುವವರಿಲ್ಲ, ದುಬಾರಿ ಖಾದಿ ಕೊಳ್ಳುವ ಯೋಗ್ಯತೆಯೂ ಅವರಲ್ಲಿಲ್ಲ. ಬೆಸ್ತರೂ ಸೇರಿದಂತೆ ಕೆಳಜಾತಿಯ ಗಂಡಸರು ದುಡಿದದ್ದನ್ನೆಲ್ಲಾ ಗಂಗರಸದ ಗಡಂಗಿಗೆ ಖರ್ಚು ಮಾಡುವುದನ್ನು ತಡೆಗಟ್ಟುವ ಕಾರ್ಯ ಗಾಂಧಿ ಅನುಯಾಯಿಗಳಿಗೆ ದೊಡ್ಡ ಸವಾಲಾಗಿದೆ. ಕಾರ್ನಾಡರ ಭಾಷಣ, ಮಾರಪ್ಪನ ಪ್ರಚಾರ, ತಿಂಗಳಾಯರ ಪರಿಶ್ರಮದ ಪರಿಣಾಮ ವೆಂಬಂತೆ ಹೆಬ್ಬಾರರ ಆಳುಗಳಾದ ಅಂತಪ್ಪ, ಕೊಸಮ್ಮೈಲಿ ಕುಡಿಯುವುದನ್ನು ಬಿಟ್ಟು ಉಳಿತಾಯ ಮಾಡಿದ ಹಣವನ್ನು ಗಾಂಧಿ ನಿಧಿಗೆ ಅರ್ಪಿಸುತ್ತಾರೆ. ಕೆಳಜಾತಿಯವರಿಗೆ ಗಾಂಧಿಯ ತತ್ವಗಳು ಪೂರ್ತಿ ಅರ್ಥವಾಗದಿದ್ದರೂ 'ಬ್ರಾಂ..ಬ್ರೂಂ' ಮಂತ್ರದಂತೆ ಗಾಂಧಿಯ ಮೋಡಿಗೆ ಒಳಗಾಗಿದ್ದಾರೆ. "ಗಾಂಧಿಯವರು ಫರಂಗಿಯವರನ್ನು ಓಡಿಸಿದರೆ, ನಮಗೆಂತಾ ಲಾಭ?, ನಾವೇನಾದರೂ ನಿಮ್ಮ ಗದ್ದೆಯಲ್ಲಿ ದುಡಿಯುದು ತಪ್ಪುತ್ತಾ...?. ಅವರಿದ್ರೂ ದುಡಿಯುದೇ, ಇವರಿದ್ರೂ ದುಡಿಯದೇ"" (ಅದೇ, ಪುಟ-೧೬೩) ಎಂಬ ಪ್ರಶ್ನೆಯೂ ಎದುರಾಗುತ್ತದೆ. ಪರದೇಶಿಯರ ಆಳ್ವಿಕೆಯ ನಿಯಂತ್ರಣದಲ್ಲಿ ಭಾರತ ದೇಶ ದಾಸ್ಯತ್ವವನ್ನು ಅನುಭವಿಸುತ್ತಿದ್ದರೆ, ಇದಾವುದರ ಪರಿವೆಯಿಲ್ಲದೆ ಭೂ ಒಡೆತನ

ಹೊಂದಿದ ಜಮೀನ್ದಾರರ ದಬ್ಬಾಳಿಕೆಯಲ್ಲಿ ದಾಸ್ಯದ ಸಂಕೋಲೆಯಿಂದ ನರಳುವ ಪಡೆಯೊಂದು ಕಡೆ ಇದೆ. ಅಂತಪ್ಪ, ಐತು ಮುಂತಾದವರು ಬಂಧಮುಕ್ತರಾಗಬೇಕಾಗಿರುವುದು ಫರಂಗಿಯವರಿಂದಲ್ಲ, ಜಮೀನುದಾರರ ಶೋಷಣೆಯಿಂದ ಎಂಬುದನ್ನು ಗಮನಿಸಬಹುದು.

ಗಾಂಧಿ ಬರುವ ಸುದ್ದಿ ಎಲ್ಲೆಡೆ ಹರಡಿ ಉಡುಪಿ, ಬಂಟ್ವಾಳ, ಮೂಲ್ಕಿ, ಕಾರ್ಕಳ, ಕುಂದಾಪುರ, ಪುತ್ತೂರು, ಕಾಸರಗೋಡಿನ ದೇಶ ಭಕ್ತರು ಮಂಗಳೂರಿನಲ್ಲಿ ಗಾಂಧಿ ದರ್ಶನಕ್ಕಾಗಿ ಸೇರಿದ್ದಾರೆ. ಪಂಜುರ್ಲಿ ಭೂತದ ಸೌಮ್ಯಾವತಾರವೆಂದು, ಶಿಷ್ಟ ರಕ್ಷಕ, ದುಷ್ಟ ಶಿಕ್ಷಕನಾಗಿರಬೇಕೆಂದು ಗಾಂಧಿಯನ್ನು ಕಲ್ಪಿಸಿಕೊಂಡ ಪಿಜಿನಮೂಲ್ಯ, ಅಂತಪ್ಪ ಗಾಂಧಿಯ ದರ್ಶನ ಮಾಡಲೇಬೇಕೆಂಬ ಹಂಬಲದಿಂದ ಮಂಗಳೂರಿಗೆ ಬಂದಿದ್ದಾರೆ. ಎರಡನೇ ಬಾರಿ ಗಾಂಧಿ ಬಂದಾಗ ಶೂದ್ರ ಪಡೆಯೊಂದಿಗೆ ಬ್ರಾಹ್ಮಣ ಪಡೆಯೂ ಗಾಂಧಿಯ ದರ್ಶನಕ್ಕೆ ಹಾಜರಾಗಿ ಅಚ್ಚರಿ ಮೂಡಿದೆ. ಆದರೆ ಬಂದ ಉದ್ದೇಶ "ಶೂದ್ರ ಹೊಲೆಯರನ್ನು ಬ್ರಾಹ್ಮಣರ ವಿರುದ್ಧ ಎತ್ತಿಕಟ್ಟುತ್ತಾ, ಸನಾತನ ಧರ್ಮಶಾಸ್ತ್ರದ ಕೋಟೆಯನ್ನು ಮುರಿಯಲು ಪಿತೂರಿ ನಡೆಸುತ್ತಾ, ತಮ್ಮೆಲ್ಲರ ಮಾನಸಿಕ ಸ್ಥಿತಿಯನ್ನು ಹದಗೆಡಿಸುತ್ತಿರುವ ಆ ಧರ್ಮ ದ್ರೋಹಿ ಗಾಂಧಿಯ ರೂಪವನ್ನು ಒಂದೇ ಒಂದು ಬಾರಿ ನೋಡಬೇಕೆಂಬ ಕುತೂಹಲದಿಂದ" (ಅದೇ, ಪುಟ–೨೦೨) ಬರಲಾಗಿದೆ. ಗುತ್ತಿನ ಶೆಟ್ಟರು ಗಾಂಧಿಗೆಂದು ನೀಡಿದ ಬಂಗಾರದ ಒಡೆವೆಗಳನ್ನು, ಗಾಂಧಿಗೆ ತಲುಪಿಸದ ಹೆಬ್ಬಾರರ ದುಷ್ಟ ಗುಣ ಪ್ರಕಟಗೊಳ್ಳುತ್ತದೆ. ಗಾಂಧಿ ಬಂದು ಹೋದ ನಂತರ ಮಾರಪ್ಪ, ತಿಂಗಳಾಯರು ಕಾರ್ನಾಡರ ಸಲಹೆಯಂತೆ ನಂದೀಶ್ವರನ ಜಾತ್ರೆಯಲ್ಲಿ, ದೇವಸ್ಥಾನದ ಪ್ರಾಂಗಣದಲ್ಲಿ ಎಲ್ಲಾ ಜಾತಿಯವರೂ ಕೂಡಿ ಪಂಕ್ತಿ ಭೋಜನ ಮಾಡಲು ಏರ್ಪಾಟು ಮಾಡಿದ್ದಾರೆ. ಆದರೆ ವಿಪ್ರ ಪಡೆಯನ್ನು ಹೊರತುಪಡಿಸಿದ ಉಳಿದ ಕುಲ ಜಾತಿಯವರ ಮಧ್ಯೆ ಸಂಘರ್ಷ ಪ್ರಾರಂಭವಾಗುತ್ತದೆ. "ತಮಗಿಂತ ಕೆಳಸ್ತರದವರಾದ ಕೊರಗರ ಐತುವಿನ ಜನರು ತಮ್ಮೊಡನೆ ಊಟಕ್ಕೆ ಕೂತಿದ್ದು ಸರಿಯಲ್ಲವೆಂದು, ಮತ್ತೊಂದು ಅಸ್ಪೃಶ್ಯ ಕುಲವಾದ ಮುಂಡಾಲರು ನ್ಯಾಯ ತೆಗೆದರು. ಕೊರವರು ಮುಂಡಾಲರೊಂದಿಗೆ ತಮಗೆ ಊಟ ಇಕ್ಕಿದ್ದೇ! ಎಂದು ಇನ್ನೊಂದು ಅಸ್ಪೃಶ್ಯ ಕುಲದ ಮುಗೇರರು ಸಿಟ್ಟಾದರು. ಹಾಗೆಯೇ ತೀರಾ ಹೀನ ಕುಲದವರಾದ ಕೊರಗರು, ಮುಂಡಾಲ, ಮುಗೇರರನ್ನೆಲ್ಲ ತಮ್ಮೊಡನೆ ಊಟಕ್ಕೆ ಯಾಕೆ ಕೂರಿಸಬೇಕಿತ್ತೆಂದು ಮ್ಯೊಲಿ, ಮೂಲ್ಯ, ಪೂಜಾರಿ, ಬೆಸ್ತರು, ಶೆಟ್ರು, ಆಚಾರಿಗಳೆಲ್ಲ ಗಲಭೆ ಎಬ್ಬಿಸಿದರು" (ಅದೇ, ಪುಟ–೧೪೪) ಇಂತಹ ಗೊಂದಲದಿಂದ ಬೇಸತ್ತ ಮಾರಪ್ಪ ಮುಂತಾದವರಿಗೆ ಜಾತಿಯ ವಿಷಮ ಬೀಜವನ್ನು ಕಿತ್ತೊಗೆಯುವುದು ತಮ್ಮಿಂದ ಸಾಧ್ಯವಿಲ್ಲವೆಂಬುದು ಮನವರಿಕೆಯಾಗುತ್ತದೆ. ಆದರೆ ಪ್ರಯತ್ನ ಮುಂದುವರಿಸುವ ಅನಿವಾರ್ಯತೆಯಿದೆ. ಒಂದೇ ಪಂಕ್ತಿಯಲ್ಲಿ ಎಲ್ಲಾ ಜಾತಿಯವರೊಡನೆ ಊಟ ಮಾಡಿಸಿದ ಪರಿಣಾಮ ಕೊರಗರ ಐತುವಿಗೆ ತೀವ್ರ ಪರಿಣಾಮ ಬೀರಿತು. ಈ ಪಂಕ್ತಿ ಭೋಜನಕ್ಕೆ ಕಾರಣನಾದ ಗಾಂಧಿಯನ್ನು ನೋಡಲೇಬೇಕೆಂಬ ಆಸೆಯುಂಟಾಗುತ್ತದೆ. ಆಮೆಯ ಮಾಂಸ, ಮೊಟ್ಟೆಗಳನ್ನು ಇಷ್ಟ ಪಡುವ ಐತು, ಗಾಂಧಿಗೆ ಪ್ರಾಣಿ

ಹಿಂಸೆ ಇಷ್ಟವಾಗುವುದಿಲ್ಲವೆಂಬುದು ತಿಳಿದಾಗ ಆಮೆಯನ್ನು ಮತ್ತೆ ಕಡಲಿಗೆ ಬಿಟ್ಟು ಅಹಿಂಸೆಯ ತತ್ವವನ್ನು ಪಾಲಿಸುತ್ತಾನೆ.

ಮೂರನೇ ಬಾರಿಗೆ ಗಾಂಧಿ ಬಂದಾಗ ಕೆಳಜಾತಿಯವರು ಹೆಬ್ಬಾರರ ಶೋಷಕ ವ್ಯವಸ್ಥೆಯ ಬಗ್ಗೆ ಜಾಗೃತರಾಗುತ್ತಾರೆ. "ನಮ್ಮ ಗಾಂಧಿಯವರೇನು ಬಂದು ಆ ಹೆಬ್ಬಾರರ ಕಿವಿಯ ಕೂದಲು ಕೀಳುತ್ತಾರೆಂದು ಮಾಡಿದ್ದೀರೇನು? ಹೆಬ್ಬಾರರನ್ನು ರಿಪೇರಿ ಮಾಡುವುದಕ್ಕೆ ಗಾಂಧಿಯವರೇ ಬರಬೇಕನಾ? ಗಾಂಧಿಯರು ಹೇಳಿದಾಗೆ ಸತ್ಯಾಗ್ರ ಮಾಡಿರೋ; ಬೈದರೆ ಕಂಬಳಕ್ಕೆ 'ಪನಿಕುಳ್ಳುವುದಿಲ್ಲ' ಅಂತಾ ಹೇಳಿ. ಡೋಲು ಬಾರಿಸುವುದಿಲ್ಲ ಅಂತಾ ಹೇಳಿ. ಕಂಬಳದ ಮರ್ಯಾದಿ ಸಾರುದಿಲ್ಲ ಅಂತಾ ಹಠ ಮಾಡಿ" (ಅದೇ, ಪುಟ-೩೫೧) ಎಂಬ ಸಂದೇಶ ಅರಿತವರಂತೆ ತೀವ್ರ ವಿರೋಧವನ್ನು ಒಡ್ಡಲಾಗದಿದ್ದರೂ, ಕಂಬಳದ ಕಾರ್ಯಗಳನ್ನ ಬದಿಗಿಟ್ಟು, ಗಾಂಧಿಯನ್ನು ನೋಡಲು ಹೋಗುವ ಧೈರ್ಯ ಮಾಡುತ್ತಾರೆ.

ಗಾಂಧಿ ಬರುವ, ಬಂದ ಸಂಗತಿ, ಮಂಗಳೂರಿನಲ್ಲಿ ದೊಡ್ಡ ಕ್ರಾಂತಿಗೆ ಕಾರಣವಾಗುವುದಿಲ್ಲವಾದರೂ, ಸಣ್ಣ ಮಟ್ಟಿನ ಬದಲಾವಣೆಯನ್ನು, ಮನಃ ಪರಿವರ್ತನೆಯನ್ನು ತಂದಿದೆ. ತಮ್ಮ ಬಗ್ಗೆ ತಾವು ಅರಿತುಕೊಳ್ಳುವ ಎಚ್ಚರಗೊಳ್ಳುವ ಸ್ಥಿತಿ ನಿರ್ಮಾಣವಾಗಿದೆ. 'ಉಪ್ಪಿನ ಸತ್ಯಾಗ್ರಹ'ದಲ್ಲಿ ಪಾಲುಗೊಂಡ ಅದ್ರಾಮ ಬಲಿದಾನವಾಗುತ್ತಾನೆ. ಮಾರಪ್ಪ ಮತ್ತು ಅದ್ರಾಮ ಇವರಿಬ್ಬರೂ ಅಭಾಗಿನಿ, ವಿಧವೆಯರನ್ನು ಮದುವೆಯಾಗಲು ಕಾರಣ ಗಾಂಧಿ ತತ್ವ.

**ಇ) ಊಳಿಗಮಾನ್ಯ ಪದ್ಧತಿ**

ನೂರಾರು ಮುಡಿ ಹುಟ್ಟುವಳಿಯಿರುವ ಪಟೇಲ ಶೀನಪ್ಪಯ್ಯ ಹೆಬ್ಬಾರರು ಊಳಿಗಮಾನ್ಯ ಪದ್ಧತಿಯನ್ನು ಪೋಷಿಸುವ ಮುಖ್ಯ ಪಾತ್ರವಾಗಿದ್ದಾರೆ. ಬಂಟರ ಸಮಾಜದ 'ಗುತ್ತಿನ ಮನೆ'ಯವರಾದ ಕುಳ್ಯಾಗುತ್ತಿನ ಪಾಂಡುಶೆಟ್ಟರು, ಪೊಸೊಡಿ ಗುತ್ತಿನ ತೌಡಶೆಟ್ಟರು ಮುಂತಾದವರು ಭಾರೀ ಜಮೀನುದಾರರಾಗಿದ್ದಾರೆ. ಬ್ರಾಹ್ಮಣರು ಮತ್ತು ಶೆಟ್ಟರ ನಡುವಿನ ವ್ಯತ್ಯಾಸದ ಕುರಿತು "ಶಬ್ದದಲ್ಲಿ ಜಾತಿ ಸಹಜವಾದ ಅಬ್ಬರವಿದೆ, ಹುಂಬುತನವಿದೆ. ಆದರೆ ತನ್ನನ್ನು ಮೀರಿ ಮೇಲೇರುವವನನ್ನು ಎಳೆದು ಹಾಕಿ ತುಳಿಯುವ ಸ್ವಾರ್ಥ ಮಾತ್ರ ಇವರಲ್ಲಿಲ್ಲ. ಗುತ್ತುಗಾರಿಕೆಯ ಅಹಂ ಇದ್ದರೂ, ಧನ ಬಲದಿಂದ ಒಳ ಅಹಂಕಾರ ಸ್ವಲ್ಪ ಕೆನೆಯುತ್ತಿದ್ದರೂ, ಇವರು ನ್ಯಾಯ ಅನ್ಯಾಯಗಳ ತುಲನೆಯನ್ನು ಮಾತ್ರ ನಿಷ್ಠೂರವಾಗಿ ಮಾಡಬಲ್ಲವರು" (ಅದೇ, ಪುಟ-೩೨) ಎಂಬ ಚಿತ್ರಣದಲ್ಲಿ ಶೆಟ್ಟರು ಸ್ವಾರ್ಥ ಬುದ್ಧಿಯ ಬ್ರಾಹ್ಮಣರಿಗಿಂತ ಮೇಲು ಎಂಬ ಭಾವನೆ ವ್ಯಕ್ತವಾಗುತ್ತದೆ. ಗಾಂಧಿ ಬರುವಿಕೆಯನ್ನು ಗುತ್ತಿನ ಶೆಟ್ಟರುಗಳು ಆದರದಿಂದ ಸ್ವಾಗತಿಸಿ, ಯಥೇಚ್ಛ ಒಡವೆಗಳನ್ನು, ಗಾಂಧಿ ನಿಧಿಗೆ ಒಪ್ಪಿಸುತ್ತಾರೆ. ಆದರೆ, ಸ್ವಾರ್ಥ ಬುದ್ಧಿಯ, ಕುತಂತ್ರ ಮನಸ್ಸಿನ ಹೆಬ್ಬಾರರು ಗಾಂಧಿಗೆ ನೀಡಿದ ಒಡವೆಗಳನ್ನು ಸ್ವಾಹ ಮಾಡುವ ದುಷ್ಟ ಕಾರ್ಯಕ್ಕೂ ಇಳಿಯುತ್ತಾರೆ. ಬಂಟರು, ಭಟ್ಟರ ಕೈಕೆಳಗೆ ಜೀತದಾಳುಗಳಾಗಿ

ದುಡಿಯುವ ಸೈನಿಕ ಪಡೆಯೇ ಇದೆ. ಕೂಸಮ್ಮೈಲಿ, ಅಂತಪ್ಪ, ಅಂಗರಮೂಲ್ಯ, ಸೇಸಿ, ಪಿಜಿನ ಮೂಲ್ಯ, ಐತು, ಮಂಜಪ್ಪ, ಪಾಂಚ ಪೂಜಾರಿ ಮುಂತಾದವರು ತಮ್ಮ ಜೀವಮಾನವಿಡೀ ಒಡೆಯರ ತೋಲವನ್ನು ಉತ್ತು, ಬಿತ್ತುವ ಎಲ್ಲಾ ಕೆಲಸಗಳನ್ನು ನಿರ್ವಹಿಸುವ 'ರಕ್ತನಾಳ'ಗಳಾಗಿದ್ದಾರೆ.

ಹಿಂದೆ ಪ್ರಸ್ತಾಪಿಸಿದಂತೆ, ದೇಶದೆಲ್ಲೆಡೆ ಬ್ರಿಟೀಷರ ಪಾರತಂತ್ರ್ಯದಿಂದ ಬಿಡುಗಡೆ ಪಡೆಯಲು, ಸ್ವರಾಜ್ಯದ ಕನಸು ಹೊತ್ತ ಹೋರಾಟಗಾರರ ಚಿತ್ರಣವನ್ನು; ಜಮೀನ್ದಾರ ವ್ಯವಸ್ಥೆಯಲ್ಲಿ ಸಿಕ್ಕು ನರಳುತ್ತಿರುವ ಮೂಕ ಪಡೆಯ ಚಿತ್ರಣವನ್ನು ಕಾದಂಬರಿಯಲ್ಲಿ ಮುಖಾಮುಖಿಯಾಗಿಸಲಾಗಿದೆ. ಒಕ್ಕಲು ಮಕ್ಕಳಿಂದ ಜಮೀನ್ದಾರರು ಅನೇಕ ವಂತಿಗೆ, ಗೇಣಿಯನ್ನು ವಸೂಲು ಮಾಡುತ್ತಾರೆ. ಮೂಲ ಗೇಣಿಯವರು ವರ್ಷಕ್ಕೆರಡು ಬಾರಿ ಹಣ ಸಲ್ಲಿಸಿ, ಆಸ್ತಿಯ ಹಕ್ಕನ್ನು ಖರೀದಿಸುತ್ತಾರೆ. ಚಾಲಗೇಣಿ ನೀಡುವವರು ಪ್ರತಿ ವರ್ಷ ತರಕಾರಿ, ಹೊರೆ-ಕಾಣಿಕೆಯೊಂದಿಗೆ ಅಕ್ಕಿ ಮುಡಿಗಳನ್ನು ಸಲ್ಲಿಸಿ ಒಡೆಯರ ಭೂಮಿಯನ್ನು ಉಳುತ್ತಾರೆ. ಈ ಪದ್ಧತಿ ಹೀಗೇ ಇರಬೇಕೆಂದು ಬಯಸುವ ಹೆಬ್ಬಾರರು, "ನಾನೊಬ್ಬ ಚರಕ ನೂತು ತಕಲಿ ತಿರುಗಿಸಿ ಸೌರಾಜ್ಯ ಬರೂದು ಸಾಕು. ಆ ಕೊರಗೆ ಮಾದಿಗರು ನಮ್ಮ ತಲೆ ಮೇಲೆ ಕೂತು ಹೇಲುವ ಕಾಲ ಬರಿಸುವುದೂ ಸಾಕು" (ಅದೇ, ಪುಟ-೮೭) ಎಂಬ ಜಾಯಮಾನದವರು. ಮಗಳು ದ್ರೌಪದಿ ಚಿಕ್ಕ ವಯಸ್ಸಿನಲ್ಲಿ ವಿಧವೆಯಾಗಿ ವಿರಹ ಅನುಭವಿಸುವ ಸಂದರ್ಭದಲ್ಲಿ ಪಕ್ಕದ ಮನೆಯ ಪುಟ್ಟಮ್ಮನೊಂದಿಗೆ ಪ್ರಣಯ ವ್ಯಾಪಾರದಲ್ಲಿ ತೊಡಗಿದ್ದಾರೆ. ಜತೆಗೆ ತಮ್ಮನ್ನೇ ನಂಬಿ ಆಸ್ತಿಯ ಮೇಲುಸ್ತುವಾರಿ ವಹಿಸಿದ ಪುಟ್ಟಮ್ಮಕ್ಕನ ಆಸ್ತಿಯನ್ನು ತಮ್ಮ ಹೆಸರಿಗೆ ಬರೆಸಿಕೊಂಡ ದ್ರೋಹಿಯಾಗಿಯೂ ಕಾಣಿಸಿಕೊಂಡಿದ್ದಾರೆ.

ಕಾದಂಬರಿಯ ಮತ್ತೊಂದು ಅಯಾಮದಲ್ಲಿ ಮಾತೃ ಪ್ರಧಾನ ವ್ಯವಸ್ಥೆಯನ್ನು ಉಳಿಸಿಕೊಂಡು ಬಂದ ಅಳಿಯ ಕಟ್ಟು ಸಂತಾನದ ಪ್ರಸ್ತಾಪವಿದೆ. ತಾಯಿ ಕಡೆಯಿಂದ ಬಂದ ಆಸ್ತಿಗೆ ಹಿರಿಯ ಮಗಳು ಉತ್ತರಾಧಿಕಾರಿಯಾಗಿದ್ದಾಳೆ. ಆಕೆಯನ್ನು ಮದುವೆಯಾಗಿ ಆ ಮನೆಗೆ ಬಂದ ಗಂಡ 'ಗುತ್ತಿನಾರ್' ಪದವಿಯನ್ನು ಪಡೆಯುತ್ತಾನೆ. ಅಳಿಯ ಕಟ್ಟು ಸಂತಾನದಲ್ಲಿ ಗಂಡು, ತಾಯಿ ಮನೆಯಲ್ಲಿದ್ದರೆ ತಾಯಿ-ಅಕ್ಕ-ತಂಗಿಯರಿಗಾಗಿ ದುಡಿಯಬೇಕು. ಹೆಂಡತಿಯ ಮನೆಗೆ ಬಂದರೆ, ಆಕೆಯ ಆಸ್ತಿಯನ್ನು ನಿಭಾಯಿಸುವ ಜವಾಬ್ದಾರಿಯನ್ನು ಹೊರಬೇಕಾಗುತ್ತದೆ. ಹಿರಿಯ ಮಗಳನ್ನು ಹೊರತುಪಡಿಸಿ ಉಳಿದ ಮಕ್ಕಳೆಲ್ಲರಿಗೂ ಗೌಣ ಸ್ಥಾನ ಲಭ್ಯವಾಗುತ್ತದೆ. ಮಾರಪ್ಪನ ತಾಯಿ ಸೂರಕ್ಕೆ, ಸೊನ್ನೆ, ಪಾಂಡು ಶೆಟ್ಟರು, ತೌಡಿನ ಶೆಟ್ಟರು ಅಳಿಯ ಕಟ್ಟು ಸಂತಾನದ ಪ್ರತಿನಿಧಿಗಳಾಗಿದ್ದಾರೆ.

### ಈ) ಹೆಣ್ಣು ಪಾತ್ರಗಳ ಲೋಕ

ಕಾದಂಬರಿಯಲ್ಲಿ ಪಿತೃ ಪ್ರಧಾನ ವ್ಯವಸ್ಥೆಯಲ್ಲಿ, ಅಸಹಾಯಕ ಸ್ಥಿತಿಯನ್ನು ಅನುಭವಿಸುವ ಹೆಣ್ಣುಗಳ ಲೋಕವೂ ಇದೆ. ಸ್ವತಃ ತಂದೆ-ತಾಯಿಗಳಾದ, ಹೆಬ್ಬಾರರು-ರುಕುಣಿಯಮ್ಮನವರ ಕ್ರೂರತೆಗೆ ಬಲಿಯಾದ ದ್ರೌಪದಿಯಿದ್ದಾಳೆ. ಚಿಕ್ಕ ವಯಸ್ಸಿಗೆ ವಿಧವೆಯಾದ ದ್ರೌಪದಿಯ ಮನಸ್ಸನ್ನು ಮುಸ್ಲಿಂ

ಯುವಕನಾದ ಅದ್ರಾಮ ಆವರಿಸಿದ್ದಾನೆ. ದ್ರೌಪದಿಯನ್ನು ಚಿಕ್ಕ ವಯಸ್ಸಿನಿಂದಲೇ ಬಲ್ಲ ಅದ್ರಾಮ ದ್ರೌಪದಿಯನ್ನು ಮದುವೆಯಾಗುವ ಹಿನ್ನೆಲೆಯಲ್ಲಿ ಗಾಂಧಿ ತತ್ವ ಪ್ರಭಾವ ಬೀರಿದೆ. ಗರ್ಭಕೋಶ ಮೊಳೆಯದ ದಾರುವನ್ನು ಮಾರಪ್ಪ ಮದುವೆಯಾಗಲೂ ಕೂಡ ಗಾಂಧಿಯವರ ತತ್ವಗಳು ಮುಖ್ಯ ಪಾತ್ರ ವಹಿಸಿವೆ. ಒಂದು ರೀತಿಯಲ್ಲಿ ದ್ರೌಪದಿ, ಅದ್ರಾಮರ ಪ್ರೀತಿಯನ್ನು ಬೆಳಸಿ, ಅವರಿಬ್ಬರ ಮದುವೆ ಏರ್ಪಾಡಾಗಲು ಕುಳ್ಳಾ ಗುತ್ತಿನ ಪಾಂಡುಶೆಟ್ಟರ ಸೇಡು ಕಾರಣವಾಗಿದೆ. ಗಾಂಧಿಗೆ ತಲುಪಿಸಲು ಕೊಟ್ಟಿದ್ದ ಒಡೆವೆಗಳನ್ನು, ಹೆಬ್ಬಾರರು ಪುಟ್ಟಮ್ಮಕ್ಕನಿಗೆ ಕೊಟ್ಟ ಬಗ್ಗೆ ಅಸಮಧಾನಗೊಂಡ ಪಾಂಡುಶೆಟ್ಟರು, ಆ ಸಿಟ್ಟನ್ನು ಅದ್ರಾಮನೊಂದಿಗೆ ದ್ರೌಪದಿಯ ಮದುವೆ ಮಾಡುವ ಮೂಲಕ ತೀರಿಸಿಕೊಳ್ಳುತ್ತಾರೆ. ಆದರೆ ಅದೇ ಶೆಟ್ಟರು ದ್ರೌಪದಿ ಮತ್ತೊಮ್ಮೆ ವಿಧವೆಯಾದಾಗ ಪಶ್ಚಾತ್ತಾಪ ಪಡುತ್ತಾರೆ.

ತನಗೆ ಬೇಸರವಾದಾಗ ತಕಲಿಯಲ್ಲಿ ಹತ್ತಿಯನ್ನು ನೂಲುವ ದ್ರೌಪದಿ ಗಾಂಧಿಯವರ ಬಗ್ಗೆ ಅಭಿಮಾನ ಹೊಂದಿದಾಕೆ. ತಂದೆಯ ಕಣ್ಣು ತಪ್ಪಿಸಿ, ಗಂಡನ ನೆನಪಿಗಿಟ್ಟುಕೊಂಡ ಚಿನ್ನದ ಗುಂಡಿಗಳನ್ನು ಗಾಂಧಿ ನಿಧಿಗೆ ತಲುಪಿಸುತ್ತಾಳೆ. ಆಳು ಮಕ್ಕಳಲ್ಲಿ ಗಾಂಧಿಯ ತತ್ವಗಳನ್ನು ಬಿತ್ತುವ ಪ್ರಯತ್ನ ಮಾಡುತ್ತಾಳೆ. ಉಪ್ಪಿನ ಸತ್ಯಾಗ್ರಹದಲ್ಲಿ ಅದ್ರಾಮ ಅಸುನೀಗಿದಾಗ ಸ್ವಂತ ಇಚ್ಛೆಯಿಂದ ವಿಧವೆಯಾಗುತ್ತಾಳೆ. ಆದರೆ ಗಾಂಧಿ ತಮ್ಮ ಕೈಯ್ಯಾರೆ ಆಕೆಯ ಹಣೆಗೆ ತಿಲಕವಿಟ್ಟು, ಹೂ ಮುಡಿಯಲು ಆದೇಶಿಸಿದಾಗ ಪಾಲಿಸುತ್ತಾಳೆ.

ದ್ರೌಪದಿಗಿಂತ, ಮಾರಪ್ಪನ ತಾಯಿ ಸೂರಕ್ಕೆಯ ಪಾತ್ರ ಕಾದಂಬರಿಯಲ್ಲಿ ಹೆಚ್ಚು ಜೀವಂತವಾಗಿ ಮೈದಾಳಿದೆ. ಗಾಂಧಿಯ 'ಸ್ವರಾಜ್ಯ' ಕಲ್ಪನೆ, 'ಉಪ್ಪಿನ ಸತ್ಯಾಗ್ರಹ', 'ಖಾದಿ ಪ್ರಚಾರ'ವನ್ನು ಸೂರಕ್ಕೆ ಒಂದೇ ಮಾತಿನಲ್ಲಿ 'ಪುಸ್ಕು' ಮಾಡಿ ಬಿಡುತ್ತಾಳೆ. ಎದೆಯುದ್ಧ ಬೆಳೆದ ಮಗ ಮದುವೆಯಾಗದೆ, ಸಂಸಾರದ ನೊಗ ಹೊರದೆ, ಖಾದಿ ಪ್ರಚಾರಕ್ಕಾಗಿ ಊರೂರು ಅಲೆಯುತ್ತಿರುವ ಮಾರಪ್ಪನ 'ಸರ್ವನಾಶ'ಕ್ಕೆ ಗಾಂಧಿಯೇ ಮೂಲ ಕಾರಣನಾಗಿದ್ದಾನೆ. ತನ್ನಿಂದ ದೂರವಾಗಿರುವ ಮಾರಪ್ಪನನ್ನು ಕುರಿತು "ಯಾರೊಂದಿಗೆ ಮಾತುಕತೆಯಾಡಲಿ? ಬೇರೆ ಮಕ್ಕಳೋ.. ಮರಿಯೋ? ತಾಯಿಯೋ, ಸೊಸೆಯೋ.. ಯಾರಿದ್ದಾರೆ? ಭೂತದಂತೆ ಒಬ್ಬಳೇ ಕೂರಬೇಕು, ಒಬ್ಬಳೇ ಉಣ್ಣಬೇಕು, ಒಬ್ಬಳೇ ದುಡಿಯಬೇಕು. ಏನಿದು ಬದುಕು? ಯಾಕೆ ಇಂತಾ ಶಿಕ್ಷೆ ಎಂಬ ಅಳು–ನೋವು–ದುಃಖ ಸೂರಕ್ಕೆಯ ಎದೆ ತುಂಬಾ ಮುಚ್ಚಿಕೊಂಡಿದೆ" (ಅದೇ, ಪುಟ–೧೭೦) ಗಾಂಧಿಯನ್ನು ವಿರೋಧಿಸಲು ಮೇಲಿನ ದುಃಖ ಕಾರಣವಾಗಿದೆ. ಮುಂದೆ ಮಾರಪ್ಪ, ದಾರುವನ್ನು ಮದುವೆ ಯಾಗುವಾಗ ವಿರೋಧವಿಲ್ಲದೆ ಆಕೆಯನ್ನು ಸ್ವೀಕರಿಸುತ್ತಾಳೆ. ದಾರುವಿನ ಸ್ಥಿತಿಗೆ ಮರುಗುವ ಸೂರಕ್ಕೆ ಅವರಿಬ್ಬರೂ ಒಂದುಗೂಡುವ ಸಂದರ್ಭವನ್ನು ಸೃಷ್ಟಿಸಿಕೊಡುತ್ತಾಳೆ. ದ್ರೌಪದಿಗೆ ಮರಳಿ 'ಮುತ್ತೇಸಿತನ' ನೀಡಿದ ಗಾಂಧಿಯನ್ನು ನೋಡಲಿಲ್ಲವೆಂದು ಕೊನೆಗೆ ಪರಿತಪಿಸುತ್ತಾಳೆ.

ಗರ್ಭಕೋಶ ಬೆಳೆಯದ, ಜಾರಿಗೆ ಬೆಟ್ಟಿನ ಸುಬ್ಬಯ್ಯ ಶೆಟ್ಟರ ಮಗಳು ದಾರುವನ್ನು, ಬೊಗ್ಗು ಪಂಡಿತ 'ಶಿಖಂಡಿ' ಯೆಂದು ಬೊಗಳೆ ಬಿಡುತ್ತಾನೆ. ದಾರು, ವಯಸ್ಸಿಗೆ ಸಹಜವಾದ ಮಧುರ

ಭಾವನೆಗಳನ್ನು ಯಾರೆದುರು ಹೇಳಿಕೊಳ್ಳಲಾಗದೆ ಒಂಟಿತನವನ್ನು ಅನುಭವಿಸಿ ಜೀವಂತ ಶವವಾಗಿದ್ದಾಳೆ. ಮದುವೆ ನಂತರದ ದಾರುವಿನ ಬದುಕಿನ ಕ್ರಮ ಬದಲಾಗುತ್ತದೆ. ತಾಯಿ ಮನೆಯಿಂದ ದೊರಕಿದ ತೋಟ, ಗದ್ದೆಗಳ ಮತ್ತು ಗಂಡನ ಮನೆಯ ಆಸ್ತಿಯ ಮೇಲುಸ್ತುವಾರಿಯನ್ನು ಸಮರ್ಥವಾಗಿ ನಿಭಾಯಿಸುವ ದಾರು ತನ್ನದೇ ಆದ ಹೊಸ ಜಗತ್ತನ್ನು ನಿರ್ಮಿಸಿಕೊಳ್ಳುತ್ತಾಳೆ. ಮಾರಪ್ಪನ ಪ್ರಚಾರ ಕಾರ್ಯಕ್ಕೆ ಅಡ್ಡಿ ಬರುವುದಿಲ್ಲ.

ನಾರ್ಣ ಭಟ್ಟರ ಹೆಂಡತಿ ಪುಟ್ಟಮ್ಮಕ್ಕ, ಅನಿವಾರ್ಯವಾಗಿ ಹೆಬ್ಬಾರರ ಮೋಹ ಪಾಶಕ್ಕೆ ಸಿಲುಕಿರುವ ಮತ್ತೊಂದು ಪಾತ್ರ. ಕಟ್ಟಿಕೊಂಡ ಹೆಂಡತಿಯನ್ನು ಹೆಬ್ಬಾರರ ಉಸ್ತುವಾರಿಗೆ ಒಪ್ಪಿಸಿ, ಮಲೆಯಾಳದಲ್ಲಿ ಇಟ್ಟುಕೊಂಡವಳ ಜತೆ ವಾಸಿಸುತ್ತಿದ್ದ ನಾರ್ಣ ಭಟ್ಟರು ರೋಗಿಷ್ಟರಾದಾಗ ಮರಳಿ ಬರುತ್ತಾರೆ. ಗಂಡ ಮರಳಿ ಬಂದಾಗ ಯಾವ ಭಾವವನ್ನು ತೋರದ ಪುಟ್ಟಮ್ಮಕ್ಕನಿಗೆ ಗಾಂಧಿಯನ್ನು ನೋಡಲಾಗದ್ದಕ್ಕೆ ಬೇಸರವಿದೆ. ಹೆಬ್ಬಾರರು ತನಗೆ ಕೊಟ್ಟ ಒಡವೆಗಳನ್ನು ಗಾಂಧಿಗೆ ತಲುಪಿಸಲು ಪಾಂಡುಶೆಟ್ಟರಿಗೆ ವಿನಂತಿಸುತ್ತಾಳೆ. ಕೆರೆಯ ನೀರನು ಕೆರೆಗೆ ಚೆಲ್ಲಿದಂತೆ ಪಾಂಡುಶೆಟ್ಟರ ಒಡವೆಗಳು ಮತ್ತೆ ಗಾಂಧಿ ನಿಧಿಗೆ ಸೇರುತ್ತವೆ. ತುಳು ನಾಡಿನ ಪ್ರಾದೇಶಿಕ ವ್ಯವಸ್ಥೆಯನ್ನು ಮೇಲಿನ ಅಂಶಗಳೊಂದಿಗೆ ಗುರುತಿಸಲಾಗಿದೆ.

### ೭.೫.೩ ದಲಿತ ಹೆಣ್ಣಿನ ದುರಂತ ಬದುಕಿನ ಚಿತ್ರಣ

ದಲಿತ ವರ್ಗದಿಂದ ಬಂದ ಕೆಲವೇ ಮಹಿಳಾ ಬರಹಗಾರರಲ್ಲಿ ಗೀತಾ ನಾಗಭೂಷಣರವರು ಮಹತ್ವದ ಬರಹಗಾರರಾಗಿದ್ದಾರೆ. ವ್ಯವಸ್ಥೆಯಲ್ಲಿ ಉನ್ನತ ಸ್ಥಾನ ಹೊಂದಿದ ಗೌಡ-ಕುಲಕರ್ಣಿ ಮುಂತಾದವರು ಮತ್ತು ದಲಿತ ಪುರುಷರೂ ಸೇರಿದಂತೆ, ಪುರುಷ ವರ್ಗವು ದಲಿತ ಹೆಣ್ಣಿನ ಮೇಲೆಸಗುವ ಹಿಂಸೆ, ಕ್ರೌರ್ಯ, ಅನ್ಯಾಯ, ಲೈಂಗಿಕ ಶೋಷಣೆಯನ್ನು ಅನಾವರಣಗೊಳಿಸುವುದು ಗೀತಾ ನಾಗಭೂಷಣರವರ ಕತೆ, ಕಾದಂಬರಿಗಳ ತಾತ್ವಿಕ ಸ್ವರೂಪವಾಗಿದೆ. ಕೆಳಗೇರಿಯ ಕತ್ತಲು ಲೋಕದಲ್ಲಿ ನರಳುವ ಹೆಣ್ಣುಗಳು, ಕೆಲವೊಮ್ಮೆ ವ್ಯವಸ್ಥೆಯ ಕ್ರೂರತೆಗೆ ಬಲಿಯಾಗಿ, ಅಸಹಾಯಕತೆಯನ್ನು ಅನುಭವಿಸುತ್ತಾರೆ. ಮತ್ತೆ ಕೆಲವೊಮ್ಮೆ ವ್ಯವಸ್ಥೆಯ ವಿರುದ್ಧ ಸಿಡಿದೇಳುವ ಪ್ರಕ್ರಿಯೆಯನ್ನೂ ಕಾಣಬಹುದಾಗಿದೆ. ದಲಿತ ಮಹಿಳೆಯ ದುರಂತ ಸ್ಥಿತಿಯನ್ನು ವಿವರಿಸುವ 'ಹಸಿಮಾಂಸ ಮತ್ತು ಹದ್ದುಗಳು' ಕಾದಂಬರಿಯನ್ನು ಪ್ರಾತಿನಿಧಿಕವಾಗಿ ಆಯ್ದುಕೊಳ್ಳಲಾಗಿದೆ. ಇದು ಗೀತಾ ನಾಗಭೂಷಣರ ಮೊದಲ ಮತ್ತು ಮಹತ್ವದ ಕೃತಿಯಾಗಿದೆ.

'ಹಸಿಮಾಂಸ ಮತ್ತು ಹದ್ದುಗಳು' ಎಂಬ ಕಾದಂಬರಿಯಲ್ಲಿ ಲಚ್ಚಿ, ವಿಷಯ ಲಂಪಟತೆಯ 'ಹದ್ದುಗಳ' ಭೋಗ ಲಾಲಸೆಗೆ 'ಹಸಿ ಮಾಂಸ'ವಾಗಿ ಬಳಕೆಯಾಗುತ್ತಾಳೆ. ಹರೆಯದಲ್ಲಿ ತಾಯಿಯನ್ನು ಮತ್ತು ತಂದೆಯನ್ನು ಕಳೆದುಕೊಂಡು ಅನಾಥವಾಗುತ್ತಾಳೆ. ಪ್ರೀತಿಸಿದ ಕಾಶಿನಾಥನೊಂದಿಗೆ ಮದುವೆಯಾಗಿ ಸುಖವಾಗಿರಬೇಕಾಗಿದ್ದ ಆಕೆ, ಕುಂಬಳಕಾಯಿ 'ಕದ್ದ' ನೆಪದಿಂದ ಜೀವನವಿಡೀ ರಣಹದ್ದುಗಳ ಪಾಲಾಗಬೇಕಾಗುತ್ತದೆ. ಮೈ-ಕೈ ಮುಟ್ಟಲು ಬಂದ ಗುಡಿಯ ಪೂಜಾರಿ ಭರಮ್ಯಾನನ್ನು ದಿಟ್ಟವಾಗಿ

ಎದುರಿಸುವ ಲಚ್ಚಿ ಪೊಲೀಸರ ಆಕ್ರಮಣವನ್ನು ಎದುರಿಸಲಾಗದೆ ಕೈಚೆಲ್ಲಿ ಕೂಡುತ್ತಾಳೆ. ಇಂಥ ಸಮಯದಲ್ಲಿ ಸಮಾಧಾನಿಸಿ, ಲಚ್ಚಿಯ ಮನಸ್ಸನ್ನು ಸ್ಥಿಮಿತಕ್ಕೆ ತರಲು ಪ್ರಯತ್ನಿಸಬೇಕಿದ್ದ ಕಾಶಿನಾಥ, ವಿಷಯ ತಿಳಿದು ಮತ್ತೆ ತಿರುಗಿ ನೋಡದಂತೆ ನಡೆದುಬಿಡುತ್ತಾನೆ. ಜುಲ್ಮಾನೆ ಕಟ್ಟಲಾಗದೆ, ಸೆರೆಮನೆ ವಾಸ ಅನುಭವಿಸಿ, ನಂತರ 'ಸ್ತ್ರೀ ನಿಕೇತನ'ಕ್ಕೆ ರವಾನಿಸಲ್ಪಡುತ್ತಾಳೆ. ಅಲ್ಲಿಯೂ ಬಾಣಲೆಯಿಂದ ಬೆಂಕಿಗೆ ಬಿದ್ದ ಅನುಭವವಾಗುತ್ತದೆ. ಅಬಲೆಯರಿಗೆ ಆಶ್ರಯ ನೀಡುವ ನೆಪದಲ್ಲಿ 'ಸ್ತ್ರೀ ನಿಕೇತನಗಳು' ವೇಶ್ಯಾವಾಟಿಕೆ ನಡೆಸುವ ಕ್ರೂರ ತಾಣಗಳಾಗಿರುವುದನ್ನು ಕಾದಂಬರಿ ಪರೋಕ್ಷವಾಗಿ ಖಂಡಿಸುತ್ತದೆ. ಹಲವು ಗಂಡಸರೊಂದಿಗೆ ತನ್ನನ್ನು ಹಂಚಿಕೊಳ್ಳುವ ಬದಲು ಒಬ್ಬ ಗಂಡಸಿನೊಂದಿಗೆ ಇರುವುದು ಮೇಲೆಂದು ತನ್ನ ರೂಪಕ್ಕೆ ಮನಸೋತ ವಿದುರ ಬಸಣ್ಣಿಯೊಂದಿಗೆ ಲಚ್ಚಿ ಮದುವೆಯಾಗುತ್ತಾಳೆ. ಆದರೆ ಆಕೆ ಸೆರೆಮನೆಯಲ್ಲಿದ್ದ ವಿಷಯ ತಿಳಿದಾಗ, ಬಸುರಿ ಎನ್ನುವುದನ್ನೂ ಕಡೆಗಣಿಸಿ, ಹೊರ ದಬ್ಬುತ್ತಾನೆ. ಗಂಡು ಜಾತಿಯ ಬಗ್ಗೆಯೇ ಲಚ್ಚಿಗೆ ಅಸಹನೆ ಉಂಟಾಗುತ್ತದೆ.

"ಒಂದೇ.. ಎರಡೇ... ಅವಳ ಬಾಳಿನಲ್ಲಿ ಗೂಳಿಗಳಂತೆ ಬಂದು ಅವಳನ್ನು ಬಲವಂತವಾಗಿ ಹಿಂಸಿಸಿ, ಭೋಗಿಸಿ ಬಿಟ್ಟು ಹೋದ ಈ ಎಲ್ಲ ಗಂಡುಗಳು. ಇದೆಲ್ಲಾ ನೆನೆದಾಗ ಲಚ್ಚಿಗೆ ತಮ್ಮ ಹಳ್ಳಿಯ ಲಕ್ಕವ್ವನ ಕಾರ್‍ಯಾದ ಕೋಣಗಳು ಕಣ್ಮುಂದೆ ಬಂದು ನಿಲ್ಲುತ್ತವೆ. ದೇವಿಯ ಹೆಸರ ಮೇಲೆ ಬಿಟ್ಟ ಕೋಣಗಳು ಎಲ್ಲೆಂದರಲ್ಲಿ, ಯಾರ ಹೊಲವಾದರೂ ಸರಿ, ನುಗ್ಗಿ ತಮಗೆ ಬೇಕಾದಲ್ಲಿ ಬಾಯಿ ಹಾಕಿ ರಾಶಿಗೆ ಬಂದ ಬೆಳೆ ತಿಂದರೂ ಹೊಲದವರು ಅವುಗಳನ್ನು ಹೊಡೆಯುವ ಹಾಗಿಲ್ಲ. ತಮ್ಮ ಕಣ್ಣ ಮುಂದೆಯೇ ತಾವು ಉತ್ತು ಬಿತ್ತಿದ್ದು ಸಮೃದ್ಧ ಬೆಳೆಯಾಗಿ ನಿಂತಿದ್ದನ್ನು ಹಾಳು ಮಾಡುತ್ತವೆ. ಈ ವಕ್ಕಲಿಗರು ಕೈಕೈ ಹಿಸುಕುವುದಿಲ್ಲವಾದರೂ, ಮನಸ್ಸಿನಲ್ಲಿ ಕಳಿಕಳ ಎನ್ನದೇ ಇರಲಾರರು. ಆದರೆ ಅವುಗಳನ್ನು ಹೊಡೆದೋಡಿಸುವ ಧೈರ್ಯ ಈಗಲೂ, ಈ ದಿನಕ್ಕೂ ಅವರಿಗೆ ಬಂದಿಲ್ಲ" (ಹಸಿಮಾಂಸ ಮತ್ತು ಹದ್ದುಗಳು, ಪುಟ–೭೯) ಎಂಬುದು ಕಾದಂಬರಿಕಾರರ ನಿಲುವಾಗಿದೆ. ಹೆಣ್ಣು ಎಂದರೆ, ಭೋಗದ ವಸ್ತುವನ್ನಾಗಿ ಪರಿಗಣಿಸುವ ಕುಲಕರ್ಣಿ, ಗೌಡರು, ಪೊಲೀಸ್, ಸ್ತ್ರೀ ನಿಕೇತನ ಮುಂತಾದ ವ್ಯವಸ್ಥೆಗಳ ಬಗ್ಗೆ ಆಕ್ರೋಶ ವ್ಯಕ್ತಪಡಿಸುತ್ತಾರೆ. ಜತೆಗೆ ಎದುರಿಸಲಾಗದ ಅಸಹಾಯಕತೆಯನ್ನೂ ಮುಂದಿಟ್ಟಿದ್ದಾರೆ. ಕಾದಂಬರಿಯ ಕೊನೆಗೆ ಆತ್ಮಹತ್ಯೆಗೆ ಪ್ರಯತ್ನ ಪಟ್ಟಾಗ ಲಚ್ಚಿಯ ಮಗು ಸತ್ತು ಆಕೆ ಬದುಕುಳಿಯುತ್ತಾಳೆ. ಮಗುವನ್ನು ಕೊಂದದ್ದಕ್ಕೆ ಮತ್ತೆ ಜೀವಾವಧಿ ಶಿಕ್ಷೆ ಲಚ್ಚಿಗೆ ಲಭ್ಯವಾಗುತ್ತದೆ. ಲಚ್ಚಿಯ ದುರಂತ ಬದುಕು ವ್ಯವಸ್ಥೆಯ ಕ್ರೂರತೆಯನ್ನು ಮನದಟ್ಟು ಮಾಡುತ್ತದೆ.

ಮೇಲಿನ ಕಾದಂಬರಿಯ ಜಾಡನ್ನು 'ದಂಗೆ' ಕಾದಂಬರಿ ಹೊಂದಿದೆ. ಆದರೆ ವ್ಯವಸ್ಥೆಯ ವಿರುದ್ಧ ದಂಗೆ ಏಳುವ ದುರ್ಗಿ ನಮಗೆ ಎದುರಾಗುತ್ತಾಳೆ. ಮೊದಲು ಭಾವನಿಂದಲೇ ಲೈಂಗಿಕ ಅತ್ಯಾಚಾರಕ್ಕೆ ಒಳಗಾಗುತ್ತಾಳೆ. ಕಟ್ಟಿಕೊಂಡ ಗಂಡ ಓಡಿಹೋದ ಸಮಯವನ್ನು ಸಾಧಿಸಿ ಜಮೀನುದಾರ ಗೋವಿಂದರಾವ್ ದುರ್ಗಿಯನ್ನು 'ರಖೇಲಿ'ಯನ್ನಾಗಿ ಮಾಡುತ್ತಾನೆ. ಗರತಿಯಾಗಿರಬೇಕೆಂದು ಬಯಸಿದ

ದುರ್ಗಿ ಮಗಳು ಸ್ವಾತಿಯ ಭವಿಷ್ಯಕ್ಕಾಗಿ 'ರಖೇಲಿ'ಯಾಗಿಯೇ ಉಳಿಯಬೇಕಾಗುತ್ತದೆ. ಕಾದಂಬರಿಯ ತಿರುವಿನಲ್ಲಿ ಸ್ವಾತಿ ಗೋವಿಮದರಾವ್‌ನ ಮಗ ಸೀನಪ್ಪನಲ್ಲಿ ಅನುರಕ್ತಳಾಗುತ್ತಾಳೆ. ಸೀನಪ್ಪನೂ ಸ್ವಾತಿಯನ್ನು ಇಷ್ಟ ಪಡುತ್ತಾನೆ. ಗೋವಿಂದರಾವ್ ಪ್ರೀತಿಗೆ ಅನೇಕ ತಡೆಗಳನ್ನು ಒಡ್ಡುತ್ತಾನೆ. ಸ್ವಾತಿಯನ್ನೂ 'ರಖೇಲಿ'ಯಾಗಿಸುವ ಪ್ರಯತ್ನ ಮಾಡುತ್ತಾನೆ. ಇದರಿಂದ ರೋಸಿ ಹೋದ ದುರ್ಗಿ, ಮಗಳ ಬಾಳು ಸುಖವಾಗಲೆಂದು ಬಯಸಿ, ಸಮಯ ಸಾಧಿಸಿ ಗೋವಿಂದರಾವನನ್ನು ರೈಲಿನಿಂದ ಹೊರದೂಡುತ್ತಾಳೆ. ಜಮೀನ್ದಾರರು ದಲಿತ ಹೆಣ್ಣು ಮಕ್ಕಳ ಮೇಲೆ ನಡೆಸುವ ಲೈಂಗಿಕ ಶೋಷಣೆಯನ್ನು ದುರ್ಗಿಯ ಪಾತ್ರದ ಮೂಲಕ ಕಾದಂಬರಿಕಾರರು ಖಂಡಿಸಿದ್ದಾರೆ.

ಕಾದಂಬರಿಕಾರರ ನೇರ ನಿರೂಪಣೆಯಲ್ಲಿರುವ ಕಾದಂಬರಿ, ಮಡಿವಂತಿಕೆಯ ಭಾಷೆಯನ್ನು ಧಿಕ್ಕರಿಸಿ, ಗುಲ್ಬರ್ಗಾ ಭಾಗದ ಕೆಳಗೇರಿಯ ಸಮುದಾಯದ ಆಡು ಮಾತಿನ ಶೈಲಿಯನ್ನು ಅಳವಡಿಸಿಕೊಂಡಿದೆ. ಗೀತಾ ನಾಗಭೂಷಣರ ಹೆಚ್ಚು ಕೃತಿಗಳಲ್ಲಿ ದುಡಿದು ತಿನ್ನುವ ದಲಿತ ಹೆಣ್ಣಿನ ನೋವು, ಸಂಕಟ, ಹಿಂಸೆಗಳನ್ನು ವಿವಿಧ ಆಯಾಮಗಳಲ್ಲಿ ಮೂಡಿಸಿದ್ದಾರೆ. ಆಡು ಮಾತಿನ ಸಂಭಾಷಣೆಗಳನ್ನು ಹೆಚ್ಚಾಗಿ ಬಳಸಿಕೊಂಡಿದ್ದಾರೆ.

# ಸಮಾರೋಪ

# ಮಹಿಳಾ ಸಾಹಿತ್ಯದ ಅಭಿವ್ಯಕ್ತಿ ಕ್ರಮದ ತಾತ್ವಿಕ ಸ್ವರೂಪ

## ಅಧ್ಯಯನದ ಫಲಿತಗಳು

ಮಹಿಳಾ ಸಾಹಿತ್ಯವನ್ನು ಪ್ರತ್ಯೇಕವಾಗಿ ನೋಡುವ ಕ್ರಮದಿಂದ ಹಲವಾರು ಅಧ್ಯಯನ ಸಾಧ್ಯತೆಗಳು ಗೋಚರಿಸುತ್ತವೆ. ಮಹಿಳೆಯರ ಸಾಹಿತ್ಯವನ್ನು, ಅನೇಕ ವಿಮರ್ಶಕರು, ಸಂಶೋಧಕರು ವಿವಿಧ ನೆಲೆಗಳಲ್ಲಿ ಶೋಧಿಸಲು ಪ್ರಯತ್ನಿಸಿದ್ದಾರೆ. ಈ ಶೋಧನೆಯ ಜಾಡು ಹಿಡಿದು, ಮಹಿಳಾ ಸಾಹಿತ್ಯದಲ್ಲಿ ಕಂಡುಬರುವ ವಿಶಿಷ್ಟತೆಗಳನ್ನು ತಾತ್ವಿಕ ಆಯಾಮದಲ್ಲಿ ವಿಶ್ಲೇಷಿಸಿರುವುದು ಈ ಪ್ರಬಂಧದ ಫಲಿತವಾಗಿದೆ.

ಮಹಿಳಾ ಸಾಹಿತ್ಯ ನಡೆದು ಬಂದ ದಾರಿಗೆ ದೀರ್ಘ ಇತಿಹಾಸವಿಲ್ಲದಿರುವುದಕ್ಕೆ ಮಹಿಳೆಯರ ತೊಡಗಿಸಿಕೊಳ್ಳುವಿಕೆ ಕಾರಣವಲ್ಲ. ಆಕೆಯ ಬರವಣಿಗೆಯನ್ನು ಪ್ರತಿಬಂಧಿಸಿದ ಸಾಮಾಜಿಕ ಕಟ್ಟುಪಾಡುಗಳು ಪ್ರಮುಖ ಪಾತ್ರ ವಹಿಸಿದೆ ಎಂಬುದನ್ನು ಅಧ್ಯಯನ ಸೂಕ್ಷ್ಮವಾಗಿ ಗಮನಿಸಿದೆ. ಮಹಿಳಾ ಸಾಹಿತ್ಯವನ್ನು, ಅದರ ವಿಶೇಷತೆಯೊಂದಿಗೆ ಗುರುತಿಸದ ಉದಾರವಾದಿ ನಿಲುವನ್ನು, ಸಾಪೇಕ್ಷ ನೆಲೆಯನ್ನು ಅಧ್ಯಯನ ಅಲ್ಲಗಳೆದಿದೆ.

ಪ್ರಬಂಧದ ಸಂಶೋಧನೆಯ ಸಿದ್ಧಾಂತವನ್ನು ಮಂಡಿಸುವಾಗ, ಮಹಿಳಾ ಸಾಹಿತ್ಯ ರಚನೆಯ ಸಾಂಸ್ಕೃತಿಕ ಪರಿಸರವನ್ನು ಅನುಲಕ್ಷಿಸುವ ಕಾರ್ಯವನ್ನು ಕೈಗೊಳ್ಳಲಾಗಿದೆ. ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಕಾಲಘಟ್ಟದ ಪರಿಸರವನ್ನು ಕೇಂದ್ರವಾಗಿಟ್ಟುಕೊಳ್ಳಲಾಗಿದೆ. ಸ್ವಾತಂತ್ರ್ಯ ಹೋರಾಟದ ಭಾಗವಾಗಿ ರೂಪಗೊಂಡ ರಾಷ್ಟ್ರೀಯತೆ, ಉಪ ರಾಷ್ಟ್ರೀಯತೆ, ಸಮಾಜ ಸುಧಾರಣಾವಾದ ಮುಂತಾದ ಪರಿಕಲ್ಪನೆಗಳಲ್ಲಿ ಸಮಾಜ ಸುಧಾರಕರ ಮತ್ತು ಮಹಿಳಾ ಬರಹಗಾರರ ನಿಲುವುಗಳನ್ನು ದಾಖಲಿಸಲಾಗಿದೆ. ಬ್ರಿಟೀಶರ ಆಡಳಿತ ಕ್ರಮದಲ್ಲಿ ಜಾರಿಗೊಂಡ ಮಹಿಳಾ ಪರ ಯೋಜನೆ ಮತ್ತು ಕಾನೂನುಗಳನ್ನು ಮಹಿಳಾ ಬರಹಗಾರರು ಸ್ವಾಗತಿಸಿದ ರೀತಿ, ಭಿನ್ನ ಸ್ವರೂಪವನ್ನು ಪಡೆದಿದ್ದಿತು. ಸುಧಾರಣಾ ಪರವಾದ ನಿಲುವುಗಳಲ್ಲಿ ಮುಖ್ಯವಾದ– ಬಾಲ್ಯ ವಿವಾಹದ ವಿರೋಧ; ವರದಕ್ಷಿಣೆ ಪದ್ಧತಿಯ ವಿರೋಧ; ಶಿಕ್ಷಣಕ್ಕೆ ಪ್ರೋತ್ಸಾಹ; ವೇಶ್ಯಾ ಸಮಸ್ಯೆ ನಿವಾರಣೆ; ವಿಧವಾ ವಿವಾಹ ಪುರಸ್ಕಾರದ ಬಗ್ಗೆ ಹೆಚ್ಚಿನ ವಾಗ್ವಾದಗಳು ನಡೆದವು. ಬಾಲ್ಯ ವಿವಾಹ, ವರದಕ್ಷಿಣೆಯಂತಹ ಪದ್ಧತಿಗಳ ವಿರುದ್ಧ ಎಲ್ಲ ಮಹಿಳಾ ಬರಹಗಾರರು ದನಿಯೆತ್ತಿದ್ದಾರೆ. ಆದರೆ, ಹೆಚ್ಚು ಚರ್ಚೆಗೆ ಒಳಪಟ್ಟ ಸಂಗತಿಗಳೆಂದರೆ: ಮಹಿಳೆಯರಿಗೆ ನೀಡಬೇಕಾದ ಶಿಕ್ಷಣದ ಸ್ವರೂಪ ಮತ್ತು ವಿಧವಾ ಪುನರ್ ವಿವಾಹ ಪದ್ಧತಿಯ ಪರ–ವಿರೋಧಗಳ

ಬಗ್ಗೆ ಎಂಬುದನ್ನು ಅಧ್ಯಯನ ಗಮನಿಸಿದೆ. ಸಮಾಜ ಸುಧಾರಣಾ ವಿಷಯಗಳನ್ನು ಬದಿಗಿಟ್ಟು, ಬದುಕಿನ ಅಂತಃಸತ್ವವನ್ನು ಶೋಧಿಸುವ ಬರಹಗಳನ್ನು ಈ ಭಾಗದಲ್ಲಿ ಕಾಣಬಹುದಾಗಿದೆ.

ಸ್ವಾತಂತ್ರ್ಯೋತ್ತರ ಪರಿಸರದಲ್ಲಿ ನಿರ್ಮಾಣವಾದ ಬಂಡವಾಳಶಾಹಿ ವ್ಯವಸ್ಥೆ; ಜಾಗತೀಕರಣ; ಉದಾರೀಕರಣ; ಕೈಗಾರಿಕೋದ್ಯಮ ಮುಂತಾದ ಪರಿಕಲ್ಪನೆಗಳು ಮಹಿಳಾ ಬರಹದ ದಿಕ್ಕನ್ನು ಬದಲಿಸಿದವು. ಶಿಕ್ಷಣ ಮತ್ತು ಉದ್ಯೋಗದ ಅವಕಾಶಗಳಲ್ಲಿ ಮಹಿಳೆಯರು ಹೊರ ಜಗತ್ತಿಗೆ ತೆರೆದುಕೊಂಡ ರೀತಿ, ಸಾಂಪ್ರದಾಯಿಕ ರೂಢಿ ನಂಬಿಕೆಗಳ ಬದುಕನ್ನು ಪ್ರಶ್ನಿಸುವ ವಿಧಾನ ಭಿನ್ನ ಸ್ವರೂಪವನ್ನು ಪಡೆಯಿತು. ಮಹಿಳೆಯರಿಗೆ ಲಭ್ಯವಾದ ಅವಕಾಶಗಳೊಂದಿಗೆ; ಹೊರ ಜಗತ್ತಿನಲ್ಲಿ ಎದುರಿಸಬೇಕಾದ ಸಮಸ್ಯೆಗಳ ಸರಮಾಲೆಯೂ ದೊಡ್ಡ ಪ್ರಮಾಣದಲ್ಲಿದ್ದಿತು. ಮಹಿಳಾ ಹೋರಾಟಗಳಿಂದ ಮೂಡಿದ ಎಚ್ಚರ, ವ್ಯಯಕ್ತಿಕ ಬದುಕಿನ ಸಂಘರ್ಷಗಳು ಬರಹದ ರೂಪರೇಷೆಗಳನ್ನು ನಿರ್ಧರಿಸಿದವು.

ಸಾವಿರಾರು ವರ್ಷಗಳ ಇತಿಹಾಸವನ್ನು ಹೊಂದಿದ 'ಪುರುಷ ಸಾಹಿತ್ಯ' ಚರಿತ್ರೆಯಲ್ಲಿ ಸಾಹಿತ್ಯ ಬರಹಗಳ ಅನೇಕ ಮಜಲುಗಳು ಪ್ರಯೋಗಗೊಂಡಿದ್ದವು. ಪಿತೃಪ್ರಧಾನ ವ್ಯವಸ್ಥೆಯಲ್ಲಿ ಸಹಜವಾಗಿ ಬರಹದ ಹಕ್ಕು ಪುರುಷ ಜಗತ್ತಿನಲ್ಲಿ ಕೇಂದ್ರೀಕೃತಗೊಂಡಿತು. ನಿತ್ಯದ ಬದುಕಿನ ಅನುಭವದಲ್ಲಿ ಕಾವ್ಯ-ಕತೆಗಳನ್ನು ಹೆಣೆಯುತ್ತಾ, ಪೀಳಿಗೆಯಿಂದ ಮುಂಪೀಳಿಗೆಗೆ ಮೌಖಿಕವಾಗಿ ರವಾನಿಸುತ್ತಿದ್ದ ಮಹಿಳೆಯರ ಸೃಜನಶೀಲ ಶಕ್ತಿಯ ಅಗಾಧತೆಯನ್ನು ಪುರುಷ ಲೋಕ ಅವಗಣನೆಗೆ ಈಡು ಮಾಡಿತು. ಅದಕ್ಕೆ ಮುಖ್ಯ ಕಾರಣ ಲಿಖಿತ ಬರವಣಿಗೆಯ 'ರಾಜಕಾರಣ', ಮುದ್ರಣ, ಪ್ರಕಟಣೆಯ ಹಕ್ಕು ಮುಂತಾದ ಹೊರಗಿನ ಸಂಗತಿಗಳನ್ನು ತಿಳಿಯದ ಮಹಿಳೆಯರು ಲಿಖಿತ ರೂಪದ ಸಾಹಿತ್ಯಕ್ಕೆ ಸಿದ್ಧಗೊಳ್ಳಲು ಹಲವಾರು ವರ್ಷಗಳೇ ಹಿಡಿಯಿತು. ಹಾಗಾಗಿ ಮಹಿಳಾ ಬರಹಗಳ ಹಿನ್ನೆಲೆಯಲ್ಲಿ ಪುರುಷ ಅಪೇಕ್ಷೆಗಳಿರುವುದನ್ನ ನಾವು ಮರೆಯುವಂತಿಲ್ಲ. ಆದರೆ, ಪುರುಷ ಅಪೇಕ್ಷೆಗಳನ್ನು ಪೂರೈಸುವಂತೆ ಮೇಲ್ನೋಟಕ್ಕೆ ಕಾಣುವ ಬರಹಗಳಲ್ಲಿ, ಅದನ್ನು ವಿರೋಧಿಸಿದ ಒಳನೋಟದ ಸುಳಿವುಗಳೂ ಗೋಚರಿಸತೊಡಗಿದವು. ಅಸ್ತಿತ್ವದ ಪ್ರಜ್ಞೆ ಹೆಚ್ಚಾಗತೊಡಗಿದಂತೆ, ಮಹಿಳೆಯರ ಕೃತಿಗಳ ವಸ್ತು-ಆಶಯ-ನಿರೂಪಣಾ ತಂತ್ರಗಳು ಬದಲಾದವು.

ಅಭಿವ್ಯಕ್ತಿಗೆ ಸಂಬಂಧಿಸಿದಂತೆ, ವಿಸ್ತೃತವಾಗಿ, ಎಳೆ ಎಳೆಗಳನ್ನು ಬಿಡಿಸಿ ಹೇಳಬೇಕಾದ ಕತೆ-ಕಾದಂಬರಿ ಪ್ರಕಾರಗಳಿಗಿಂತ ಹೇಳಬೇಕಾದುದನ್ನು ಅಡಗಿಸಿ ಹೇಳುವ, ಸಂಕೇತ, ರೂಪಕಗಳ ಸೃಷ್ಟಿಗೆ ಅವಕಾಶವಿರುವ ಕಾವ್ಯ ರಚನೆ ಮಹಿಳಾ ಬರಹಗಾರರಿಗೆ ಆಪ್ತವಾಗಿದೆ. ಮಹಿಳೆ, ತನ್ನ ಬದುಕಿನ ಅನುಭವಗಳನ್ನು; ಸಮಸ್ಯೆ-ಸವಾಲು- ಸಂಘರ್ಷಗಳನ್ನು ಎದುರಿಸಿದ ಬಗೆಯನ್ನು ಕತೆ-ಕಾದಂಬರಿಗಳು ವಿಭಿನ್ನ ರೀತಿಯಲ್ಲಿ ಬಿಚ್ಚಿಡುತ್ತವೆ.

ಕಾವ್ಯ-ಕತೆ-ಕಾದಂಬರಿಗಳೆಂಬ ಪ್ರತ್ಯೇಕ ಪ್ರಕಾರಗಳ ಹಿನ್ನೆಲೆಯಲ್ಲಿ ಮಹಿಳಾ ಸಾಹಿತ್ಯದ ಅಭಿವ್ಯಕ್ತಿ ಕ್ರಮವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅವುಗಳನ್ನು ಅನುಸರಿಸಿ ಅಧ್ಯಯನ ಮಾಡಿದ ಫಲಿತಗಳನ್ನು ಕೆಳಗಿನಂತೆ ಚರ್ಚಿಸಬಹುದಾಗಿದೆ.

### ಅ) ಪೌರಾಣಿಕ ಪಾತ್ರಗಳ ಪುನರವಲೋಕನ ಮಾದರಿ

ಈ ಪರಿಕಲ್ಪನೆ ಕಾವ್ಯ-ಕತೆ-ಕಾದಂಬರಿಗಳಲ್ಲಿ ಬಳಕೆಯಾಗಿರುವುದನ್ನು ದಾಖಲಿಸಲಾಗಿದೆ. ಒಂದು ಸಮುದಾಯದ ಒಳ ಮನಸ್ಸಿನ ಅಭಿವ್ಯಕ್ತಿಗಳಾದ ಪುರಾಣಗಳ ಆದರ್ಶ, ಅಪೇಕ್ಷೆ, ನೀತಿ, ಮೌಲ್ಯಗಳನ್ನು ವೈಚಾರಿಕ ದೃಷ್ಟಿಕೋನದಿಂದ ಪುನಃ ಓದಿಗೆ ಒಳಪಡಿಸುವ ಕಾರ್ಯ ಪ್ರಾರಂಭವಾದುದು ೨೦ರ ದಶಕದ ನಂತರ. ಪುರುಷ ಪ್ರಣೀತ ನಿಲುವುಗಳಲ್ಲಿ ನಿರ್ಮಾಣಗೊಂಡ ವೇದ, ಉಪನಿಷತ್ತು, ರಾಮಾಯಣ, ಮಹಾಭಾರತ ಮುಂತಾದ ಕೃತಿಗಳಲ್ಲಿ ನಿರೂಪಿತವಾಗಿರುವ ಪಾತ್ರಗಳನ್ನು ಪುನರವಲೋಕನಕ್ಕೆ ಒಳಪಡಿಸುವುದು ಮಹಿಳಾ ಬರಹಗಾರರ ಪ್ರಧಾನ ಕಾಳಜಿಯಾಗಿದೆ. ಪುರಾಣಗಳಲ್ಲಿ ಯಾವ ಮೌಲ್ಯಗಳನ್ನು ಶ್ರೇಷ್ಠವೆಂದು ಪರಿಗಣಿಸಲಾಗಿತ್ತೋ ಅಂತಹ ಮೌಲ್ಯಗಳನ್ನು ಖಂಡಿಸುವ, ಮರು ವ್ಯಾಖ್ಯಾನಕ್ಕೆ ಒಳಪಡಿಸುವ ಕಾರ್ಯ ಮುಂದಾಯಿತು. ಶೋಷಿತ ಪಾತ್ರಗಳಾದ ಸೀತೆ, ದ್ರೌಪದಿ, ಅಹಲ್ಯೆ, ರೇಣುಕೆ, ಶಕುಂತಲೆ ಮುಂತಾದ ಪಾತ್ರಗಳನ್ನು ಮಾಲತಿ ಪಟ್ಟಣಶೆಟ್ಟಿ, ಸುಕನ್ಯಾ ಮಾರುತಿ, ವಿಜಯಾ ದಬ್ಬೆ, ಶಶಿಕಲಾ ವೀರಯ್ಯಸ್ವಾಮಿ, ಮಲ್ಲಿಕಾ ಘಂಟಿ ಮುಂತಾದವರು ತಮ್ಮದೇ ಆದ ದೃಷ್ಟಿಕೋನದಲ್ಲಿ ಪುನರವಲೋಕನಕ್ಕೆ ಒಳಪಡಿಸಿದ್ದಾರೆ. ಸ.ಉಷಾ, ಎಚ್.ಎಲ್.ಪುಷ್ಪಾರವರು ಪೌರಾಣಿಕ ಪಾತ್ರ ಗಳನ್ನು ಕಾವ್ಯದ ಹಿನ್ನೆಲೆಗೆ ಬಳಸಿಕೊಂಡು, ಸತ್ವಯುತ ಪಾತ್ರಗಳನ್ನು, ಪ್ರತಿಭಟನಾತ್ಮಕ ಪಾತ್ರಗಳನ್ನು ಕಟ್ಟಿಕೊಟ್ಟಿದ್ದಾರೆ.

ವರ್ತಮಾನದ ಸಂಗತಿಗಳಿಗೆ ಕಾರಣವನ್ನು ಶೋಧಿಸಲು ಪೌರಾಣಿಕ ಪಾತ್ರಗಳನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಇಂದಿಗೂ ಬದಲಾಗದ ಅಸಹಾಯಕ ಸ್ಥಿತಿಯನ್ನು ನಿರೂಪಿಸುವ ತತ್ವ ಪ್ರಮುಖವಾಗಿದೆ. ಈ ಪರಿಕಲ್ಪನೆಯ ಉದ್ದೇಶವಾಗಿ ವರ್ತಮಾನದ ಸಮಸ್ಯೆಗಳನ್ನು ಸುಲಭವಾಗಿ ಎದುರಿಸಲು ಕೆಲವು 'ಆದರ್ಶ' ಪಾತ್ರಗಳನ್ನು ಕವಿಗಳು ಪರಿಚಯಿಸಿದ್ದಾರೆ. ವ್ಯವಸ್ಥೆಯಲ್ಲಾಗುವ ಅನ್ಯಾಯ, ದಬ್ಬಾಳಿಕೆ, ಪಿತೃ ಪ್ರಧಾನತೆ, ಶೋಷಣೆ, ಹಿಂಸೆ, ಕ್ರೌರ್ಯಗಳ ಅನಾವಣವನ್ನು ಕಾಣಬಹುದಾಗಿದೆ.

ಪೌರಾಣಿಕ ಪಾತ್ರಗಳು, ಕಾವ್ಯ ಪ್ರಕಾರದಲ್ಲಿ ವಿಪುಲವಾಗಿ ಕಾಣಿಸಿಕೊಂಡರೆ, ಕತೆಯಲ್ಲಿ ಕ್ವಚಿತ್ತಾಗಿ ಬಳಕೆಯಾಗಿದೆ. ಬದುಕಿನ ಪುನರವಲೋಕನ ಸಾಧ್ಯವಾಗುವುದು ತನ್ನ ಮನಸ್ಸನ್ನು ತಾನು ಒರೆಗೆ ಹಚ್ಚಿದಾಗ ಎಂಬ ತತ್ವವನ್ನು, ಪೌರಾಣಿಕ ಪಾತ್ರಗಳನ್ನು ಬಳಸಿಕೊಂಡ ಕತೆಗಳಲ್ಲಿ ಗುರುತಿಸಬಹುದಾಗಿದೆ. ಶಕುಂತಲೆ, ಊರ್ಮಿಳೆ, ಕೈಕೇಯಿ ಮುಂತಾದ ಪಾತ್ರಗಳನ್ನು ಕೇಂದ್ರವಾಗಿಟ್ಟುಕೊಂಡ ಕತೆಗಳು, ಹೆಣ್ಣಿನ ಬದುಕನ್ನು ವಿಶ್ಲೇಷಿಸುತ್ತವೆ. ಬದುಕಿನ ಸೋಲು-ವಿಮುಖತೆಗಳಿಗೆ ಕಾರಣಗಳನ್ನು; ದೌರ್ಬಲ್ಯಗಳನ್ನು ಕಂಡುಕೊಂಡಾಗ ವರ್ತಮಾನ-ಭವಿಷ್ಯತ್ತಿನ ಸಾಧ್ಯತೆ-ಸಾಮರ್ಥ್ಯಗಳು ಪ್ರಕಟಗೊಳ್ಳಲು ಸಾಧ್ಯವಾಗುತ್ತವೆ.

ಇನ್ನು ಕಾದಂಬರಿಯಲ್ಲಿ ಬಳಕೆಗೊಂಡ ವಿಧಾನವನ್ನು ಗಮನಿಸೋಣ. ರಾಮಾಯಣ-ಮಹಾಭಾರತ ಮುಂತಾದ ಗ್ರಂಥಗಳಲ್ಲಿ ಗಂಡಿನ ಅಪೇಕ್ಷೆಗೆ ಅನುಗುಣವಾಗಿ ಹೆಣ್ಣು ಪಾತ್ರಗಳು

ತ್ಯಾಗ-ಸಹನಶೀಲೆಯರಾಗಿ, ಪತಿವ್ರತೆಯರಾಗಿ ರೂಪಿಸಲ್ಪಟ್ಟಿದ್ದಾರೆ. ಹೀಗೆ ಹೆಣ್ಣಿಗೆ ಆರೋಪಿಸಲ್ಪಟ್ಟ ಸಾಂಪ್ರದಾಯಿಕ ಮನೋಭಾವಗಳನ್ನು ಕಾದಂಬರಿಗಳಲ್ಲಿ ವಿಸ್ತೃತ ಚರ್ಚೆಗೆ ಒಳಪಡಿಸಲಾಗಿದೆ.

ಎಚ್.ವಿ.ಸಾವಿತ್ರಮ್ಮನವರು 'ಸೀತೆ-ರಾಮ-ರಾವಣ', 'ವಿಮುಕ್ತಿ' ಕಾದಂಬರಿಗಳ ಮೂಲಕ ಕೌಸಲ್ಯೆ, ಸೀತೆ, ಊರ್ಮಿಳೆ, ರಾಮ, ರಾವಣ ಪಾತ್ರಗಳನ್ನು ಚಿಕಿತ್ಸಕ ದೃಷ್ಟಿಕೋನದಿಂದ ವಿವೇಚಿಸಿದ್ದಾರೆ. ವ್ಯವಸ್ಥೆಯ ವಿರುದ್ಧ ತನ್ನದೇ ರೀತಿಯಲ್ಲಿ ಸ್ಫೋಟಗೊಂಡು, ಸಿಡಿದೆದ್ದ ಮಾಧವಿಯ ಬದುಕನ್ನು ಅನುಪಮಾ ನಿರಂಜನರವರು ಪುನರವಲೋಕಿಸಿದ್ದಾರೆ. ವರ್ತಮಾನದ ಶೋಷಿತ ಮಹಿಳೆಯರು ಎಚ್ಚೆತ್ತುಕೊಳ್ಳುವ ಪ್ರಜ್ಞೆಗೆ ಬೆಳಕು ಚೆಲ್ಲುವ ಕೆಲಸ ಮಾಡಿದ್ದಾರೆ. ಎಸ್.ವಿ.ಪ್ರಭಾವತಿಯವರು ದ್ರೌಪದಿಯನ್ನು ಕೇಂದ್ರವಾಗಿಟ್ಟುಕೊಂಡು ಮಹಾಭಾರತದ ಮುಖ್ಯ ಘಟ್ಟಗಳನ್ನು ಪುನರವಲೋಕಿಸಿದ್ದಾರೆ.

### ಆ) ವಾಸ್ತವವಾದಿ ಮಾದರಿ

ಬರಹಗಾರರು ತಮ್ಮ ಸುತ್ತ-ಮುತ್ತಲಿನ ಜಗತ್ತಿನಲ್ಲಿ ಏನೇನನ್ನು ಗ್ರಹಿಸುವರೋ, ಆ ಆಲೋಚನೆ, ಚಿಂತನೆಗಳ ತತ್ವಗಳನ್ನು ಕೃತಿಗಳಲ್ಲಿ ನಿರೂಪಿಸುವ ವಿಧಾನವನ್ನು ವಾಸ್ತವತಾವಾದಿ ಮಾದರಿಯಾಗಿ ಗ್ರಹಿಸಲಾಗಿದೆ. ಕೃತಿಯ ಒಳಗೆ ಕಂಡು ಬರುವ ವಾಸ್ತವ ಸಂಗತಿಗಳು ವ್ಯವಸ್ಥೆಯ ಪ್ರತಿಬಿಂಬವೂ ಆಗಿರಬಹುದು. ಮರು/ಪ್ರತಿ ಸೃಷ್ಟಿಯೂ ಆಗಿರುವ ಸಾಧ್ಯತೆಗಳಿವೆ. ವಾಸ್ತವ ಜಗತ್ತಿನಿಂದ ಪಡೆಯುವ ಅನುಭವಗಳು ಕೇವಲ ಭೌತಿಕ ವಸ್ತು, ವಿವರಗಳಿಗೆ ಸೀಮಿತವಾಗಿರದೆ, ಬುದ್ಧಿ ಪೂರ್ವಕ ವಿಶ್ಲೇಷಣೆಗೆ ದಕ್ಕುವ ಸಂಗತಿಗಳನ್ನು ಇಲ್ಲಿ ದಾಖಲಿಸಲಾಗಿರುತ್ತದೆ. ವಸ್ತು ನಿಷ್ಠತೆಗೆ ಬದಲಾಗಿ ವ್ಯಕ್ತಿ ನಿಷ್ಠತೆಯೂ ಕೃತಿಯ ಹಿನ್ನೆಲೆಯಲ್ಲಿ ಕೆಲಸ ಮಾಡಿರುತ್ತದೆ.

ಮಲೆನಾಡು, ಬಯಲುಸೀಮೆ, ಕರಾವಳಿ ಪ್ರದೇಶಗಳಿಂದ ಬಂದ ಬರಹಗಾರರು ಆಯಾ ಪ್ರದೇಶಗಳ ಭೌಗೋಳಿಕ, ಭಾಷಿಕ ಮತ್ತು ಬದುಕಿನ ಕ್ರಮದ ಭಿನ್ನತೆಗಳನ್ನು ವೈಶಿಷ್ಟ್ಯತೆಗಳನ್ನು ತಮ್ಮ ಕೃತಿಗಳಲ್ಲಿ ಒಡಮೂಡಿಸಿದ್ದಾರೆ. ಕತೆ ಮತ್ತು ಕಾದಂಬರಿ ಪ್ರಕಾರಗಳಲ್ಲಿ ವಾಸ್ತವವಾದಿ ಮಾದರಿಯನ್ನು ಗುರುತಿಸಲಾಗಿದೆ.

ವೈದೇಹಿಯವರ ಕತೆಗಳಲ್ಲಿರುವ ವಾಸ್ತವ ಸಂಗತಿಗಳನ್ನು ಗ್ರಹಿಸುವಾಗ ಕೆಲವು ಅಂಶಗಳನ್ನು ಗಮನದಲ್ಲಿಡಬೇಕು. ಹೆಣ್ಣಿನ ಅನಿಸಿಕೆ, ಆಲೋಚನೆಗಳನ್ನು ಮನ್ನಿಸದೆ ಮುನ್ನಡೆಯುತ್ತಿರುವ ವ್ಯವಸ್ಥೆಯಲ್ಲಿ ಮೌನ, ಸ್ವಗತಗಳ ರೂಪದಲ್ಲಿ ತೋರುವ ಆಸ್ಫೋಟನಕಾರಿ ಪ್ರತಿಕ್ರಿಯೆಗಳಿವೆ. ಸಶಕ್ತ ಬದುಕಿನ ನಿರ್ವಹಣೆಯಲ್ಲಿ ಹೆಣ್ಣು ಲೋಕ ನಿರತವಾಗಿರುವುದನ್ನು ಕಾಣಬಹುದು. ನಿತ್ಯದ ಬದುಕಿನಲ್ಲಿ ಎದುರಾಗುವ ಶ್ರೇಣೀಕರಣ ವ್ಯವಸ್ಥೆ; ತರುಣಿಯರು ಹೊಂದಿರುವ ಭವಿಷ್ಯದ ಕನಸು; ಲೈಂಗಿಕ ಸಂಬಂಧಗಳ ನಿರ್ವಚನೆ; ಅಸಹಾಯಕ ಅನಿವಾರ್ಯ ಸ್ಥಿತಿಗಳಲ್ಲಿ ಹೆಣ್ಣು ಕೈಗೊಳ್ಳುವ ಪರ್ಯಾಯ ಮಾರ್ಗಗಳ ಬಗ್ಗೆ; ಒಂದು ಸಮುದಾಯದ ಸಂಸ್ಕೃತಿಯಲ್ಲಾಗುವ ಪಲ್ಲಟದ ವಾಸ್ತವ ಚಿತ್ರಣವನ್ನು ವೈದೇಹಿಯವರು ತೋರಿಸುತ್ತಾ ಹೋಗುತ್ತಾರೆ. ಅವೇಶದ ನಿಲವು ತಾಳದೇ, ತಣ್ಣನೆಯ ದನಿಯಲ್ಲಿ ವಾಸ್ತವದ ಬದುಕನ್ನು ಮನವರಿಕೆ ಮಾಡಿಸುವುದು ವೈದೇಹಿಯವರ ವಿಶಿಷ್ಟ ಶೈಲಿಯಾಗಿದೆ.

ವೈದೇಹಿಯವರು ಹೆಣ್ಣಿನ ಅಂತರಂಗದ ವಾಸ್ತವಗಳನ್ನು ಭಿನ್ನ ಆಯಾಮಗಳಲ್ಲಿ ಚಿತ್ರಿಸಿದರೆ, ಬಾನು ಮುಷ್ತಾಕ್‌ರವರು, ಮುಸ್ಲಿಂ ಸಮುದಾಯದ ಸಾಂಸ್ಕೃತಿಕ ಆವರಣವನ್ನು, ಧಾರ್ಮಿಕ ಚೌಕಟ್ಟಿನಲ್ಲಿ ಮಹಿಳೆಯರ ನೋವು, ಸಂಕಟ, ತಲ್ಲಣ, ಕ್ರೌರ್ಯಗಳನ್ನು ಅನಾವರಣಗೊಳಿಸಿದ್ದಾರೆ. ಧಾರ್ಮಿಕ ಹಕ್ಕುಗಳಿಗಾಗಿ, ಸಾಮಾಜಿಕ ಸ್ಥಾನ-ಮಾನಗಳಿಗಾಗಿ ಮುಸ್ಲಿಂ ಮಹಿಳೆಯರ ಪ್ರಾತಿನಿಧಿಕ ಧ್ವನಿಯಾಗಿ ಬಾನು ಮುಷ್ತಾಕ್‌ರವರು ತಮ್ಮ ಕತೆಗಳ ಮೂಲಕ ಪ್ರತಿಕ್ರಿಯಿಸಿದ್ದಾರೆ.

ಅಲ್ಪಸಂಖ್ಯಾತ ವರ್ಗವಾದ ಮುಸ್ಲಿಂ ಜನಾಂಗದ ಮಹಿಳೆಯರು ಸಾಹಿತ್ಯ ಲೋಕಕ್ಕೆ ಪ್ರವೇಶಿಸಿರುವುದರಿಂದ, ಆ ವರ್ಗದ ಸಾಂಸ್ಕೃತಿಕ ಬದುಕು, ಧಾರ್ಮಿಕ ಸಂಸ್ಥೆಯಲ್ಲಿ ಹೆಣ್ಣಿನ ತಲ್ಲಣಗಳ ಒಳ ಆವರಣ ಗ್ರಹಿಸಲು, ಅವರ ಕೃತಿಗಳು ಮಹತ್ವದ ಪಾತ್ರ ವಹಿಸಿವೆ. 'ಚಂದ್ರಗಿರಿಯ ತೀರದಲ್ಲಿ' ಎಂಬ ಕಾದಂಬರಿಯ ಮೂಲಕ ಸಾರಾ ಅಬೂಬಕ್ಕರ್‌ರವರೂ ಒಬ್ಬ ಮಹತ್ವದ ಮುಸ್ಲಿಂ ಬರಹಗಾರರಾಗಿದ್ದಾರೆ. ಮುಸ್ಲಿಂ ಸಮುದಾಯದ ಸಂಪ್ರದಾಯ, ರೂಢಿ, ನಂಬಿಕೆಗಳಲ್ಲಿ ನರಳುವ ಹೆಣ್ಣಿನ ವಾಸ್ತವ ಚಿತ್ರಣವನ್ನು ಪಡಿಮೂಡಿಸಿದ್ದಾರೆ. ಹೆಚ್ಚು ಕಾದಂಬರಿಗಳಲಿ 'ತಲಾಖ್' ಸಮಸ್ಯೆಯ ವಿವಿಧ ಮುಖಗಳನ್ನು ನಿಕಷಕ್ಕೆ ಒಳಪಡಿಸಿದ್ದಾರೆ.

ಎಚ್.ನಾಗವೇಣಿಯವರು 'ಗಾಂಧಿ ಬಂದ' ಕಾದಂಬರಿಯ ಮೂಲಕ ಗಾಂಧಿ ಬರುವ/ಬಂದ ಸನ್ನಿವೇಶವನ್ನು ಹಿನ್ನೆಲೆಯಾಗಿಟ್ಟುಕೊಂಡು, ತುಳು ನಾಡಿನ ಸಾಂಸ್ಕೃತಿಕ ಆಚರಣೆಗಳೊಂದಿಗೆ ಸಾಗುವ ಬದುಕಿನ ವಾಸ್ತವ ಚಿತ್ರಣವನ್ನು ಮುನ್ನೆಲೆಗೆ ತಂದಿದ್ದಾರೆ. ದೇಶದೆಲ್ಲೆಡೆ ಬ್ರಿಟಿಶರ ಪಾರತಂತ್ರ್ಯದಿಂದ ಬಿಡುಗಡೆ ಪಡೆಯಲು, ಸ್ವರಾಜ್ಯದ ಕನಸು ಹೊತ್ತ ಹೋರಾಟಗಾರರ ಚಿತ್ರಣವನ್ನು, ಜಮೀನ್ದಾರಿ ವ್ಯವಸ್ಥೆಯಲ್ಲಿ ಸಿಕ್ಕು ನರಳುತ್ತಿರುವ ಕೆಳವರ್ಗದ ಜಾತಿಯ ಮೂಕ ಪಡೆಯ ವಾಸ್ತವ ಚಿತ್ರಣವನ್ನು ಮುಖಾಮುಖಿಯಾಗಿಸಲಾಗಿದೆ.

ಗೀತಾ ನಾಗಭೂಷಣ್‌ರವರು, ವ್ಯವಸ್ಥೆಯಲ್ಲಿ ಉನ್ನತ ಸ್ಥಾನ ಹೊಂದಿದ ಗೌಡ, ಕುಲಕರ್ಣಿ, ದಲಿತ ಪುರುಷರೂ ಸೇರಿದಂತೆ ಎಲ್ಲ ಪುರುಷ ವರ್ಗವು ದಲಿತ ಹೆಣ್ಣಿನ ಮೇಲೆಸಗುವ ಹಿಂಸೆ, ಕ್ರೌರ್ಯ, ಅನ್ಯಾಯ, ಲೈಂಗಿಕ ಶೋಷಣೆಯನ್ನು ಅನಾವರಣಗೊಳಿಸುತ್ತಾರೆ. ಕೆಳಗೇರಿಯ ಕತ್ತಲ ಲೋಕವನ್ನು ಸಾಹಿತ್ಯ ಲೋಕಕ್ಕೆ ಪರಿಚಯಿಸಿದ್ದಾರೆ.

**ಇ) ಮನೋ ವಿಶ್ಲೇಷಣಾತ್ಮಕ ಮಾದರಿ**

ಯಾವುದಾದರೊಂದು ತತ್ವವಾದವನ್ನು ಸೃಜನಶೀಲ ಕೃತಿಗೆ ಅಳವಡಿಸಿಕೊಳ್ಳುವುದು ಸಾಹಸದ ಸಂಗತಿಯಾಗಿದೆ. ಎಡ್ಮಂಡ್ ಫ್ರಾಯ್ಡ್, ಕಾರ್ಲ್‌ಯೂಂಗ್ ಮುಂತಾದವರ ಮನಃಶಾಸ್ತ್ರದ ತತ್ವಗಳನ್ನು ಕತೆ-ಕಾದಂಬರಿಗಳಲ್ಲಿ ಬಳಸಿಕೊಂಡಿರುವುದು, ಕನ್ನಡ ಸಾಹಿತ್ಯ ಇತಿಹಾಸದಲ್ಲಿ ತ್ರಿವೇಣಿಯವರದು ಮೊದಲ ಪ್ರಯತ್ನವಾಗಿದೆ. ತ್ರಿವೇಣಿಯವರು ಸಣ್ಣ ಕತೆಗಳಲ್ಲಿ ಬಿಡಿ-ಬಿಡಿಯಾದ ಸಮಸ್ಯೆಗಳನ್ನು ನಿರ್ವಹಿಸಿದ್ದಾರೆ. ಮಕ್ಕಳ ಮನೋಲೋಕವನ್ನು ವೈಜ್ಞಾನಿಕ ಚಿಂತನೆಗಳ ಮೂಲಕ ಒರೆಗೆ ಹಚ್ಚಿದ್ದಾರೆ.

ಬಾಲ್ಯದ ಅವಧಿಯಲ್ಲಿ ಮಕ್ಕಳ ಮನಸ್ಸನ್ನು ಆಕರ್ಷಿಸುವ–ವಿಕರ್ಷಿಸುವ ಸಂಗತಿಗಳನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ.

'ಬೆಕ್ಕಿನ ಕಣ್ಣು', 'ಶರ ಪಂಜರ' ಮುಂತಾದ ಕಾದಂಬರಿಗಳು ಮನಃಶಾಸ್ತ್ರದ ತಳಹದಿಯೊಂದಿಗೆ ನಿರೂಪಿಸಲ್ಪಟ್ಟಿವೆ. ಹೆಣ್ಣು ಮಾನಸಿಕ ಸ್ಥಿರತೆಯನ್ನು ಕಳೆದುಕೊಳ್ಳಲು ಇರುವ ಸಾಮಾಜಿಕ ಕಾರಣಗಳನ್ನು ಶೋಧಕ್ಕೆ ಒಳಪಡಿಸಿದ್ದಾರೆ.

**ಈ) ಪ್ರತಿಮಾತ್ಮಕ ಮಾದರಿ**

ಭಾಷಾ ಮಾಧ್ಯಮದ ಮೂಲಕ, ಮನಸ್ಸಿನಲ್ಲಿ ಅಚ್ಚೊತ್ತುವಂತೆ ಕಟ್ಟಿಕೊಡುವ ಶಬ್ದ ಚಿತ್ರಗಳು, ವಸ್ತು, ಅಮೂರ್ತ ಆಲೋಚನೆಗಳನ್ನು ಮೂರ್ತಗೊಳಿಸುವ ಕ್ರಿಯೆಯನ್ನು ಈ ಮಾದರಿಯಲ್ಲಿ ಕಾಣಬಹುದಾಗಿದೆ. ಪ್ರತಿಮಾತ್ಮಕ ವಿಧಾನ ಕಾವ್ಯದಲ್ಲಿ ಹೆಚ್ಚು ಶಕ್ತವಾಗಿ ಮೂಡಿ ಬಂದಿದೆ. ದಿನ ಬಳಕೆಯ ಭಾಷೆಯ ಮಿತಿಗಳನ್ನು ಮೀರಲು ಸಾಂಕೇತಿಕ ಚಿನ್ಹೆಗಳನ್ನುಳ್ಳ ಪ್ರತಿಮೆಗಳು, ಉಪಮೆ, ರೂಪಕ, ಅಲಂಕಾರಗಳು ಪ್ರತಿಮೆಗಳಾಗಿ ಬಳಕೆಗೊಳ್ಳುತ್ತವೆ.

ಚ.ಸರ್ವಮಂಗಳಾ, ಪ್ರತಿಭಾ ನಂದಕುಮಾರ್‌ರವರು ಕೌಟುಂಬಿಕ ಸಂಬಂಧಗಳನ್ನು, ಪುರುಷ ಜಗತ್ತಿನ ಲೈಂಗಿಕ ರಾಜಕಾರಣವನ್ನು ಕೇಂದ್ರವಾಗಿಟ್ಟುಕೊಂಡು, ಅನೇಕ ಪ್ರತಿಮೆಗಳನ್ನು ಸೃಷ್ಟಿಸಿದ್ದಾರೆ. ಪ್ರತಿಮಾತ್ಮಕ ಮಾದರಿಯಲ್ಲಿ ಮಂಡಿಸಿರುವ ಕವಿತೆಗಳು ವರ್ತಮಾನದ ಸಂಗತಿಗಳನ್ನು ಮುಖ್ಯಧಾರೆಯನ್ನಾಗಿ ಹೊಂದಿವೆ. ಬದುಕಿನ ಸ್ಥಿತ್ಯಂತರಗಳನ್ನು, ಸಂಘರ್ಷಗಳನ್ನು ಸಾಂಕೇತಿಕ ನೆಲೆಯಲ್ಲಿ ದಾಖಲಿಸಿರುವುದನ್ನು ಕಾಣಬಹುದಾಗಿದೆ.

ರಾಜಲಕ್ಷ್ಮಿ ಎನ್.ರಾವ್ ಮತ್ತು ವೀಣಾ ಶಾಂತೇಶ್ವರ್‌ರವರ ಕತೆಗಳು, ಪ್ರತಿಮಾತ್ಮಕ ವಿಧಾನದಲ್ಲಿರುವುದನ್ನು ಶೋಧಿಸಲಾಗಿದೆ. ವ್ಯಕ್ತಿಕೇಂದ್ರಿತವಾದ ಕಾಳಜಿಗಳನ್ನು ಪ್ರತಿಮಾತ್ಮಕ ಮಾದರಿಯಲ್ಲಿ ಸಮರ್ಥವಾಗಿ ನಿಭಾಯಿಸುವ ಅವಕಾಶವಿದೆ. ವಾಸ್ತವ ಚೌಕ್ಟುಗಳನ್ನು ಮೀರಿದ ಆಲೋಚನಾ ಕ್ರಮವನ್ನು ಈ ಮಾದರಿಯಲ್ಲಿ ಅನುಸರಿಸಿರುವುದನ್ನು ಕಾಣಬಹುದು. ಹೆಣ್ಣು ಪ್ರಶ್ನಿಸಲಾಗದ ವಿಧಿ ನಿಷೇಧಗಳ ಕಟ್ಟುಗಳನ್ನು ಬರಹದ ಮೂಲಕ ಒಡೆಯಲು, ಪ್ರತಿಮಾತ್ಮಕ ವಿಧಾನ ಸೂಕ್ತವಾಗಿ ಬಳಕೆಯಾಗಿದೆ. ಅಂತರಂಗದಲ್ಲಿ ಕೋಲಾಹಲವೆಬ್ಬಿಸುವ ಆಲೋಚನೆಗಳನ್ನು ಮುಕ್ತವಾಗಿ ಹರಿಬಿಡಲು ಹೊಸದಾರಿಯನ್ನು ಶೋಧಿಸುವಾಗ, ಪ್ರತಿಮಾತ್ಮಕ ಮಾದರಿಯು ಬರಹಗಾರರ ಅಭಿವ್ಯಕ್ತಿಗೆ, ಹೊಸ ತಂತ್ರವಾಗಿ ಬಳಕೆಯಾಗಿದೆ.

ರಾಜಲಕ್ಷ್ಮಿಯವರು, ವ್ಯಕ್ತಿಕೇಂದ್ರಿತ ಸಂಗತಿಗಳನ್ನು; ಸಂಗಾತಿಗಳ ಆಯ್ಕೆ ಮತ್ತು ನಿರಾಕರಣೆಯ ಪ್ರಶ್ನೆ; ದಾಂಪತ್ಯದ ಬಿರುಕುಗಳು; ವೇಶ್ಯಾ ಬದುಕು ಹೀಗೆ ಮುಂತಾದ ವಸ್ತುಗಳನ್ನು ನಿಭಾಯಿಸುವಾಗ ಸಾಂಕೇತಿಕ ವಾತಾವರಣವನ್ನು ಸೃಷ್ಟಿಸಿಕೊಂಡಿದ್ದಾರೆ. ಉದಾಹರಣೆಗೆ: ಬೆಳದಿಂಗಳು ಮತ್ತು ಬುದ್ಧ, ವಿರಕ್ತಿಯ ಸಂಕೇತವಾಗದೆ, ಹೊಸ ಬದುಕಿನ ಹಾದಿಯನ್ನು ಕಂಡುಕೊಳ್ಳುವ ಪ್ರತಿಮೆಗಳಾಗಿ ನಿರೂಪಿತಗೊಂಡಿವೆ. ಬಾಡಿದ ಗುಲಾಬಿ, ಬತ್ತಿ ಹೋದ ಪ್ರೀತಿಯನ್ನು ಸೂಚಿಸದೆ, ಪ್ರೀತಿಯ ಅಸ್ತಿತ್ವನ್ನು ಉಳಿಸುವ ಸಂಕೇತವಾಗಿ ಬಳಕೆಗೊಂಡಿದೆ. ವೀಣಾಶಾಂತೇಶ್ವರ್‌ರವರ ಕತೆಗಳು ಹೆಣ್ಣಿನ ಖಾಸಗಿ

ಲೋಕವನ್ನು ಅನಾವರಣಗೊಳಿಸುತ್ತವೆ. ಸಭ್ಯತೆಯ ಮುಖವಾಡಗಳನ್ನು ಕಳಚಿ, ಮನಸ್ಸಿನ ಒಳಗನ್ನು ಮುಕ್ತವಾಗಿ ತೆರೆದಿಟ್ಟಿದ್ದಾರೆ. 'ಮದುವೆ' ಎಂಬ ಸಾಂಪ್ರದಾಯಿಕ ಚೌಕಟ್ಟನ್ನು ಒಡೆಯುವ; ಲೈಂಗಿಕ ಸಂಬಂಧಗಳನ್ನು ಶೋಧಿಸುವ; ಕೌಟುಂಬಿಕ ಚೌಕಟ್ಟಿನಲ್ಲಿ ಸಿಲುಕಿರುವ ಗೃಹಿಣಿಯರ ಅನುಭವ ಸಂದಿಗ್ಧತೆಗಳನ್ನು ಸಾಂಕೇತಿಕವಾಗಿ ಸೆರೆಹಿಡಿದಿದ್ದಾರೆ. ಇಬ್ಬರೂ ಕತೆಗಾರರ ಕತೆಗಳಲ್ಲಿ; ಹೆಣ್ಣಿನ ಅಸ್ತಿತ್ವದ ಶೋಧ ಮುಖ್ಯವಾಗಿದೆ.

**ಉ) ಪತ್ರ/ದಿನಚರಿ ಮಾದರಿ**

ಕೊಡಗಿನ ಗೌರಮ್ಮನವರ ಹೆಚ್ಚು ಕತೆಗಳು ಪತ್ರ ರೂಪದ ಮಾದರಿಯಲ್ಲಿವೆ. ಹೆಣ್ಣಿನ ಅಂತರಾಳದ ವೇದನೆಗಳನ್ನು ಹೊರಹಾಕಲು, ಸಾಮಾಜಿಕ ಕಟ್ಟುಪಾಡುಗಳು, ಸಾಂಪ್ರದಾಯಿಕ ನಿಲುವುಗಳು ತಡೆಯೊಡ್ಡುತ್ತವೆ. ಇಂತಹ ಸಂದಿಗ್ಧತೆಯಲ್ಲಿ, ಬರವಣಿಗೆಯ ನಿರೂಪಣೆಗಾಗಿ ಭಿನ್ನ ತಂತ್ರಗಳನ್ನು ಶೋಧಿಸುವುದು ಮುಖ್ಯವಾಗುತ್ತದೆ. ಕೊಡಗಿನ ಗೌರಮ್ಮನವರು ಪತ್ರ/ದಿನಚರಿ ಮಾದರಿಯನ್ನು ಸಮರ್ಥವಾಗಿ ಬಳಸಿಕೊಂಡು, ವಿಧವೆಯರು ಅನುಭವಿಸುವ ತಳಮಳಗಳನ್ನು ಭಿನ್ನ ಆಯಾಮಗಳಲ್ಲಿ ಚಿತ್ರಿಸಿದ್ದಾರೆ. ಗಂಡಿನ ಕ್ರೌರ್ಯಕ್ಕೆ ಒಳಗಾದ ವಿಧವೆಯರ ಮನ:ಸ್ಥಿತಿ; ಜಾತಿಯಿಂದ ಬಹಿಷ್ಕೃತಗೊಂಡ ವಿಧವೆಯ ಮತಾಂತರ ಪ್ರಕ್ರಿಯೆ; ಅಸಹಾಯಕ ಸ್ಥಿತಿಯಲ್ಲಿ ಆತ್ಮಹತ್ಯೆಗೆ ಪ್ರಯತ್ನಿಸುವ ವಿಧವೆಯರ ಅಂತರಂಗವನ್ನು ಸೂಕ್ಷ್ಮವಾಗಿ ಅವಲೋಕಿಸಿದ್ದಾರೆ. ಇದರೊಂದಿಗೆ, ವಿದೇಶಕ್ಕೆ ಹೋಗಲು ಹಾತೊರೆಯುವ ಗಂಡುಗಳ ವರದಕ್ಷಿಣೆ ದಾಹಕ್ಕೆ ಬಲಿಯಾಗುವ ಹೆಣ್ಣುಗಳು; ಕೌಟುಂಬಿಕ ಬಿಕ್ಕಟ್ಟುಗಳನ್ನು ಪತ್ರಗಳ ಮೂಲಕ ತೆರೆದಿಟ್ಟಿದ್ದಾರೆ.

**ಊ) ಸರ್ವಸಾಕ್ಷಿ ಪ್ರಜ್ಞಾ ಮಾದರಿ**

ಎಚ್.ಎಸ್.ಕಾತ್ಯಾಯಿನಿಯವರ ಕತೆಗಳಲ್ಲಿ, ಸರ್ವಸಾಕ್ಷಿ ಪ್ರಜ್ಞಾ ಮಾದರಿಯಿರುವುದನ್ನು ಗುರುತಿಸಲಾಗಿದೆ. ಈ ಮಾದರಿಯಲ್ಲಿ ವಿವಿಧ ಪಾತ್ರಗಳ ಮನಸ್ಸಿನೊಳಗೆ ಪ್ರವೇಶಿಸಿ, ಅವರ ವರ್ತನೆಗಳನ್ನು, ಭಾವನೆ-ಉದ್ದೇಶಗಳನ್ನು ಶೋಧಿಸಬಹುದಾಗಿದೆ. ಬೇರೆ ಬೇರೆ ಪಾತ್ರಗಳ ಮೂಲಕ ಕತೆಯನ್ನು ವ್ಯಾಖ್ಯಾನಿಸುವ ತಂತ್ರವನ್ನು ಅನುಸರಿಸಲಾಗಿರುತ್ತದೆ. ಪಾತ್ರಗಳೇ ಮುಖ್ಯವಾಗಿರುವುದರಿಂದ, ನಿರೂಪಕರು, ಕೆಲವು ಮುಖ್ಯ ಪಾತ್ರಗಳ ಮೂಲಕ ಕತೆಯ ಕೇಂದ್ರ ಪ್ರಜ್ಞೆಯನ್ನು ವಿಸ್ತರಿಸಿರುತ್ತಾರೆ. 'ಸರ್ವಜ್ಞೆ' ಕತೆಯಲ್ಲಿ ಐವತ್ತಕ್ಕೂ ಹೆಚ್ಚು ಪಾತ್ರಗಳು ಕಥನ ಕ್ರಿಯೆಯಲ್ಲಿ ಪಾಲುಗೊಂಡಿವೆ. ಕನ್ನಡ ಸಣ್ಣಕತೆಗಳಲ್ಲಿ ಇಷ್ಟೊಂದು ಪಾತ್ರಗಳು ಚಲನಶೀಲವಾಗಿರುವುದು ದಾಖಲಾರ್ಹ ಸಂಗತಿಯಾಗಿದೆಯೆಂಬುದನ್ನು ಗುರುತಿಸಲಾಗಿದೆ.

**ಋ) ನಿರಚನಾವಾದಿ ಮಾದರಿ**

ಭಾಷೆಗೆ ನಿರ್ಧಿಷ್ಟವಾದ ತರ್ಕವಿದೆ ಮತ್ತು ಅದಕ್ಕೊಂದು ಕೇಂದ್ರವಿದೆ ಎಂಬುದನ್ನು ಈ ವಾದ ತಿರಸ್ಕರಿಸುತ್ತದೆ. ನಾನು ಮಾತನಾಡುವ ಭಾಷೆಗೆ, ವ್ಯಕ್ತಪಡಿಸುವ ಬರಹಕ್ಕೆ ನಿರ್ಧಿಷ್ಟವಾದ

ಅರ್ಥವಿದೆಯೆಂದು ಭಾವಿಸುವುದು ಭ್ರಮಾತ್ಮಕ ನಿಲುವಾಗಿದೆ. ಯಾವುದೇ ಪಠ್ಯವು ನೀಡುವ ಅರ್ಥ ಮುಕ್ತಾಯವಿಲ್ಲದ್ದು. ಒಂದು ವಾಕ್ಯದಲ್ಲಿ ಬಳಸುವ ಪದಗಳು ಒಂದು ಪದವು ಮತ್ತೊಂದು ಪದದ ಮೇಲೆ ಅಧಿಕಾರವನ್ನು ಚಲಾಯಿಸುತ್ತದೆ. ಡೆರಿಡಾ ಮತ್ತು ಸಸ್ಯೂರ್‌ನ 'ನಿರಚನವಾದ'ದ ಪ್ರಭಾವವಿರುವ ಮಮತಾ ಜಿ. ಸಾಗರ್‌ರವರು ಭಾಷೆಯ ನಿರ್ದಿಷ್ಠ ಅರ್ಥವನ್ನು ಒಡೆಯುವ ಕವಿತೆಗಳ ಪ್ರಯೋಗಕ್ಕೆ ಮುಂದಾಗಿದ್ದಾರೆ.

**ಎ) ಭಾವ ಪ್ರಧಾನ ಮಾದರಿ**

ಮಹಿಳೆಯರ ಕಾವ್ಯವನ್ನು ಅಧ್ಯಯನ ಮಾಡಲು ಈ ಪರಿಕಲ್ಪನೆಯನ್ನು ಅಧಾರವಾಗಿಟ್ಟುಕೊಳ್ಳಲಾಗಿದೆ. ಮನಸ್ಸಿನಲ್ಲಿ ಉಂಟಾದ ಭಾವನೆಗಳಿಗೆ ಅದರದೇ ಆದ ಒಂದು ತಾತ್ವಿಕ ಚೌಕಟ್ಟು ನಿರ್ಮಾಣವಾಗುತ್ತದೆ. ಬದುಕಿನೊಂದಿಗೆ ಹೆಣೆದುಕೊಂಡ ಅನುಭವಗಳು ಕಾವ್ಯ ರಚನೆಗೆ ಭಾವ ಸ್ಫೂರ್ತಿಯನ್ನು ಒದಗಿಸಿವೆ. ವಸಾಹತುಶಾಹಿ ಕಾಲಘಟ್ಟದ ಪ್ರಾರಂಭದ ಕವಿಗಳಾದ ತಿರುಮಲೆ ರಾಜಮ್ಮ, ಬೆಳಗೆರೆ ಜಾನಕಮ್ಮನವ ಭಾವ ಸ್ಪಂದನಕ್ಕೆ ಸ್ವಾತಂತ್ರ ಹೋರಾಟ; ರಾಷ್ಟ್ರಭಕ್ತಿ; ಹೆಣ್ಣಿನ ಬದುಕಿನ ಕುರಿತಾದ ಪ್ರಶ್ನೆಗಳು, ಜಾತಿ ಮತದ ಕುರಿತಾದ ಉದಾರ ಮನೋಭಾವಗಳು ವ್ಯಕ್ತಗೊಂಡಿವೆ. ಭಾವಗೀತೆ, ಭಕ್ತಿಗೀತೆ, ನೀತಿ ಬೋಧನೆ, ತತ್ವಪದಗಳ ಧಾಟಿಯನ್ನು ಇತರ ಕವಿತೆಗಳು ಹೊಂದಿವೆ.

**ಏ) ಪ್ರಕೃತಿಜನ್ಯ ಮಾದರಿ**

ಭೂಮಿ-ಬಾನು-ಗಾಳಿ-ನೀರು-ಮೋಡ-ತಾರೆ-ಸೂರ್ಯ-ಚಂದ್ರ ಮುಂತಾದ ಪ್ರಕೃತಿ ಜನ್ಯ ವಸ್ತುಗಳನ್ನು ಪ್ರತಿಮೆಯಾಗಿಸಿದ ಸವಿತಾ ನಾಗಭೂಷಣರವರು ವ್ಯಕ್ತಿ-ವ್ಯಕ್ತಿತ್ವದ ಸಂಬಂಧಗಳನ್ನು ಶೋಧಿಸಿದ್ದಾರೆ. ನಿರ್ದಿಷ್ಠ ಪಂಥ-ಸಿದ್ಧಾಂತಗಳನ್ನು ಬದಿಗಿಟ್ಟು, ತಮ್ಮ ನವಿರಾದ, ಮಧುರವಾದ ಭಾಷೆ-ಭಾವನೆಗಳಿಂದ ಕಾವ್ಯ ನಿರ್ಮಿಸಿದ್ದಾರೆ. ಪ್ರಕೃತಿಯೊಂದಿಗೆ ಸಂವಾದ ರೂಪದ ಕವಿತೆಗಳು ಹೆಚ್ಚಾಗಿ ಬಳಕೆಯಲ್ಲಿವೆ.

**ಐ) ವೃತ್ತಾಂತ ಮಾದರಿ**

ಪ್ರಾರಂಭದ ಕತೆಗಾರರ ಕತೆಗಳಲ್ಲಿ ವೃತ್ತಾಂತ ಮಾದರಿಯ ಪರಿಕಲ್ಪನೆಯನ್ನು ಗುರುತಿಸಲಾಗಿದೆ. ಕತೆಯಲ್ಲಿ ಸಂಭವಿಸಿದ/ಸಂಭವಿಸುವ ಘಟನೆಗಳನ್ನು ಸ್ವತಃ ಕತೆಗಾರರೇ ನೇರವಾಗಿ ಮಂಡಿಸುವ ಈ ವಿಧಾನದಲ್ಲಿ ಒಂದು ಸಾಂದರ್ಭಿಕ ಘಟನೆ, ಸಂಭಾಷಣೆ, ವಿವರಣೆಯನ್ನು ಕತೆಯ ಆವರಣ ಹೊಂದಿರುತ್ತದೆ. ಕತೆಗಾರರು ನೇರವಾಗಿ ಕತೆಯನ್ನು ನಿರೂಪಿಸುವಾಗ ಸೂಚಿತ ಲೇಖಕರನ್ನು ಆಶ್ರಯಿಸಿ, ತಮ್ಮ ಚಿಂತನೆ-ಆಲೋಚನೆಗಳನ್ನು ಮಂಡಿಸಿರುತ್ತಾರೆ. ಇಲ್ಲಿ ಕತೆಗಾರರು ತಾಳುವ ನಿಲುವುಗಳಿಗೆ ಪ್ರಾಮುಖ್ಯತೆಯಿರುತ್ತದೆ. ಶ್ಯಾಮಲಾದೇವಿ ಬೆಳಗಾಂವ್‌ಕರ್, ಸರಸ್ವತಿಬಾಯಿ ರಾಜವಾಡೆಯವರ ಕತೆಗಳಲ್ಲಿ ವೃತ್ತಾಂತ ವಿಧಾನ ಬಳಕೆಯಾಗಿದೆ.

ತಿರುಮಲಾಂಬ, ಕಲ್ಯಾಣಮ್ಮ ಮುಂತಾದವರಿಗೆ ಬಾಲ್ಯ ವಿವಾಹ, ಅಸಮ ವಿವಾಹ; ವಿಧವಾ ವಿವಾಹದ ಪರ–ವಿರೋಧದ ನಿಲುವುಗಳು ಮುಖ್ಯವಾದರೆ, ಅದೇ ಕಾಲಘಟ್ಟದಲ್ಲಿ ಬರೆಯುತ್ತಿದ್ದ ಶ್ಯಾಮಲಾದೇವಿಯವರಿಗೆ ಈ ಸಂಗತಿಗಳು ಅಷ್ಟು ಮುಖ್ಯವಾಗಿಲ್ಲ. ಮೇಲ್ಜಾತಿ ಮಹಿಳೆಯರ ಸಮಸ್ಯೆಗಳನ್ನು ಕೈಗೆತ್ತಿಕೊಳ್ಳದೇ, ಕೆಳಜಾತಿ ಮಹಿಳೆಯರ ಬದುಕಿನ ವೃತ್ತಾಂತವನ್ನು ಅಭಿವ್ಯಕ್ತಿಸಿದ್ದಾರೆ. ಸಮಾಜದ ಕಟ್ಟುಪಾಡುಗಳು ಎಷ್ಟೇ ಕಠಿಣವಾಗಿದ್ದರೂ, ಅದನ್ನು ಎದುರಿಸಿ, ಮಹಿಳೆಯರು ತಮಗೆ ಸೂಕ್ತವೆನಿಸಿದ ದಾರಿಯನ್ನು ನಿರ್ಮಿಸಿಕೊಳ್ಳುವ ಛಾತಿಯನ್ನು ಅವರ ಅನೇಕ ಪಾತ್ರಗಳು ಹೊಂದಿವೆ.

ವಿಧವಾ ವಿವಾಹಕ್ಕೆ ಸಮ್ಮತಿ ನೀಡದ ಸರಸ್ವತಿಬಾಯಿ ರಾಜವಾಡೆಯವರ ಕತೆಗಳು, ವಿಧವಾ ವಿವಾಹದ ದುಷ್ಪರಿಣಾಮಗಳನ್ನು ವೃತ್ತಾಂತವಾಗಿ ವರ್ಣಿಸಿವೆ. ವೇಶ್ಯಾ ಪದ್ಧತಿಯ ಸಮಸ್ಯೆ, ವರದಕ್ಷಿಣೆ, ಜಾತಿಭೇದ ಮುಂತಾದ ವಸ್ತುಗಳನ್ನು ಕತೆಯಲ್ಲಿ ನಿಭಾಯಿಸಲಾಗಿದೆ.

### ೬) ದೃಷ್ಟಾಂತ ಮಾದರಿ

ಮೊದಲ ಪೀಳಿಗೆಯ ಕಾದಂಬರಿಕಾರರ ಅಭಿವ್ಯಕ್ತಿಯಲ್ಲಿ ಈ ಪರಿಕಲ್ಪನೆಯನ್ನು ಗುರುತಿಸಲಾಗಿದೆ. ವಸ್ತು ವಿಷಯಕ್ಕೆ ಸಂಬಂಧವಿರುವ ವ್ಯಕ್ತಿ, ತತ್ವ ಮತ್ತು ಘಟನೆಗಳನ್ನು ಸೂಚಿಸುವಂತೆ ನಿರೂಪಿಸುವ ವಿಧಾನ ಇದಾಗಿದೆ. ನಿರೂಪಕರು ಹೇಳಬಯಸುವ ತತ್ವಕ್ಕೂ, ಕತೆಯ ಪ್ರತಿಯೊಂದು ಅಂಶಕ್ಕೂ ನೇರವಾದ ಸಂಬಂಧವಿರುತ್ತದೆ. ಕೃತಿಯಲ್ಲಿ ಬರುವ ಪಾತ್ರ ಯಾವುದಾದರೊಂದು ವಿಚಾರ–ಚಿಂತನೆಯ ಸಮರ್ಥನೆಗೆ ಉದಾಹರಣೆಯಾಗಿ/ ದೃಷ್ಟಾಂತವಾಗಿ ಬರುತ್ತದೆ.

ಪ್ರಾರಂಭದ ಕಾದಂಬರಿಕಾರರಿಗೆ ಸಾಂಪ್ರದಾಯಿಕ ಮನೋಭಾವವನ್ನು ಬಿಟ್ಟುಕೊಡದೆ 'ಆಧುನಿಕ' ಮಹಿಳೆಯರ ದೃಷ್ಟಾಂತವನ್ನು ಪ್ರತಿಪಾದಿಸುವ ಅನಿವಾರ್ಯವಿತ್ತು. ಶಾಂತಬಾಯಿ ನೀಲಗಾರರ 'ಸದ್ಗುಣಿ ಕೃಷ್ಣಾಬಾಯಿ' ಕಾದಂಬರಿಯನ್ನು ವಿದೇಶ ಪ್ರಯಾಣಕ್ಕೆ ಮುಂದಾದ ಮಹಿಳಾ ದೃಷ್ಟಾಂತವಾಗಿ ಪರಿಗಣಿಸಲಾಗಿದೆ. ತಿರುಮಲಾಂಬರವರ 'ನಭಾ' ಕಾದಂಬರಿ ವಿಧವೆ ಮರು ಮದುವೆಯಾಗದೆ, ಸಮಾಜ ಸೇವಕಿಯಾದ ದೃಷ್ಟಾಂತವನ್ನು ಪ್ರತಿಪಾದಿಸುತ್ತದೆ. ಕಲ್ಯಾಣಮ್ಮನವರ 'ನಿರ್ಭಾಗ್ಯ ವನಿತೆ' ಕಾದಂಬರಿಯು ವಿಧವಾ ವಿವಾಹವಾದ ಮಹಿಳೆಯ ದೃಷ್ಟಾಂತವನ್ನು ಮುಂದಿಟ್ಟಿದೆ.

ಮಹಿಳಾ ಸಾಹಿತ್ಯದ ಅಭಿವ್ಯಕ್ತಿ ಕ್ರಮವನ್ನು, ಮೇಲಿನ ಪರಿಕಲ್ಪನೆಗಳ ಮೂಲಕ ಶೋಧಿಸಿ–ವಿಶ್ಲೇಷಣೆಗೊಳಪಡಿಸಲಾಗಿದೆ. ಮಹಿಳೆಯರ ಕವಿತೆಗಳಲ್ಲಿ ಹೆಚ್ಚಾಗಿ ಬಳಕೆಯಲ್ಲಿರುವ ಮಾದರಿಗಳೆಂದರೆ, 'ಪೌರಾಣಿಕ ಪಾತ್ರಗಳ ಪುನವರವಲೋಕನ ಮಾದರಿ' ಮತ್ತು 'ಪ್ರತಿಮಾತ್ಮಕ ಮಾದರಿ'. ಕಾವ್ಯ ಮತ್ತು ಕಾದಂಬರಿಗಳಿಗಿಂತ, ಕತೆಗಳಲ್ಲಿ ವಿಭಿನ್ನವಾದ ಅನೇಕ ಮಾದರಿಗಳನ್ನು ಗುರುತಿಸಲಾಗಿದೆ. ಜತೆಗೆ 'ವಾಸ್ತವವಾದಿ ಮಾದರಿ' ಮತ್ತು 'ಪ್ರತಿಮಾತ್ಮಕ ಮಾದರಿ'ಗಳನ್ನು ಅಳವಡಿಸಿಕೊಳ್ಳಲಾಗಿದೆ. ಕಾದಂಬರಿಗೆ ಸಂಬಂಧಿಸಿದಂತೆ, 'ವಾಸ್ತವವಾದಿ ಮಾದರಿ' ಹೆಚ್ಚು ಪ್ರಖರವಾಗಿ ಮೂಡಿಬಂದಿರುವುದನ್ನು ಅಧ್ಯಯನ ಗುರುತಿಸಿದೆ.

ಮೇಲ್ಕಾಣಿಸಿದ ಮಾದರಿಗಳೇ ಅಂತಿಮ ಮಾನದಂಡಗಳಲ್ಲ. ಒಂದೇ ಕೃತಿಯಲ್ಲಿ ಹಲವು ಮಾದರಿಗಳು ಕಾಣಿಸಿಕೊಂಡಿರುವ ಸಾಧ್ಯತೆಗಳನ್ನು ಅಲ್ಲಗಳೆಯುವಂತಿಲ್ಲ. ಮುಂದಿನ ಅಧ್ಯಯನಗಳು, ಅಂತಹ ಸಾಧ್ಯತೆಗಳನ್ನು ಶೋಧಿಸುವ ಅವಕಾಶವಿದೆ. ಒಂದು ಪ್ರಬಂಧದ ರೂಪರೇಷೆಗಳನ್ನು ಸಿದ್ಧಪಡಿಸುವಾಗ, ಅನೇಕ ಸಂದಿಗ್ಧತೆಗಳು ಎದುರಾಗುತ್ತವೆ. ಈ ಪ್ರಬಂಧ ರಚನೆಯ ಪ್ರಾರಂಭದಲ್ಲಿ, ಮಹಿಳಾ ಸಾಹಿತ್ಯವನ್ನು ಕ್ರೂಢೀಕರಿಸಿ, 'ಸ್ವಗತ', 'ಸಂವಾದ' ಮುಂತಾದ ಮಾದರಿಗಳನ್ನು ಆಧಾರವಾಗಿಟ್ಟುಕೊಳ್ಳಲಾಗಿತ್ತು. ನಂತರ ಅವುಗಳನ್ನು ಹಿನ್ನೆಲೆಯಾಗಿಟ್ಟುಕೊಂಡು, ಇನ್ನಿತರ ಮಾದರಿಗಳ ಕಡೆಗೆ ಗಮನ ನೀಡಲಾಯಿತು. ಕೆಲವು ಮಾದರಿಗಳನ್ನು ಕವಿತೆ–ಕತೆ–ಕಾದಂಬರಿಗಳನ್ನು ಪ್ರತ್ಯೇಕಿಸದೆ, ಅಧ್ಯಯನ ಮಾಡುವ ಅವಕಾಶವಿತ್ತು. ಆದರೆ, ಪ್ರತ್ಯೇಕ ಪ್ರಕಾರಗಳಲ್ಲಿ ಅಧ್ಯಯನ ಮಾಡಿದಾಗ, ಹೊಸ ಸಾಧ್ಯತೆಗಳು ಗೋಚರಿಸುತ್ತವೆ ಎಂಬ ತೀರ್ಮಾನಕ್ಕೆ ಬರಲಾಯಿತು. ಅಭಿವ್ಯಕ್ತಿ ಕ್ರಮವನ್ನು ಗುರುತಿಸುವಾಗ, ವಸ್ತು–ಭಾಷೆ–ತಂತ್ರ–ನಿರೂಪಣಾ ಶೈಲಿಯನ್ನು ಮುಖ್ಯವಾಗಿ ಪರಿಭಾವಿಸಿದ್ದರೂ, ಕೆಲವೊಂದು ಕಡೆ, ಈ ಎಲ್ಲಾ ಅಂಶಗಳಿಗೂ ಸಮಾನ ಆದ್ಯತೆಯನ್ನು ನೀಡಲಾಗಿಲ್ಲ. ಪ್ರಸ್ತಾಪಿಸಲಾದ ಪ್ರಕಾರಗಳನ್ನು ಹೊರತುಪಡಿಸಿದ ಇತರೆ ಪ್ರಕಾರಗಳ ಅಭಿವ್ಯಕ್ತಿ ಕ್ರಮವನ್ನು ಗುರುತಿಸುವ ಸಾಧ್ಯತೆಯನ್ನು ಗಮನಿಸಬಹುದಾಗಿದೆ. ಉದಾಹರಣೆಗೆ: ವಿವಿಧ ಪತ್ರಿಕೆಗಳಲ್ಲಿ ಮಹಿಳೆಯರಿಂದ ಪ್ರಕಟವಾಗುವ ಅಂಕಣಗಳು, ಇತರೆ ಬರಹಗಳನ್ನು ಒಂದೆಡೆ ಇಟ್ಟು, 'ಸೃಜನೇತರ' ಸಾಹಿತ್ಯದಲ್ಲಿ ವ್ಯಕ್ತವಾಗುವ ತತ್ವಗಳನ್ನು ಅಧ್ಯಯನಕ್ಕೊಳಪಡಿಸಬಹುದಾಗಿದೆ.

ಕೃತಿಯಲ್ಲಿ ವ್ಯಕ್ತವಾಗುವ ಆಶಯಗಳಿಗೂ, ಆಕೃತಿಗೂ ಗಾಢವಾದ ಸಂಬಂಧವಿರುತ್ತದೆ. ಈ ನಿಟ್ಟಿನಲ್ಲಿ, ಮಹಿಳಾ ಸಾಹಿತ್ಯವನ್ನು ಅನುಲಕ್ಷಿಸಿ, ಕೃತಿಯ ಆಶಯ–ಆಕೃತಿಗಿರುವ ಸಂಬಂಧವನ್ನು ಶೋಧಿಸುವ ಕಾರ್ಯ ನಡೆಯಬೇಕಾಗಿದೆ. 'ಜನಪ್ರಿಯ ಸಾಹಿತ್ಯ'ದಲ್ಲಿ ಕಂಡುಬರುವ ತಾತ್ವಿಕ ಆಯಾಮಗಳನ್ನು ಗುರುತಿಸಲು ಸಾಕಷ್ಟು ಅವಕಾಶಗಳಿವೆ. ಮಹಿಳಾ ಸಾಹಿತ್ಯಕ್ಕೂ, ವಿವಿಧ ಜ್ಞಾನಶಾಖೆಗಳಿಗೂ ಇರುವ ಅಂತ:ಸಂಬಂಧವನ್ನು ಪ್ರತ್ಯೇಕವಾಗಿ ಗುರುತಿಸಬಹುದಾಗಿದೆ.

# ಗ್ರಂಥ ಸೂಚಿ


**ಮೂಲ ಆಕರ ಗ್ರಂಥಗಳು**

ಅಮ್ಮನ ಗುಡ್ಡ, ಚ.ಸರ್ವಮಂಗಳ, ಋಜುವಾತು ಪ್ರಕಾಶನ, ಮೈಸೂರು, ೧೯೮೮

ಅಮೃತಮತಿ ಸ್ವಗತ, ಎಚ್.ಎಲ್.ಪುಷ್ಪಾ, ಅನ್ವೇಷಣ ಪ್ರಕಾಶನ, ಬೆಂಗಳೂರು, ೧೯೯೨

ಅಲೆಗಳಲ್ಲಿ ಅಂತರಂಗ, ವೈದೇಹಿ, ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೦೬

ಆಕಾಶ ಮಲ್ಲಿಗೆ, ಸವಿತಾ ನಾಗಭೂಷಣ, ನೆಲಮನೆ ಪ್ರಕಾಶನ, ಶ್ರೀರಂಗಪಟ್ಟಣ, ೨೦೦೦

ಆಯ್ದ ಕತೆಗಳು, ಸಬೀಹಾ ಭೂಮಿಗೌಡ (ಸಂ), ಕನ್ನಡ ಮತ್ತು ಸಂಸಕೃತಿ ಇಲಾಖೆ, ಬೆಂಗಳೂರು, ೧೯೯೪

ಇತಿಗೀತಿಕೆ, ವಿಜಯಾ ದಬ್ಬೆ, ರಚನಾ ಪ್ರಕಾಶನ, ಮೈಸೂರು, ೧೯೯೬

ಈ ನೆಲದ ಹಾಡು, ಸ. ಉಷಾ, ಸಂವಾದ ಪ್ರಕಾಶನ, ಮಲ್ಲಾಡಿಹಳ್ಳಿ, ೧೯೯೦

ಎರಡು ಮನಸ್ಸು, ತ್ರಿವೇಣಿ, ತ್ರಿವೇಣಿ ಪ್ರಕಾಶನ, ಮೈಸೂರು, ೧೯೯೦

ಕಲ್ಯಾಣ ಸರಸ್ವತಿ, ಬಿ.ಎನ್.ಸುಮಿತ್ರಾಬಾಯಿ (ಸಂ), ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು, ೧೯೯೨

ಕಾಡ ನವಿಲಿನ ಹೆಜ್ಜೆ, ಮಮತಾ ಜಿ.ಸಾಗರ್, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೨

ಕಾತ್ಯಾಯನಿ, ಬಿ.ಎನ್. ಸುಮಿತ್ರಾಬಾಯಿ (ಸಂ), ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೪

ಗಾಂಧಿ ಬಂದ, ಎಚ್.ನಾಗವೇಣಿ, ಲೋಹಿಯಾ ಪ್ರಕಾಶನ, ಬಳ್ಳಾರಿ, ೧೯೯೯

ಗಿರಿಬಾಲೆ, ಟಿ.ಎಸ್.ಶ್ರೀವಳ್ಳಿ (ಸಂ), ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೪

ಚಂದ್ರಗಿರಿಯ ತೀರದಲ್ಲಿ, ಸಾರಾ ಅಬೂಬಕ್ಕರ್, ಹೇಮಾಂಶು ಪ್ರಕಾಶನ, ಕಾಟಿಪಳ್ಳ-ದ.ಕ., ೧೯೯೧

ಜಾತ್ರೆಯಲ್ಲಿ ಶಿವ, ಸವಿತಾ ನಾಗಭೂಷಣ, ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೦೨

ಜೀವನ ಪ್ರೀತಿ, ಕಾಳೇಗೌಡ ನಾಗವಾರ (ಸಂ), ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨

ದೂರದ ಬೆಟ್ಟ, ತ್ರಿವೇಣಿ, ತ್ರಿವೇಣಿ ಪ್ರಕಾಶನ, ಮೈಸೂರು, ೧೯೮೭

ದ್ರೌಪದಿ, ಎಸ್.ವಿ.ಪ್ರಭಾವತಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು,

ದಂಗೆ, ಗೀತಾ ನಾಗಭೂಷಣ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೭

ನದಿಯ ನೀರಿನ ತೇವ, ಮಮತಾ ಜಿ.ಸಾಗರ್, ಇಳಾ ಪ್ರಕಾಶನ, ಬೆಂಗಳೂರು, ೧೯೯೮

ನಡೆದದ್ದೇ ದಾರಿ, ವೀಣಾ ಶಾಂತೇಶ್ವರ್. ಸುಂದರ ಪುಸ್ತಕ ಪ್ರಕಾಶನ, ಧಾರವಾಡ, ೨೦೦೬

ನಾನೆಂಬ ಮಾಯೆ, ಸುಕನ್ಯಾ ಮಾರುತಿ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೭

ಬಟ್ಟ ಬಯಲಲಿ ನಿಂತು, ಶಶಿಕಲಾ ವೀರಯ್ಯಸ್ವಾಮಿ, ತನುಮನ ಪ್ರಕಾಶನ, ಮೈಸೂರು, ೨೦೦೬

ಬೆಕ್ಕಿನ ಕಣ್ಣು, ತ್ರಿವೇಣಿ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ೧೯೬೯

ಬೆಳಗೆರೆ ಜಾನಕಮ್ಮ ಬದುಕು ಬರಹ, ನೇಮಿಚಂದ್ರ (ಸಂ), ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು, ೧೯೮೮

ಬೆಲ್ಲದಚ್ಚು ಮತ್ತು ಇರುವೆ ದಂಡು, ಮಲ್ಲಿಕಾ ಘಂಟಿ, ವಿಕಾಸ ಚಂದ್ರ ಪ್ರಕಾಶನ, ಬಳ್ಳಾರಿ, ೨೦೦೫

ಬೆಂಕಿಮಳೆ, ಬಾನು ಮುಷ್ತಾಕ್, ನೆಲಮನೆ ಪ್ರಕಾಶನ, ಶ್ರೀರಂಗಪಟ್ಟಣ, ೧೯೯೯

ಮಾಧವಿ, ಅನುಪಮಾ ನಿರಂಜನ, ಡಿ.ವಿ.ಕೆಮೂರ್ತಿ ಪ್ರಕಾಶನ, ಮೈಸೂರು, ೨೦೦೫

ಮುಚ್ಚಿದ ಬಾಗಿಲು, ತ್ರಿವೇಣಿ, ತ್ರಿವೇಣಿ ಪ್ರಕಾಶನ, ಮೈಸೂರು, ೧೯೯೦

ಮುನ್ನುಡಿ ಬೆನ್ನುಡಿಗಳ ನಡುವೆ, ಪ್ರತಿಭಾ ನಂದಕುಮಾರ್, ಮಹಿಳಾ ಸಾಹಿತ್ಯಿಕ, ನವನಗರ, ಹುಬ್ಬಳ್ಳಿ, ೨೦೦೬

ರಾಮ-ಸೀತೆ-ರಾವಣ, ಎಚ್.ವಿ. ಸಾವಿತ್ರಮ್ಮ, ಕಾವ್ಯಾಲಯ ಪ್ರಕಾಶನ, ಮೈಸೂರು, ೧೯೮೦

ರಾಷ್ಟ್ರ ಶಕ್ತಿ, ತಿರುಮಲೆ ರಾಜಮ್ಮ, ಶಂಕರವನ, ಬೆಂಗಳೂರು, ೧೯೭೩

ರೊಟ್ಟಿ ಮತ್ತು ಹುಡುಗಿ, ಮಲ್ಲಿಕಾ ಘಂಟಿ, ಗೌತಮ ಪ್ರಕಾಶನ, ಬಳ್ಳಾರಿ, ೧೯೯೯

ಲೇಖಕಿಯರ ಸಣ್ಣ ಕತೆಗಳು, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು, ೧೯೮೯

ವಿಮುಕ್ತಿ, ಎಚ್.ವಿ.ಸಾವಿತ್ರಮ್ಮ,

ಶರಪಂಜರ, ತ್ರಿವೇಣಿ, ವಿಶ್ವಕನ್ನಡ ಸಮ್ಮೇಳನ ಪ್ರಕಾಶನ, ಬೆಂಗಳೂರು, ೧೯೫೩

ಶ್ಯಾಮಲಾ ಸಂಚಯ, ವಿಜಯಾ ದಬ್ಬೆ (ಸಂ), ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು, ೧೯೮೯

ಸದ್ಗುಣಿ ಕೃಷ್ಣಾಬಾಯಿ, ಶಾಂತಬಾಯಿ ನೀಲಗಾರ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೬

ಸಹನಾ, ಸಾರಾ ಅಬೂಬಕ್ಕರ್, ಚಂದ್ರಗಿರಿ ಪ್ರಕಾಶನ, ಮಂಗಳೂರು, ೨೦೦೨

ಸಂಗಮ, ರಾಜಲಕ್ಷ್ಮಿ ಎನ್.ರಾವ್, ವಿಶ್ವಕನ್ನಡ ಸಮ್ಮೇಳನ ಗ್ರಂಥಮಾಲೆ, ಬೆಂಗಳೂರು, ೧೯೮೫೦

ಹವಳ ಹಾರಿದ ಹೊತ್ತು, ಸ.ಉಷಾ, ಅಭಿನವ ಪ್ರಕಾಶನ, ಬೆಂಗಳೂರು, ೨೦೦೫

ಹಸಿಮಾಂಸ ಮತ್ತು ಹದ್ದುಗಳು, ಗೀತಾ ನಾಗಭೂಷಣ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೮

ಹೀಗೆ ಹಾಳೆಯ ಮೇಲೆ ಹಾಡು, ಮಮತಾ ಜಿ.ಸಾಗರ್, ಅಭಿನವ ಪ್ರಕಾಶನ, ಬೆಂಗಳೂರು, ೨೦೦೭

ಹಿತೈಷಿಣಿಯ ಹೆಜ್ಜೆಗಳು, ವಿಜಯಾ ದಬ್ಬೆ (ಸಂ), ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೨

ಹೂದಂಡಿ, ಮಾಲತಿ ಪಟ್ಟಣಶೆಟ್ಟಿ, ಸುಮುಖ ಪ್ರಕಾಶನ, ಬೆಂಗಳೂರು, ೨೦೦೫

ಹೃದಯ ಸಮುದ್ರ, ಅನುಪಮಾ ನಿರಂಜನ, ಶಾರದಾ ಮಂದಿರ, ಮೈಸೂರು, ೧೯೬೮

ಹೆಜ್ಜೆ ಮೂಡಿದ ಹಾದಿ, ಬಾನು ಮುಷ್ತಾಕ್, ಸಂವಾದ ಪ್ರಕಾಶನ, ಮಲ್ಲಾಡಿಹಳ್ಳಿ, ೧೯೯೦

ಹೆಂಡತಿಯ ಹೆಸರು, ತ್ರಿವೇಣಿ, ತ್ರಿವೇಣಿ ಪ್ರಕಾಶನ, ಮೈಸೂರು, ೧೯೯೦

# ಪರಾಮರ್ಶನ ಗ್ರಂಥಗಳು


ಅತ್ತಿಮಬ್ಬೆ ಮತ್ತು ಸಮಕಾಲೀನ ಸ್ತ್ರೀ ಸಂಸ್ಕೃತಿ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೮

ಅನುಪಮಾ ನಿರಂಜನ ಅವರ ಕಾದಂಬರಿಗಳು, ವಿಜಯಶ್ರೀ ಸಬರದ, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ೧೯೯೪

ಅಭಿನವ ಗುಪ್ತ, ಜಿ.ಟಿ.ದೇಶಪಾಂಡೆ (ಮೂಲ), ಎನ್.ಬಾಲಸುಬ್ರಹ್ಮಣ್ಯಂ (ಅನು), ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೦

ಅಮೂರ್ತತೆ ಮತ್ತು ಪರಿಸರ, ರಾಜೇಂದ್ರ ಚೆನ್ನಿ, ಅಭಿನವ ಪ್ರಕಾಶನ, ಬೆಂಗಳೂರು, ೨೦೦೩

ಅಯನ, ಬಿ.ಎನ್.ಸುಮಿತ್ರಾಬಾಯಿ, ವಿದ್ಯಾವರ್ಧಕ ಸಂಘ, ಬೆಂಗಳೂರು, ೧೯೯೫

ಅಸ್ತಿತ್ವವಾದ, ಕೆ.ವಿ.ತಿರುಮಲೇಶ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೯

ಆಧುನಿಕ ಕನ್ನಡ ಲೇಖಕಿಯರು, ಚಿ.ನ.ಮಂಗಳ (ಸಂ), ಸಮನ್ವಿತ ಮಹಿಳಾ ಅಧ್ಯಯನ ವಿಭಾಗ, ಎನ್.ಎಂ.ಕೆ.ಆರ್.ವಿ. ಕಾಲೇಜ್, ಬೆಂಗಳೂರು, ೧೯೯೩

ಆಧುನಿಕ ಭಾರತದಲ್ಲಿ ಮಹಿಳೆ, ಜರಾಲ್ಡಿನ್ ಫೋರ್ಬ್ಸ್ (ಮೂಲ), ಎಚ್.ಎಸ್.ಶ್ರೀಮತಿ (ಅನು), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ಆಶಯ-ಆಕೃತಿ, ಸಿ.ಎನ್. ರಾಮಚಂದ್ರನ್, ಅಭಿನವ ಪ್ರಕಾಶನ, ಬೆಂಗಳೂರು, ೧೯೯೫

ಇದು ಮಾನುಷಿಯ ಓದು, ಮಹೇಶ್ವರಿ ಯು., ಶಿವರಾಮ ಕಾರಂತ ಅಧ್ಯಯನ ಕೇಂದ್ರ, ಪುತ್ತೂರು, ೨೦೦೧

ಈ ಶತಮಾನದ ಕನ್ನಡ ಕವಯತ್ರಿಯರು (೧೯೦೦-೨೦೦೦), ಕುಲಶೇಖರಿ, ಚಿನ್ಮಯ ಪ್ರಕಾಶನ, ಬೆಂಗಳೂರು, ೧೯೯೯

ಈ ಶತಮಾನದ ಕನ್ನಡ ಲೇಖಕಿರಯರು, ಪಿ.ಮನೋಹರಿ ಪಾರ್ಥಸಾರಥಿ (ಸಂ), ಕನ್ನಡ ಲೇಖಕಿಯರ ಪರಿಷತ್ತು, ಬೆಂಗಳೂರು, ೧೯೯೮

ಓದುವ ದಾರಿಗಳು, ಗಿರಡ್ಡಿ ಗೋವಿಂದರಾಜ (ಸಂ), ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೨

ಕಥಾ ಮಾನಸಿ, ಗಿರಿಜಾ ಶಾಸ್ತ್ರಿ, ಸಾಹಿತ್ಯ ಪ್ರಕಾಶನ, ಮುಂಬೈ, ೨೦೦೦

ಕನ್ನಡ ಶೈಲಿ ಕೈಪಿಡಿ, ಕೆ.ವಿ. ನಾರಾಯಣ (ಸಂ.) ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

ಕನ್ನಡ ಕಥನ ಸಾಹಿತ್ಯ: ಕಾದಂಬರಿ, ಜಿ.ಎಸ್.ಆಮೂರ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೬

ಕನ್ನಡ ಕಥನ ಸಾಹಿತ್ಯ: ಸಣ್ಣಕತೆ, ಜಿ.ಎಸ್.ಆಮೂರ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೦೩

ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು, ಬಿ.ಎ.ವಿವೇಕ್ ರೈ, ಕನ್ನಡ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ೧೯೮೭

ಕನ್ನಡದಲ್ಲಿ ಮಹಿಳಾ ಕಥಾ ಸಾಹಿತ್ಯ, ಮಲ್ಲಿಕಾ ಘಂಟಿ, ಯುವಲೋಕ ಪ್ರಕಾಶನ, ಧಾರವಾಡ, ೧೯೯೪
ಕನ್ನಡ ಪೌರಾಣಿಕ ಕಾದಂಬರಿಕಾರರು, ಜೆ.ಕೆ.ರಮೇಶ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩
ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಎಚ್.ಎಸ್.ಶ್ರೀಮತಿ (ಸಂ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬
ಕನ್ನಡ ಲೇಖಕಿಯರ ನೆಲೆಬೆಲೆ, ಬಿ.ಎಸ್.ವೆಂಕಟಲಕ್ಷ್ಮಿ, ಎನ್.ಟಿ.ಶ್ಯಾಂ. ಪ್ರಕಾಶನ, ಬೆಂಗಳೂರು, ೧೯೯೧
ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ವಿವಿಧ ಲೇಖಕರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩
ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ, ವಿವಿಧ ಲೇಖಕರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩
ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ, ಜಿ.ಎಸ್.ಶಿವರುದ್ರಪ್ಪ (ಸಂ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೯
ಕನ್ನಡ ಸಾಹಿತ್ಯ ಮೀಮಾಂಸೆ-೧, ರಹಮತ್ ತರೀಕೆರೆ (ಸಂ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧
ಕರ್ನಾಟಕ ಚರಿತ್ರೆ (ಕ್ರಿ.ಶ.೧೮೦೦-೧೯೦೦), ಬಿ.ಶೇಖ್ ಅಲಿ (ಪ್ರ.ಸಂ.), ಸೆಬಾಸ್ಟಿಯನ್ ಜೋಸೆಫ್ (ಸಂ.ಸಂ.), ಕನ್ನಡ ವಿಶ್ವವಿದ್ಯಾಲಯ, ೧೯೯೭
ಕರಾವಳಿ ಜನಪದ ಸಾಹಿಯದಲ್ಲಿ ಸ್ತ್ರೀವಾದಿ ನೆಲೆಗಳು, ಗಾಯತ್ರಿ ನಾವಡ, ಸಿರಿ ಪ್ರಕಾಶನ, ಹೊಸಪೇಟೆ, ೧೯೯೯
ಕಲಾ ಸಿದ್ಧಾಂತ, ವಿ.ಕೃ. ಗೋಕಾಕ್, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ೨೦೦೪
ಕಾದಂಬರಿ ಮತ್ತು ಸಾಮಾನ್ಯ ಮನುಷ್ಯ, ಎಲ್.ಎಸ್.ಶೇಷಗಿರಿರಾವ್, ಶಾರದಾ ಪ್ರಕಾಶನ, ಬೆಂಗಳೂರು, ೧೯೯೦
ಕಾವ್ಯಾರ್ಥ ಪದಕೋಶ, ಜಿ.ಎಸ್.ಶಿವರುದ್ರಪ್ಪ, ಕಾಮಧೇನು ಪ್ರಕಾಶನ, ಬೆಂಗಳೂರು, ೧೯೯೦
ಕಾವ್ಯಾರ್ಥ ಚಿಂತನ, ಜಿ.ಎಸ್.ಶಿವರುದ್ರಪ್ಪ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೧೯೯೫
ಕಾವ್ಯ ಸಂವಾದ, ಜಿ.ಎಸ್.ಶಿವರುದ್ರಪ್ಪ, ಅಂಕಿತ ಪ್ರಕಾಶನ, ಬೆಂಗಳೂರು, ೨೦೦೫
ಕ್ರಿಯೆ-ಪ್ರತಿಕ್ರಿಯೆ, ಕೆ.ಕೇಶವ ಶರ್ಮ, ಅನ್ವೇಷಣಾ ಪ್ರಕಾಶನ, ಬೆಂಗಳೂರು, ೧೯೯೨
ಕೊರಳು-ಕೊಳಲು, ಜಿ.ಎಸ್.ಆಮೂರ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೦೫
ಗದ್ಯಶೈಲಿ, ದೇ.ಜವರೇಗೌಡ, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ೧೯೭೮
ಚಹರೆ, ಎಚ್.ಎಸ್.ಶ್ರೀಮತಿ, ಇಳಾ ಪ್ರಕಾಶನ, ಬೆಂಗಳೂರು
ತಿರುಮಲಾಂಬ, ಚಿ.ನ.ಮಂಗಳ, ಕನ್ನಡ ಸಾಹಿತ್ಯ ಪರಿಷತ್ತು, ೧೯೯೧
ನಾಡು-ನುಡಿಯ ರೂಪಕ, ಶಿವರಾಮ ಪಡಿಕ್ಕಲ್, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ೨೦೦೧
ದಶವಾರ್ಷಿಕ ವಿಮರ್ಶೆ (೧೯೭೪-೮೩), ಕೆ.ಎಸ್.ನಿಸಾರ್ ಅಹ್ಮದ್ (ಪ್ರ.ಸಂ.), ಎಲ್.ಎಸ್.ಶೇಷಗಿರಿರಾವ್ (ಸಂ), ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೮೬
ದ ಸೆಕೆಂಡ್ ಸೆಕ್ಸ್, ಸಿಮೊನ್ ದ ಬೋವಾ (ಮೂಲ), ಎಚ್.ಎಸ್.ಶ್ರೀಮತಿ (ಅನು), ಅಧ್ಯಯನ ಮಂಡಲ, ಬೆಂಗಳೂರು, ೨೦೦೭
ನಾಕನೇ ನೀರು, ಎಚ್.ನಾಗವೇಣಿ, ಕನ್ನಡ ಸಂಘ, ಬೆಂಗಳೂರು, ೧೯೯೭
ನಾರಿ: ದಾರಿ-ದಿಗಂತ, ವಿಜಯಾ ದಬ್ಬೆ, ರಚನಾ ಪ್ರಕಾಶನ, ಮೈಸೂರು, ೧೯೯೨

ನಿಲುವು, ಎಚ್.ಎಸ್.ರಾಘವೇಂದ್ರರಾವ್, ಕನ್ನಡ ಸಂಘ, ಬೆಂಗಳೂರು, ೧೯೮೯

ನೆಲದ ಮರೆಯ ನಿಧಾನ, ಎಸ್.ಡಿ.ಶಶಿಕಲಾ, ಜ್ಞಾನೋದಯ ಪ್ರಕಾಶನ, ಬೆಂಗಳೂರು, ೨೦೦೨

ಬಗೆ, ಸಬೀಹಾ ಭೂಮಿಗೌಡ, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೧

ಭಾರತಿ, (ಅಭಿನಂದನಾ ಗ್ರಂಥ), ಎಚ್.ಎಸ್.ಪಾರ್ವತಿ (ಸಂ), ಭಾರತಿ ಸನ್ಮಾನ ಸಮಿತಿ, ಬೆಂಗಳೂರು, ೧೯೭೭

ಬಂಡಾಯ–ಮುಸ್ಲಿಂ ಸಂವೇದನೆ, ಕೆ.ಷರೀಫಾ, ಸಿವಿಜಿ ಪ್ರಕಾಶನ, ಬೆಂಗಳೂರು, ೨೦೦೪

ಬಿಂಬದೊಳಗಣ ಮಾತು, ಸುಕನ್ಯಾ ಮಾರುತಿ, ಸಿವಿಜಿ ಪ್ರಕಾಶನ, ಬೆಂಗಳೂರು, ೨೦೦೪

ಬೇರು ಕಾಂಡ ಚಿಗುರು, ಕೆ.ವಿ.ನಾರಾಯಣ, ವಿವೇಕ ಪ್ರಕಾಶನ, ಬೆಂಗಳೂರು, ೧೯೯೭

ಮಹಿಳಾ ಅಧ್ಯಯನ, ನೇಮಿಚಂದ್ರ, ಅಂಕಿತ ಪುಸ್ತಕ, ಬೆಂಗಳೂರು, ೨೦೦೧

ಮಹಿಳಾ ಅಧ್ಯಯನ, ವೀಣಾ ಶಾಂತೇಶ್ವರ್ (ಸಂ), ಪ್ರೊ.ಎಚ್.ವಿ.ನಾಗೇಶ ಸನ್ಮಾನ ಸಮಿತಿ, ಧಾರವಾಡ, ೧೯೯೩

ಮಹಿಳಾ ಸಾಹಿತ್ಯ ಸಮೀಕ್ಷೆ, ಆರ್ಯಾಂಬ ಪಟ್ಟಾಭಿ (ಪ್ರ.ಸಂ.), ಸ.ನ.ಗಾಯತ್ರಿ, ಎಸ್.ಡಿ.ಶಶಿಕಲಾ, ಸಂವಹನ ಪ್ರಕಾಶನ, ಮೈಸೂರು, ೨೦೦೪

ಮಹಿಳಾ ಕಾವ್ಯದಲ್ಲಿ ಹೆಣ್ಣಿನ ಪರಿಕಲ್ಪನೆ, ಬಿ.ಪಿ.ಆಶಾಕುಮಾರಿ, ಅಭಿರುಚಿ ಪ್ರಕಾಶನ, ಮೈಸೂರು, ೨೦೦೩

ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು, ಎಂ.ಉಷಾ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ಮಹಿಳೆ: ಅಸ್ತಿತ್ವದ ಸಂಕಥನ, ಕವಿತಾ ರೈ ಬಿ.ಆರ್. ಸಿವಿಜಿ ಪ್ರಕಾಶನ, ಬೆಂಗಳೂರು, ೨೦೦೫

ಮಹಿಳೆ ಸಾಹಿತ್ಯ ಸಮಾಜ, ವಿಜಯಾ ದಬ್ಬೆ, ರಚನಾ ಪ್ರಕಾಶನ, ಮೈಸೂರು, ೧೯೮೯

ಮಹಿಳೆ ಮತ್ತು ಸಮೂಹ ಮಾಧ್ಯಮಗಳು, ಕೆ. ಸರೋಜಾ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ಮಹಿಳೆಯ ಮುನ್ನಡೆ, ಅಂದನೂರು ಶೋಭ, ಬಿ.ಜಿ.ಶ್ರೀಲಕ್ಷ್ಮಿ (ಸಂ), ಮಾನಿನಿ ಪ್ರಕಾಶನ, ಬೆಂಗಳೂರು, ೧೯೯೮

ಮಾನಸಿ–ಮಾನಸ, ಚಂದ್ರಮತಿ ಸೋಂದಾ, ಚಿಂತನ ಪ್ರಕಾಶನ, ಹೆಬ್ಬಾಳ–ಮೈಸೂರು, ೧೯೯೭

ಮಂದಾರ, (ಪ್ರೊ.ಮಾಲತಿ ಪಟ್ಟಣಶೆಟ್ಟಿ ಅಭಿನಂದನಾ ಗ್ರಂಥ), ಶಿವಾನಂದ ಗಾಳಿ (ಸಂ), ಚಂದ್ರನಾಥ ಪ್ರಕಾಶನ, ಧಾರವಾಡ, ೨೦೦೭

ಯುಗಧರ್ಮ ಮತ್ತು ಸಾಹಿತ್ಯ ದರ್ಶನ, ಕೀರ್ತಿನಾಥ ಕುರ್ತಕೋಟಿ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೧

ರಚನೆ–ನಿರಚನೆ, ಕೆ.ಕೇಶವಶರ್ಮ, ಅಭಿನವ ಪ್ರಕಾಶನ, ಬೆಂಗಳೂರು, ೨೦೦೦

ಲೇಖಕಿ, ಪ್ರಸಂ.ಕೆ.ಉಷಾ ಪಿ.ರೈ, ಸಂ.ಪದ್ಮ ಶಿವರುದ್ರಪ, ಕೆ.ಆರ್.ಸಂಧ್ಯಾರೆಡ್ಡಿ, ಎಲ್.ವಿ.ಶಾಂತಕುಮಾರಿ, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು, ೨೦೦೪

ಲೇಖನ ಗುಚ್ಛ, ಸಾ.ರಾ.ಅಬೂಬ್ಬಕ್ಕರ್, ಚಂದ್ರಗಿರಿ ಪ್ರಕಾಶನ, ಮಂಗಳೂರು, ೧೯೯೭

ವಾಸ್ತವತಾ ವಾದ, ಟಿ.ಪಿ.ಅಶೋಕ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೯

ವಜ್ರದೀಪ್ತಿ, ದೇ.ಜವರೇಗೌಡ (ಪ್ರ.ಸಂ.), ಮಳಲಿ ವಸಂತಕುಮಾರ್ (ಸಂ), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೦

ವಿಚಯ, ಬಿ.ಎನ್.ಸುಮಿತ್ರಾಬಾಯಿ, ವಿಜಯ ಐಸಿಇ ಪ್ರಕಾಶನ, ಬೆಂಗಳೂರು, ೧೯೯೫

ವಿಜಯಾನ್ವೇಷಣೆ, ಡಾ.ವಿಜಯಾ ದಬ್ಬೆಯವರ ಅಭಿನಂದನ ಗ್ರಂಥ ಸಮಿತಿ, ಮೈಸೂರು, ೨೦೦೪

ವಿಮರ್ಶೆಯ ಪರಿಭಾಷೆ, ಓ.ಎಲ್.ನಾಗಭೂಷಣ ಸ್ವಾಮಿ, ಅಂಕಿತ ಪುಸ್ತಕ, ಬೆಂಗಳೂರು, ೧೯೯೮

ವಿಮರ್ಶೆ ಸಮಗ್ರ ಸಂಪುಟ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಜೀವನ ಕಾರ್ಯಾಲಯ ಟ್ರಸ್ಟ್, ಬೆಂಗಳೂರು, ೧೯೮೨

ವಿರಚನೆ, ಗಾಯಿರೀ ನಾವಡ, ಎನ್.ಆರ್.ಎ.ಎಂ.ಹೆಚ್.ಪ್ರಕಾಶನ, ಕೋಟೇಶ್ವರ, ದಕ್ಷಿಣ ಕನ್ನಡ, ೧೯೯೭

ವೈದೇಹಿಯವರ ಕತೆಗಳು, ಟಿ.ಪಿ.ಅಶೋಕ, ಕುಂದಾಪುರ ಕನ್ನಡ ಸಂಘ, ಕುಂದಾಪುರ, ೧೯೯೫

ಶಬ್ದರೇಖೆ, ಕೆ.ಕೇಶವ ಶರ್ಮ, ಅಭಿನವ ಪ್ರಕಾಶನ, ಬೆಂಗಳೂರು, ೧೯೯೮

ಶೈಲಿ ೧,೨,೩, ಎಸ್.ವಿ. ರಂಗಣ್ಣ, ಶಿವರಾಮ್ ಪ್ರಕಾಶಕರು, ಬೆಂಗಳೂರು, ೨೦೦೦

ಶೈಲಿ ಶಾಸ್ತ್ರ, ಕೆ.ವಿ.ನಾರಾಯಣ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೮

ಸಮಗ್ರ ಗದ್ಯ, ಸಂ.೨, ಜಿ.ಎಸ್.ಶಿವರುದ್ರಪ್ಪ, ಸ್ನೇಹ ಪ್ರಕಾಶನ, ಬೆಂಗಳೂರು, ೧೯೯೪

ಸಮಗ್ರ ವಿಮರ್ಶೆ–೨, ಗಿರಡ್ಡಿ ಗೋವಿಂದರಾಜ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೧

ಸರಸ್ವತಿಬಾಯಿ ರಾಜವಾಡೆ, ಟಿ.ಎಸ್.ಶ್ರೀವಳ್ಳಿ, ಶಿವರಾಮ ಕಾರಂತ ಅಧ್ಯಯನ ಕೇಂದ್ರ, ಪುತ್ತೂರು, ೨೦೦೦

ಸಾಲು ದೀಪಗಳು, ಜಿ.ಎಸ್.ಸಿದ್ಧಲಿಂಗಯ್ಯ, ಎಂ.ಎಚ್.ಕೃಷ್ಣಯ್ಯ (ಸಂ), ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೧

ಸಾರ್ವತ್ರಿಕದೆಡೆಗೆ, ಬಿ.ಎನ್.ಸುಮಿತ್ರಾಬಾಯಿ, ಮಾನವ ಪ್ರಕಾಶನ, ಹಾಸನ, ೧೯೮೭

ಸಾಹಿತ್ಯ ಕಥನ, ಡಿ.ಆರ್.ನಾಗರಾಜ, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೬

ಸಾಹಿತ್ಯ ಜೀವಿ, ಎಲ್.ಎಸ್.ಶೇಷಗಿರಿರಾವ್ (ಸಂ), ಜಿ.ವೆಂಕಟಸುಬ್ಬಯ್ಯ ಸನ್ಮಾನ ಸಮಿತಿ, ಬೆಂಗಳೂರು, ೧೯೭೬

ಸಾಹಿತ್ಯದಲ್ಲಿ ತತ್ವವಾದಗಳು, ಪಿ.ವಿ.ಶಾಸ್ತ್ರಿ, ಸಮಾಜ ಪುಸ್ತಕಾಲಯ, ಧಾರವಾಡ, ೧೯೮೬

ಸಾಹಿತ್ಯ ವಿಮರ್ಶೆ ೧೯೯೨, ರಹಮತ್ ತರೀಕೆರೆ (ಸಂ), ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

ಸಾಹಿತ್ಯ ವಿಮರ್ಶೆ, ಸಿ.ಎನ್.ರಾಮಚಂದ್ರನ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೦

ಸಾಹಿತ್ಯ ವಿಶ್ಲೇಷಣೆ, ಎಲ್.ಎಸ್.ಶೇಷಗಿರಿರಾವ್, ತಂ.ವೆಂ.ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೭೮

ಸಾಹಿತ್ಯಶ್ರೀ, (ಉತ್ತರ ಕರ್ನಾಟಕ ಲೇಖಕಿಯರ ಪ್ರಥಮ ಸಾಹಿತ್ಯ ಸಮ್ಮೇಳನದ ಸಂಚಿಕೆ), ಸರೋಜಿನಿ ಚವಲಾರ (ಸಂ), ಮೂರು ಸಾವಿರ ಮಠ, ಹುಬ್ಬಳ್ಳಿ, ೧೯೮೫

ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ, ಎಲ್.ಎಸ್.ಶೇಷಗಿರಿರಾವ್ (ಸಂ), ಉದಯಭಾನು ಕಲಾಸಂಘ, ಬೆಂಗಳೂರು, ೧೯೯೩

ಸ್ತ್ರೀವಾದ, ಎಚ್.ಎಸ್.ಶ್ರೀಮತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

ಸ್ತ್ರೀವಾದಿ ಸಾಹಿತ್ಯ ವಿಮರ್ಶೆ, ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೯೪

ಸ್ತ್ರೀವಾದ, ಬಿ.ಎನ್.ಸುಮಿತ್ರಾಬಾಯಿ (ಸಂ), ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೯

ಸ್ತ್ರೀ ಸಂವೇದನೆಯಲ್ಲಿ ಕನ್ನಡ ಕಥನ, ಎಲ್.ಜಿ.ಮೀರಾ, ಶಕ್ತಿ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್, ಬೆಂಗಳೂಲು, ೨೦೦೪

ಸೇರಿಕೊಂಡ ಎಳೆಗಳು, ಎಚ್.ಎಸ್.ಶ್ರೀಮತಿ, ಸಿವಿಜಿ ಪ್ರಕಾಶನ, ಬೆಂಗಳೂರು, ೨೦೦೩

ಸೌಂದರ್ಯ ಸಮೀಕ್ಷೆ, ಜಿ.ಎಸ್.ಶಿವರುದ್ರಪ್ಪ, ಕಾಮಧೇನು ಪ್ರಕಾಶನ, ಬೆಂಗಳೂರು, ೧೯೯೯

ಸಂವೇದನೆ, ಶಶಿಕಲಾ ವೀರಯ್ಯಸ್ವಾಮಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೫

ಹೆಣ್ಣು ಮತ್ತು ಭಾಷೆ, ಎಚ್.ಎಸ್.ಶ್ರೀಮತಿ, ಶಿವಾನಂದ ಎಸ್.ವಿರಕ್ತಮಠ, ಜೆ.ಕೃಷ್ಣ (ಸಂ), ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

ಹೆಣ್ಣು ಹೆಂಗಸು, ಎಚ್.ಎಸ್.ಶ್ರೀಮತಿ, ಬ್ಯಾಲದಕೆರೆ ಪ್ರಕಾಶನ, ಮಂಡ್ಯ ಜಿಲ್ಲೆ, ೨೦೦೪

ಹೊಸಗನ್ನಡ ಸಾಹಿತ್ಯ ಚರಿತ್ರೆ, ಎಲ್.ಎಸ್.ಶೇಷಗಿರಿರಾವ್, ಅಂಕಿತ ಪುಸ್ತಕ, ಬೆಂಗಳೂರು, ೨೦೦೨

ಹೊಂಬೆಳಕು, ಎಲ್.ಎಸ್.ಶೇಷಗಿರಿರಾವ್ ಮತ್ತು ಕೆ.ಎಸ್.ನಿರ್ಮಲಾದೇವಿ, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು, ೧೯೮೭

